ಶ್ರೀ ವ್ಯಾಸರಾಜ ಗುರುಸಾರ್ವಭೌಮ ವಿರಚಿತ

# ತರ್ಕತಾಂಡವ

ಹಾಗೂ

ಶ್ರೀ ರಾಘವೇಂದ್ರ ಗುರುಸಾರ್ವಭೌಮ ವಿರಚಿತ

# ನ್ಯಾಯದೀಪ

ಕನ್ನಡ ಅನುವಾದ ಸಹಿತ

ಭಾಗ-2

(ವೇದಾಪೌರುಷೇಯತ್ವವಾದ ಮತ್ತು ಈಶ್ವರವಾದ)

ಅನುವಾದಕರು

ವಿ|| ಎ. ಹರಿದಾಸಭಟ್

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು

ನಿವೃತ್ತ ಪ್ರಾಚಾರ್ಯರು

ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು

ಪ್ರಕಾಶನ

ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

# ಶ್ರೀ ವ್ಯಾಸರಾಜ ಗುರುಸಾರ್ವಭೌಮ ವಿರಚಿತ

# ತರ್ಕತಾಂಡವ

ಹಾಗೂ

## ಶ್ರೀ ರಾಘವೇಂದ್ರ ಗುರುಸಾರ್ವಭೌಮ ವಿರಚಿತ

# ನ್ಯಾಯದೀಪ

ಕನ್ನಡ ಅನುವಾದ ಸಹಿತ

ಭಾಗ-2

(ವೇದಾಪೌರುಷೇಯತ್ವವಾದ ಮತ್ತು ಈಶ್ವರವಾದ)

ಅನುವಾದಕರು

**ವಿ|| ಎ. ಹರಿದಾಸಭಟ್**

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು

ನಿವೃತ್ತ ಪ್ರಾಚಾರ್ಯರು

ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು

ಪ್ರಕಾಶನ

**ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ**

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

ಶ್ರೀವ್ಯಾಸರಾಜ ಗುರುಸಾರ್ವಭೌಮ ವಿರಚಿತ ತರ್ಕತಾಂಡವ ಹಾಗೂ
ಶ್ರೀರಾಘವೇಂದ್ರ ಗುರುಸಾರ್ವಭೌಮ ವಿರಚಿತ ನ್ಯಾಯದೀಪ
ಕನ್ನಡ ಅನುವಾದ ಸಹಿತ (ಭಾಗ-2)
(ವೇದಾಪೌರುಷೇಯತ್ವವಾದ ಮತ್ತು ಈಶ್ವರವಾದ)


ಅನುವಾದಕರು

**ವಿದ್ವಾನ್ ಎ. ಹರಿದಾಸಭಟ್**



ಪ್ರಥಮ ಮುದ್ರಣ - 2018

ಪ್ರತಿಗಳು : 1000





ಪ್ರಕಾಶಕರು

**ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ**

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರ ಸ್ವಾಮಿಗಳವರ ಮಠ,
ಮಂತ್ರಾಲಯಂ - 518 345.

ಅಕ್ಷರ ಮತ್ತು ಪುಟ ವಿನ್ಯಾಸ : ಆರ್.ಎಸ್. ಪ್ರೇಮಕುಮಾರ್, ಮೊ. 9964334285

ಮುದ್ರಣ : ಶ್ರೀ ರಾಘವೇಂದ್ರ ಸ್ವಾಮಿ ಆಫ್‌ಸೆಟ್ ಪ್ರಿಂಟಿಂಗ್ ಪ್ರೆಸ್
ಎಮ್ಮಿಗನೂರು-518 360, ಮೊ : 9247188605, 9247853681

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ

ಶ್ರೀಮನ್ಮೂಲರಘುಪತಿ ವೇದವ್ಯಾಸದೇವ ದಿವ್ಯ ಶ್ರೀಪಾದಪದ್ಮಾರಾಧಕ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ

ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ

ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

ಶ್ರೀಮತ್ಸುಯತೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

# ಪರಮಪೂಜ್ಯ 1008 ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರ

## ಅನುಗ್ರಹವಚನ

ಭಾರತೀಯ ತತ್ತ್ವಶಾಸ್ತ್ರ ಪ್ರಪಂಚದಲ್ಲಿ ತರ್ಕತಾಂಡವವು ಸರಿಸಾಟಿಯಿಲ್ಲದ ಕೃತಿರತ್ನವಾಗಿದೆ. ಇದರ ಹೆಸರೇ ತಿಳಿಸುವಂತೆ ನೈಯಾಯಿಕರ ತರ್ಕಗಳಿಗೆ ಪ್ರತಿತರ್ಕಗಳೆನ್ನುವ ಅಮೋಘ ತಾಂಡವವನ್ನೇ ಶ್ರೀವ್ಯಾಸತೀರ್ಥರು ಮಾಡಿದ್ದಾರೆ. ತಾರ್ಕಿಕರ ಬೌದ್ಧಿಕ ಸೌಧವನ್ನು ಉರುಳಿಸಿ ಪ್ರಮಾಣತ್ರಯಗಳ ವಿಷಯದಲ್ಲಿ ಶ್ರೀವೇದವ್ಯಾಸಸಮ್ಮತವಾದ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ.

ಈ ಕೃತಿಯು ತತ್ತ್ವಚಿಂತಾಮಣಿ ಮತ್ತು ನ್ಯಾಯಕುಸುಮಾಂಜಲಿ ಎಂದು ಪ್ರಸಿದ್ಧವಾದ ನೈಯಾಯಿಕ ಗ್ರಂಥಗಳನ್ನು ಬಹುತೀಕ್ಷ್ಣವಾದ ವಿಮರ್ಶೆಗೆ ಗುರಿಮಾಡಿದೆ. ಪೂರ್ವಮೀಮಾಂಸೆಯ ವಿಮರ್ಶೆಯೂ ಈ ಕೃತಿಯಲ್ಲಿದೆ. ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಈ ಗ್ರಂಥಕ್ಕೆ 'ನ್ಯಾಯದೀಪ' ಎನ್ನುವ ಅಮೂಲ್ಯ ಟಿಪ್ಪಣಿಯನ್ನು ರಚಿಸಿ ಶ್ರೀವ್ಯಾಸರಾಜರ ವಿಮರ್ಶಾಕ್ಷೇತ್ರವನ್ನು ತಮ್ಮ ಪ್ರತಿಭೆಯಿಂದ ಮತ್ತಷ್ಟು ವಿಸ್ತರಿಸಿದ್ದಾರೆ. ಮೂರು ಪರಿಚ್ಛೇದಗಳನ್ನೊಳಗೊಂಡ ಈ ಕೃತಿಯ ಪ್ರತ್ಯಕ್ಷ ಪರಿಚ್ಛೇದದಲ್ಲಿ ಪ್ರಾಮಾಣ್ಯವಾದ, ವೇದಾಪೌರುಷೇಯತ್ವವಾದ, ಈಶ್ವರವಾದ, ವರ್ಣನಿತ್ಯತ್ವವಾದ, ಸಮವಾಯವಾದದಂತಹ ಕಠಿಣವಾದ ಪ್ರಕರಣಗಳಿವೆ.

ನಮ್ಮ ನಾಡಿನ ಪ್ರಖ್ಯಾತ ವಿದ್ವಾಂಸರಾದ ವಾಕ್ಯಾರ್ಥಕೋವಿದರಾದ ಆಸ್ಥಾನ ವಿದ್ವಾಂಸರಾಗಿ ಶ್ರೀಮಠದ ಅವಿಭಾಜ್ಯ ಅಂಗದಂತಿರುವ ಶ್ರೀಹರಿದಾಸಭಟ್ಟಾಚಾರ್ಯರು ಈಗಾಗಲೇ 'ಪ್ರಾಮಾಣ್ಯವಾದ'ವನ್ನು ಅನುವಾದಿಸಿ ವೇದಾಪೌರುಷೇಯತ್ವವಾದ ಮತ್ತು ಈಶ್ವರವಾದಗಳನ್ನೊಳಗೊಂಡ ಎರಡನೆಯ ಸಂಪುಟವನ್ನು ಸಿದ್ಧಪಡಿಸಿದ್ದಾರೆ. ಅವರ ವಿದ್ವತ್ಪೂರ್ಣವಾದ ಚಿತ್ತಾಕರ್ಷಕವಾದ ಅನುವಾದವನ್ನು ನೋಡಿ ನಾವು ತುಂಬಾ ಸಂತೋಷಪಟ್ಟಿದ್ದೇವೆ. ಈ ವರ್ಷದುದ್ದಕ್ಕೂ ನಡೆಯಲಿರುವ ಪ್ರಾತಃಸ್ಮರಣೀಯರಾದ ನಮ್ಮ ಪರಮೇಷ್ಠಿ ಗುರುಗಳಾದ ಶ್ರೀಸುಜಯೀಂದ್ರತೀರ್ಥರ ಅಷ್ಟೋತ್ತರ ಜನ್ಮ ಶತಮಾನೋತ್ಸವ, ಪಟ್ಟಾಭಿಷೇಕದ ಸುವರ್ಣಮಹೋತ್ಸವ, ವೃಂದಾವನಪ್ರವೇಶದ ರಜತಮಹೋತ್ಸವದ ಅಂಗವಾಗಿ ಈ ಕೃತಿಯು ಬೆಳಕು ಕಾಣುತ್ತಿರುವುದು ನಮ್ಮ ಸಂತೋಷವನ್ನು ದ್ವಿಗುಣಗೊಳಿಸಿದೆ. ನಮ್ಮ ವರ್ಧಂತಿಯ ದಿನದಂದೇ ಈ ಅನುವಾದವು ಹೊರಬರುತ್ತಿರುವುದು ನಮ್ಮ ಮೇಲಿನ ಶ್ರೀಗುರುರಾಜರ ದಿವ್ಯ ಅನುಗ್ರಹವಾಗಿದೆ.

ಅತ್ಯುತ್ತಮವಾದ ಅನುವಾದವನ್ನು ಮಾಡಿದ ಪಂಡಿತವರೇಣ್ಯರಾದ ಶ್ರೀಹರಿದಾಸಭಟ್ಟರಿಗೆ ಆಯುರಾರೋಗ್ಯಾದಿಗಳನ್ನು ಕರುಣಿಸಿ ಮತ್ತಷ್ಟು ಸಾರಸ್ವತ ಸೇವೆಯನ್ನು ನಡೆಸುವಂತಾಗಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯ ಪ್ರಾಣಾಂತರ್ಗತ ಶ್ರೀಮನ್ಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

**ಇತಿ ನಾರಾಯಣ ಸ್ಮರಣೆಗಳು.**

# ಶ್ರೀಮದಾನಂದತೀರ್ಥಭಗವತ್ಪಾದರು



ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ।
ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ॥

# ಶ್ರೀ ಟೀಕಾರಾಯರು



ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ಪ್ರಯಚ್ಛತಿ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛೇದಂ ಸದಾ॥

# ಶ್ರೀವ್ಯಾಸರಾಯರು



ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

# ಶ್ರೀವಿಜಯೀಂದ್ರತೀರ್ಥರು



**ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ।**
**ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ॥**

ಶ್ರೀ ರಾಘವೇಂದ್ರ ತೀರ್ಥ ಗುರುಸಾರ್ವಭೌಮರು, ಮಂತ್ರಾಲಯ.



ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

# ಶ್ರೀಮತ್ಸುಯತೀಂದ್ರ ತೀರ್ಥರು



ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಂ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ॥



# ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರ

ಅಷ್ಟೋತ್ತರ ಜನ್ಮಶತಮಾನೋತ್ಸವ
ಪೀಠಾರೋಹಣದ ಸ್ವರ್ಣಮಹೋತ್ಸವ
ಬೃಂದಾವನ ಪ್ರವೇಶದ ರಜತ ಮಹೋತ್ಸವದ ಅಂಗವಾಗಿ
ಪ್ರಕಟಣೆ 2018 - 19

# ಮುನ್ನುಡಿ

ತರ್ಕತಾಂಡವದ ಈ ಭಾಗದಲ್ಲಿ ವೇದಾಪೌರುಷೇಯತ್ವವಾದ ಮತ್ತು ಈಶ್ವರಾನುಮಾನ ಭಂಗವಾದ ಹೀಗೆ ಎರಡು ಭಾಗಗಳಿವೆ. ಈ ಗ್ರಂಥದ ಮಂಗಳವಾದದಲ್ಲಿ ಎರಡು ವಿಷಯಗಳು ಕ್ರಮವಾಗಿ ಪ್ರಸ್ತುತವಾಗಿವೆ—

**ಸ್ವತಃ ಪ್ರಮಾಣ್ಯೈರಾಮ್ನಾಯೈರಾದರೇಣಾದಿವರ್ಜಿತೈಃ।**

ಇವೆರಡರಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಮೊದಲನೆಯ ಪ್ರಕರಣದಲ್ಲಿ ಸಮರ್ಥಿಸಲಾಗಿದೆ. ಅದು ಈಗಾಗಲೇ ಅನುವಾದಗೊಂಡು ಮುದ್ರಣವಾಗಿದೆ. ಎರಡನೆಯ ಪ್ರಕರಣದಲ್ಲಿ ವೇದಾಪೌರುಷೇಯತ್ವವನ್ನು ನಿರೂಪಿಸಲಾಗಿದೆ. ಅದಕ್ಕೆ ಪೂರಕವಾದ ಅಂಶ ಈಶ್ವರಾನುಮಾನಭಂಗ. ವೇದಕ್ಕೆ ಪೌರುಷೇಯತ್ವವನ್ನು ಹೇಳಿದರೆ ತತ್ಕರ್ತೃವಿಗೆ ಸರ್ವಜ್ಞತ್ವಾದಿಗಳನ್ನು ಕಲ್ಪಿಸಬೇಕಾಗುತ್ತದೆ. ಇದರಿಂದ ಗೌರವದೋಷ ಬರುತ್ತದೆ, ಎಂದು ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿದ್ದಾರೆ—

**ಕಲ್ಪ್ಯಂ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥**

ಇದರ ಪರಿಹಾರವನ್ನು ನೈಯಾಯಿಕರು ಹೀಗೆ ಮಾಡಿದ್ದಾರೆ— ಸಕರ್ತೃಕತ್ವಾನುಮಾನದಿಂದ ಈಶ್ವರನು ಸಿದ್ಧನಾಗುವಾಗಲೇ ಸರ್ವಜ್ಞತ್ವಾದಿಗುಣವುಳ್ಳವನಾಗಿಯೇ ಸಿದ್ಧನಾಗುತ್ತಾನೆ. ನ್ಯಾಯಸೂತ್ರ ಮತ್ತು ಅದರ ವ್ಯಾಖ್ಯಾನಗಳಲ್ಲಿ ಇದನ್ನು ಹೇಳಲಾಗಿದೆ—

**....ದೃಷ್ಟಾಭಾವೇ ಪ್ರಯೋಗೋಽಭ್ಯುದಯಾಯ (ವೈ.ಸೂ.10.2.8)**

**(ದೃಷ್ಟಂ=ಪುರುಷಾಂತರೇ ಅಸ್ಮದಾದೌ ಭ್ರಮ–ಪ್ರಮಾದ–ವಿಪ್ರಲಿಪ್ಸಾದಿಕಂ ಪುರುಷ ದೂಷಣಂ, ತದಭಾವೇ ಸತಿ ಇತ್ಯರ್ಥಃ) ಕ್ಷಿತಿಕರ್ತೃತ್ವೇನ ವೇದಕರ್ತೃತ್ವೇನ ವಾ ಅನುಮಿತಸ್ಯ ಈಶ್ವರಸ್ಯ ಪುರುಷಧೌರೇಯಸ್ಯ ನಿರ್ದೋಷತ್ವೇನೈವ ಉಪಸ್ಥಿತೇಃ। ತಥಾಚ ತದ್ವಚಸಾಂ ನ ನಿರಭಿಧೇಯತಾ, ನ ವಿಪರೀತಾಭಿಧೇಯತಾ, ನ ನಿಷ್ಪ್ರಯೋಜನಾಭಿದೇಯತಾ। ಭೂತೇಂದ್ರಿಯ-ಮನಸಾಂ ದೋಷಾತ್ ಭ್ರಮ–ಪ್ರಮಾದ–ಕರಣಾಪಾಟವಾದಿಪ್ರಯುಕ್ತಾ ಏತಾಃ ವಚಸಾಮಶುದ್ಧಯಃ ಸಂಭಾವ್ಯಂತೇ। ನ ಚೇಶ್ವರವಚಸಿ ತಾಸಾಂ ಸಂಭವಃ। ತದುಕ್ತಮ್–**

**ರಾಗಾಜ್ಞಾನಾದಿಭಿರ್ವಕ್ತಾ ಗ್ರಸ್ತತ್ವಾದನೃತಂ ವದೇತ್ ।**
**ತೇ ಚೇಶ್ವರೇ ನ ವಿದ್ಯಂತೇ ಸ ಬ್ರೂಯಾತ್ ಕಥಮನ್ಯಥಾ ॥ ಇತಿ ॥**

ಇದನ್ನು ನಿರಾಕರಿಸುವುದಕ್ಕಾಗಿ ತರ್ಕತಾಂಡವದಲ್ಲಿ ಈಶ್ವರವಾದವು ಪ್ರಸ್ತುತವಾಗಿದೆ. 'ವಿಶ್ವಕರ್ತೃತ್ವಾನುಮಾನದಿಂದ ಅಥವಾ ವೇದಕರ್ತೃತ್ವಾನುಮಾನದಿಂದ ಈಶ್ವರನನ್ನು ಸಾಧಿಸ ಲಾಗದು. ಅನುಮಾನಕ್ಕೆ ಪ್ರತ್ಯನುಮಾನಗಳನ್ನು ಮಾಡಬಹುದು. ಆದ್ದರಿಂದಲೇ 'ಔಪನಿಷದಃ



# ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರ

ಅಷ್ಟೋತ್ತರ ಜನ್ಮಶತಮಾನೋತ್ಸವ
ಪೀಠಾರೋಹಣದ ಸ್ವರ್ಣಮಹೋತ್ಸವ
ಬೃಂದಾವನ ಪ್ರವೇಶದ ರಜತ ಮಹೋತ್ಸವದ ಅಂಗವಾಗಿ
ಪ್ರಕಟಣೆ 2018 - 19

# ಮುನ್ನುಡಿ

ತರ್ಕತಾಂಡವದ ಈ ಭಾಗದಲ್ಲಿ ವೇದಾಪೌರುಷೇಯತ್ವವಾದ ಮತ್ತು ಈಶ್ವರಾನುಮಾನ ಭಂಗವಾದ ಹೀಗೆ ಎರಡು ಭಾಗಗಳಿವೆ. ಈ ಗ್ರಂಥದ ಮಂಗಳವಾದದಲ್ಲಿ ಎರಡು ವಿಷಯಗಳು ಕ್ರಮವಾಗಿ ಪ್ರಸ್ತುತವಾಗಿವೆ—

**ಸ್ವತಃ ಪ್ರಮಾಣೈರಾಮ್ನಾಯೈರಾದರೇಣಾದಿವರ್ಜಿತೈಃ।**

ಇವೆರಡರಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಮೊದಲನೆಯ ಪ್ರಕರಣದಲ್ಲಿ ಸಮರ್ಥಿಸಲಾಗಿದೆ. ಅದು ಈಗಾಗಲೇ ಅನುವಾದಗೊಂಡು ಮುದ್ರಣವಾಗಿದೆ. ಎರಡನೆಯ ಪ್ರಕರಣದಲ್ಲಿ ವೇದಾಪೌರುಷೇಯತ್ವವನ್ನು ನಿರೂಪಿಸಲಾಗಿದೆ. ಅದಕ್ಕೆ ಪೂರಕವಾದ ಅಂಶ ಈಶ್ವರಾನುಮಾನಭಂಗ. ವೇದಕ್ಕೆ ಪೌರುಷೇಯತ್ವವನ್ನು ಹೇಳಿದರೆ ತತ್ಕರ್ತೃವಿಗೆ ಸರ್ವಜ್ಞತ್ವಾದಿಗಳನ್ನು ಕಲ್ಪಿಸಬೇಕಾಗುತ್ತದೆ. ಇದರಿಂದ ಗೌರವದೋಷ ಬರುತ್ತದೆ, ಎಂದು ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿದ್ದಾರೆ—

**ಕಲ್ಪ್ಯಂ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥**

ಇದರ ಪರಿಹಾರವನ್ನು ನೈಯಾಯಿಕರು ಹೀಗೆ ಮಾಡಿದ್ದಾರೆ— ಸಕರ್ತೃಕತ್ವಾನುಮಾನದಿಂದ ಈಶ್ವರನು ಸಿದ್ಧನಾಗುವಾಗಲೇ ಸರ್ವಜ್ಞತ್ವಾದಿಗುಣವುಳ್ಳವನಾಗಿಯೇ ಸಿದ್ಧನಾಗುತ್ತಾನೆ. ನ್ಯಾಯಸೂತ್ರ ಮತ್ತು ಅದರ ವ್ಯಾಖ್ಯಾನಗಳಲ್ಲಿ ಇದನ್ನು ಹೇಳಲಾಗಿದೆ—

**....ದೃಷ್ಟಾಭಾವೇ ಪ್ರಯೋಗೋಽಭ್ಯುದಯಾಯ (ವೈ.ಸೂ.10.2.8)**

**(ದೃಷ್ಟಂ=ಪುರುಷಾಂತರೇ ಅಸ್ಮದಾದೌ ಭ್ರಮ–ಪ್ರಮಾದ–ವಿಪ್ರಲಿಪ್ಸಾದಿಕಂ ಪುರುಷ ದೂಷಣಂ, ತದಭಾವೇ ಸತಿ ಇತ್ಯರ್ಥಃ) ಕ್ಷಿತಿಕರ್ತೃತ್ವೇನ ವೇದಕರ್ತೃತ್ವೇನ ವಾ ಅನುಮಿತಸ್ಯ ಈಶ್ವರಸ್ಯ ಪುರುಷಧೌರೇಯಸ್ಯ ನಿರ್ದೋಷತ್ವೇನೈವ ಉಪಸ್ಥಿತೇಃ। ತಥಾಚ ತದ್ವಚಸಾಂ ನ ನಿರಭಿಧೇಯತಾ, ನ ವಿಪರೀತಾಭಿಧೇಯತಾ, ನ ನಿಷ್ಪ್ರಯೋಜನಾಭಿದೇಯತಾ। ಭೂತೇಂದ್ರಿಯ–ಮನಸಾಂ ದೋಷಾತ್ ಭ್ರಮ–ಪ್ರಮಾದ–ಕರಣಾಪಾಟವಾದಿಪ್ರಯುಕ್ತಾ ಏತಾಃ ವಚಸಾಮಶುದ್ಧಯಃ ಸಂಭಾವ್ಯಂತೇ। ನ ಚೇಶ್ವರವಚಸಿ ತಾಸಾಂ ಸಂಭವಃ। ತದುಕ್ತಮ್–**

**ರಾಗಾಜ್ಞಾನಾದಿಭಿರ್ವಕ್ತಾ ಗ್ರಸ್ತತ್ವಾದನೃತಂ ವದೇತ್ ।**
**ತೇ ಚೇಶ್ವರೇ ನ ವಿದ್ಯಂತೇ ಸ ಬ್ರೂಯಾತ್ ಕಥಮನ್ಯಥಾ ॥ ಇತಿ ॥**

ಇದನ್ನು ನಿರಾಕರಿಸುವುದಕ್ಕಾಗಿ ತರ್ಕತಾಂಡವದಲ್ಲಿ ಈಶ್ವರವಾದವು ಪ್ರಸ್ತುತವಾಗಿದೆ. 'ವಿಶ್ವಕರ್ತೃತ್ವಾನುಮಾನದಿಂದ ಅಥವಾ ವೇದಕರ್ತೃತ್ವಾನುಮಾನದಿಂದ ಈಶ್ವರನನ್ನು ಸಾಧಿಸಲಾಗದು. ಅನುಮಾನಕ್ಕೆ ಪ್ರತ್ಯನುಮಾನಗಳನ್ನು ಮಾಡಬಹುದು. ಆದ್ದರಿಂದಲೇ 'ಔಪನಿಷದಃ

ಪುರುಷಃ' ಇತ್ಯಾದಿ ಶ್ರುತಿಗಳೂ ''ಶಾಸ್ತ್ರಯೋನಿತ್ವಾತ್'' ಎಂಬ ಸೂತ್ರವೂ ಈಶ್ವರನು 'ವೇದೈಕವೇದ್ಯನೆಂದು' ಹೇಳುತ್ತವೆ. ಈ ವಿಷಯದ ನಿರೂಪಣೆಗಾಗಿ ಈಶ್ವರವಾದವು ಪ್ರಸ್ತುತವಾಗಿದೆ.

ವೇದಾಪೌರುಷೇಯತ್ವವಾದದಲ್ಲಿ ಮೂರು ವಿಭಾಗಗಳಿವೆ. ಮೊದಲು ವೇದಾಪೌರುಷೇಯತ್ವವನ್ನು ಪ್ರಮಾಣಗಳಿಂದ ಸಮರ್ಥಿಸಲಾಗಿದೆ. ಎರಡನೆಯ ಪ್ರಕರಣದಲ್ಲಿ ಆ ಅನುಮಾನಗಳಿಗೆ ಅನುಕೂಲತರ್ಕವನ್ನು ಹೇಳಲಾಗಿದೆ. ಮೂರನೆಯ ಪ್ರಕರಣದಲ್ಲಿ ನೈಯಾಯಿಕೋಕ್ತವಾದ ಪೌರುಷೇಯತ್ವಾನುಮಾನಗಳನ್ನು ನಿರಾಕರಿಸಲಾಗಿದೆ. ಆದರೆ, ಈಶ್ವರವಾದವು ಮಾತ್ರ ದೀರ್ಘವಾದ ಒಂದೇ ಪ್ರಕರಣದಲ್ಲಿ ನಿರೂಪಿತವಾಗಿದೆ.

**ಮೀಮಾಂಸಕರ ಅಪೌರುಷೇಯತ್ವವಾದ**

ವೈದಿಕದರ್ಶನಗಳಲ್ಲಿ ವೇದವು ಪುರುಷಕೃತ ಎನ್ನುವವರು, ಪ್ರಾಯಃ ನೈಯಾಯಿಕರು ಮಾತ್ರ. ಅವರಿಗಿಂತಲೂ ಪ್ರಾಚೀನರಾದ ಮೀಮಾಂಸಕರು ಈಶ್ವರನೇ ಇಲ್ಲವೆಂದರೂ ವೇದವನ್ನು ಮಾತ್ರ ಅಪೌರುಷೇಯವೆಂದು ಹೇಳಿದ್ದಾರೆ—

**ಉಕ್ತಂ ತು ಶಬ್ದಪೂರ್ವತ್ವಮ್ (1-1-8)**

ಎಂಬ ಜೈಮಿನಿಸೂತ್ರದಲ್ಲಿ ಅಪೌರುಷೇಯತ್ವಸ್ವರೂಪವನ್ನು ಹೇಳಲಾಗಿದೆ. ಈ ಸೂತ್ರದ ವ್ಯಾಖ್ಯಾನ ಹೀಗಿದೆ—

**ಸರ್ವಪುಂಸಾಮಧ್ಯಯನಮಧ್ಯಯನಾಂತರಪೂರ್ವಕಮ್ ।**
**ಸರ್ವೇ ಹಿ ಯಥೈವ ಗುರುಣಾಧೀತಂ ತಥೈವಾಧಿಜಿಗಾಂಸಂತೇ ।**
**ನ ಪುನಃ ಸ್ವಾತಂತ್ರ್ಯೇಣ ಕಶ್ಚಿದಪಿ ಪ್ರಥಮೋಧ್ಯೇತಾ ವೇದಾನಾಮಸ್ತಿ**
**ಯಃ ಕರ್ತಾ ಸ್ಯಾತ್। ತಸ್ಮಾದಪೌರುಷೇಯಾ ವೇದಾಃ ॥**

ಮೀಮಾಂಸಕರ ಸಿದ್ಧಾಂತದಲ್ಲಿ ಸೃಷ್ಟಿ–ಪ್ರಲಯಗಳಿಲ್ಲ. ಅನಾದಿಯಾದ ಸೃಷ್ಟಿಪ್ರವಾಹದಲ್ಲಿ ಗುರುಶಿಷ್ಯಪರಂಪರೆ ಅನುಸ್ಯೂತವಾಗಿದೆ. ಒಬ್ಬರಿಂದ ಮತ್ತೊಬ್ಬರಿಗೆ ಹರಿದು ಬಂದ ವಾಗ್ಧಾರೆ ವೇದ. ಅದನ್ನು ಇದು ಮೊದಲಾಗಿ ಅಧ್ಯಯನಮಾಡಿದವರಿಲ್ಲ. ಇದೇ ವೇದಾಪೌರುಷೇಯತ್ವ.

ಮೀಮಾಂಸಕರು ವರ್ಣಗಳು ನಿತ್ಯ ಮತ್ತು ವ್ಯಾಪ್ತ ಎಂದು ಸಿದ್ಧಾಂತಿಸಿದ್ದಾರೆ. ನಿತ್ಯವಾದುದರಿಂದ ಅಣ್ಣ–ತಮ್ಮಂದಿರಲ್ಲಿರುವಂತಹ ಕಾಲಿಕಕ್ರಮ ವರ್ಣಗಳಲ್ಲಿ ಇಲ್ಲ. ವ್ಯಾಪ್ತವಾದುದರಿಂದ ಒಂದರ ಪಕ್ಕದಲ್ಲಿ ಮತ್ತೊಂದನ್ನು ಜೋಡಿಸಿರುವ ಪುಸ್ತಕಗಳಲ್ಲಿರುವ ದೈಶಿಕ ಕ್ರಮವೂ ವರ್ಣಗಳಲ್ಲಿ ಇಲ್ಲ. ಹೀಗಾಗಿ ಅಭಿವ್ಯಕ್ತಿಕ್ರಮವನ್ನೇ ಅವುಗಳಲ್ಲಿ ಹೇಳಬೇಕು. ನಾವು ಉಚ್ಚರಿಸುವ ಧ್ವನಿಗಳಿಂದ ವರ್ಣಗಳು ಅಭಿವ್ಯಕ್ತವಾಗುತ್ತವೆ. ಮೊದಲು ಅಭಿವ್ಯಕ್ತವಾದ ವರ್ಣ ಮೊದಲನೆಯದು, ಆಮೇಲೆ ಅಭಿವ್ಯಕ್ತವಾದುದು ಎರಡನೆಯದು. ಹೀಗೆ, ವರ್ಣಗಳಲ್ಲಿ ಕ್ರಮವನ್ನು

ಹೇಳಬೇಕು. ಅಭಿವ್ಯಕ್ತಿಯು ಅನಿತ್ಯ. ಆದರಿಂದಾಗಿ ತದ್ರೂಪವಾದ ಕ್ರಮವೂ ಅನಿತ್ಯ. ಕ್ರಮ ಅನಿತ್ಯವಾದುದರಿಂದ ವೇದವೂ ಅನಿತ್ಯ. ಏಕೆಂದರೆ, ವೇದವು ಕೇವಲ ವರ್ಣಗಳ ರಾಶಿಯಲ್ಲ, ಕ್ರಮಬದ್ಧವಾದ ವರ್ಣರಾಶಿ. ಕ್ರಮವು ಕೃತಕವಾದುದರಿಂದ ಕ್ರಮವಿಶಿಷ್ಟವರ್ಣರೂಪವಾದ ವೇದವೂ ಜನ್ಯ. ಜನ್ಯವಾದ ಕಾರಣದಿಂದಲೇ ಅದು ಅನಿತ್ಯ. ಹೀಗೆ ವೇದವು ಜನ್ಯವಾದರೂ ಅದು ಅಪೌರುಷೇಯ. ಏಕೆಂದರೆ, ವೇದದ ವರ್ಣ-ಪದ-ವಾಕ್ಯಕ್ರಮಗಳನ್ನು ಇದು ಮೊದಲಾಗಿ ಯಾರೂ ರಚಿಸಿಲ್ಲ. ಗುರುಗಳು ಹೇಳಿದ ಕ್ರಮದಲ್ಲೇ ಅವುಗಳ ಉಚ್ಚಾರಣೆ ಮುಂದುವರಿದಿದೆ. ಕುಮಾರಿಲಭಟ್ಟರು ಶ್ಲೋಕವಾರ್ತಿಕಾದಲ್ಲಿ ಹೀಗೆ ಹೇಳುತ್ತಾರೆ—

> ವಕ್ತಾ ನಹಿ ಕ್ರಮಂ ಕಿಂಚಿತ್ ಸ್ವಾತಂತ್ರ್ಯೇಣ ಪ್ರಪದ್ಯತೇ ।
> ಯಥೈವಾಸ್ಯ ಪರೈರುಕ್ತಃ ತಥೈವೈನಂ ವಿವಕ್ಷ್ಯತಿ ॥
>
> ಪರೋಪ್ಯೇವಂ, ಅತಶ್ಚಾಸ್ಯ ಸಂಬಂಧವದನಿತ್ಯತಾ ।
> ತೇನೈವ ವ್ಯವಹಾರಾತ್ ಸ್ಯಾತ್ ಅಕೌಟಸ್ಥ್ಯೇಽಪಿ ನಿತ್ಯತಾ ॥
>
> ವರ್ಣಾಃ ಸರ್ವಗತತ್ವಾದ್ವಾ ನ ಸ್ವತಃ ಕ್ರಮವೃತ್ತಯಃ ।
> ಅನಿತ್ಯಧ್ವನಿಕಾರ್ಯತ್ವಾತ್ ಕ್ರಮಸ್ಯಾತೋ ವಿನಾಶಿತಾ ॥
>
> ಪುರುಷಾಧೀನತಾ ಚಾಸ್ಯ ತದಿಚ್ಛಾವಶಾದ್ ಭವೇತ್ ।
> ವರ್ಣಾನಾಂ ನಿತ್ಯತಾ ತೇನ ನಿಷ್ಫಲಾ ಪರಮಾಣುವತ್ ॥

ಪರಮಾಣುಗಳು ನಿತ್ಯಗಳಾದರೂ ತದಾರಬ್ಧವಾದ ದ್ವ್ಯಣುಕವು ಅನಿತ್ಯವಾದಂತೆ ವರ್ಣಗಳು ನಿತ್ಯಗಳಾದರೂ ತಜ್ಜನ್ಯವಾದ ವೇದವು ಅನಿತ್ಯವಾಗುತ್ತದೆ.

**ವೇದಾಪೌರುಷೇಯತ್ವ-ಸಾಧಕ ಯುಕ್ತಿ**

(1) ವೇದಗಳಿಗೆ ಒಬ್ಬ ಕರ್ತೃವು ಇದ್ದಲ್ಲಿ ಅವಿಚ್ಛಿನ್ನವಾದ ಅಧ್ಯೇತೃಪರಂಪರೆಯಲ್ಲಿ ಆ ಕರ್ತೃವಿನ ಸ್ಮರಣೆ ಇರಬೇಕಾಗಿತ್ತು. ಮಹಾಭಾರತವನ್ನು ಬರೆದವರು ವ್ಯಾಸರು, ಎಂದು ಎಲ್ಲರಿಗೂ ಪ್ರಸಿದ್ಧಿ ಇರುವಂತೆ. ಆದರೆ, ಯಾರಿಗೂ ನಿರ್ದಿಷ್ಟವಾದ ಒಬ್ಬ ಕರ್ತೃವಿನ ಪರಿಜ್ಞಾನವಿಲ್ಲ. ಆದ್ದರಿಂದ ಅದು ಅಪೌರುಷೇಯ.

**ಯದಿ ವೇದಾನಾಂ ಕರ್ತಾ ಕಶ್ಚಿದಭವಿಷ್ಯತ್ ತತೋಽವಶ್ಯಂ ಅಧ್ಯೇತೃಪರಂಪರಯಾ, ಬುದ್ಧಾದಿವತ್, ಅಸ್ಮರಿಷ್ಯತ್ । .... ನಚ ಸ್ಮರ್ಯತೇ । ತೇನ ಸ್ಮೃತಿರೂಪದರ್ಶನಯೋಗ್ಯತ್ವೇ ಸತಿ ಅದೃಶ್ಯಮಾನಃ ಕರ್ತಾ ಶಶವಿಷಾಣವತ್ ಅಭಾವಾತ್ಮನಾ ಅಧ್ಯವಸೀಯತೇ ॥** (ಶಾಬರಭಾಷ್ಯ)

ವೇದದ ಶಾಖೆಗಳಿಗೆ 'ಕಾಠಕ' ಮುಂತಾದ ಋಷಿಗಳ ಹೆಸರಿದೆ. ಅದಕ್ಕೆ ಕಠಋಷಿಪ್ರಣೀತ,

ಎಂದು ಅರ್ಥವಲ್ಲ. ಶಾಖಾವಿಶೇಷಕ್ಕೆ ಕಠ ಎಂದು ಹೆಸರು. ಅಂತಹ ಶಾಖಾವಿಶೇಷವನ್ನು ಕಠಋಷಿಯು ವಿಶೇಷವಾಗಿ ಅಧ್ಯಯನ ನಡೆಸಿರುವುದರಿಂದ ಆ ಶಾಖೆಗೆ 'ಕಾಠಕ' ಎಂಬ ಹೆಸರು.

**ನಾಯಂ ಪುರುಷವಿಶೇಷವಚನಃ ಕಠಶಬ್ದಃ। ಕಿಂತು ನಿತ್ಯಸ್ಯ ಚರಣವಿಶೇಷಸ್ಯೈವಂ ಸಂಜ್ಞಾ। ತಚ್ಚರಣೈಃ ಪುರುಷೈಃ ಪರಂಪರಯಾ ಅಧೀಯಮಾನಾ ಶಾಖಾ।**

(2) ವೇದದಲ್ಲಿ ನಂಬಿಕೆ ಇಟ್ಟು ಪುತ್ರಾದಿ ಫಲಾಪೇಕ್ಷೆಯಿಂದ ಆಸ್ತಿಕರು ಯಜ್ಞ-ಯಾಗಗಳಲ್ಲಿ ಪ್ರವೃತ್ತಿಮಾಡಬೇಕಾದರೆ ಅದು ಅಪೌರುಷೇಯವಾಗಿದ್ದರೆ ಮಾತ್ರ ಸಾಧ್ಯ. ಅದೂ ಒಬ್ಬ ಪುರುಷರಚನೆಯಾಗಿದ್ದಲ್ಲಿ ಅದರಲ್ಲಿ ಅಂತಹ ದೃಢನಂಬಿಕೆ ಬರುತ್ತಿರಲಿಲ್ಲ.

**''ತತ್‌ಪ್ರತ್ಯಯೇನ ಹಿ ಸರ್ವಪುಂಸಾಂ ವೇದಾರ್ಥಾನುಷ್ಠಾನಮ್ ।**
**ಪ್ರಮಾಣಾಂತರಾಗೋಚರತ್ವಾತ್ ಫಲಸಾಧನತ್ವಸ್ಯ।''**

ಮೀಮಾಂಸಾದರ್ಶನದಲ್ಲಿ ಶಬ್ದಾರ್ಥಸಂಬಂಧ ಸ್ವಾಭಾವಿಕ. ಘಟಾದಿಶಬ್ದಗಳಿಗೆ ನಿಯತ ವಾದ ಅರ್ಥವು ಅನಾದಿಕಾಲದಿಂದ ಇದೆ. ಇಂತಹ ನಿಯತಾರ್ಥಕಪದಗಳ ಮತ್ತು ವಾಕ್ಯಗಳ ವ್ಯವಸ್ಥಿತವಾದ ಜೋಡಣೆಯೇ ವೇದ. ಅದೂ ಪದಗಳಂತೆಯೇ ಪ್ರವಾಹತಃ ಅನಾದಿ-ನಿತ್ಯ.

ಹೀಗೆ ಪ್ರಥಮಾಧ್ಯಾಯ-ಪ್ರಥಮಪಾದದಲ್ಲಿ ಜೈಮಿನಿಗಳು ವೇದಾಪೌರುಷೇಯತ್ವವನ್ನು ಸಾಧಿಸಿದ್ದಾರೆ.

**ನೈಯಾಯಿಕರ ಪೌರುಷೇಯತ್ವವಾದ**—ಮಿಮಾಂಸಕರ ಈ ವಾದವನ್ನು ನೈಯಾಯಿಕರು ಮತ್ತು ವೈಶೇಷಿಕರು ಒಕ್ಕೊರಲಿನಿಂದ ನಿರಾಕರಿಸಿದ್ದಾರೆ. ಗೌತಮ ಪ್ರಣೀತ ನ್ಯಾಯಸೂತ್ರ-**ತತ್ ಪ್ರಮಾಣ್ಯಂ ಆಪ್ತಪ್ರಾಮಾಣ್ಯಾತ್ ॥** ಎಂದು ವೇದಕ್ಕೆ ಪೌರುಷೇಯತ್ವವನ್ನು ಹೇಳಿ ಪ್ರಾಮಾಣ್ಯವನ್ನು ಸಾಧಿಸುತ್ತದೆ. ಮನ್ವಂತರ ಅಥವಾ ಕೃತಾದಿಯುಗಗಳು ಬದಲಾದರೂ ವೇದಾನುಪೂರ್ವಿಯಲ್ಲಿ ಬದಲಾವಣೆ ಇಲ್ಲದಿರುವುದರಿಂದಷ್ಟೇ ಅದನ್ನು ನಿತ್ಯವೆಂದು ಔಪಚಾರಿಕವಾಗಿ ಹೇಳಲಾಗುತ್ತದೆ—

**'ಮನ್ವಂತರ-ಯುಗಾಂತರೇಷು ಚಾತೀತಾನಾಗತೇಷು ಸಂಪ್ರದಾಯಾಭ್ಯಾಸಯೋಗಾ-ವಿಚ್ಛೇದೋ ವೇದಾನಾಂ ನಿತ್ಯತ್ವಮ್॥** (ನ್ಯಾಯಭಾಷ್ಯ)

**'ತಾನ್ಯೇವ ವೇದವಾಕ್ಯಾನಿ ಮನ್ವಂತರ-ಚತುರ್ಯುಗಾಂತರೇಷು ಸಂಪ್ರದಾಯಾಭ್ಯಾಸಾ-ವಿಚ್ಛೇದಾತ್ ಪ್ರವರ್ತಂತೇ। ತದಪೇಕ್ಷಯಾ ಲೌಕಿಕಾಃ ಶಬ್ದಾನ್ ಪ್ರಯುಂಜತೇ 'ನಿತ್ಯಾ ವೇದಾ' ಇತಿ, ಯಥಾ ನಿತ್ಯಾಃ ಪರ್ವತಾಃ, ನಿತ್ಯಾಃ ಸರಿತಃ ಇತಿ। ನ ತತ್ ಮನ್ವಾದಿವಾಕ್ಯೇಷು ಸಮಾನಮ್॥** (ನ್ಯಾಯವಾರ್ತಿಕ)

ಕಣಾದ ಪ್ರಣೀತ ವೈಶೇಷಿಕ ಸೂತ್ರವೂ ವೇದವು ಕೃತಕ ಎಂದಿದೆ—

**''ಲಿಂಗಾಚ್ಚಾನಿತ್ಯಾ ಬುದ್ಧಿಪೂರ್ವಾ ವಾಕ್ಯಕೃತಿರ್ವೇದಃ''** (6-1-1)

ಲಿಂಗಾತ್=ಅನುಮಾನದಿಂದ ವೇದವೂ ಅನಿತ್ಯವೆಂದೇ ಸಿದ್ಧವಾಗುತ್ತದೆ. ಅನುಮಾನ ಹೀಗೆ– ''ವಾಕ್ಯಕೃತಿಃ ಬುದ್ಧಿಪೂರ್ವಾ'' ವಾಕ್ಯಗಳೆಲ್ಲವೂ ಬುದ್ಧಿಪೂರ್ವಕರಚನೆಗಳೇ ಆಗಿರುತ್ತವೆ. ಯಾರೂ ರಚಿಸದೇ ಇರುವ ವಾಕ್ಯಗಳೇ ಇಲ್ಲ. ವೇದವೂ ವಾಕ್ಯರಚನೆಯಾದಕಾರಣ ಅದೂ ಬುದ್ಧಿಪೂರ್ವಕ ವಾಗಿದೆ.

ಪ್ರಶಸ್ತಪಾದ ಭಾಷ್ಯದಲ್ಲೂ **''ಶ್ರುತಿ–ಸ್ಮೃತಿಲಕ್ಷಣೋಽಪಿ ಆಮ್ನಾಯಃ ವಕ್ತೃಪ್ರಾಮಾಣ್ಯಾ-ಪೇಕ್ಷಃ''** ಎಂದು ವೇದಕ್ಕೆ ಪೌರುಷೇಯತ್ವವನ್ನು ಹೇಳಲಾಗಿದೆ.

ಇದರಂತೆ, **'ತದ್ವಚನಾದಾಮ್ನಾಯಸ್ಯಪ್ರಾಮಾಣ್ಯಮ್'** (1-1-34) ಎಂಬ ಸೂತ್ರವೂ ವೇದವು ಈಶ್ವರಪ್ರಣೀತವೆಂದೇ ಹೇಳುತ್ತದೆ.

ಪೌರುಷೇಯವಾದರೂ ವೇದಕ್ಕೆ ಪ್ರಾಮಾಣ್ಯವನ್ನು 'ನ್ಯಾಯಕಂದಲಿ'ಯಲ್ಲಿ (ಗುಣೇ ಶಬ್ದಾಂತರ್ಭಾವ ಪ್ರಕರಣ) ಹೀಗೆ ಸಮರ್ಥಿಸಲಾಗಿದೆ. 'ಪ್ರಾಮಾಣ್ಯಕ್ಕೆ ದೋಷಾಭಾವವು ನಿಮಿತ್ತ ಅಪೌರುಷೇಯತ್ವವಲ್ಲ. ಚಕ್ಷುರಾದಿ ಇಂದ್ರಿಯಗಳು ಅನಿತ್ಯಗಳಾದರೂ ದೋಷವಿಲ್ಲದಿದ್ದಾಗ ಪ್ರಮಾಣವಾಗುತ್ತವೆ. ಈಶ್ವರನಲ್ಲಿ ದೋಷಗಳಿಲ್ಲ. **'ನ ಹಿ ಯಥಾರ್ಥದ್ರಷ್ಟಾ, ಪ್ರಕ್ಷೀಣರಾಗದ್ವೇಷಃ, ಕೃಪಾವಾನ್ ಉಪದೇಶಾಯ ಪ್ರವೃತ್ತಃ ಅಯಥಾರ್ಥಂ ಉಪದಿಶತೀತಿ ಶಂಕಾಮಾರೋಹತಿ'** ಸರ್ವಜ್ಞನಾದುದರಿಂದಲೇ ಈಶ್ವರನಲ್ಲಿ ರಾಗಾದಿದೋಷಗಳಿಲ್ಲ. ಅವನು ಕರುಣಾಶಾಲಿಯಾದುದ ರಿಂದ ತನ್ನ ಕಣ್ಮುಂದೆ ಸುಖಸಾಧನವನ್ನು ತಿಳಿಯದೆ ಕಷ್ಟಪಡುವ ಜನರನ್ನು ನೋಡಿಯೂ ಸುಮ್ಮನಿರಲಾರ. ಅಂತಹವನು ಮಾಡಿದ ಉಪದೇಶ ಸುಳ್ಳು ಎನ್ನುವುದು ಕಲ್ಪನೆಗೇ ಬಾರದ ವಿಷಯ. ಅವನ ಉಪದೇಶವೇ ವೇದ. ಆದ್ದರಿಂದಲೇ ವೇದವು ಬುದ್ಧನ ವಾಕ್ಯದಂತೆ ಒಂದು ಪಂಗಡಕ್ಕೆ ಮಾತ್ರ ಗ್ರಾಹ್ಯವಾಗದೆ ಮಹಾಜನ ಪರಿಗ್ರಹೀತವಾಗಿದೆ. ಹೀಗೆ ಈಶ್ವರನು ಆಪ್ತನಾದುದರಿಂದ ಅವನಿಂದ ರಚಿತವಾದ ವೇದವು ಪ್ರಮಾಣವಾಗಿದೆ.

ಮೀಮಾಂಸಕರು, ವೇದಕ್ಕೆ ಕರ್ತೃಗಳಿದ್ದಲ್ಲಿ ಮಹಾಭಾರತದಂತೆ ಆ ಕರ್ತೃ ಯಾರೆಂದು ತಿಳಿದಿರಬೇಕಿತ್ತು. ಅಂತಹ ಕರ್ತೃಪ್ರಸಿದ್ಧಿ ಇಲ್ಲದಿರುವುದರಿಂದ ವೇದವು ಅಪೌರುಷೇಯ, ಎಂದಿದ್ದಾರೆ. ಇದನ್ನು 'ಕಂದಲೀಕಾರ' ನಿರಾಕರಿಸಿದ್ದಾನೆ— **'ಪ್ರಜಾಪತಿರ್ವಾ ಇದಮೇಕ ಏವಾಸೀತ್...ತಸ್ಮಾತ್ತಪತಃ ತ್ರಯೋ ವೇದಾ ಅಜಾಯಂತ'** ಎಂದು ವೇದದಲ್ಲೇ ವೇದಕರ್ತೃ ಪ್ರಜಾಪತಿ, ಎಂದು ಉಲ್ಲೇಖಿಸಲಾಗಿದೆ. **''ಜೀರ್ಣಕೂಪಾದಿಭಿಃ ವ್ಯಭಿಚಾರಾಚ್ಚ''** ಕುಸಿದ–ಹಳೇ ಬಾವಿಗೆ ಕರ್ತೃ ಯಾರೆಂದು ತಿಳಿದಿಲ್ಲವಾದರೂ ಕರ್ತೃ ಇರುವಂತೆ ವೇದಕ್ಕೆ ನಿರ್ದಿಷ್ಟಕರ್ತೃ ಯಾರೆಂದು ತಿಳಿಯದಿದ್ದರೂ ಕರ್ತೃ ಇರಬಹುದು. ಆದ್ದರಿಂದ ಕರ್ತೃಪ್ರಸಿದ್ಧ್ಯಭಾವವು ಅಪೌರುಷೇಯತ್ವಕ್ಕೆ ಸಾಧಕವಾಗುವುದಿಲ್ಲ.

ಜಯಂತಭಟ್ಟ ನ್ಯಾಯಮಂಜರಿಯಲ್ಲಿ ಮೀಮಾಂಸಾದರ್ಶನವಿಮರ್ಶಾಪೂರ್ವಕವಾಗಿ ವೇದಕ್ಕೆ ಪೌರುಷೇಯತ್ವವನ್ನು ಸಾಧನೆ ಮಾಡಿದ್ದಾನೆ. ವೇದಕರ್ತೃ ಯಾರಿಂದಲೂ ದೃಷ್ಟನಲ್ಲವಾದ ಮಾತ್ರಕ್ಕೆ ಅದನ್ನು ಅಪೌರುಷೇಯ ಎನ್ನುವುದಾದಲ್ಲಿ ಮಹಾಭಾರತವೂ ಅಪೌರುಷೇಯ ವಾದೀತು—

**ಅಥ ಪ್ರಣೇತಾ ವೇದಸ್ಯ ನ ದೃಷ್ಟಃ ಕೇನಚಿತ್ ಕ್ವಚಿತ್ ।**
**ದ್ವೈಪಾಯನೋऽಪಿ ಕಿಂ ದೃಷ್ಟಃ ಭವತ್‌ಪಿತೃ–ಪಿತಾಮಹೈಃ ॥**

ಮಹಾಭಾರತದ ಕರ್ತೃವನ್ನು ನಾವಾರೂ ನೋಡಿಲ್ಲವಾದರೂ ಅದರ ಕರ್ತೃ ವ್ಯಾಸರೆಂದು ನಿರ್ವಿವಾದವಾಗಿ ಮಹಾಭಾರತದಲ್ಲೇ ಸಿದ್ಧವಾಗಿದೆ, ಎನ್ನುವುದಾದಲ್ಲಿ ವೇದಕರ್ತೃವೂ ಪ್ರಜಾಪತಿಯೆಂದು ವೇದದಿಂದಲೇ ತಿಳಿಯುತ್ತದೆ—

**ಸರ್ವೇಷಾಮವಿಗೀತಾ ಚೇತ್ ಸ್ಮೃತಿಃ ಸತ್ಯವತೀಸುತೇ ।**
**ಪ್ರಜಾಪತಿರಪಿ ಸ್ರಷ್ಟಾ ಲೋಕೇ ಸರ್ವತ್ರ ಗೀಯತೇ ॥**

ಇದರ ಮೇಲೆ, ಮೀಮಾಂಸಕರು ಹೇಳುವ 'ಅಸ್ಮರ್ಯಮಾಣಕರ್ತೃಕತ್ವ' ಹೇತುವನ್ನು ವಿವರಿಸಿ ನ್ಯಾಯಮಂಜರಿಯಲ್ಲಿ ವೇದಾಪೌರುಷೇಯತ್ವಪೂರ್ವಪಕ್ಷವನ್ನು ಸಮರ್ಥಿಸಲಾಗಿದೆ—

**''ಕಿಲ ಸ್ವಲ್ಪಮಪಿ ಕರ್ಮ ಪಿತ್ರಾ ಮಾತ್ರಾ ವಾ ಉಪದಿಶ್ಯಮಾನಂ ತದ್ವಚನಪ್ರತ್ಯಯಾದನುಷ್ಠೀಯತೇ । ತದಯಮಿಯಾನ್ ಅನೇಕಕ್ಲೇಷ–ವಿತ್ತವ್ಯಯಾಸಾದಿನಿರ್ವರ್ತ್ಯಃ ವೈದಿಕಃ ಕರ್ಮಕಲಾಪಃ ಏವಮೇವ ತದುಪದೇಶಿನಮ್ ಆಪ್ತಮಸಂಸ್ಪೃಶ್ಯೈವ ಕ್ರಿಯತೇ ಇತಿ ಮಹಾನ್ ಪ್ರಮಾದಃ''**

'ತಂದೆ–ತಾಯಿ ಹೇಳಿದ ಚಿಕ್ಕಪುಟ್ಟ ಕೆಲಸಗಳನ್ನು ಹಿರಿಯರ ಮೇಲಿನ ನಂಬಿಕೆಯಿಂದಲೇ ಮಾಡುವಾಗ ಅತಿವೆಚ್ಚ ಮತ್ತು ಶ್ರಮದ ವ್ಯಯದಿಂದ ಮಾಡಬೇಕಾದ ಯಜ್ಞಯಾಗಾದಿಗಳಲ್ಲಿ ತೊಡಗಬೇಕಾದರೆ ವೇದವನ್ನು ರಚಿಸಿದ ಆಪ್ತನಾರೆಂದು ತಿಳಿದೇ ಇರಬೇಕು. ಆದರೂ ಯಾರೂ ನಿರ್ದಿಷ್ಟಕರ್ತೃವನ್ನು ತಿಳಿಯದೆಯೂ ಅಂತಹ ಕರ್ಮಗಳಲ್ಲಿ ತೊಡಗುತ್ತಾರೆಂದರೆ, ವೇದಕ್ಕೆ ಕರ್ತೃಗಳಿಲ್ಲವೆಂದೇ ತಿಳಿಯುತ್ತದೆ.'

ಇದರ ನಿರಾಕರಣೆಯನ್ನೂ ಅಲ್ಲೇ ಹೀಗೆ ಮಾಡಲಾಗಿದೆ— ವಾಕ್ಯರಚನೆಯಾದುದರಿಂದ ವೇದವು ಸಕರ್ತೃಕ ಎಂದು ನೈಯಾಯಿಕರ ವಾದ. ಕರ್ತೃಸ್ಮರಣೆ ಇಲ್ಲವಾದುದರಿಂದ ಅಕರ್ತೃಕ ಎಂದು ಮೀಮಾಂಸಕರವಾದ. ಇವೆರಡರಲ್ಲಿ ತಾರ್ಕಿಕರ ವಾದವೇ ಯುಕ್ತಿಯುಕ್ತವಾದುದು—

**ಭೋಃ ಭಗವಂತಃ ಸಭ್ಯಾಃ ಕ್ವೇದಂ ದೃಷ್ಟಂ ಕ್ವ ವಾ ಶ್ರುತಮ್ ।**
**ಯದ್ವಾಕ್ಯೇಷು ಪದಾನಾಂ ರಚನಾ ನೈಸರ್ಗಿಕೀ ಭವೇತ್ ।**
**ಯದಿ ಸ್ವಾಭಾವಿಕೀ ವೇದೇ ಪದಾನಾಂ ರಚನಾ ಭವೇತ್ ।**
**ಪಟೇ ಹಿ ಹಂತ, ತಂತೂನಾಂ ಕಥಂ ನೈಸರ್ಗಿಕೀ ನ ಸಾ ॥**

ವಾಕ್ಯರಚನೆಗಳೆಲ್ಲವೂ ಪುರುಷಕೃತವೆಂದು ಕಂಡಿದ್ದರೂ ವೇದರಚನೆ ನೈಸರ್ಗಿಕ ಎನ್ನುವುದಾದಲ್ಲಿ ನೇಯ್ಗೆಯವನು ಇಲ್ಲದೆಯೂ ಬಟ್ಟೆ ಸಿದ್ಧವಾಗಬೇಕಾದೀತು. ಯದ್ಯಪಿ ಪೌರುಷೇಯವಾದ ಮಹಾಭಾರತ, ಕುಮಾರಸಂಭವಾದಿಗಳ ರಚನೆಗೂ ವೈದಿಕರಚನೆಗೂ ವೈಲಕ್ಷಣ್ಯವು ಪ್ರತ್ಯಕ್ಷಸಿದ್ಧ. ಆದರೂ ಆದರಿಂದಾಗಿ ಅಂತಹ ವಿಚಿತ್ರರಚನೆಗೆ ಕಾರಣವಾದ ವ್ಯಕ್ತಿಯು ಲೋಕವಿಲಕ್ಷಣವೆಂದು ಸಿದ್ಧವಾಗಬಹುದು. ಹೊರತು, ಕರ್ತೃವೇ ಇಲ್ಲವೆಂದು ಸಿದ್ಧವಾಗದು.

ವೇದದಲ್ಲಿ ಐತಿಹಾಸಿಕ ವ್ಯಕ್ತಿಗಳ ಉಲ್ಲೇಖವಿದೆ— "ಪುರೂರವೋ ನಾಮ ಪ್ರಪತಃ" ಎಂದು. ಅನಾದಿಯಾದ ವೇದದಲ್ಲಿ ಸಾದಿಯಾದ ಇಂತಹ ಉಲ್ಲೇಖ ಬರುವುದು ಹೇಗೆ? ಪ್ರತಿಸೃಷ್ಟಿಯಲ್ಲೂ ಅಂತಹ ವ್ಯಕ್ತಿಗಳು ಇರುತ್ತಾರೆ, ಎಂದು ಮೀಮಾಂಸಕರು ಸಮಾಧಾನಿಸಿದರೆ ಪ್ರತಿಸರ್ಗದಲ್ಲೂ ಅದರಂತೆ, ವೇದವೂ ಭಿನ್ನವಾಗಿರುತ್ತದೆ, ಎಂದು ನೈಯಾಯಿಕರ ಪ್ರತ್ಯುತ್ತರ. ಅದನ್ನು ಪ್ರಮಾಣವೇ ಹೇಳುತ್ತದೆ—

**ಪ್ರತಿಮನ್ವಂತರಂ ಚೈಷಾ ಶ್ರುತಿರನ್ಯಾಭಿಧೀಯತೇ ॥**

ಕರ್ತೃಸ್ಮರಣೆ ಇಲ್ಲವಾದುದರಿಂದ ಕರ್ತೃವೇ ಇಲ್ಲ ಎಂದು ನಿರ್ಧರಿಸುವುದು ಸರಿಯಲ್ಲ. ಸ್ಮರಣೆ ಇಲ್ಲದಿರುವುದಕ್ಕೆ ಅನೇಕ ಕಾರಣಗಳಿವೆ— ವೇದದ ರಚನಾಕಾಲ ಅತಿಪ್ರಾಚೀನವಾದುದು. ಅದನ್ನು ರಚಿಸಿದ ವ್ಯಕ್ತಿ ಲೋಕವಿಲಕ್ಷಣನಾದವನು. ಅವನಿಗೆ ನಿರ್ದಿಷ್ಟವಾದ ಒಂದು ಶರೀರವಿಲ್ಲ. ಹೀಗಾಗಿ ಪಾಣಿನಿ–ಪಿಂಗಲಾದಿಗಳಂತೆ ಅವನ ಸ್ಮರಣೆ ಅಧ್ಯೇತೃಗಳಿಗೆ ಇಲ್ಲದಿರಬಹುದು.

ಯದ್ಯಪಿ, ವೇದವು ಸಕರ್ತೃಕ ಎಂದು ವೇದದಿಂದಲೇ ತಿಳಿಯುವುದು ಅನ್ಯೋನ್ಯಾಶ್ರಯಕ್ಕೆ ಕಾರಣವಾಗುತ್ತದೆ. ಆದ್ದರಿಂದ ಸಕರ್ತೃಕತ್ವಕ್ಕೆ ಅನುಮಾನವೇ ಪ್ರಮಾಣ. ಅನುಮಾನದಿಂದ ಕರ್ತೃ ಸಿದ್ಧವಾದ ಮೇಲೆ ಆ ಕರ್ತೃ ಪ್ರಜಾಪತಿ, ಎಂದು ವೇದ ತಿಳಿಸುತ್ತದೆ. ಜಗತ್ಕರ್ತನಾದ ಪ್ರಜಾಪತಿಯೇ ವೇದಕ್ಕೂ ಕರ್ತೃ. ಸಮಗ್ರವೇದಕ್ಕೂ ಅವನೊಬ್ಬನೇ ಕರ್ತನಾದರೂ ಕಠಾದಿ ಋಷಿಗಳು ಕೆಲವು ಭಾಗಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವುದರಿಂದ ಕಾಠಕ ಇತ್ಯಾದಿ ಶಾಖಾಭೇದಕ್ಕೆ ಕಾರಣವಾಯಿತು. ಕಠಾದಿಗಳು ಸರ್ವಜ್ಞರಲ್ಲದ ಕಾರಣ ಅವರು ಶಾಖಾರಚನೆಯನ್ನು ಮಾಡಲಾರರು. ಅವರ ರಚನೆಯಾದರೆ ನಂಬಿಕೆಯೂ ಬರಲಿಕ್ಕಿಲ್ಲ. ಹೀಗೆ ವೇದವು ಪೌರುಷೇಯವಾಗಿದೆ ಎಂದು ನೈಯಾಯಿಕರು ಮತ್ತು ವೈಶೇಷಿಕರು ಸಾಧಿಸುತ್ತಾರೆ.

**ಅದ್ವೈತದರ್ಶನದಲ್ಲಿ ವೇದಾಪೌರುಷೇಯತ್ವ**—"ಶಬ್ದ ಇತಿ ಚೇನ್ನ..." (1-3-28) ಎಂಬ ಬ್ರಹ್ಮಸೂತ್ರದ ಶಾಂಕರಭಾಷ್ಯದಲ್ಲಿ ವೇದಾಪೌರುಷೇಯತ್ವವನ್ನು ನಿರೂಪಿಸಲಾಗಿದೆ. ಬ್ರಹ್ಮನು ಈ ಜಗತ್ತನ್ನು ವೇದಶಬ್ದಗಳಿಂದ ಸೃಷ್ಟಿಸಿದ್ದಾನೆ ಎಂದು ಶ್ರುತಿ ಹಾಗೂ ಸ್ಮೃತಿಗಳಲ್ಲಿ ಹೇಳಲಾಗಿದೆ. "**ಸ ಭೂರಿತಿ ವ್ಯಾಹರತ್ ಸ ಭೂಮಿಮಸೃಜತ**" (ತೈ.ಬ್ರಾ.2.2.4.2)

**ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ।**
**ವೇದಶಬ್ದೇಭ್ಯ ಏವಾಸೌ ನಿರ್ಮಮೇ ಸ ಮಹೇಶ್ವರಃ ॥**

(ಮನು.1.21)

ನಾವು ವಸ್ತುಗಳನ್ನು ನಿರ್ಮಾಣ ಮಾಡುವ ಮೊದಲು ಮನಸ್ಸಿನಲ್ಲಿ ಅದಕ್ಕೆ ಸಂಬಂಧಪಟ್ಟ ಶಬ್ದಗಳನ್ನು ಸ್ಮರಿಸಿಕೊಳ್ಳುವಂತೆ ಬ್ರಹ್ಮನೂ ವೈದಿಕ ಶಬ್ದಗಳನ್ನು ಅನುಸಂಧಾನ ಮಾಡಿಕೊಂಡು ಅದಕ್ಕೆ ಅನುಗುಣವಾದ ಚೇತನಾಚೇತನಗಳನ್ನು ಸೃಷ್ಟಿ ಮಾಡುತ್ತಾನೆ. ಹೀಗಾಗಿ ಅನಾದಿಕಾಲದಿಂದ ಅದೇ ಶಬ್ದಗಳು, ಅದೇ ಅರ್ಥಗಳು. ಹೀಗೆ ಶಬ್ದಾರ್ಥಸಂಬಂಧವು ಮೀಮಾಂಸಕರು ಹೇಳುವಂತೆ ಅದ್ವೈತದರ್ಶನದಲ್ಲೂ ನಿತ್ಯವಾದುದು. ಮೀಮಾಂಸಕರು ಹೇಳಿರುವಂತೆ, ಕರ್ತೃಸ್ಮರಣರಹಿತ ವಾದುದರಿಂದಲೇ ಅಂತಹ ವೈದಿಕಶಬ್ದಗಳ ಆನುಪೂರ್ವೀ ರೂಪವಾದ ವೇದವೂ ಅಪೌರುಷೇಯ. ಇದನ್ನು ''ಅತ ಏವ ಚ ನಿತ್ಯತ್ವಮ್'' (1.3.29) ಎಂಬ ಬ್ರಹ್ಮಸೂತ್ರದಲ್ಲಿ ಹೇಳಲಾಗಿದೆ.

**ಅತ ಏವ=ನಿಯತಾಕೃತೇಃ ದೇವಾದೇರ್ಜಗತಃ ವೇದಶಬ್ದಪ್ರಭವತ್ವಾತ್ ವೇದಶಬ್ದೇ ನಿತ್ಯತ್ವಮಪಿ ಪ್ರತ್ಯೇತವ್ಯಮ್ ॥** (ಶಾಂ.ಭಾ.)

ಇದಕ್ಕೆ ಶಾಂಕರಭಾಷ್ಯದಲ್ಲಿ ಶ್ರುತಿ–ಸ್ಮೃತಿಗಳನ್ನು ಆಧಾರಗಳನ್ನಾಗಿ ಕೊಡಲಾಗಿದೆ.

**ಯಜ್ಞೇನ ವಾಚಃ ಪದವೀಯಮಾಯಂತಾಮನ್ವವಿಂದನ್ ಋಷಿಷು ಪ್ರವಿಷ್ಟಾಮ್ ॥**

(ಋ.10.71.3)

**ಯುಗಾಂತೇऽಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ ।**
**ಲೇಭಿರೇ ತಪಸಾ ಪೂರ್ವಮ್ ಅನುಜ್ಞಾತಾಃ ಸ್ವಯಂಭುವಾ ॥** (ಮಹಾ.ಭಾ.)

ಇಲ್ಲಿ ಭಾಮತೀಕಾರರು ಹೀಗೆ ಅನುಮಾನ ಮಾಡಿದ್ದಾರೆ— ''ನಿತ್ಯೋ ವೇದಃ, ಜಗದುತ್ಪತ್ತಿ ಹೇತುತ್ವಾತ್, ಈಶ್ವರವತ್'' ಎಂದು.

ಶಾಸ್ತ್ರಯೋನಿತ್ವಾಧಿಕರಣ ಭಾಮತಿಯಲ್ಲಿ ವೇದಾಪೌರುಷೇಯತ್ವ ಸಮರ್ಥನೆ ಹೀಗೆ ಬಂದಿದೆ— ವರ್ಣಗಳಿಗೆ ಕಾಲತಃ, ದೇಶತಃ ಪೌರ್ವಾಪರ್ಯ ಇಲ್ಲ. ಹೀಗಾಗಿ 'ವ್ಯಕ್ತಿಧರ್ಮಸ್ತ್ವಾನುಪೂರ್ವೀ, ನ ವರ್ಣಧರ್ಮಃ''. ವರ್ಣಗಳ ಅಭಿವ್ಯಕ್ತಿಕ್ರಮವನ್ನೇ ವರ್ಣಕ್ರಮ ವನ್ನಾಗಿ ಪರಿಗಣಿಸಬೇಕು. ಅದು ಅನಿತ್ಯ. ಅದರಿಂದಾಗಿ ಪದ–ವಾಕ್ಯಗಳೂ ಅನಿತ್ಯಗಳು. ಆದ್ದರಿಂದ, ವೇದವು ಅನಿತ್ಯ. ಗುರುಗಳು ನೃತ್ಯಮಾಡುವಂತೆ ಶಿಷ್ಯರೂ ಕುಣಿಯುತ್ತಾರೆ. ಗುರುವಿನ ಕುಣಿತ ಬೇರೆ, ಶಿಷ್ಯನ ಕುಣಿತ ಬೇರೆ. ಅದರಂತೆ ಗುರುಗಳು ಹೇಳಿದಂತೆ ಶಿಷ್ಯರು ವೇದವನ್ನು ಉಚ್ಚರಿಸುತ್ತಾರೆ. ಗುರುಗಳು ಹೇಳಿದ ವೇದ ಬೇರೆ, ಶಿಷ್ಯ ಹೇಳಿದ ವೇದವೇ ಬೇರೆ. ಹೀಗೆ ಕ್ರಮದ ದೃಷ್ಟಿಯಿಂದ ವೇದವು ಪೌರುಷೇಯವೆನ್ನುವಲ್ಲಿ ವಿವಾದವೇ ಇಲ್ಲ. ಆದರೂ ಉಚ್ಚರಿಸುವ ಪುರುಷನ ಸ್ವಾತಂತ್ರ್ಯದ ಬಗ್ಗೆ ವಿವಾದ ಇದೆ.

**ತಸ್ಮಾನ್ನಿತ್ಯಾನಿತ್ಯವರ್ಣವಾದಿನಾಂ ನ ಲೌಕಿಕವೈದಿಕಪದ-ವಾಕ್ಯಾದಿ ಪೌರುಷೇಯತ್ವೇ ವಿವಾದಃ। ಕೇವಲಂ ವೇದವಾಕ್ಯೇಷು ಪುರುಷಸ್ವಾತಂತ್ರ್ಯಾಸ್ವಾತಂತ್ರ್ಯೇ ವಿಪ್ರತಿಪತ್ತಿಃ।** (ಭಾಮತೀ)

ಮಹಾಭಾರತದ ವಾಕ್ಯಗಳನ್ನು ರಚಿಸಿರುವ ವ್ಯಾಸರಿಗೆ ಪದಾನುಪೂರ್ವೀ, ವಾಕ್ಯಾನುಪೂರ್ವೀ ರಚನೆಯಲ್ಲಿ ಸ್ವಾತಂತ್ರ್ಯವಿದೆ. ವೇದಕರ್ತೃವಾದ ಈಶ್ವರನಿಗೆ ಪದಗಳನ್ನಾಗಲೀ, ವಾಕ್ಯಗಳನ್ನಾಗಲೀ ಬದಲಿಸುವ ಸ್ವಾತಂತ್ರ್ಯವಿಲ್ಲ. ಪೂರ್ವಕಲ್ಪದ ಆನುಪೂರ್ವಿಗೆ ಅನುಗುಣವಾಗಿಯೇ ಅವನು ಪ್ರತಿಕಲ್ಪದಲ್ಲೂ ವೇದವನ್ನು ರಚಿಸುತ್ತಾನೆ.

**ಸರ್ವಜ್ಞೋಽಪಿ ಸರ್ವಶಕ್ತಿರಪಿ ಪೂರ್ವಪೂರ್ವಸರ್ಗಾನುಸಾರೇಣ ವೇದಾನ್ ವಿರಚಯನ್ ನ ಸ್ವತಂತ್ರಃ। ಪುರುಷಾಸ್ವಾತಂತ್ರ್ಯಮಾತ್ರಂ ಚಾಪೌರುಷೇಯತ್ವಂ ರೋಚಂತೇ ಜೈಮಿನೀಯಾ ಅಪಿ। ತಚ್ಚಾಸ್ಮಾಕಮಪಿ ಸಮಾನಮ್।** (ಭಾಮತೀ)

ಇದರಿಂದ ಮೀಮಾಂಸಕರು ಒಪ್ಪಿರುವಂತೆಯೇ ಶಾಂಕರಸಿದ್ಧಾಂತದಲ್ಲೂ ಅಪೌರುಷೇಯತ್ವ. ಆದರೆ, ಮೀಮಾಂಸಕರು ನಿರೀಶ್ವರವಾದಿಗಳು. ಶಾಂಕರರು ಈಶ್ವರವಾದಿಗಳು.

ಶಾಂಕರಭಾಷ್ಯವ್ಯಾಖ್ಯಾನವಾದ ಭಾಷ್ಯರತ್ನಪ್ರಭಾದಲ್ಲಿ ಬ್ರಹ್ಮನಿಗೆ ವೇದಕರ್ತೃತ್ವವನ್ನು ಎರಡು ರೀತಿಯಲ್ಲಿ ಸಮರ್ಥನೆ ಮಾಡಲಾಗಿದೆ—

1. ಸಕಲ ಜಗತ್ತಿಗೆ ಉಪಾದಾನವಾಗಿರುವ ಬ್ರಹ್ಮ ವೇದಕ್ಕೂ ಉಪಾದಾನನಾಗಿದ್ದಾನೆ. ವೇದದಲ್ಲಿ ಸರ್ವಾರ್ಥಪ್ರಕಾಶನ ಶಕ್ತಿ ಇದೆ. ಆ ಶಕ್ತಿ ವೇದಕ್ಕೆ ಉಪಾದಾನನಾದ ಬ್ರಹ್ಮಶಕ್ತಿಯೇ ಆಗಿದೆ. ಮೃದ್ಗತಶಕ್ತಿಯೇ ಘಟದಲ್ಲಿ ಇರುವಂತೆ ಬ್ರಹ್ಮಗತಶಕ್ತಿ ವೇದದಲ್ಲಿದೆ. ಇದರಿಂದ ಬ್ರಹ್ಮನಿಗೆ ಸರ್ವಜ್ಞತ್ವವೂ ಸಿದ್ಧವಾಗುತ್ತದೆ.

**''ಉಪಾದಾನೇ ತಚ್ಛಕ್ತಿಂ ವಿನಾ ಕಾರ್ಯೇ ತದಯೋಗಾತ್**
**ವೇದೋಪಾದಾನಸ್ಯ ಸರ್ವಜ್ಞತ್ವಮ್''** (ರತ್ನಪ್ರಭಾ)

2. ವೇದಾಧ್ಯಯನ ಮಾಡುವ ಆಧುನಿಕರು ಗುರುಗಳಿಂದ ತಿಳಿದ ಕ್ರಮಾನುಸಾರವಾಗಿ ಪದವಾಕ್ಯಗಳನ್ನು ಪಠಿಸುತ್ತಾ ಕ್ರಮವಿಶಿಷ್ಟವೇದವನ್ನು ಸೃಜಿಸುತ್ತಾರೆ. ಈಶ್ವರ ಪೂರ್ವಕಲ್ಪದ ಕ್ರಮ ಮತ್ತು ವೇದಾರ್ಥವನ್ನು ಜೊತೆ-ಜೊತೆಯಲ್ಲಿ ತಿಳಿದು ವೇದವನ್ನು ಸೃಜಿಸುತ್ತಾನೆ. ಅರ್ಥವನ್ನು ಮೊದಲು ತಿಳಿದು ಆಮೇಲೆ ಅದಕ್ಕೆ ಅನುಗುಣವಾದ ಶಬ್ದವನ್ನು ರಚಿಸಿದರೆ ಗ್ರಂಥಕರ್ತನೆನಿಸುತ್ತಾನೆ. ಬ್ರಹ್ಮ ಅರ್ಥ ಮತ್ತು ಶಬ್ದಗಳನ್ನು ಏಕಕಾಲದಲ್ಲಿ ತಿಳಿದು ರಚಿಸಿರುವುದರಿಂದ ವೇದವು ಪೌರುಷೇಯ (ಪುರುಷನಿರ್ಮಿತ)ವಾದರೂ ಬ್ರಹ್ಮನು ಸ್ವತಂತ್ರವಾಗಿ ವೇದರಚನೆ ಮಾಡಿದವನು ಎನಿಸುವುದಿಲ್ಲ.

**''ಯತ್ರ ಹ್ಯರ್ಥಜ್ಞಾನಪೂರ್ವಕಂ ವಾಕ್ಯಜ್ಞಾನಂ ವಾಕ್ಯಸೃಷ್ಟೌ ಕಾರಣಂ**
**ತತ್ರ ಪೌರುಷೇಯತಾ। ಅತ್ರ ಯೌಗಪದ್ಯಾತ್ ನ ಸಾ ॥''** (ರತ್ನಪ್ರಭಾ)

ಭಗವದ್ಗೀತಾಭಾಷ್ಯದಲ್ಲಿ (3-15) ''ಬ್ರಹ್ಮಾಕ್ಷರಸಮುದ್ಭವಮ್'' ಎಂಬ ಗೀತಾಭಾಗಕ್ಕೆ ಶಾಂಕರವ್ಯಾಖ್ಯಾನ ಹೀಗಿದೆ—

**''ಯಸ್ಮಾತ್ ಪರಮಾತ್ಮಾಖ್ಯಾತ್ ಅಕ್ಷರಾತ್ ಪುರುಷನಿಃಶ್ವಾಸವತ್ ಸಮುದ್ಭೂತಂ 'ಬ್ರಹ್ಮಾಕ್ಷರಸಮುದ್ಭವಮ್' ಇತ್ಯತ್ರ ಪ್ರಸ್ತುತೋ ವೇದಃ''**

ಇಲ್ಲೂ, ಶಾಸ್ತ್ರಯೋನಿಸೂತ್ರದಲ್ಲಿ ಹೇಳಿರುವಂತೆ, ವೇದವು ಬ್ರಹ್ಮನಿಂದ ಉತ್ಪನ್ನವಾಗಿದೆ ಎಂದು ಹೇಳಲಾಗಿದೆ.

ಇದನ್ನು ಆಚಾರ್ಯರು, ಗೀತಾಭಾಷ್ಯದಲ್ಲಿ ನಿರಾಕರಿಸಿದ್ದಾರೆ— ವೇದವು ಬ್ರಹ್ಮನಿಂದ ರಚಿತವಾದರೆ ಅದರಲ್ಲಿ ವಿಶ್ವಾಸ ಬರಲಿಕ್ಕಿಲ್ಲ ಎಂದು.

ಇದಕ್ಕೆ ಅದ್ವೈತವಾದದ ಸಮಾಧಾನ 'ನಿಃಶ್ವಸಿತಮೇತದ್ ಯದ್ ಋಗ್ವೇದೋ ಯಜುರ್ವೇದಃ' (ಬೃ.ಉ.4.4.10) ಎಂದು ಉಪನಿಷತ್ತಿನಲ್ಲಿ 'ನಾವು ಮಾಡುವ ಶ್ವಾಸೋಚ್ಛ್ವಾಸ ದಂತೆ ಅಬುದ್ಧಿಪೂರ್ವಕವಾಗಿ ವೇದಗಳ ರಚನೆ ಬ್ರಹ್ಮನಿಂದಾಗಿದೆ' ಎನ್ನಲಾಗಿದೆ. ಹೀಗೆ, ಬ್ರಹ್ಮರಚಿಸಿದ್ದರೂ ಅವನ ಬುದ್ಧಿಯ ಹಿನ್ನೆಲೆ ವೇದಕ್ಕೆ ಇಲ್ಲವಾದ ಕಾರಣ ಅದರಲ್ಲಿ ಅಪ್ರಾಮಾಣ್ಯ ಸಂದೇಹ ಬರುವುದಿಲ್ಲ ಎಂದು. ಇದನ್ನು ಆಚಾರ್ಯರು—

**ಅಸ್ವಾತಂತ್ರ್ಯಂ ಚ ತದಮತಿಪೂರ್ವಕತ್ವೇನ ಭವತಿ ।**
**ಯಥಾ, ರೋಗಾದೀನಾಂ ಪುರುಷಸ್ಯ ತಜ್ಜನ್ಯತ್ವೇಽಪಿ ॥**

ನಮ್ಮ ದೇಹದ ರೋಗಗಳು ನಮ್ಮಿಂದಲೇ ಜನ್ಯವಾಗಿವೆ. ಆದರೆ, ಅನಿಷ್ಟಕಾರಕವಾದ ಅವುಗಳನ್ನು ಬರದೇ ಇರುವಂತೆ ಮಾಡಲು ನಮ್ಮಿಂದಾಗದು. ಹೀಗಾಗಿ ನಾವು ಅಸ್ವತಂತ್ರರು. ಆದರಂತೆ ಶ್ವಾಸೋಛ್ವಾಸದಂತೆ ಬ್ರಹ್ಮನ ಅಬುದ್ಧಿಪೂರ್ವಕವಾಗಿ ವೇದಗಳು ಹುಟ್ಟಿದ್ದಲ್ಲಿ ಬ್ರಹ್ಮನಿಗೆ ಅಸ್ವಾತಂತ್ರ್ಯ ಬಂದೀತು.

ಹೀಗೆ, ಅದ್ವೈತವಾದದ ಅಪೌರುಷೇಯತ್ವ- ವಿಶ್ಲೇಷಣೆಯಲ್ಲಿ ಎಲ್ಲೋ ಒಂದು ನ್ಯೂನತೆ ಇದೆ ಎಂದು ತಿಳಿಯುತ್ತದೆ. ಅದಕ್ಕೆ ಮೂಲ, ಅವರು ವೇದಕರ್ತೃತ್ವದಿಂದ ಬ್ರಹ್ಮನಿಗೆ ಸರ್ವಜ್ಞತ್ವವನ್ನು ಸಾಧಿಸಲು ಯತ್ನಿಸಿರುವುದು. ಸರ್ವಜ್ಞತ್ವ ಸಿದ್ಧವಾಗಬೇಕಾದರೆ, ವೇದವು ಬ್ರಹ್ಮನ ಸ್ವತಂತ್ರ ರಚನೆಯಾಗಬೇಕು. ಮೊದಲು ಇದ್ದದ್ದನ್ನೇ ಅವನು ಉಚ್ಚರಿಸಿದರೆ, ಇತರರಂತೆ ಅವನೂ ಆಗುತ್ತಾನೆ. ಆದರಿಂದ ಸರ್ವಜ್ಞತ್ವ ಸಿದ್ಧವಾಗುವುದಿಲ್ಲ. ಆದಕ್ಕಾಗಿ ಈಶ್ವರನ ಸ್ವತಂತ್ರ ರಚನೆ ವೇದ ಎಂದರೆ ಅಪೌರುಷೇಯತ್ವ ಸಿದ್ಧವಾಗುವುದಿಲ್ಲ. ಇವೆರಡು ಸಮಸ್ಯೆಗಳ ಮಧ್ಯದ ಮಾರ್ಗ 'ನಿಃಶ್ವಸಿತಮಿವ' ಎನ್ನುವುದು. ಅದನ್ನು ಆಚಾರ್ಯರು ನಿರಾಕರಿಸಿದ್ದಾರೆ. ಒಟ್ಟಿನಲ್ಲಿ ''ಶಾಸ್ತ್ರಸ್ಯ ಯೋನಿಃ'' ಎಂಬ ಸೂತ್ರದ ವಿವರಣೆ ಹಾಗೂ ''ಬ್ರಹ್ಮ ಅಕ್ಷರಸಮುದ್ಭವಮ್'' ಎಂಬ ಗೀತಾ ಶ್ಲೋಕದ ವ್ಯಾಖ್ಯಾನ ಇವೆರಡು ಅದ್ವೈತವಾದದಲ್ಲಿ ವೇದಾಪೌರುಷೇಯತ್ವದ ಬಗ್ಗೆ ಒಂದು ಸಮಸ್ಯೆಯನ್ನು ತಂದಿಟ್ಟಿವೆ.

ವಿಶಿಷ್ಟಾದ್ವೈತದರ್ಶನದಲ್ಲಿ ವೇದಾಪೌರುಷೇಯತ್ವ-ದೇವತಾಧಿಕರಣ ಸೂತ್ರದ (1.3.7) ಭಾಷ್ಯದಲ್ಲಿ ರಾಮಾನುಜಾಚಾರ್ಯರು ಅಪೌರುಷೇಯತ್ವವನ್ನು ನಿರೂಪಿಸಿದ್ದಾರೆ—

'ವೇದಸ್ಯಾಪೌರುಷೇಯತ್ವಂ ನಿತ್ಯತ್ವಂ ಚ, ಯತ್ ಪೂರ್ವಪೂರ್ವೋಚ್ಚಾರಣ-ಕ್ರಮಜನಿತಸಂಸ್ಕಾರೇಣ ತಮೇವ ಕ್ರಮವಿಶೇಷಂ ಸ್ಮೃತ್ವಾ ಕ್ರಮೇಣೋಚ್ಚಾರ್ಯತ್ವಮ್। ತದಸ್ಮಾಸು ಸರ್ವೇಶ್ವರೇऽಪಿ ಸಮಾನಮ್। ಇಯಾಂಸ್ತು ವಿಶೇಷಃ-ಸಂಸ್ಕಾರಾನಪೇಕ್ಷಮೇವ ಸ್ವಯಮೇವಾನುಸಂಧತ್ತೇ ಪುರುಷೋತ್ತಮಃ।''

ಹಿಂದಿನ ಪದ ವಾಕ್ಯಕ್ರಮಗಳಿಗೆ ವ್ಯತ್ಯಾಸವಿಲ್ಲದೆ ತಿಳಿಯಲ್ಪಡುವ ಶಬ್ದರಾಶಿ ವೇದ. ನಾವು ವೇದವನ್ನು ಕೇಳಿ, ಅಭ್ಯಾಸಮಾಡಿ, ಸಂಸ್ಕಾರವನ್ನು ಮನಸ್ಸಿನಲ್ಲಿ ಉಳಿಸಿಕೊಂಡು ಬೇಕಾದಾಗ ಸ್ಮರಿಸಿಕೊಳ್ಳುತ್ತೇವೆ. ಆದರೆ ಪರಮಾತ್ಮನ ಜ್ಞಾನ ಸ್ಮರಣಾತ್ಮಕವಲ್ಲ, ಸರ್ವದಾ ಅವನ ಬುದ್ಧಿಯಲ್ಲಿ ಅನುಭವಾತ್ಮಕವಾಗಿಯೇ ವೇದವು ಇದೆ. ಅವನ ಅನುಭವ ನಿತ್ಯ.

ಈ ಭಾಷ್ಯದ ವ್ಯಾಖ್ಯಾನವಾದ ಶ್ರುತಪ್ರಕಾಶಿಕಾದಲ್ಲಿ ಹೊಸದೊಂದು ಅಂಶವನ್ನು ಉಲ್ಲೇಖಿಸಲಾಗಿದೆ. ವೇದದಂತೆಯೇ ಮಹಾಭಾರತಾದಿಗ್ರಂಥಗಳೂ ಈಶಬುದ್ಧಿಸ್ಥವಾಗಿವೆ. ಆದರೆ, ವೇದಗಳನ್ನು ಮಾತ್ರ ಅವನು ಅದೇ ಸ್ವರವರ್ಣಕ್ರಮಗಳಿಂದ ಉಚ್ಚರಿಸುತ್ತಾನೆ. ಇತರ ಗ್ರಂಥಗಳನ್ನು ಕ್ರಮವ್ಯತ್ಯಾಸದಿಂದ ಉಚ್ಚರಿಸುತ್ತಾನೆ. ಅದು ಅವನ ಸಂಕಲ್ಪ—

'ತಮೇವ ಶಬ್ದರಾಶಿಂ ವೇದಾಖ್ಯಂ ಮನ್ವಾನಃ ತಾದೃಶಕ್ರಮವಿಶಿಷ್ಟಂ ತಮೇವ ಪ್ರತಿಬ್ರಹ್ಮಾಂಡಸರ್ಗಂ ಪ್ರಮಾಣತಯಾ ಪ್ರವರ್ತಯತಿ। ನ ತು ಅನ್ಯತ್ ಶಬ್ದಜಾತಮ್।''

ಸಮಗ್ರವೇದವನ್ನು ಸೃಷ್ಟಿಯ ಆರಂಭದಲ್ಲಿ ಪುರುಷೋತ್ತಮನು ಬ್ರಹ್ಮದೇವನಿಗೆ ಉಪದೇಶಿಸುವನಾದರೂ ವಸಿಷ್ಠಾದಿಗಳು ವೇದದ್ರಷ್ಟ್ರುಗಳೆನಿಸುತ್ತಾರೆ. ಪ್ರಜಾಪತಿ ಪ್ರತಿಯುಗದಲ್ಲು ಹಿಂದಿನ ಯುಗಾನುಸಾರವಾಗಿ ವಸಿಷ್ಠನಂತೆಯೇ ಆಕೃತಿ-ಸಾಮರ್ಥ್ಯಗಳುಳ್ಳ ವ್ಯಕ್ತಿಗಳನ್ನು ಸೃಷ್ಟಿ ಮಾಡಿ, ಅವರಿಗೆ ಅದೇ ಹೆಸರನ್ನು ನೀಡುತ್ತಾನೆ. ಅವರು ಅಧ್ಯಯನವಿಲ್ಲದೆಯೇ ತಪಸ್ಸಿನಲ್ಲಿ ವೇದದ ಕೆಲವು ಭಾಗಗಳನ್ನು ಕಂಡುಕೊಳ್ಳುತ್ತಾರೆ. ಹೀಗಾಗಿ ಅವರು ವೇದದ್ರಷ್ಟಾರರು ಎನಿಸುತ್ತಾರೆ—

''ತಪಸ್ತಪ್ತ್ವಾ ನಿತ್ಯಸಿದ್ಧಾನ್ ಪೂರ್ವಪೂರ್ವ-ವಸಿಷ್ಠಾದಿದೃಷ್ಟಾನ್ ತಾನೇವ ಮಂತ್ರಾದೀನ್ ಅನಧೀತ್ಯೈವ ಸ್ವರತೋ ವರ್ಣತಶ್ಚಾಕಲಿತಾನ್ ಪಶ್ಯಂತಿ। ಅತಶ್ಚ ವೇದಾನಾಂ ನಿತ್ಯತ್ವಂ, ಏಷಾಂ ಚ ಮಂತ್ರಕೃತ್ತ್ವಂ ಉಪಪದ್ಯತೇ।''

ವೇದಶಾಖೆಗಳಿಗೆ 'ಕಾಠಕ' ಇತ್ಯಾದಿ ಹೆಸರು ಬರಲೂ ಇದೇ ಕಾರಣ. ಇದು ಮೀಮಾಂಸಕರಿಗಿಂತ ಈ ಸಿದ್ಧಾಂತದ ವಿಶೇಷ. ಇದಲ್ಲದೆ, ಇನ್ನೊಂದು ವಿಶೇಷವಿದೆ. ಶಾಂಕರಭಾಷ್ಯದಲ್ಲಿ ಹೇಳಿರುವ ವರ್ಣಗಳ ನಿತ್ಯತ್ವ-ವಿಭುತ್ವವನ್ನು ಶ್ರುತಪ್ರಕಾಶಿಕಾದಲ್ಲಿ ಅನರ್ಥಕವೆಂದು ನಿರಾಕರಿಸಲಾಗಿದೆ. ಆದ್ದರಿಂದ ವರ್ಣಗಳೂ ಕ್ರಮಗಳೂ ಈ ದರ್ಶನದಲ್ಲಿ ಅನಿತ್ಯಗಳು.

ರಾಮಾನುಜದರ್ಶನದಲ್ಲಿ, ಏಕಕಾಲದಲ್ಲಿ ಅನಂತ ಬ್ರಹ್ಮಾಂಡಗಳಿವೆ. ಆ ಬ್ರಹ್ಮಾಂಡಗಳಲ್ಲಿರುವ ಅನಂತಬ್ರಹ್ಮರಿಗೂ ಪುರುಷೋತ್ತಮ ವೇದೋಪದೇಶವನ್ನು ಮಾಡುತ್ತಾನೆ. ಹೀಗೆ ವೇದ ಏಕಮಾತ್ರ ವ್ಯಷ್ಟವಲ್ಲ. ಹಾಗಿದ್ದಲ್ಲಿ ಅದು ಕಾಲ್ಪನಿಕವೆನಿಸುತ್ತಿತ್ತು. (ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ।)

ಹೀಗೆ ಮೀಮಾಂಸಾ, ಅದ್ವೈತ, ವಿಶಿಷ್ಟಾದ್ವೈತದರ್ಶನಗಳಲ್ಲಿ ಕ್ರಮಾನಿತ್ಯತ್ವ ಪ್ರಯುಕ್ತವಾಗಿ ವೇದಕ್ಕೆ ಅನಿತ್ಯತ್ವವನ್ನು ಅಂಗೀಕರಿಸಿ ಆ ಕ್ರಮವು ಅನಾದಿ-ಅನಂತಕಾಲದವರೆಗೆ ಒಂದೇ ರೀತಿಯಾಗಿರುವುದರಿಂದ ಅಪೌರುಷೇಯತ್ವವನ್ನು ಸಮರ್ಥಿಸಲಾಗಿದೆ.

**ದ್ವೈತದರ್ಶನದಲ್ಲಿ ಅಪೌರುಷೇಯತ್ವ**—ದ್ವೈತದರ್ಶನದಲ್ಲಿ ವಿಷ್ಣುತತ್ತ್ವನಿರ್ಣಯ, ಗೀತಾಭಾಷ್ಯ ಮತ್ತು ಅನುವ್ಯಾಖ್ಯಾನಗಳಲ್ಲಿ ವಿಸ್ತೃತವಾಗಿ ವೇದಾಪೌರುಷೇಯತ್ವದ ಚರ್ಚೆ ಬಂದಿದೆ. ವೇದಪುರಾಣಗಳ ಆಧಾರಕೊಟ್ಟು ವೇದದ ಅಪೌರುಷೇಯತ್ವವನ್ನು ಮೊದಲೇ ಪ್ರತಿಪಾದಿಸುವು ದನ್ನು ಬಿಟ್ಟು ಯುಕ್ತಿಯ ಆಧಾರದಿಂದ ಅಪೌರುಷೇಯತ್ವವನ್ನು ಸಮರ್ಥಿಸಿರುವುದು ಇಲ್ಲಿರುವ ಒಂದು ವಿಶೇಷ. ಇನ್ನೊಂದು ವಿಶೇಷ, ಆಚಾರ್ಯರು ಅಪೌರುಷೇಯತ್ವದ ಬಗ್ಗೆ ಮತ್ತು ಅದಕ್ಕೆ ಬರುವ ವಿರೋಧದ ಪರಿಹಾರಕ್ಕಾಗಿ ಹೇಳಿರುವ ಒಂದೊಂದು ಅಂಶಕ್ಕೂ ಪ್ರಮಾಣವನ್ನು ಕೊಟ್ಟಿದ್ದಾರೆ—

**''ನಿತ್ಯಯಾಽನಿತ್ಯಯಾ ಸ್ತೌಮಿ ಬ್ರಹ್ಮ ತತ್ ಪರಮಂ ಪದಮ್'' ಇತಿ ।**

**''ಶ್ರುತಿರ್ವಾವ ನಿತ್ಯಾ, ಅನಿತ್ಯಾ ವಾವ ಸ್ಮೃತಯಃ''**

ಈ ಪೈಂಗಿಬ್ರಾಹ್ಮಣ 'ಮಂತ್ರ'ವನ್ನು ಉಲ್ಲೇಖಿಸಿ ಅದಕ್ಕೆ ಸ್ಪಷ್ಟವಾದ ವ್ಯಾಖ್ಯಾನ ಮಾಡುವ ಮೂಲಕ ಶ್ರುತಿ-ಸ್ಮೃತಿಗಳಿಗಿರುವ ವ್ಯತ್ಯಾಸವನ್ನು ತಿಳಿಸುತ್ತದೆ. ಶ್ರುತಿ ನಿತ್ಯ, ಸ್ಮೃತಿ ಅನಿತ್ಯ ಎಂದು.

**ನಿತ್ಯಾ ವೇದಾಃ ಸಮಸ್ತಾಶ್ಚಾ ಶಾಶ್ವತಾ ವಿಷ್ಣುಬುದ್ಧಿಗಾಃ ।**
**ಸರ್ಗೇ ಸರ್ಗೇಽಮುನೈವೇತೇ ಉದ್ಗೀರ್ಯಂತೇ ತಥೈವ ಚ ॥**

ಈ ಸ್ಮೃತಿ ವೇದಾಪೌರುಷೇಯತ್ವಸ್ವರೂಪವನ್ನು ಸ್ಫುಟವಾಗಿ ತಿಳಿಸುತ್ತದೆ. ಇಷ್ಟಾದರೂ, ವೇದಗಳಲ್ಲಿರುವ ''ಛಂದಾಂಸಿ ಜಜ್ಞಿರೇ'' ಇತ್ಯಾದಿ ವೇದೋತ್ಪತ್ತಿಯನ್ನು ಹೇಳುವ ವಾಕ್ಯಗಳ ವಿರೋಧ ಇದೆ. ಅದರ ಪರಿಹಾರವನ್ನೂ ಆಚಾರ್ಯರು ಬ್ರಹ್ಮಾಂಡ ಪುರಾಣದ ಪ್ರಮಾಣೋಲ್ಲೇಖಪೂರ್ವಕ ಮಾಡಿದ್ದಾರೆ—

**ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುರ್ವ್ಯಕ್ತ್ಯಪೇಕ್ಷಯಾ ॥**

ವಸಿಷ್ಠಾದಿ ಋಷಿಗಳು ತಪಸ್ಸಿನಲ್ಲಿ ಕಂಡುಕೊಳ್ಳುವ ವೇದಭಾಗಗಳು ಅವರು ಜನ್ಮಾಂತರದಲ್ಲಿ ಮಾಡಿರುವ ಅಧ್ಯಯನದ ಫಲವೇ ಆಗಿದೆ—

**ಜನ್ಮಾಂತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ ।**
**ಮುನೀನಾಂ ಪ್ರತಿಭಾಸ್ಯಂತಿ, ಭಾಗೇನೈವ ನ ಸರ್ವಶಃ ॥**

ಇದು ಆಚಾರ್ಯರು ಮಾತ್ರ ಹೇಳಿರುವ ವಿಶೇಷ.

ವೇದಾಪೌರುಷೇಯತ್ವವನ್ನು ಮನವರಿಕೆಯಾಗುವಂತೆ ಮಾಡಲು ಆಚಾರ್ಯರು ಆರಂಭಿಸಿದ ಕ್ರಮವೂ ಅಪೂರ್ವವಾದುದು—

**ನ ಚಾಪೌರುಷೇಯಂ ವಾಕ್ಯಮೇವ ನಾಸ್ತೀತಿ ವಾಚ್ಯಮ್ ।**
**ತದಭಾವೇ ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ ।**

ಸಮಾಜದ ಸುಸ್ಥಿತಿಗೆ ಕಾರಣವಾದ ಪುಣ್ಯ-ಪಾಪಗಳ ನಂಬಿಕೆ ದೃಢವಾಗಿ ಉಳಿಯಬೇಕಾದರೆ ಅವುಗಳನ್ನು ತಿಳಿಸುವ ಅಪೌರುಷೇಯವಾದ ಒಂದು ವಾಕ್ಯ ಇರಬೇಕು. 'ಇಂತಹ ಧಾರ್ಮಿಕ ಕಾರ್ಯ ಮಾಡಿದರೆ ಇಂತಹ ನಿರ್ದಿಷ್ಟ ಫಲವೇ ಸಿಗುತ್ತದೆ. ಈ ತಪ್ಪು ಮಾಡಿದರೆ ಇಂತಿಷ್ಟೇ ಪಾಪ.' ಈ ಮಾಹಿತಿಗಳನ್ನು ನಾವು ದೃಢವಾಗಿ ನಂಬಬೇಕಾದರೆ ಅಪೌರುಷೇಯವಾದ ಗ್ರಂಥವೇ ಬೇಕು. ಒಬ್ಬ ವ್ಯಕ್ತಿಯ ಮಾತಿನಿಂದ ಈ ಬಗ್ಗೆ ದೃಢವಿಶ್ವಾಸ ಬರಲಾರದು. ಕೆಲವೊಂದು ವ್ಯಕ್ತಿಗಳನ್ನು ನಂಬುವುದೂ ಅವರು ಶಾಸ್ತ್ರಗಳನ್ನು ಓದಿರುವ ಹಿನ್ನೆಲೆಯಲ್ಲೇ. ಹೀಗೆ, ಅಪೌರುಷೇಯ ವಾಕ್ಯವು ಅನಿವಾರ್ಯವೆಂದಾದ ಮೇಲೆ ಕರ್ತೃಪ್ರಸಿದ್ಧಿ ಇಲ್ಲದೆ, ಅಪೌರುಷೇಯವೆಂದು ಪ್ರಸಿದ್ಧಿ ಇರುವ ವೇದವೇ ಅಂತಹ ಗ್ರಂಥರಾಶಿ ಎಂದು ಅಂಗೀಕರಿಸುವುದು ಉಚಿತ.

ನಿತ್ಯಸರ್ವಜ್ಞನಾದ ಈಶ್ವರನನ್ನು ಅಂಗೀಕರಿಸುವ ಆಸ್ತಿಕರಿಗಂತೂ ವೇದವು ಅಪೌರುಷೇಯ ವೆಂದು ಸಾಧಿಸುವುದು ಸುಲಭ. ಅಂತಹ ಈಶ್ವರನು ಎಂದೂ ಮರೆಯದೆ ವೇದವನ್ನು ಧಾರಣೆ ಮಾಡಿದ್ದಾನೆ, ಎನ್ನುವುದು ಅಸಂಭಾವಿತವಲ್ಲ.

ಮೀಮಾಂಸಕರು ಕರ್ತೃಪ್ರಸಿದ್ಧಿ ಇಲ್ಲದಿರುವುದರಿಂದ ವೇದವು ಅಪೌರುಷೇಯ ಎನ್ನುತ್ತಾರೆ. ಅದನ್ನು ನೈಯಾಯಿಕರು ನಿರಾಕರಿಸುತ್ತಾರೆ. ಹಾಗೆ ಹೇಳಿದರೆ, ಅಜ್ಞಾತಕರ್ತೃಕವಾದ ಕೃತಿಗಳೆಲ್ಲವೂ ಅಪೌರುಷೇಯಗಳಾದಾವು, ಎಂದು ನೈಯಾಯಿಕರು ಮಾಡುವ ಆಕ್ಷೇಪ. ಆದಕ್ಕಾಗಿ ಶ್ರೀಜಯತೀರ್ಥರು ಅಕರ್ತೃಕತ್ವಪ್ರಸಿದ್ಧಿಮತ್ತ್ವಂ ಎನ್ನುವುದಕ್ಕೆ ''ಪ್ರಾಕ್ತನಮೇವೇದಂ ಅಧೀಮಹೇ, ಅಧ್ಯಾಪಯಾಮಶ್ಚ' ಎಂಬ ಪ್ರತೀತಿಗೆ ವಿಷಯವಾದುದು, ಎಂಬ ಅರ್ಥವನ್ನು ಮಾಡಿದ್ದಾರೆ. ಇದು ವೇದಕ್ಕೆ ಮಾತ್ರ ಅನ್ವಯಿಸುವ ಧರ್ಮವಾದಕಾರಣ ತಾರ್ಕಿಕರ ಆಕ್ಷೇಪಕ್ಕೆ ಅವಕಾಶವಾಗುವುದಿಲ್ಲ. ಹೀಗೆ ವೇದಾಪೌರುಷೇಯತ್ವದ ಬಗ್ಗೆ ಹೊಸ ಉಪಕ್ರಮ ಹಾಗೂ ಕೆಲವು ಅಪೂರ್ವ ಮಾಹಿತಿಗಳು ದ್ವೈತಗ್ರಂಥಗಳಲ್ಲಿ ಬಂದಿದೆ.

**ಅಪೌರುಷೇಯತ್ವವೆಂದರೆ—**ವಸ್ತುತಃ ಅಪೌರುಷೇಯತ್ವವೆಂದರೆ ಪುರುಷಕೃತವಲ್ಲ ಎಂದರ್ಥ. ಆದರೆ, ವೇದಗಳು ಒಂದರ್ಥದಲ್ಲಿ ಪುರುಷಕೃತಗಳೇ ಆಗಿವೆ. ವೇದದ ವರ್ಣಗಳು

ನಿತ್ಯಗಳಾದುದರಿಂದ ಅವುಗಳು ಪುರುಷರಚಿತವಾಗಲು ಸಾಧ್ಯವಿಲ್ಲ. ಪದ ಮತ್ತು ಪದಗಳ ಅರ್ಥಗಳ ನಡುವೆ ಇರುವ ಸಂಬಂಧವೂ ಶಾಶ್ವತ. ಇನ್ನು ಪದವಾಕ್ಯಗಳ ಜೋಡಣೆ ಅಂದರೆ ಆನುಪೂರ್ವೀ ಅದು ಪುರುಷಕೃತವೆ. ವೇದವು ಕ್ರಮಬದ್ಧ ವರ್ಣಸಮೂಹರೂಪವಾದುದರಿಂದ ವರ್ಣಗಳಲ್ಲಿ ದೈಶಿಕ ಕಾಲಿಕ ಕ್ರಮಗಳು ಇಲ್ಲ. ಬೌದ್ಧಿಕಕ್ರಮವನ್ನೇ ಹೇಳಬೇಕು. ಆ ಕ್ರಮ ಪುರುಷಬುದ್ಧಿಕೃತವಾದುದರಿಂದ ಎಲ್ಲ ವಾಙ್ಮಯಗಳಂತೆ ವೇದವೂ ಪೌರುಷೇಯವೇ. ಆದರೆ, ಕಾಳಿದಾಸ ರಚಿತವಾದ ಕುಮಾರಸಂಭವ ಕಾವ್ಯವನ್ನು ನಾವು ಪಠಿಸಿದಾಗ ಆ ಪದಕ್ರಮ, ವಾಕ್ಯಕ್ರಮಗಳು ನಮ್ಮ ಬುದ್ಧಿಯಿಂದ ಕೃತವಾದರೂ ನಮ್ಮ ಬುದ್ಧಿಯ ಸ್ವತಂತ್ರ ರಚನೆ ಆ ಕ್ರಮವಲ್ಲ. ಕಾಳಿದಾಸ ತಿಳಿಸಿರುವ ಕ್ರಮದಲ್ಲಿ ನಾವು ಪದ–ವಾಕ್ಯಗಳನ್ನು ಜೋಡಿಸಿದ್ದೇವೆ. ಆದ್ದರಿಂದಲೇ ಆ ಕಾವ್ಯ ಕಾಳಿದಾಸ ರಚಿತ. ನಮ್ಮಿಂದ ರಚಿತವಲ್ಲ. ಅದರಂತೆ, ವೇದದ ಪದವಾಕ್ಯಗಳನ್ನು ಸ್ವತಂತ್ರವಾಗಿ, ಇದು ಮೊದಲಾಗಿ ಜೋಡಿಸಿದವರು ಯಾರೂ ಇಲ್ಲ. ದೇವರೂ ಕೂಡಾ ಹಿಂದು ಹಿಂದಿನ ಕ್ರಮಕ್ಕೆ ಅನುಗುಣವಾಗಿಯೇ ವೈದಿಕ ಪದ–ವಾಕ್ಯಗಳನ್ನು ಉಚ್ಚರಿಸುತ್ತಾನೆ. ಹೀಗೆ, ವೇದವು ಅನಿತ್ಯವಾದರೂ ಅದು ಅಪೌರುಷೇಯ. ಅದರ ವಾಕ್ಯಕ್ರಮ–ಪದಕ್ರಮಗಳನ್ನು ಸ್ವತಂತ್ರವಾಗಿ ತನ್ನಿಚ್ಛೆಯಂತೆ ರಚಿಸಿರುವವರು ಯಾರೂ ಇಲ್ಲ. ಅಷ್ಟು ಮಾತ್ರದಿಂದ ಅದು ಅಪೌರುಷೇಯ. ಅದು ನಿತ್ಯ ಎಂದು ಅರ್ಥವಲ್ಲ. ಇದು ಒಂದು ವಾದ. ಈ ವಾದಕ್ಕೆ ತತ್ತ್ವನಿರ್ಣಯದ ಆಚಾರ್ಯರ ವಾಕ್ಯ ಪುಷ್ಟಿ ನೀಡುತ್ತದೆ—

**ನ ಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಮ್ ॥**

ಈ ಮೂಲದಲ್ಲಿ 'ವರ್ಣಾದೀನಾಂ' ಎನ್ನದೆ 'ವರ್ಣಪದಾದೀನಾಂ' ಎಂದು ವರ್ಣಾತಿರಿಕ್ತವಾಗಿ 'ಪದ'ವನ್ನು ಕಂಠತಃ ಹೇಳಿರುವುದರಿಂದ ಅವೆರಡರಲ್ಲಿ ಇರುವ ಅನಿತ್ಯತ್ವ ಭಿನ್ನವಾದುದು ಎಂದು ತಿಳಿಯುತ್ತದೆ. ವರ್ಣದ ಅನಿತ್ಯತ್ವ ಕೂಟಸ್ಥತ್ವಾಭಾವ. ನಿತ್ಯತ್ವ ಕೂಟಸ್ಥತ್ವ ರೂಪವಾದುದು. ಪದಗಳ ಅನಿತ್ಯತ್ವ ಕ್ರಮವ್ಯತ್ಯಾಸ. ನಿತ್ಯತ್ವ ಕ್ರಮದ ಏಕರೂಪತೆ. ಇದನ್ನು ಟೀಕಾದಲ್ಲಿ ಸ್ಪಷ್ಟಪಡಿಸಲಾಗಿದೆ—

**''ವರ್ಣಾದೀನಾಮಿತ್ಯೇವ ಸಿದ್ಧೇ ಯತ್‌ಪದಾದಿಗ್ರಹಣಂ ತತ್ ವರ್ಣಾನಾಂ ಕೌಟಸ್ಥ್ಯಾಭಾವಃ ಅನಿತ್ಯತ್ವಂ, ಪದಾದೀನಾಂ ತು ಕ್ರಮಾದಿವ್ಯತ್ಯಯಃ ಇತಿ ಸೂಚಯಿತುಮ್ ।''**

ತತ್ತ್ವನಿರ್ಣಯದ ಈ ಕೆಳಗಿನ ವಾಕ್ಯ ಇದಕ್ಕೆ ವಿರುದ್ಧವಾಗಿ ವರ್ಣಗಳಿಗೆ ಇರುವ ನಿತ್ಯತ್ವವನ್ನೇ ವೇದಗಳಿಗೂ ಹೇಳುವಂತೆ ಭಾಸವಾಗುತ್ತದೆ—

**''ಅತಃ ತದ್ವದ್ ವೇದಸ್ಯಾಪಿ ಸ್ಥೈರ್ಯಂ ಸಿದ್ಧಮ್ । 'ತದೇವೇದಂ ವಾಕ್ಯಮ್' ಇತಿ ಪ್ರತ್ಯಭಿಜ್ಞಾನಾತ್ ।''**

ಇದು ವರ್ಣನಿತ್ಯತ್ವದ ಉಪಸಂಹಾರವಾಕ್ಯ. ತದ್ವತ್ ಎಂದರೆ ದಿಕ್ಕುಗಳಂತೆ ವೇದಕ್ಕೂ ನಿತ್ಯತ್ವ

ಇದೆ, ಎಂದು ಈ ವಾಕ್ಯದ ಅರ್ಥ. ದಿಕ್ಕುಗಳು ಕೂಟಸ್ಥನಿತ್ಯಗಳಾದುದರಿಂದ ವೇದಗಳು ಅವುಗಳಂತೆ ಕೂಟಸ್ಥನಿತ್ಯಗಳು, ಎಂದು ತಿಳಿಯುತ್ತದೆ. ಆದರೆ, ಟೀಕೆಯಲ್ಲಿ ಇಲ್ಲಿರುವ ವೇದ ಮತ್ತು ವಾಕ್ಯ ಎಂಬ ಎರಡೂ ಪದಗಳಿಗೆ ವರ್ಣ ಎಂದೇ ಅರ್ಥವನ್ನು ಮಾಡಲಾಗಿದೆ—

**'ವೇದಸ್ಯೇತಿ ವಾಕ್ಯಮಿತಿ ಚ ವರ್ಣಾ ಏವೋಚ್ಯಂತೇ। ತೇಷಾಮೇವ ಪ್ರಕ್ರಾಂತತ್ವಾತ್'**

ಅಥವಾ ಸ್ಥೈರ್ಯಪದಕ್ಕೆ ಅರ್ಥಾಂತರ ಮಾಡಬೇಕು–

**''ವೇದಸ್ಯ ಸ್ಥೈರ್ಯಂ=ಅಪೌರುಷೇಯತ್ವಮ್।''**

ಸ್ಥೈರ್ಯ ಎಂದರೆ ವರ್ಣದಂತೆ ಕೂಟಸ್ಥ ನಿತ್ಯತ್ವವಲ್ಲ, ಅಪೌರುಷೇಯತ್ವ ಎಂದು ಅರ್ಥ.

ಹೀಗೆ, ಆಚಾರ್ಯರ ವಾಕ್ಯಗಳಿಗೆ ವ್ಯಾಖ್ಯಾನ ಮಾಡಿರುವುದರಿಂದ ಟೀಕಾಚಾರ್ಯರಿಗೆ ವೇದಗಳು ವರ್ಣಗಳಂತೆ ಕೂಟಸ್ಥ ನಿತ್ಯಗಳಲ್ಲ, ಎನ್ನುವುದೇ ಸಮ್ಮತ. ಅದನ್ನು ಅವರು 'ನಿತ್ಯಾ ವೇದಾ ಸಮಸ್ತಾಶ್ಚ' ಎಂಬ ಆಚಾರ್ಯರ ಮೂಲಗ್ರಂಥವನ್ನು ವ್ಯಾಖ್ಯಾನಿಸುವಾಗ ಕಂಠತಃ ಹೇಳಿದ್ದಾರೆ—

**''ಅತಃ ಕ್ರಮಃ ಪೌರುಷೇಯ ಏವ ವಾಚ್ಯಃ। ತತ್ ಕಥಂ ವೇದಸ್ಯಾಪೌರುಷೇಯತ್ವಂ' ಇತಿ। ನಹಿ ವಯಂ ವೇದಸ್ಯ ಕೂಟಸ್ಥನಿತ್ಯತಾಂ ಬ್ರೂಮಃ। ಕಿಂತು ಶಬ್ದತೋ ಅರ್ಥತಶ್ಚ ಸರ್ವದೈಕಪ್ರಕಾರತಾಮೇವ। ತತಶ್ಚ ಕ್ರಮಸ್ಯ ಕೃತಕತ್ವೇಽಪಿ...ಸ್ವತಂತ್ರವಕ್ತುರಭಾವಾತ್ ಅಪೌರುಷೇಯತ್ವಮ್ ಉಪಪದ್ಯತೇ।''**

ಹೀಗೆ ಅಪೌರುಷೇಯಶಬ್ದದ ಅರ್ಥ— ಸ್ವತಂತ್ರ-ಪುರುಷಪೂರ್ವಕತ್ವಾಭಾವ. ಹೊರತು, ಪುರುಷಕೃತತ್ವಾಭಾವವಲ್ಲ. ಕ್ರಮದ ದೃಷ್ಟಿಯಲ್ಲಿ ಅದೂ ಪುರುಷಕೃತವೇ ಆಗಿದೆ.

**ಕೂಟಸ್ಥನಿತ್ಯತ್ವ ಪಕ್ಷ**—ತತ್ವಸಂಖ್ಯಾನದಲ್ಲಿ 'ನಿತ್ಯಾವೇದಾಃ' ಎಂಬ ಮೂಲವನ್ನು ವ್ಯಾಖ್ಯಾನ ಮಾಡುತ್ತಾ ಶ್ರೀಜಯತೀರ್ಥರು—

**''ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಮ್। ತಚ್ಚ ವೇದಾನಾಂ 'ನಿತ್ಯಾವೇದಾ ಸಮಸ್ತಾಶ್ಚ' ಇತ್ಯಾದಿ ಪ್ರಮಾಣಸಿದ್ಧಮ್'।**

ಎಂದಿರುತ್ತಾರೆ. ಇದರಿಂದ ವೇದಗಳಿಗೆ ಕೂಟಸ್ಥನಿತ್ಯತ್ವವು ತಿಳಿಯುತ್ತದೆ. ಹೀಗೆ ತತ್ತ್ವನಿರ್ಣಯದ ಅಭಿಪ್ರಾಯಕ್ಕೆ ವಿರುದ್ಧವಾಗಿ ಇಲ್ಲಿ ವೇದಾಪೌರುಷೇಯತ್ವವನ್ನು ನಿರೂಪಿಸಲಾಗಿದೆ. ತತ್ತ್ವನಿರ್ಣಯ ಟೀಕೆಯಲ್ಲೂ ಒಂದೆಡೆ ಇಂತಹ ನಿತ್ಯತ್ವವನ್ನು ಹೇಳುವ ವಾಕ್ಯಗಳಿವೆ.

**'ಕ್ರಮಸ್ತು ಬುದ್ಧಿನಿಮಿತ್ತ ಏವ, ನ ತು ಸ್ವತಃ ಅಸ್ತಿ। ತತಶ್ಚ ಸರ್ವೇಷಾಂ ಸರ್ವಥಾ ವರ್ಣವಿಷಯ-ವಿವಕ್ಷಿತ-ಕ್ರಮೋಪಾಧಿಭೂತ-ಬುಧ್ಯುಪರಮೇ ಏವ ವೇದವಿನಾಶೋ ವಕ್ತವ್ಯಃ। ನ ತು ಘಟಾದೀನಾಮಿವಾಪರಃ। ನ ಚ ಈಶ್ವರಸ್ಯ ತಥಾವಿಧಬುಧ್ಯುಪರಮೋ ಯುಜ್ಯತೇ।.... ಅತೋ ವೇದಾಃ ಸರ್ವದಾ ಈಶ್ವರೇಣ ವರ್ತಮಾನತಯಾನುಭೂಯಂತೇ ಇತಿ ಸಿಧ್ಯತಿ।''**

ಹೀಗೆ ತತ್ತ್ವನಿಣದಯದಲ್ಲಿ ಒಂದೆಡೆ ವೇದಗಳಿಗೆ ಕೂಟಸ್ಥ ನಿತ್ಯತ್ವವನ್ನು ನಿಷೇಧಿಸಿರುವ ಶ್ರೀಜಯತೀರ್ಥರೇ ತತ್ತ್ವಸಂಖ್ಯಾನದಲ್ಲಿ ಮತ್ತು ತತ್ತ್ವನಿರ್ಣಯದಲ್ಲೇ ಇನ್ನೊಂದೆಡೆ ಕೂಟಸ್ಥ ನಿತ್ಯತ್ವವನ್ನು ಹೇಳಿದ್ದಾರೆ. ಈ ವಿರೋಧವನ್ನು ಟಿಪ್ಪಣೀಕಾರರು ಮೂರು ವಿಧದಿಂದ ಪರಿಹರಿಸಿದ್ದಾರೆ.

**1. ತಾತ್ಪರ್ಯ ಚಂದ್ರಿಕಾ**—ಈಶಬುದ್ಧಿಸ್ಥವೇದ ಕೂಟಸ್ಥ ನಿತ್ಯ, ಅಸ್ಮದಾದಿಪ್ರಮಾಪಕ ವೇದ ಕೃತಕ. ನಾವು ಪಠಿಸುವ ವೇದದ ವರ್ಣ-ಪದಾದಿ ಕ್ರಮಗಳು ನಮ್ಮ ಬುದ್ಧಿನಿಮಿತ್ತಕವಾಗಿವೆ. ನಮ್ಮ ಬುದ್ಧಿ ಅನಿತ್ಯವಾದುದರಿಂದ ತನ್ನಿಮಿತ್ತಕ ಕ್ರಮವೂ ಅನಿತ್ಯ. ಈಶಬುದ್ಧಿ ನಿತ್ಯವಾದುದರಿಂದ ತದುಪಾಧಿಕಕ್ರಮವೂ ನಿತ್ಯ. ಹೀಗೆ ವೇದದ್ವೈವಿಧ್ಯವನ್ನು ಹೇಳಿ ವಿರೋಧವನ್ನು ಪರಿಹರಿಸಬೇಕು.

**''ತತ್ತ್ವಸಂಖ್ಯಾನಟೀಕಾಯಾಂ 'ನಿತ್ಯತ್ವಂ ನಾಮ ಕೂಟಸ್ಥತಯಾ ಆದ್ಯಂತಶೂನ್ಯತ್ವಮ್। ತಚ್ಚ ವೇದಾನಾಂ 'ನಿತ್ಯಾವೇದಾ ಸಮಸ್ತಾಶ್ಚ' ಇತ್ಯುಕ್ತತ್ವಾತ್। ಯುಕ್ತಂ ಚೈತತ್। ಕ್ರಮಸ್ಯ ಸದಾ ಈಶ್ವರಬುದ್ಧಿಸ್ಥತ್ವಾತ್। ಅತ ಏವೋಕ್ತಂ ವಿಷ್ಣುತತ್ತ್ವನಿರ್ಣಯೇ 'ಸರ್ವಜ್ಞತ್ವೇನ ಈಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್' ಇತಿ। ತಟ್ಟೀಕಾಯಾಂ ಕೌಟಸ್ಥ್ಯ ನಿಷೇಧಸ್ತು ಅಸ್ಮದಾದೀನ್ ಪ್ರತಿ ಪ್ರಮಾಪಕತ್ವೋಪಯುಕ್ತಸ್ಯ ಅಸ್ಮದಾದಿಬುದ್ಧಿಸ್ಥಸ್ಯ ಕ್ರಮಸ್ಯ ಉಚ್ಚಾರಣಾಧೀನತ್ವೇನ ಕೃತಕತ್ವಾತ್।''**

ಶ್ರೀರಾಘವೇಂದ್ರಸ್ವಾಮಿಗಳೂ ತತ್ತ್ವ ಸಂಖ್ಯಾನ ಟೀಕೆಯಲ್ಲಿ ಇದನ್ನೇ ಅಂಗೀಕರಿಸಿದ್ದಾರೆ—

**''ತಥಾಪಿ ಅಧ್ಯಾಪಕಾದ್ಯುಚ್ಚರಿತವೇದಸ್ಯ ತಥಾತ್ವೇಽಪಿ ಈಶ್ವರಬುದ್ಧಿಸ್ಥ-ಕ್ರಮಾಪೇಕ್ಷಯಾ ಏತದುಕ್ತಿಃ(ಕೂಟಸ್ಥತಯಾ ಆದ್ಯಂತಶೂನ್ಯತ್ವೋಕ್ತಿಃ।)**

ಶ್ರೀಮದ್ವಾದಿರಾಜರೂ ಇದೇ ಪಕ್ಷವನ್ನು ಅಂಗೀಕರಿಸಿದ್ದಾರೆ.

**ನಿತ್ಯೇಶಬುದ್ಧ್ಯುಪಾಧೇಸ್ತದ್ವರ್ಣೇಷೌಪಾಧಿಕಃ ಕ್ರಮಃ ।**
**ಮಠಾಕಾಶ-ಘಟಾಕಾಶ-ಕ್ರಮವತ್ ಸ್ಯಾದನಾದಿತಃ ।**
**ಉಪಾಧಿನಿತ್ಯತಾಯಾಂ ತು ನಿತ್ಯತಾಪ್ಯಸ್ಯ ಶೋಭತೇ ॥**

(ಯುಕ್ತಿ-ಗುಣ-57)

**ನಿತ್ಯೇಶಬುದ್ಧ್ಯುಪಾಧಿಕ-ವರ್ಣಕ್ರಮಸ್ಯ ನಿತ್ಯತ್ವಮೇವ ಯುಕ್ತಮಿತ್ಯಾಹ-ಉಪಾಧೀತಿ ॥**

(ಭಾವವಿಲಾಸಿನೀ)

2. ಪಾಂಡುರಂಗೀ ಕೇಶವಾಚಾರ್ಯರು(ಪಾ.ಟಿ.) ತತ್ತ್ವಸಂಖ್ಯಾನಟಿಪ್ಪಣಿಯಲ್ಲಿ ''ವೇದಾ ಇತ್ಯುಪಲಕ್ಷಣಮ್। ಪಂಚಾಶದ್ವರ್ಣಾನಾಮ್ ಆಕಾಶಸ್ಯಚ ತಥಾಭಾವಾತ್'' ಈ ಟೀಕಾ ವಾಕ್ಯದಲ್ಲಿರುವ ಉಪಲಕ್ಷಣಪದಕ್ಕೆ ಲಕ್ಷಣಾಸಾಮಾನ್ಯ ಎಂದೇ ಅರ್ಥ, ಅಜಹಲ್ಲಕ್ಷಣಾ ಎಂದಲ್ಲ. ಆ ಅರ್ಥದಲ್ಲಿ ಆಚಾರ್ಯರು ''ಉಪಲಕ್ಷಣ'' ಶಬ್ದವನ್ನು ಪ್ರಯೋಗಿಸಿದ್ದಾರೆ—

**ಉಪಲಕ್ಷಣಾ ಚ ಗೌಣೀ ಚ ತಿಸ್ರಃ ಶಬ್ದಸ್ಯ ವೃತ್ತಯಃ ।** (ಅನು-1-4-5)

ಪ್ರಕೃತದಲ್ಲಿ ಜಹಲ್ಲಕ್ಷಣಾ ಮಾಡಿ ಪಂಚಾಷದ್ವರ್ಣಗಳು ಮಾತ್ರ ಕೂಟಸ್ಥನಿತ್ಯಗಳು, ವೇದಗಳು ಅಲ್ಲ, ಎಂದಿದ್ದಾರೆ. ಆದರೆ ಇವರೇ ವಿಷ್ಣುತತ್ತ್ವನಿರ್ಣಯ ಟಿಪ್ಪಣಿಯಲ್ಲಿ ಈಶ್ವರಬುದ್ಧಿಸ್ಥವೇದ ಕೂಟಸ್ಥನಿತ್ಯ, ಅಸ್ಮದಾದಿಪಠ್ಯಮಾನವೇದ ಅನಿತ್ಯ, ಎಂದು ವ್ಯವಸ್ಥೆ ಮಾಡಿದ್ದಾರೆ.

**'ಕೂಟಸ್ಥತಯಾ ಆದ್ಯಂತಶೂನ್ಯತ್ವೋಕ್ತೇಃ ಈಶ್ವರಬುದ್ಧಿಸ್ಥ-ವೇದವಿಷಯತ್ವಾತ್, ಇಹ ಟೀಕಾಯಾಂ ತತ್ ಕೌಟಸ್ಥ್ಯ ನಿಷೇಧಸ್ಯ... ಅಸ್ಮದಾದಿಬುದ್ಧಿಸ್ಥಸ್ಯ ಕ್ರಮಸ್ಯ ಉಚ್ಚಾರಣಾಧೀನತ್ವೇನ ತದ್ವಿಷಯತ್ವೇನ ಟೀಕಾದ್ವಯಸ್ಯ ಭಿನ್ನವಿಷಯತ್ವಾತ್ ॥''**

**3. ವ್ಯಾಸತತ್ತ್ವಜ್ಞರು** ವಿಷ್ಣುತತ್ತ್ವನಿರ್ಣಯ ಟಿಪ್ಪಣಿಯಲ್ಲಿ ಕ್ರಮಿಕ ಬುದ್ಧಿವಿಷಯತ್ವರೂಪಕ್ರಮ ಸರ್ವತ್ರ ಅನಿತ್ಯ ಎಂದು ಹೇಳಿ ತತ್ತ್ವಸಂಖ್ಯಾನಟೀಕಾದಲ್ಲಿ ಹೇಳಿರುವ ಕೂಟಸ್ಥನಿತ್ಯತ್ವ ವರ್ಣಾಂಶಕ್ಕೆ ಮಾತ್ರ ಅನ್ವಯಿಸುತ್ತದೆ. ಕ್ರಮಾಂಶದಲ್ಲಿ ಅಮುಖ್ಯನಿತ್ಯತ್ವ. ಅಂದರೆ, ಆ ಕ್ರಮವು ಈಶಬುದ್ಧಿಯಲ್ಲಿ ಸರ್ವದಾ ಇರುತ್ತದೆ, ಎಂದರ್ಥ. ಕೂಟಸ್ಥ ನಿತ್ಯ ಎಂದು ಅರ್ಥವಲ್ಲ.

**''ತಥಾಚ ತತ್ತ್ವಸಂಖ್ಯಾನಟೀಕಾ ವರ್ಣಾಂಶೇ ಕೂಟಸ್ಥನಿತ್ಯತ್ವಾಭಿಪ್ರಾಯಕಾ, ಕ್ರಮಾಂಶೇ ಸರ್ವದಾ ಈಶ್ವರಬುದ್ಧಿಸ್ಥತ್ವಾಭಿಪ್ರಾಯಕಾ ॥''**

ಹೀಗೆ ಮೂರು ರೀತಿಯಿಂದ ಟೀಕಾವಾಕ್ಯಗಳಿಗೆ ವಿರೋಧವನ್ನು ಪರಿಹರಿಸಲಾಗಿದೆ.

ಇಲ್ಲಿ ಒಂದು ವಿಷಯ ವಿಚಾರಣೀಯವಾಗಿದೆ. ಈಶಬುದ್ಧಿಪ್ರಯುಕ್ತಕ್ರಮವು ನಿತ್ಯ ಎನ್ನುವುದಕ್ಕೆ ''ಸರ್ವಜ್ಞತ್ವಾದೀಶ್ವರಸ್ಯ ತದ್‌ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್'' ಎಂಬ ವಿಷ್ಣುತತ್ತ್ವನಿರ್ಣಯದ ಆಚಾರ್ಯರ ವಾಕ್ಯವನ್ನು ಆಧಾರವನ್ನಾಗಿ ಕೊಡಲಾಗುತ್ತದೆ. ಆದರೆ, ಆ ವಾಕ್ಯ ''ನ ಚ ವರ್ಣಪದಾದೀನಾಮ್ ಅನಿತ್ಯತ್ವಂ ವಕ್ತುಂ ಯುಕ್ತಮ್'' ಎಂಬ ಹಿಂದಿನ ವಾಕ್ಯಕ್ಕೆ ಹೇತುವನ್ನು ಹೇಳುತ್ತವೆ. ಅಲ್ಲಿ ವರ್ಣಗಳ ಅನಿತ್ಯತ್ವ ಕೂಟಸ್ಥತ್ವಾಭಾವ, ಪದಗಳ ಅನಿತ್ಯತ್ವ ಕ್ರಮಾದಿ ವ್ಯತ್ಯಾಸ. ಇಂತಹ ಅನಿತ್ಯತ್ವವನ್ನು ಈಶ್ವರಬುದ್ಧಿಯಲ್ಲಿ ಸದಾ ಪ್ರತೀಯಮಾನತ್ವ ಹೇತುವಿನಿಂದ ನಿರಾಕರಿಸಿದಾಗ ವರ್ಣಗಳಲ್ಲಿ ಕೂಟಸ್ಥ ನಿತ್ಯತ್ವ, ಪದಗಳ ನಿತ್ಯತ್ವ ಕ್ರಮ ವ್ಯತ್ಯಾಸಾಭಾವ ಎಂದಿಷ್ಟೇ ಸಿದ್ಧವಾಗುತ್ತದೆ. ಹೊರತು, ಕ್ರಮಕ್ಕೆ ಕೂಟಸ್ಥ ನಿತ್ಯತ್ವವನ್ನು ಆ ವಾಕ್ಯ ಹೇಳುವುದಿಲ್ಲ. ಹೀಗಾಗಿ ವೇದಗಳ ಕೂಟಸ್ಥನಿತ್ಯತ್ವಕ್ಕೆ ಆಚಾರ್ಯರ ಈ ವಾಕ್ಯವು ಆಧಾರವಾಗುವುದಿಲ್ಲ.

**ತರ್ಕತಾಂಡವದಲ್ಲಿ-ವ್ಯಾಸತೀರ್ಥರು** ವೇದಗಳಿಗೆ ಅನಾದಿತ್ವರೂಪವಾದ ಅಪೌರುಷೇಯತ್ವವು ಬಾಧಿತ ಮತ್ತು ಸಿದ್ಧಾಂತವಿರುದ್ಧ ಎಂದಿರುತ್ತಾರೆ. ಅದರ ವಿವರ ಪ್ರಕರಣದ

ಸಾರಾಂಶದಲ್ಲಿ ಮುಂದೆ ಬಂದಿದೆ. ಮತ್ತೆ ಇಲ್ಲಿ ಅದರ ಪ್ರಸ್ತಾವ ಅನಗತ್ಯ.

## ಈಶ್ವರವಾದ

ನೈಯಾಯಿಕರೂ ಈಶ್ವರನನ್ನು ಒಪ್ಪುತ್ತಾರೆ, ವೇದಾಂತಿಗಳೂ ಒಪ್ಪುತ್ತಾರೆ. ಆದರೂ ನೈಯಾಯಿಕರು ಅನುಮಾನದಿಂದ ಸರ್ವಜ್ಞನಾದ ಈಶ್ವರನನ್ನು ಸಾಧಿಸಿ ಅಂತಹ ಈಶ್ವರೋಕ್ತವಾದುದರಿಂದ ವೇದವು ಪ್ರಮಾಣ ಎನ್ನುತ್ತಾರೆ. ವೇದಾಂತಿಗಳು, ಅಪೌರುಷೇಯವಾದ ವೇದವೇ ಈಶ್ವರಾಸ್ತಿತ್ವಕ್ಕೆ ಪ್ರಮಾಣ. ಅನುಮಾನ ದಾರ್ಢ್ಯಹೇತು, ಎನ್ನುತ್ತಾರೆ. ಅನುಮಾನಕ್ಕೇ ಪ್ರಾಧ್ಯಾನವನ್ನು ಕೊಟ್ಟರೆ ಆಗಬಹುದಾದ ಅನರ್ಥಕ್ಕೆ ನೈಯಾಯಿಕರ ಈ ಧೋರಣೆಯೇ ಸಾಕ್ಷಿ. ಅನುಮಾನಕ್ಕೆ ಜೋತುಬಿದ್ದ ಕಾರಣದಿಂದಾಗಿ ಅವರ ಈಶ್ವರನಿಗೆ ಎಂಟೇ ಗುಣಗಳು. ಅವನಲ್ಲಿ ಸುಖವೇ ಇಲ್ಲ. ವಿಶ್ವಕರ್ತೃತ್ವಕ್ಕೆ ಜ್ಞಾನ-ಇಚ್ಛಾ-ಕೃತಿಗಳಷ್ಟೇ ಇದ್ದರೆ ಸಾಕು, ಎನ್ನುತ್ತಾರೆ ಅವರು.

ಆದರೆ, ವೇದಾಂತಿಗಳಲ್ಲಿ ಈಶ್ವರನ ಜಗತ್ಸೃಷ್ಟ್ಯಾದಿ ಕ್ರಿಯೆಗಳಿಗೆ ಸುಖೋದ್ರೇಕವೇ ಹೇತು. ಉಪನಿಷತ್ತು ಹೇಳುತ್ತದೆ—

**ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್, ಯದೇಷ ಆಕಾಶೋ ಆನಂದೋ ನ ಸ್ಯಾತ್ ।**

ಎಂದು. ಆದರೆ ತಾರ್ಕಿಕರ ಈಶ್ವರನಿಗೆ ಸುಖದ ಅಗತ್ಯವಿಲ್ಲ. ಇದು ಅನುಮಾನದ ಅನರ್ಥ.

ತರ್ಕತಾಂಡವದಲ್ಲಿ ಪ್ರಾಚೀನ ನೈಯಾಯಿಕರ ಅಂತಿಮ ವ್ಯಕ್ತಿ ಉದಯನಾಚಾರ್ಯರು ಹೇಳಿರುವ ಈಶ್ವರವಾದವನ್ನು ಮತ್ತು ನವೀನನ್ಯಾಯದ ಆರಂಭಿಕ ಗಂಗೇಶೋಪಾಧ್ಯಾಯನ ಈಶ್ವರ ವಾದವನ್ನೂ ವಿಮರ್ಶೆ ಮಾಡಲಾಗಿದೆ. ಉದಯನಾಚಾರ್ಯರು ನ್ಯಾಯಕುಸುಮಾಂಜಲಿಯಲ್ಲಿ ಒಟ್ಟು ಎಂಟು ಹೇತುಗಳನ್ನು ಈಶ್ವರ ಸಾಧಕಗಳನ್ನಾಗಿ ಉಪಯೋಗಿಸಿದ್ದಾರೆ.

**ಕಾರ್ಯಾಯೋಜನಧೃತ್ಯಾದೇಃ ಪದಾತ್ ಪ್ರತ್ಯಯತಃ ಶ್ರುತೇಃ ।**
**ವಾಕ್ಯಾತ್ ಸಂಖ್ಯಾವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ ॥**

ಈ ಎಲ್ಲ ಹೇತುಗಳನ್ನೂ ತರ್ಕತಾಂಡವದಲ್ಲಿ ವಿಮರ್ಶಿಸಲಾಗಿದೆ.

1. **ಕಾರ್ಯತ್ವಹೇತು**—ಹುಟ್ಟುವ ವಸ್ತುಗಳಿಗೆ ಒಬ್ಬ ಕರ್ತೃ ಬೇಕು. ಈ ಭೂಮಿ, ಸಾಗರ, ಪರ್ವತ, ಗ್ರಹ, ನಕ್ಷತ್ರಗಳೂ ಹುಟ್ಟಿರುವುದರಿಂದ ಇವುಗಳಿಗೆ ಒಬ್ಬ ಕರ್ತೃ ಇರಬೇಕು. ಅವನೇ ಈಶ್ವರ.

ಇದರ ವಿಸ್ತೃತವಿಮರ್ಶೆ ತರ್ಕತಾಂಡವದಲ್ಲಿ ಇದೆ. ಅದು ಶಾಸ್ತ್ರೀಯವಿಮರ್ಶೆ. ಅದನ್ನು ವ್ಯುತ್ಪನ್ನರೇ ತಿಳಿದು ಸವಿಯಬೇಕು. ಸಾಮಾನ್ಯರ ದೃಷ್ಟಿಯಲ್ಲಿ ಒಂದೆರಡು ಅಂಶಗಳನ್ನು ಇಲ್ಲಿ ಪರಿಚಯಿಸಲಾಗಿದೆ.

**ಅ.** ಕಾರ್ಯಕ್ಕೆ ಕರ್ತೃ ಇರಲೇಬೇಕು ಎಂದು ನಿರ್ಧಾರ ಮಾಡುವುದಕ್ಕೆ ಆಧಾರ ಲೋಕದೃಷ್ಟಿ. ನಮ್ಮ ಮುಂದಿರುವ ಎಲ್ಲ ವಸ್ತುಗಳನ್ನೂ ಒಬ್ಬರಲ್ಲ ಒಬ್ಬರು ನಿರ್ಮಾಣ ಮಾಡಿರುತ್ತಾರೆ ಎನ್ನುವುದನ್ನು ತಿಳಿದು ಈ ವಿಶ್ವಕ್ಕೂ ಒಬ್ಬ ನಿರ್ಮಾತೃ ಇರಬೇಕು ಎಂದು ಊಹೆ ಮಾಡಬೇಕು. ನಾವು ವಸ್ತುಗಳನ್ನು ನಿರ್ಮಾಣ ಮಾಡುವ ಕ್ರಮ ಹೀಗೆ– ಮೊದಲು ಆ ವಸ್ತುವಿನ ತಿಳುವಳಿಕೆ ಮತ್ತು ಅದಕ್ಕೆ ಬೇಕಾದ ಕಚ್ಚಾವಸ್ತುಗಳ ಜ್ಞಾನ. ಆಮೇಲೆ ಅವುಗಳನ್ನು ತಯಾರು ಮಾಡಬೇಕೆಂಬ ಇಚ್ಛೆ. ಅನಂತರ ಪ್ರಯತ್ನ. ಇವು ಮೂರು ಆತ್ಮನ ಗುಣಗಳು. ಇಷ್ಟೇ ಸಾಲದು. ಆತ್ಮನ ಪ್ರಯತ್ನದಿಂದ ಶರೀರದಲ್ಲಿ ಕ್ರಿಯೆ. ಆದರಿಂದಾಗಿ ವಸ್ತು ನಿರ್ಮಾಣಗೊಳ್ಳುತ್ತದೆ. ಇವುಗಳಲ್ಲಿ ಒಂದಂಶವನ್ನು ಒಪ್ಪಿಕೊಂಡು, ಒಂದಂಶವನ್ನು ನೈಯಾಯಿಕರು ಕೈಬಿಡುತ್ತಾರೆ. ಆತ್ಮನಲ್ಲಿರುವ ಜ್ಞಾನೇಚ್ಛಾಪ್ರಯತ್ನಗಳು ವಿಶ್ವನಿರ್ಮಾಣಕ್ಕೆ ಸಾಕು, ಶರೀರ ಕ್ರಿಯೆಯ ಅಗತ್ಯವಿಲ್ಲ. ಅದನ್ನು ಒಪ್ಪಿಕೊಳ್ಳುವುದಕ್ಕೆ ಅವರಿಗೆ ಭಯವಾಗುತ್ತದೆ. ಏಕೆಂದರೆ, ಈಶ್ವರನಿಗೆ ಶರೀರ ಬರಬೇಕಾದರೆ ಪುಣ್ಯಬೇಕು. ಪುಣ್ಯಬಂದರೆ ಅದರ ಜೊತೆಯಲ್ಲಿ ಪಾಪವೂ ಬರುತ್ತದೆ. ಪುಣ್ಯ–ಪಾಪಗಳಿಂದ ಸುಖ–ದುಃಖಗಳು ಬರಬೇಕು. ಅಲ್ಲಿಗೆ ದೇವರೂ ಸಂಸಾರಿಯಾಗುತ್ತಾನೆ. ಈ ಭಯದಿಂದ ಸೃಷ್ಟಿಕ್ರಿಯೆಗೆ ಶರೀರಬೇಕಿಲ್ಲ, ಎನ್ನುತ್ತಾರೆ. ಆದರೆ, ಇದು ಯಾವ ನ್ಯಾಯ. ಲೋಕಾನುಸಾರವಾಗಿ ಕರ್ತೃವನ್ನು ಕಲ್ಪನೆ ಮಾಡುವುದಾದಲ್ಲಿ ಲೋಕದ ಎಲ್ಲ ಕ್ರಮಗಳನ್ನೂ ಈಶ್ವರನಲ್ಲಿಯೂ ಅಂಗೀಕರಿಸಬೇಕು. ಬೇಕಾದ್ದನ್ನು ಒಪ್ಪಿ, ಬೇಡವಾದ್ದನ್ನು ಬಿಡುವುದು ಸರಿಯಲ್ಲ.

**ಆ.** ಲೋಕದಲ್ಲಿ ಸಣ್ಣ–ಪುಟ್ಟ ವಸ್ತುಗಳನ್ನು ಒಬ್ಬರೆ ಮಾಡುವುದು ಕಂಡಿದೆ. ಆದರೆ, ಬೃಹದಾಕಾರದ ಕಟ್ಟಡ–ಅಣೆಕಟ್ಟುಗಳನ್ನು ಅನೇಕಮಂದಿ ಸೇರಿ ಮಾಡುವುದೇ ಕಂಡಿದೆ. ಆದರಂತೆ ಈ ವಿಶಾಲವಿಶ್ವವನ್ನೂ ಅನೇಕ ವ್ಯಕ್ತಿಗಳು ಸೇರಿ ಏಕೆ ಮಾಡಿರಬಾರದು? ಒಬ್ಬನೇ ಮಾಡಿದ್ದಾನೆಂದು ಹೇಗೆ ನಿರ್ಧರಿಸುವುದು?

ಆದ್ದರಿಂದ ಈ ಹೇತುವಿನಿಂದ ವಿವಕ್ಷಿತನಾದ ಈಶ್ವರನ ಸಿದ್ಧಿಯಾಗುವುದಿಲ್ಲ.

**2. ಆಯೋಜನಮ್**—ಆಯೋಜನವೆಂದರೆ ಕ್ರಿಯಾ. ನ್ಯಾಯಸಿದ್ಧಾಂತದಲ್ಲಿ ಪರಮಾಣ್ವಾರಂಭವಾದವನ್ನು ಅಂಗೀಕರಿಸಲಾಗಿದೆ. ಪೃಥಿವಿ, ನೀರು, ಅಗ್ನಿ, ವಾಯು ಈ ನಾಲ್ಕು ಭೂತವಸ್ತುಗಳಿಗೆ ಅವುಗಳದೇ ಆದ ಮೂಲದ್ರವ್ಯಗಳಿವೆ. ಅವು ನಿತ್ಯವಾದ ಅಣುಗಳು. ನಿಷ್ಕ್ರಿಯವಾಗಿದ್ದ ಈ ಅಣುಗಳಲ್ಲಿ ಸೃಷ್ಟಿಕಾಲದಲ್ಲಿ ಕ್ರಿಯೆ ಉಂಟಾಗುತ್ತದೆ. ಜಡವಸ್ತುಗಳಲ್ಲಿ ಇದ್ದಕ್ಕಿದ್ದಂತೆ ಚಲನೆ ಉಂಟಾಗಲು ಸಾಧ್ಯವಿಲ್ಲ. ಆ ಚಲನೆ ಈಶ್ವರನ ಪ್ರಯತ್ನದಿಂದ ಆಗುತ್ತದೆ. ಹೀಗೆ ಈಶ್ವರಸಿದ್ಧನಾಗುತ್ತಾನೆ.

ಇದನ್ನು ತರ್ಕತಾಂಡವದಲ್ಲಿ ಹೀಗೆ ವಿಮರ್ಶಿಸಲಾಗಿದೆ— ಹುಟ್ಟುವ ವಸ್ತುಗಳಿಗೆಲ್ಲ ಭೋಗಾದೃಷ್ಟವು ಕಾರಣ. ಪ್ರಪಂಚದ ಪ್ರತಿಯೊಂದು ವಸ್ತುಗಳು ಒಬ್ಬರಲ್ಲ ಒಬ್ಬ ಚೇತನರ ಸುಖ ಅಥವಾ ದುಃಖಕ್ಕೆ ಕಾರಣವಾಗುತ್ತವೆ. ಯಾರ ಸುಖ–ದುಃಖಗಳಿಗೆ ಯಾವ ವಸ್ತು

ಕಾರಣವಾಗಿದೆಯೋ ಆ ವಸ್ತು ಅವರ ಪುಣ್ಯ-ಪಾಪಗಳಿಂದಾಗಿ ಹುಟ್ಟಿದೆ. ಇದನ್ನು ನೈಯಾಯಿಕರೂ ಒಪ್ಪಿದ್ದಾರೆ. ಹೀಗೆ ಒಪ್ಪಿದ ಮೇಲೆ ಸೃಷ್ಟಿಯ ಆರಂಭದಲ್ಲಿ ಪರಮಾಣುಗಳಲ್ಲಿ ಆಗುವ ಕ್ರಿಯೆಗೂ, ಸೃಷ್ಟಿಗೊಂಡು ಈ ಪ್ರಪಂಚವನ್ನು ಅನುಭವಿಸುವ ಜೀವರ ಅದೃಷ್ಟವೇ ಕಾರಣ, ಎನ್ನಬಹುದು. ಜೀವರ ಭೋಗಾದೃಷ್ಟದಿಂದ ಅಣುಗಳಲ್ಲಿ ಕ್ರಿಯೆ ಉಂಟಾಗುತ್ತದೆ. ಆದಕ್ಕೆ ಈಶ್ವರನ ಆಗತ್ಯವೇನು?

**3. ಧೃತೀಃ—** ಧೃತಿ ಎಂದರೆ ಧಾರಣೆ. ಭಾರವಾದ ವಸ್ತುಗಳು ಕೆಳಗೆ ಬೀಳದಂತೆ ಹಿಡಿದಿಡುವುದು. ಈ ಭೂಮಿ, ಗ್ರಹ, ನಕ್ಷತ್ರಗಳು ಭಾರವಾಗಿದ್ದರೂ ಬೀಳುತ್ತಿಲ್ಲ. ಇವುಗಳನ್ನು ಬೀಳದಂತೆ ಹಿಡಿಯುವುದಕ್ಕಾಗಿ ಈಶ್ವರ ಬೇಕು.

ಎಂತಹ ಅವೈಜ್ಞಾನಿಕ ಕಲ್ಪನೆ. ಕೃಷ್ಣ ಗೋವರ್ಧನಗಿರಿಯನ್ನು ಎತ್ತಿ ನಿಂತಂತೆ ದೇವರು ಇವುಗಳನ್ನೆಲ್ಲ ಹಿಡಿದು ನಿಂತಿದ್ದಾನೆಂದಾದರೆ ದೇವರ ಗತಿ ಶೋಚನೀಯ! ದೇಹವಿಲ್ಲದ ದೇವರು ಇವುಗಳನ್ನು ಹಿಡಿದಿಡುವುದಾದರೂ ಹೇಗೆ?

ಅಥವಾ ಇವುಗಳು ಬೀಳುತ್ತಿಲ್ಲ ಎಂದು ಹೇಗೆ ಹೇಳುವುದು. ಬೀಳುತ್ತಿದ್ದರೂ ದೊಡ್ಡ ಗಾತ್ರವಿರುವುದರಿಂದ ಅಲ್ಲಿದ್ದವರಿಗೆ ಬೀಳುವ ಅನುಭವ ಆಗದಿರಬಹುದು, ಹೀಗೆಂದು ಸುಧಾದಲ್ಲಿ ಶ್ರೀಜಯತೀರ್ಥರು ನಿರಾಕರಿಸಿದ್ದಾರೆ. ಅದನ್ನು ರಾಯರು ಇಲ್ಲಿ ಉಲ್ಲೇಖಿಸಿದ್ದಾರೆ.

**4. ಪದಾತ್—** ಪದ್ಯತೇ ಇತಿ ಪದಮ್—ವೃದ್ಧವ್ಯವಹಾರ. ತಿಳಿದವರ ವ್ಯವಹಾರ ನಡೆಯ ಬೇಕಾದರೆ ಘಟಾದಿ ವಸ್ತುಗಳು ಮತ್ತು ಅವುಗಳ ಹೆಸರುಗಳು ಇರಬೇಕು. ಆ ವಸ್ತುಗಳ ಮೊದಲ ಉತ್ಪತ್ತಿ ಹಾಗೂ ಅವುಗಳಿಗೆ ನಾಮಕರಣ ಮಾಡುವ ವ್ಯಕ್ತಿ ಈಶ್ವರ.

ಇದೂ ಒಂದು ಬಾಲಿಷಕಲ್ಪನೆ. ಈಶ್ವರ ಘಟಪಟಾದಿವಸ್ತುಗಳನ್ನು ನಿರ್ಮಿಸಿ, ಅವುಗಳಿಗೆ ಹೆಸರಿಟ್ಟು ಈ ಪ್ರಪಂಚದಲ್ಲಿ, ಅಳಿಯನಿಗೆ ಮಾವ ಮನೆಮಾಡಿಕೊಟ್ಟು ಗೃಹಪ್ರವೇಶ ಮಾಡಿಸಿದಂತೆ ಜೀವರನ್ನು ಸೃಷ್ಟಿಮಾಡಿದನೆ? ಸೃಷ್ಟರಾದ ಬ್ರಹ್ಮಾದಿಜೀವರೇ ಸುಪ್ತಪ್ರಬುದ್ಧನ್ಯಾಯದಿಂದ ಪೂರ್ವಸೃಷ್ಟಿಯನ್ನು ಸ್ಮರಿಸಿಕೊಂಡು ಈ ಕೆಲಸವನ್ನು ಏಕೆ ಮಾಡಬಾರದು? ಈಶ್ವರನ ಅನಿವಾರ್ಯತೆ ಏನು?

**5. ಪ್ರತ್ಯಯತಃ—**ಪ್ರತ್ಯಯ ಎಂದರೆ ನಂಬಿಕೆ. ಈ ಜಾತಿಗೆ ಇದು ಕರ್ತವ್ಯ, ಇದು ಅಕರ್ತವ್ಯ. ಹೀಗೆ ಮಾಡಿದರೆ ಪುಣ್ಯ, ಹೀಗೆ ಮಾಡಿದರೆ ಪಾಪ ಎಂಬ ವ್ಯವಸ್ಥೆಯಲ್ಲಿ ನಂಬಿಕೆ ಬರಬೇಕಾದರೆ ಸರ್ವಜ್ಞನಾದ, ವಿಶ್ವಾಸ ಕಾರಣನಾದ ಒಬ್ಬ ನಿಯಾಮಕ ಇರಬೇಕು. ಆಗ ಮಾತ್ರ ದೃಢವಿಶ್ವಾಸದಿಂದ ತಮ್ಮ ತಮ್ಮ ಕರ್ಮಗಳಲ್ಲಿ ಬ್ರಾಹ್ಮಣಾದಿಗಳು ನಿಷ್ಠರಾಗಬಹುದು. ಆ ನಂಬಿಕೆಗೆ ಪಾತ್ರನಾದ ವ್ಯಕ್ತಿ ಈಶ್ವರ.

ಇದೂ ಸರಿಯಲ್ಲ. ಮಗುವಿಗೆ ಸ್ತನಪಾನವು ಇಷ್ಟಸಾಧನ ಎಂಬ ಜನ್ಮಾಂತರೀಯಾನು-

ಭವಜನ್ಯ ಸ್ಮರಣೆ ಬರುವಂತೆ ಸೃಷ್ಟಿಯ ಆರಂಭದಲ್ಲಿರುವ ಮಹಾತ್ಮರಿಗೆ ಪೂರ್ವಾನುಷ್ಠಿತ ಸ್ವಾಶ್ರಮೋಚಿತಕರ್ಮಗಳ ಸ್ಮರಣೆ ಬರಬಹುದು. ಅದನ್ನು ಹೇಳಿಕೊಡುವ ಒಬ್ಬ ದೇವನ ಅಗತ್ಯವಿಲ್ಲ.

**6. ಶ್ರುತೇಃ**—ಶ್ರುತಿ ಎಂದರೆ ವೇದ. ವೇದವು ಜ್ಞಾನನಿಧಿ. ಅದನ್ನು ರಚಿಸಿದವನು ಸರ್ವಜ್ಞನಾಗಿರಬೇಕು. ಅವನೇ ಈಶ್ವರ.

ಇದನ್ನು ವೇದಾಪೌರುಷೇಯತ್ವಪ್ರಕರಣದಲ್ಲಿ ನಿರಾಕರಿಸಲಾಗಿದೆ. ವೇದವು ಪ್ರಮಾಣವೆಂದು ಸಿದ್ಧವಾಗಬೇಕಾದರೆ ಅದನ್ನು ರಚಿಸಿರುವ ಈಶ್ವರನಿಗೆ ವೇದ ಬಿಟ್ಟು ಬೇರೆ ಪ್ರಮಾಣಗಳಿಂದ ಸರ್ವಜ್ಞತ್ವ ಸಿದ್ಧವಾಗಬೇಕು. ಬೇರೆ ಪ್ರಮಾಣವೆಂದರೆ ಅನುಮಾನ ಎನ್ನುತ್ತಾರೆ ನೈಯಾಯಿಕರು. ಅನುಮಾನಕ್ಕೆ ಪ್ರತ್ಯನುಮಾನವನ್ನು ಮಾಡಬಹುದಾದ್ದರಿಂದ ಸರ್ವಜ್ಞತ್ವ ಸಿದ್ಧವಾಗುವುದಿಲ್ಲ. ಆದ್ದರಿಂದ ವೇದಕ್ಕೆ ಸರ್ವಜ್ಞ ಪ್ರಣೀತತ್ವವು ಸಿದ್ಧವಾಗುವುದಿಲ್ಲ. ಅದರಿಂದಾಗಿ ಅದು ಪ್ರಮಾಣವೇ ಆಗಲಿಕ್ಕಿಲ್ಲ.

**7. ವಾಕ್ಯಾತ್**—ವೇದವಾಕ್ಯಗಳು ಕಾಲಿದಾಸವಾಕ್ಯದಂತೆ ವಾಕ್ಯಗಳಾದುದರಿಂದ ಪುರುಷಪ್ರಣೀತವಾಗಿವೆ. ಆ ಪುರುಷನೇ ಈಶ್ವರ.

ವಾಕ್ಯವೆನಿಸಬೇಕಾದರೆ ಆಕಾಂಕ್ಷಾ-ಯೋಗ್ಯತಾ ಮುಂತಾದ ಧರ್ಮಗಳು ಇರಬೇಕು. ಅದಕ್ಕೆ ಪೌರುಷೇಯತ್ವದ ಅಗತ್ಯವಿಲ್ಲ. ಹೀಗೆ ವಾಕ್ಯತ್ವಹೇತು ಅಪ್ರಯೋಜಕವಾಗಿದೆ. ಅದು ಪುರುಷಪ್ರಣೀತತ್ವ ಸಾಧಕವಾಗುವುದಿಲ್ಲ.

**8. ಸಂಖ್ಯಾವಿಶೇಷಾತ್**—ದ್ವ್ಯಣುಕಪರಿಮಾಣಕ್ಕೆ ಅದರ ಅವಯವವಾದ ಪರಮಾಣುಗತವಾದ ದ್ವಿತ್ವಸಂಖ್ಯೆಯು ಕಾರಣ. ದ್ವಿತ್ವವು ಅಪೇಕ್ಷಾಬುದ್ಧಿಜನ್ಯ. ಕಣ್ಣಿಗೆ ಕಾಣದ ಪರಮಾಣುಗಳಲ್ಲಿ 'ಇದಮೇಕಮ್' ಎಂಬ ಅಪೇಕ್ಷಾಬುದ್ಧಿಯು, ಸೃಷ್ಟಿಯ ಆರಂಭದಲ್ಲಿ ಯಾರಿಗಿದೆಯೋ ಅವನೇ ಈಶ್ವರ.

ಇದೂ ನೈಯಾಯಿಕರು ಮಾತ್ರ ಒಪ್ಪಿರುವ ಪ್ರಕ್ರಿಯೆ. ಆದ್ದರಿಂದ ಸ್ವಗೋಷ್ಠಿಯಲ್ಲಷ್ಟೇ ಇದನ್ನು ಹೇಳಬಹುದು. ಅಲ್ಲದೆ, ಘಟದ ಪರಿಮಾಣವು ಕಪಾಲಪರಿಮಾಣದಿಂದ ಹುಟ್ಟುವಂತೆ ದ್ವ್ಯಣುಕಪರಿಮಾಣವೂ ಪರಮಾಣು ಪರಿಮಾಣದಿಂದಲೇ ಹುಟ್ಟಬಹುದು. ಅಥವಾ, ಅದಕ್ಕೆ ಸಂಖ್ಯೆಯೇ ಕಾರಣವೆಂದು ಒಪ್ಪುವುದಾದರೂ ಪರಮಾಣು ದ್ವಯದಲ್ಲಿರುವ ಏಕತ್ವಸಂಖ್ಯೆಯನ್ನೇ ಕಾರಣವೆಂದು ಹೇಳಿದರಾಯ್ತು. ಅದು ನಿತ್ಯ. ಅದಕ್ಕೆ ಈಶ್ವರನ ಅಗತ್ಯವೇನು?

ಹೀಗೆ ವೇದಾಪೌರುಷೇಯತ್ವ ಸಮರ್ಥನೆ ಮತ್ತು ಈಶ್ವರಾನುಮಾನದ ನಿರಾಸ ಈ ಎರಡು ಪ್ರಕರಣಗಳನ್ನು ಒಳಗೊಂಡಿರುವ ತರ್ಕತಾಂಡವದ ಈ ಭಾಗವನ್ನು ಮಂತ್ರಾಲಯ ಪ್ರಭುಗಳ

ಕೃಪಾದೃಷ್ಟಿಯಿಂದ ಹಾಗೂ ಶ್ರೀಮಂತ್ರಾಲಯ ಮಠಾಧೀಶರಾದ ಪರಮಪೂಜ್ಯ ಶ್ರೀಸುಬುಧೇಂದ್ರ ತೀರ್ಥಶ್ರೀಪಾದರ ಆದೇಶದಿಂದ ನಾನು ಕನ್ನಡೀಕರಿಸಿದ್ದೇನೆ. ಇದಕ್ಕೆ ಸಂಬಂಧಪಟ್ಟ ತರ್ಕಗ್ರಂಥಗಳ ಅಗತ್ಯಭಾಗಗಳನ್ನು ಅಡಿಟಿಪ್ಪಣಿಯಲ್ಲಿ ಉಲ್ಲೇಖಿಸಲಾಗಿದೆ.

ಈ ಕೆಲಸವನ್ನು ವಿಶ್ವಾಸಪೂರ್ವಕವಾಗಿ ನನಗೆ ಒಪ್ಪಿಸಿದ ಪರಮಪೂಜ್ಯ ಶ್ರೀ ಸುಬುಧೇಂದ್ರ ತೀರ್ಥರಿಗೆ ಅನಂತ ಪ್ರಣಾಮಗಳು. ಅದರಂತೆ ಸಲಹೆ ಸೂಚನೆಗಳನ್ನೂ ಸಹಕಾರವನ್ನೂ ನೀಡಿದ ಪಂ.ರಾಜಾ ಎಸ್.ಗಿರಿ ಆಚಾರ್ಯರಿಗೆ ವಂದನೆಗಳು.

ಪ್ರೋತ್ಸಾಹ ನೀಡಿದ ಗುರುಸಾರ್ವಭೌಮ ವಿದ್ಯಾಪೀಠದ ಪ್ರಾಚಾರ್ಯರಾದ ಪಂ.ವಾದಿರಾಜಾಚಾರ್ಯರಿಗೆ ಮತ್ತು ಪಂ.ಬಂಡಿಶ್ಯಾಮಾಚಾರ್ಯರಿಗೆ ವಂದನೆಗಳು. ಶ್ರದ್ಧೆಯಿಂದ ಡಿ.ಟಿ.ಪಿ. ಮಾಡಿರುವ ಶ್ರೀ ಪ್ರೇಮ್‌ಕುಮಾರ್ ಅವರಿಗೂ ಕೃತಜ್ಞತೆಗಳು.

**ಎ.ಹರಿದಾಸಭಟ್**
ನಿವೃತ್ತ ಪ್ರಾಚಾರ್ಯರು
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು

# ತರ್ಕತಾಂಡವ

## ವಿಷಯಾನುಕ್ರಮಣಿಕೆ

श्रीमद्व्यासराज विरचिते तर्कताण्डवे

# वेदापौरुषेयत्ववादः

## वेदापौरुषेयत्वे प्रमाणानि-१

### ನ್ಯಾಯದೀಪದಲ್ಲಿ ಅವತಾರಿಕೆ

एवं 'न विलक्षणत्वादस्य' इति नयसिद्धं 'स्वतः प्रमाणैः'इतिश्लोकोक्तं प्रामाण्यस्वतस्त्वं समर्थ्य अधुना 'विलक्षणत्वात्' इति हेतोरपौरुषेयत्वरूपवैलक्षण्यवत्वादित्यर्थान्तरोपगमेन ब्रह्मसूत्राभिमतम् 'अदिवर्जितैः' इति श्लोकोक्तमपौरुषेयत्वं साधयितुं मणिकृदाद्युक्तमाशङ्कते— **नन्विति ।**

ಈ ಹಿಂದಿನ ಪ್ರಕರಣದಲ್ಲಿ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರದಲ್ಲಿ (2-1-4) ಸಿದ್ಧವಾದ ಪ್ರಾಮಾಣ್ಯಸ್ವತಸ್ತ್ವವನ್ನು ಈ ಗ್ರಂಥದ ಮಂಗಲಪದ್ಯದಲ್ಲಿ 'ಸ್ವತಃ ಪ್ರಮಾಣೈಃ' ಎಂದು ಪ್ರಸ್ತುತವಾಗಿರುವುದನ್ನು ಸಮರ್ಥಿಸಲಾಗಿದೆ. ಈ ಪ್ರಕರಣದಲ್ಲಿ ವೇದಾಪೌರುಷೇಯತ್ವವನ್ನು ಸಮರ್ಥಿಸುವುದಕ್ಕಾಗಿ ಮಣಿಕಾರೋಕ್ತವಾದ ಅಪೌರುಷೇಯತ್ವದ ಬಗ್ಗೆ ಆಕ್ಷೇಪವನ್ನು ಅನುವಾದ ಮಾಡಲಾಗಿದೆ. ಅಪೌರುಷೇಯತ್ವವೂ ಸೂತ್ರದ 'ವಿಲಕ್ಷಣತ್ವಾತ್' ಎಂಬ ಪದದ ಅರ್ಥಾಂತರವಾಗಿದೆ. ಅದನ್ನು ಮಂಗಲಪದ್ಯದಲ್ಲಿ 'ಅದಿವರ್ಜಿತೈಃ' ಎಂದು ಉಲ್ಲೇಖಿಸಲಾಗಿದೆ. ಹೀಗೆ ವೇದಾಪೌರುಷೇಯತ್ವವೂ ಪ್ರಸ್ತುತವಾದ ವಿಷಯವೇ ಆಗಿದೆ.

**ननु कथं वेदस्यापौरुषेयत्वं । तत्र प्रमाणाभावात् । वाक्यत्वाद्यनुमानेन ''छन्दांसि जज्ञिरे'' इत्यादिश्रुत्या ''प्रतिमन्वन्तरं चैषा श्रुतिरन्या विधीयते'' इत्यादिस्मृत्या च पौरुषेयत्वसिद्धेश्च, इति चेत् ।**

ಮಣಿಕಾರ ಮಾಡಿರುವ ಆಕ್ಷೇಪ ಹೀಗಿದೆ— ವೇದವು ಅಪೌರುಷೇಯವಾಗುವುದು ಹೇಗೆ? ಅದು ಅಪೌರುಷೇಯವೆನ್ನಲು ಪ್ರಮಾಣ ಇಲ್ಲ. ಅಷ್ಟು ಮಾತ್ರವಲ್ಲದೆ, ವೇದವು ಪೌರುಷೇಯ ಎನ್ನಲು ಪ್ರಮಾಣವಿದೆ. ಅನುಮಾನ ಹೀಗೆ ''ವೇದಃ ಪೌರುಷೇಯಃ, ವಾಕ್ಯತ್ವಾತ್, ಕಾಲಿದಾಸವಾಕ್ಯವತ್'' (ಶಬ್ದಖಂಡಮಣಿ.343) ಎಂದು. ಶ್ರುತಿಯೂ ವೇದವನ್ನು

ಪೌರುಷೇಯವೆಂದೇ ಹೇಳುತ್ತದೆ—'ಛಂದಾಸಿ ಜಜ್ಞಿರೇ ತಸ್ಮಾತ್-ಆ ಪುರುಷನಾಮಕ ಪರಮಾತ್ಮ ನಿಂದ ವೇದಗಳು ಹುಟ್ಟಿದವು' ಸ್ಮತಿಯೂ ಹೀಗೆ ಹೇಳುತ್ತದೆ—''ಪ್ರತಿ ಮನ್ವಂತರಗಳಲ್ಲೂ ಶ್ರುತಿಯು ಬೇರೆಬೇರೆಯೇ ರಚಿಸಲ್ಪಡುತ್ತದೆ'' ಎಂದು.

ಹೀಗೆ, ಅನುಮಾನ, ಶ್ರುತಿ, ಸ್ಮೃತಿಗಳಿಂದ ವೇದವು ಪೌರುಷೇಯವೆಂದೇ ಸಿದ್ಧವಾಗುತ್ತದೆ.

## ನ್ಯಾಯದೀಪ

**वाक्यत्वादीत्यादिपदार्थव्यक्तिरग्रे परोक्तानुमानखण्डनप्रस्तावे ज्ञेया । मण्याद्युदाहृतश्रुतिस्मृती चाह— छन्दांसीति ।।**

ಮೂಲದಲ್ಲಿ 'ವಾಕ್ಯತ್ವಾದಿ-ಅನುಮಾನೇನ' ಎಂದಿದೆ. ಆದಿಪದದಿಂದ ವಿವಕ್ಷಿತವಾದ ಹೇತುಗಳು, ತರ್ಕತಾಂಡವದ ಮುಂದಿನ ಪ್ರಕರಣದಲ್ಲಿ ಮಣಿಕಾರೋಕ್ತಾನುಮಾನಗಳನ್ನು ನಿರಾಕರಿಸುವ ಸಂದರ್ಭದಲ್ಲಿ, ತಿಳಿಯುತ್ತವೆ. ಮಣಿಗ್ರಂಥದಲ್ಲಿ (ಪು.372) ಉದಾಹರಿಸಿರುವ ಶ್ರುತಿ ಮತ್ತು ಸ್ಮೃತಿಗಳನ್ನು ಮೂಲದಲ್ಲಿ ಹೇಳಲಾಗಿದೆ.

## ಅವತಾರಿಕೆ

**''नचापौरुषेयं वाक्यमेव नास्तीति वाच्यम् । तदभावे सर्वसमयाभिमतधर्माद्यसिद्धेः'' इति विष्णुतत्त्वनिर्णयवाक्यसूचितानां ''धर्माधर्मस्वर्गनरकादिकं प्रमाणोपेतं वस्तुत्वात्'' इत्यादिना जिज्ञासाधिकरणसुधोक्तसामान्यपरिशेषनिष्कर्षभूतानामुक्त्या प्रमाणाभावादिति हेतुं तावन्निराह— ज्योतिष्टोमस्येति ।।**

ಮಣಿಕಾರ ಹೇಳಿದ ''ಪ್ರಮಾಣಾಭಾವಾತ್'' ಎಂಬ ಕಾರಣವನ್ನು ಮೂಲದಲ್ಲಿ ಮೊದಲು ನಿರಾಕರಿಸಲಾಗಿದೆ. ವಿಷ್ಣುತತ್ತ್ವನಿರ್ಣಯದಲ್ಲಿ ಅಪೌರುಷೇಯವಾಕ್ಯ-ಸಾಧಕಸಂಭಾವಕ ಯುಕ್ತಿಯನ್ನು ಆಚಾರ್ಯರು ಹೀಗೆ ಹೇಳಿದ್ದಾರೆ—'ಅಪೌರುಷೇಯವಾಕ್ಯವೇ ಇಲ್ಲವೆಂದು ಹೇಳಬಾರದು. ಅಪೌರುಷೇಯವಾಕ್ಯದ ಹೊರತಾಗಿ, ಎಲ್ಲಾ ದಾರ್ಶನಿಕರಿಗೂ ಸಮ್ಮತವಾದ ಧರ್ಮಾದಿ ಅತೀಂದ್ರಿಯವಸ್ತುಗಳು ಸಿದ್ಧವಾಗಲಿಕ್ಕಿಲ್ಲ.' ಜಿಜ್ಞಾಸಾಧಿಕರಣ ಸುಧಾದಲ್ಲೂ ಸಾಮಾನ್ಯತಃ ಅಪೌರುಷೇಯವಾಕ್ಯವನ್ನು ಸಾಧಿಸುವ ಯುಕ್ತಿಯನ್ನು ಇದೇರೀತಿ ಸೂಚಿಸ ಲಾಗಿದೆ— 'ಧರ್ಮ-ಸ್ವರ್ಗ-ನರಕ ಮುಂತಾದವು ಅತೀಂದ್ರಿಯವಸ್ತುಗಳಾದುದರಿಂದ ಅವುಗಳಿಗೆ ಒಂದು ಪ್ರಮಾಣವು ಇರಬೇಕು' ಎಂದು. ಈ ಅನುಮಾನಗಳಿಂದ ಅಪೌರುಷೇಯವಾಕ್ಯವು ಇದೆ,

ಎಂದು ಸಾಮಾನ್ಯತಃ ಸಾಧಿಸಿ, ಅಂತಹ ಅಪೌರುಷೇಯವಾಕ್ಯಗಳು ವೇದಗಳೇ ಆಗಿವೆ, ಎಂದು ವೇದಾಪೌರುಷೇಯತ್ವಸಾಧನೆಗೆ ಯುಕ್ತಿಗಳನ್ನು ಹೇಳಲಾಗಿದೆ. ಈ ಯುಕ್ತಿಗಳನ್ನೇ ಹೇಳಿ ಪ್ರಮಾಣಾಭಾವಾತ್, ಎಂದು ಮಣಿಯಲ್ಲಿ ಹೇಳಿರುವುದು ಯುಕ್ತವಲ್ಲ. ಇದನ್ನು 'ಜ್ಯೋತಿಷ್ಟೋಮಸ್ಯ' ಎಂಬ ಮುಂದಿನ ಮೂಲವಾಕ್ಯದಲ್ಲಿ ಹೇಳಲಾಗಿದೆ.

## ಅನುಮಾನ–1

**उच्यते, ज्योतिष्टोमस्य स्वर्गसाधनत्वं, वेदतात्पर्यविषयो वा पौरुषेयशब्देतरप्रमाणकः, पौरुषेयशब्दाप्रमाणकत्वे सति सप्रमाणकत्वात् । यत् यदप्रमाणकत्वे सति सप्रमाणकं तत् तदितरप्रमाणकम् । यथा संमतम् । वक्ष्यमाणरीत्या पक्षधर्मताबलादपौरुषेयशब्दसिद्धिः ॥**

**ಪಕ್ಷ–1.** ಜ್ಯೋತಿಷ್ಟೋಮಯಾಗಕ್ಕೆ ಸ್ವರ್ಗಸಾಧನತ್ವವು.

**ಪಕ್ಷ–2.** ವೇದದ ತಾತ್ಪರ್ಯಕ್ಕೆ ವಿಷಯವಾದ ಧರ್ಮಾದಿ ತತ್ತ್ವಗಳು.

ಸಾಧ್ಯ–ಪೌರುಷೇಯ–ಶಬ್ದವಲ್ಲದ ಪ್ರಮಾಣದಿಂದ ಸಿದ್ಧವಾಗಿದೆ.

**ಹೇತು**–ಏಕೆಂದರೆ, ಅದು ಪುರುಷಪ್ರಣೀತವಾಕ್ಯದಿಂದ ಸಿದ್ಧವಾಗುವುದಿಲ್ಲ. ಆದರೂ, ಅದಕ್ಕೆ ಒಂದು ಪ್ರಮಾಣ ಇದೆ, ಆದ್ದರಿಂದ.

**ದೃಷ್ಟಾಂತ**—ಯಾವುದಕ್ಕೆ ಯಾವ ಕರಣವು ಪ್ರಮಾಣವಾಗಿರದಿದ್ದರೂ ಪ್ರಮಾಣವಂತೂ ಇದೆಯೋ ಅದಕ್ಕೆ ತದಿತರವೇ ಪ್ರಮಾಣ. ರೂಪಕ್ಕೆ ಶ್ರೋತ್ರೇಂದ್ರಿಯಾದಿಗಳು ಪ್ರಮಾಣಗಳಲ್ಲ, ಆದರೆ ಅದು ಪ್ರಾಮಾಣಿಕವಾಗಿದೆ. ಆದ್ದರಿಂದ ರೂಪಕ್ಕೆ ಚಕ್ಷುರಿಂದ್ರಿಯವೇ ಪ್ರಮಾಣ. ಅದರಂತೆ ಧರ್ಮಾದಿಗಳಿಗೂ ಪೌರುಷೇಯ ವಾಕ್ಯಗಳು ಪ್ರಮಾಣಗಳಲ್ಲ. ಆದರೂ ಪ್ರಮಾಣವಿದೆ. ಆದ್ದರಿಂದ ಪರಿಶೇಷಾತ್ ಅಪೌರುಷೇಯವಾಕ್ಯವೇ ಪ್ರಮಾಣ.

ಈ ಅನುಮಾನವು ಅಪೌರುಷೇಯವಾದ ವಾಕ್ಯವು ಇದೆ, ಎನ್ನಲು ಪ್ರಮಾಣ.

## ನ್ಯಾಯದೀಪ

**विशिष्यैव पक्षनिर्देशे तद्बोधकैकवाक्यस्यापौरूषेयत्वसिद्धिः, नतु सर्वस्यापि वेदस्य, इत्यतः सामान्यपक्षनिर्देशमाह— वेदेति । यद्वा ''यः शब्दो वक्त्रा यदिच्छया प्रयुक्तः स तत्पर इति तदिच्छया**

**वक्तृप्रयुक्तशब्दगोचरत्वमेव शब्दतात्पर्यविषयत्वमिति वेदगततात्पर्य-पर्यालोचनया तस्य पौरुषेयत्वम्'' इति मणिकृदुक्तिखण्डनाय वेदतात्पर्यविषय इति सामान्यपक्षनिर्देशः ।**

**यद्वा अस्मिन् पक्षे सप्रमाणकत्वादिति हेतुः वस्तुत्वादिहेतुना प्रसाध्याङ्गक इति भावेनाह–वेदेति । आपातप्रतिपाद्ये बाधवारणाय—तात्पर्येति । लौकिकशब्द-तात्पर्यविषये बाधवारणाय— वेदेति ।।**

ಜ್ಯೋತಿಷ್ಟೋಮಕ್ಕೆ ಸ್ವರ್ಗಸಾಧನತ್ವವನ್ನು ಪಕ್ಷವನ್ನಾಗಿ ಮಾಡಿದರೆ ಅದನ್ನು ತಿಳಿಸುವ 'ಜ್ಯೋತಿಷ್ಟೋಮೇನ ಸ್ವರ್ಗಕಾಮಃ ಯಜೇತ' ಎಂಬ ವಾಕ್ಯಕ್ಕೆ ಮಾತ್ರ ಅಪೌರುಷೇಯತ್ವವು ಸಿದ್ಧವಾಗುತ್ತದೆ. ಎಲ್ಲಾ ವೇದಗಳಿಗೆ ಅಪೌರುಷೇಯತ್ವವು ಸಿದ್ಧವಾಗುವುದಿಲ್ಲ. ಅದಕ್ಕಾಗಿ, ಎರಡನೆಯ ಪಕ್ಷವನ್ನು ಅನುಸರಿಸಲಾಗಿದೆ.

ಅಥವಾ, ಪಕ್ಷಾಂತರಾನುಸರಣೆಗೆ ಹೀಗೂ ಕಾರಣವನ್ನು ಕೊಡಬಹುದು—ಮಣಿಕಾರ ವೇದಪೌರುಷೇಯತ್ವಕ್ಕೆ ಹೀಗೆ ಯುಕ್ತಿಯೊಂದನ್ನು ಹೇಳಿದ್ದಾನೆ—ವಕ್ತೃವು ಯಾವ ವಾಕ್ಯವನ್ನು ಯಾವ ರೀತಿಯ ಬೋಧವು ಬರಲಿ, ಎಂಬ ಇಚ್ಛೆಯಿಂದ ಪ್ರಯೋಗಮಾಡುತ್ತಾನೋ ಆ ವಾಕ್ಯಕ್ಕೆ ಅದೇ ಅರ್ಥದಲ್ಲಿ ತಾತ್ಪರ್ಯ. ಈ ಸಾಮಾನ್ಯನಿಯಮದಂತೆ ವಕ್ತೃತಾತ್ಪರ್ಯ–ವಿಷಯವಾದ ಅರ್ಥವೇ ಶಬ್ದಪ್ರತಿಪಾದ್ಯ. ವೇದವೂ ವಾಕ್ಯವಾದುದರಿಂದ ಅದು ಅರ್ಥವಿಶೇಷವನ್ನು ತಿಳಿಸಬೇಕಾದರೆ ಅದಕ್ಕೆ ಒಬ್ಬ ವಕ್ತೃ ಇರಬೇಕು'. ಹೀಗೆ, ವೇದದ ತಾತ್ಪರ್ಯವನ್ನು ವಿಮರ್ಶೆಮಾಡಿದಾಗ ವೇದವು ಪೌರುಷೇಯವೆಂದು ನಿರ್ಧಾರವಾಗುತ್ತದೆ. ಇದು ಮಣಿಕಾರ ಹೇಳಿರುವ ಪೌರುಷೇಯತ್ವಸಾಧಕ ಯುಕ್ತಿ.(ಪು.339) ಇದನ್ನು ನಿರಾಕರಿಸುವ ಉದ್ದೇಶದಿಂದ 'ವೇದತಾತ್ಪರ್ಯವಿಷಯಃ' ಎಂದು ಎರಡನೆಯ ಪಕ್ಷವನ್ನು ಉಲ್ಲೇಖಿಸಲಾಗಿದೆ.

ಅಥವಾ ಈ ಅನುಮಾನದ ಸಪ್ರಮಾಣಕತ್ವಹೇತುವನ್ನು ವಸ್ತುತ್ವ ಹೇತುವಿನಿಂದ ಸಾಧನೆ ಮಾಡಬೇಕು. ಆದರೆ, ವೇದತಾತ್ಪರ್ಯವಿಷಯವನ್ನು ಪಕ್ಷಮಾಡಿದಾಗ ವಸ್ತುತ್ವಹೇತುವಿನ ಅಗತ್ಯವಿಲ್ಲ. ಅದಕ್ಕಾಗಿ, ಎರಡನೆಯ ಪಕ್ಷವನ್ನು ಉಲ್ಲೇಖಿಸಲಾಗಿದೆ.

ವೇದದಿಂದ ಆಪಾತತಃ ಪ್ರತೀತವಾದ ವಿಷಯಸಿದ್ಧಿಗಾಗಿ ವೇದವು ಅಪೌರುಷೇಯ ಎಂಬ ಕಲ್ಪನೆ ಬರದಿರಲಿ ಎನ್ನುವುದಕ್ಕಾಗಿ–ತಾತ್ಪರ್ಯವಿಷಯಃ, ಎಂದು ಪಕ್ಷ ಮಾಡಲಾಗಿದೆ. ಲೌಕಿಕಾರ್ಥಕ ವಾಕ್ಯದ ತಾತ್ಪರ್ಯವಿಷಯದಲ್ಲಿ ಬಾಧಪರಿಹಾರಕ್ಕಾಗಿ 'ವೇದ' ಎಂಬ ವಿಶೇಷಣವನ್ನು ಪಕ್ಷದಲ್ಲಿ ಸೇರಿಸಲಾಗಿದೆ.

## ನ್ಯಾಯದೀಪ-ವೇದಲಕ್ಷಣ

ननु कोयं वेदो नाम (१) यदि वेदपदार्थो वेदस्तर्हि इतिहासपुराणतात्पर्यविषये बाधः। ''इतिहासपुराणः पञ्चमो वेदानां वेदः'' इति तयोरपि वेदपदार्थत्वात्। (२)नापि वेदशब्दमुख्यार्थो वेदः। मुख्यत्व प्रयोजकप्रवृत्तिनिमित्तस्य इतिहासादिव्यावृत्तस्यानिरूपणात्। (३) नापि शाखासमुदायो वेदः। शाखायाः वेदैकदेशत्वेनान्योन्याश्रयात्। (४) नापि सन्दिग्धकर्तृकं वाक्यं वेदः। वादिप्रतिवादिनोर्निश्चयात्। मध्यस्थसन्देहेन पक्षतावच्छेदककरणे अन्योन्याश्रयात्। वादिप्रतिवाद्यनुमानानन्तरभावित्वात् मध्यस्थसन्देहस्य। (५) नापि प्रमाणशब्दो वेद इति युक्तम्। भारतादौ गतत्वात्।

(६) नापि यथार्थवाक्यार्थज्ञानाजन्यप्रमाणशब्दो वेद इति। परमतेऽप्रसिद्धेः। प्रमाणशब्दमात्रस्य तादृशेश्वरज्ञानजन्यत्वात्। (७) नच जन्ययथार्थवाक्यार्थज्ञानाजन्यप्रमाणशब्दो वेद इति युक्तम्। संवादिशुकबालादिवाक्येऽपि गतत्वेन बाधापत्तेः। सिद्धान्तिमते नित्यज्ञान-व्यासप्रणीतभारतादावपि गतत्वाच्चेति चेत्॥

ಸಾಧ್ಯಘಟಕವಾದ ವೇದವೆಂದರೇನು?

1. ವೇದ ಎಂಬ ಹೆಸರಿನಿಂದ ವಾಚ್ಯವಾದುದು ವೇದವೆನ್ನಲಾಗದು. 'ಇತಿಹಾಸಃ ಪುರಾಣಃ ಪಂಚಮೋ ವೇದಾನಾಂ ವೇದಃ' ಎಂದು ವೇದಪದವನ್ನು ಇತಿಹಾಸ-ಪುರಾಣಗಳಲ್ಲೂ ಪ್ರಯೋಗಿಸಲಾಗಿದೆ. ಅವುಗಳ ತಾತ್ಪರ್ಯವಿಷಯವೂ ಪಕ್ಷದಲ್ಲಿ ಸೇರುತ್ತವೆ. ಅವುಗಳಲ್ಲಿ ಸಾಧ್ಯ ಇಲ್ಲ, ಬಾಧ ಬರುತ್ತದೆ.

2. ಇದರ ಪರಿಹಾರಕ್ಕಾಗಿ, ವೇದಶಬ್ದದ ಮುಖ್ಯವಾಚ್ಯವಾದುದು ವೇದ, ಎನ್ನುವಂತೆಯೂ ಇಲ್ಲ. ಆ ಶಬ್ದಕ್ಕೆ ಅಸಾಧಾರಣವಾದ ಪ್ರವೃತ್ತಿ ನಿಮಿತ್ತ ಒಂದು ಇದ್ದರೆ, ಆ ಪ್ರವೃತ್ತಿ ನಿಮಿತ್ತ ಇರುವಲ್ಲಿ ವೇದಶಬ್ದವು ಮುಖ್ಯ, ಎಂದು ಹೇಳಬಹುದಿತ್ತು. ಆದರೆ, ಇತಿಹಾಸ-ಪುರಾಣಗಳಲ್ಲಿ ಇಲ್ಲದ ಅಂತಹ ಒಂದು ಪ್ರವೃತ್ತಿನಿಮಿತ್ತ ಇಲ್ಲ.

3. ವಿವಿಧ ಶಾಖಾಸಮುದಾಯವೇ ವೇದ, ಎನ್ನುವುದೂ ಸರಿಯಲ್ಲ. ಶಾಖೆ ಎಂದರೇನು? ವೇದದ ಭಾಗವಿಶೇಷ. ವೇದವೆಂದರೇನೆಂದು ಇನ್ನೂ ಸಿದ್ಧವಾಗದಿರುವಾಗ ಅದರ ಆಧಾರದಿಂದ ಶಾಖಾವನ್ನು ನಿರ್ಧರಿಸಲಾಗುವುದಿಲ್ಲ. ಆದ್ದರಿಂದ, ಶಾಖಾದಿಂದ ವೇದಸ್ವರೂಪದ ನಿರ್ಧಾರ. ವೇದಸ್ವರೂಪದಿಂದ ಶಾಖಾನಿರ್ಧಾರ ಮಾಡಿದಾಗ ಅನ್ಯೋನ್ಯಾಶ್ರಯ.

4. ಯಾವ ಗ್ರಂಥರಾಶಿಗೆ ಕರ್ತೃವು ಸಂದಿಗ್ಧವಾಗಿರುವನೋ ಅದು ವೇದ, ಎನ್ನುವುದೂ ಸರಿಯಲ್ಲ. ಅಪೌರುಷೇಯತ್ವವಾದಿಗಳಿಗೆ ಕರ್ತೃವೇ ಇಲ್ಲವೆಂದು ನಿರ್ಧಾರವಿದೆ. ತಾರ್ಕಿಕರಿಗೆ ಈಶ್ವರನೇ ಕರ್ತೃ ಎಂದು ನಿಶ್ಚಯವಿದೆ. ಇನ್ನು ಯಾರಿಗೆ ಸಂದೇಹ? ಮಧ್ಯಸ್ಥರಿಗೆ ಎನ್ನಬೇಕು. ಅವರಿಗೆ ಸಂದೇಹ ಬರಬೇಕಾದರೂ ವಾದಿಗಳು 'ವೇದಃ ಅಪೌರುಷೇಯಃ' ಎಂದು ಅನುಮಾನ ಮಾಡಬೇಕು; ಪ್ರತಿವಾದಿಗಳು 'ವೇದಃ ಈಶ್ವರಕರ್ತೃಕಃ' ಎಂದು ಅನುಮಾನ ಮಾಡಬೇಕು. ಈ ಎರಡು ವಿರುದ್ಧಾನುಮಾನಗಳಿಂದ ಮಧ್ಯಸ್ಥನಿಗೆ ಸಂದೇಹ ಬರಬೇಕು. ಹಾಗಾದರೆ ಅನುಮಾನ ಮಾಡಿದ ಮೇಲೆ ಸಂದೇಹ, ಸಂದೇಹ ಬಂದರೆ ವೇದದ ಸ್ವರೂಪಸಿದ್ಧವಾಗಿ ತದ್‌ಘಟಿತವಾದ ಸಾಧ್ಯ ಸಿದ್ಧಿಯಿಂದ ಅನುಮಾನ. ಹೀಗೆ ಮತ್ತೆ ಅನ್ಯೋನ್ಯಾಶ್ರಯ.

5. ಪ್ರಮಾಣಶಬ್ದಃ ವೇದಃ, ಎಂದರೆ ಭಾರತವೂ ಪಕ್ಷದಲ್ಲಿ ಸೇರುತ್ತದೆ. ಬಾಧ ಬರುತ್ತದೆ.

6. ಯಥಾರ್ಥವಾದ ವಾಕ್ಯಾರ್ಥ–ಜ್ಞಾನದಿಂದ ಅಜನ್ಯವಾದ ಪ್ರಮಾಣಶಬ್ದ ವೇದ, ಎನ್ನುವ ಪರಿಭಾಷೆಯೂ ಸರಿಯಲ್ಲ. ಇದನ್ನು ವೇದಾಪೌರುಷೇಯತ್ವವಾದಿಗಳು ಅಂಗೀಕರಿಸಬಹುದು. ಆದರೆ, ನೈಯಾಯಿಕರಿಗೆ ಇದು ಅಸಿದ್ಧ. ಅವರು, ಭಾರತದಂತೆ ವೇದವೂ ಈಶ್ವರನ ಯಥಾರ್ಥ ವಾಕ್ಯಾರ್ಥಜ್ಞಾನದಿಂದ ಜನ್ಯ ಎಂದೇ ಹೇಳುತ್ತಾರೆ. ಹೀಗೆ ಅವರ ಮತದಂತೆ ಪ್ರಮಾಣವಾದ ಶಬ್ದ ಗಳೆಲ್ಲವೂ ಯಥಾರ್ಥವಾಕ್ಯಾರ್ಥಜ್ಞಾನಜನ್ಯವಾದ ಕಾರಣ, ತದಜನ್ಯವಾದ ವಾಕ್ಯಗಳು ಅಪ್ರಸಿದ್ಧ.

7. ಜನ್ಯವಾದ ಯಥಾರ್ಥವಾಕ್ಯಾರ್ಥಜ್ಞಾನದಿಂದ ಅಜನ್ಯವಾದ ಪ್ರಮಾಣಶಬ್ದ ವೇದ. ಲೌಕಿಕ ವಾಕ್ಯಗಳು ನಮ್ಮ ಜನ್ಯಜ್ಞಾನದಿಂದ ಜನ್ಯವಾಗಿವೆ. ವೇದವು ಈಶ್ವರಜ್ಞಾನದಿಂದ ಜನ್ಯವಾದರೂ ಆ ಈಶ್ವರಜ್ಞಾನವು ಜನ್ಯವಲ್ಲ. ಆದರಿಂದ ಈಶ್ವರ ಪ್ರಣೀತವೇದವು ಜನ್ಯಜ್ಞಾನಾಜನ್ಯವಾಗಿದೆ. ಇದೂ ಸರಿಯಲ್ಲ. ಶುಕ–ಬಾಲಾದಿಗಳಿಂದ ಉಚ್ಚರಿತವಾದ ವಾಕ್ಯವು ಅರ್ಥಜ್ಞಾನಪೂರ್ವಕವಲ್ಲವಾದುದರಿಂದ ವಾಕ್ಯಾರ್ಥಜ್ಞಾನದಿಂದ ಜನ್ಯವಲ್ಲ. ಅದೂ ಪಕ್ಷದಲ್ಲಿ ಸೇರಿ ಬಾಧದೋಷ ಬರುತ್ತದೆ. ಅಷ್ಟೇ ಅಲ್ಲ. ಸಿದ್ಧಾಂತರೀತ್ಯಾ ಮಹಾಭಾರತವು ವ್ಯಾಸಪ್ರಣೀತ. ಅವರು ಸಾಕ್ಷಾತ್ ನಾರಾಯಣಸ್ವರೂಪರು. ಅವರ ಜ್ಞಾನ ಜನ್ಯವಲ್ಲ. ಅವರಿಂದ ವ್ಯಾಸಪ್ರಣೀತವಾದ ಮಹಾಭಾರತವೂ ಪಕ್ಷದಲ್ಲಿ ಸೇರುತ್ತದೆ. ಬಾಧ ಬರುತ್ತದೆ.

ಹೀಗೆ ವೇದತ್ವವನ್ನು ನಿರ್ವಚನ ಮಾಡಲು ಬರುವುದಿಲ್ಲ. (ಈ ವಿಕಲ್ಪಗಳಲ್ಲಿ ಕೆಲವು ಶಬ್ದಖಂಡಮಣಿ ಗ್ರಂಥದ ಪು.343ರಲ್ಲಿ ಇವೆ)

## ನ್ಯಾಯದೀಪ–ವೇದಲಕ್ಷಣ

उच्यते । "(८) शब्दतदुपजीविप्रमाणातिरिक्तप्रमाणजन्यप्रमित्यविषयार्थकत्वे सति शब्दजन्ययथार्थवाक्यार्थज्ञानाजन्यप्रमाणशब्दत्वं वेदत्वम्" इति मण्युक्तरीत्या वा (१०) "क्रमविशिष्टा वर्णा वेदः" इति सुधोक्तदिशा वा (११) वक्ष्यमाणदिशा साक्षाद्धर्मादिबोधकशब्दो वेद इति वा (१२) प्रमाकरणामूलकत्वे सति प्रमाणशब्दो वेद इति वा (१३) पूर्वतन्त्रे विधिमन्त्राधिकरणे मन्त्रपदार्थोक्तरीत्या वेद इत्यभियुक्त-प्रयोगविषयो वा वेद इति तन्निरुक्त्युपपत्तेः ।

1. ಯಾವ ಗ್ರಂಥದ ವಿಷಯವು ಶಬ್ದ ಅಥವಾ ತದುಪಜೀವಿಯಾದ ಅನುಮಾನಪ್ರಮಾಣಕ್ಕೆ ಮಾತ್ರ ವಿಷಯವಾಗಿದ್ದು ತದತಿರಿಕ್ತ–ಪ್ರಮಾಣ–ಜನ್ಯಪ್ರಮಾಕ್ಕೆ ವಿಷಯವಲ್ಲವೋ ಅಂತಹ ವಿಷಯವನ್ನು ತಿಳಿಸುತ್ತಿದ್ದು, ಶಬ್ದಜನ್ಯವಾದ ಯಥಾರ್ಥ–ವಾಕ್ಯಾರ್ಥ–ಜ್ಞಾನದಿಂದ ನಿರ್ಮಾಣ ಗೊಂಡಿಲ್ಲವೋ ಅಂತಹ ಪ್ರಮಾಣಶಬ್ದವೇ ವೇದ. (ಇದು ಮಣ್ಯುಕ್ತಪರಿಷ್ಕಾರ–ಪು.349)

ವೇದದ ತಾತ್ಪರ್ಯವಿಷಯವಾದ ಪ್ರಮೇಯಗಳನ್ನು ವೇದದಿಂದ ಅಥವಾ ವೇದಾಧಾರಿತವಾದ ಅನುಮಾನಗಳಿಂದ ಹೊರತು ಇತರ ಪ್ರಮಾಣಗಳಿಂದ ತಿಳಿಯಲಾಗದು. ಅಷ್ಟೇ ಅಲ್ಲ, ಆ ವೇದದ ರಚನೆಗೆ ಶಬ್ದದಿಂದ ಜನ್ಯವಾದ ಯಥಾರ್ಥಜ್ಞಾನವು ಕಾರಣವಲ್ಲ. ಅಂತಹ ಗ್ರಂಥರಾಶಿ ವೇದ. ಈ ಎರಡು ಅಂಶಗಳಲ್ಲಿ ಮೊದಲನೆಯ ಅಂಶವು ಪೌರುಷೇಯತ್ವವಾದಿಗಳಾದ ನೈಯಾಯಿಕರು ಮತ್ತು ಅಪೌರುಷೇಯತ್ವವಾದಿಗಳಾದ ವೇದಾಂತಿಗಳು ಇಬ್ಬರಿಗೂ ಅವಿಪ್ರತಿಪನ್ನವಾದುದು. ಎರಡನೆಯ ಅಂಶದ ಸಮನ್ವಯ ನೈಯಾಯಿಕರ ಮತದಂತೆ ಹೀಗೆ—ಅವರು ವೇದವನ್ನು ಅರ್ಥಜ್ಞಾನಪೂರ್ವಕವಾಗಿ ಈಶ್ವರನು ರಚಿಸಿದ್ದಾನೆ, ಎಂದು ಅಂಗೀಕರಿಸಿದರೂ ಈಶ್ವರನ ಜ್ಞಾನವು ನಿತ್ಯವಾದುದರಿಂದ ಅದು ಶಬ್ದಜನ್ಯವಲ್ಲ. ಆದರಿಂದಾಗಿ ಶಬ್ದಜನ್ಯ–ಜ್ಞಾನಾಜನ್ಯತ್ವವು ವೇದದಲ್ಲಿ ಬರುತ್ತದೆ. ಅಪೌರುಷೇಯತ್ವವಾದಿಗಳ ರೀತಿಯಲ್ಲಿ ವೇದವು ಜ್ಞಾನಜನ್ಯವೇ ಅಲ್ಲವಾದುದರಿಂದ ಅದರಲ್ಲಿ ಈ ಅಂಶವು ಸಮನ್ವಯವಾಗುತ್ತದೆ. ಹೀಗೆ ಈ ಪರಿಷ್ಕಾರವು ನೈಯಾಯಿಕ–ವೇದಾಂತಿ ಉಭಯಸಮ್ಮತ. ಇದು ಮಣಿಕಾರ ಮಾಡಿರುವ ಪರಿಷ್ಕಾರ.

2. ಸುಧಾದಲ್ಲಿ ವೇದಸ್ವರೂಪವನ್ನು 'ಕ್ರಮವಿಶೇಷವಿಶಿಷ್ಟಾ ವರ್ಣಾಃ ವೇದಾಃ' ಎಂದು ಹೇಳಲಾಗಿದೆ. ಇದರ ಅಭಿಪ್ರಾಯ—ಭಾರತಾದಿಗಳ ವಾಕ್ಯಕ್ರಮ, ವರ್ಣಕ್ರಮಗಳು ಬೇರೆ. ವೈದಿಕ ವಾಕ್ಯ ಮತ್ತು ವರ್ಣಗಳ ಕ್ರಮವು ಬೇರೆ. ತಾದೃಶಕ್ರಮವಿಶೇಷದಿಂದ ವಿಶಿಷ್ಟ ವರ್ಣಗಳೇ ವೇದಗಳು.

3. ಅಥವಾ, ಮುಂದೆ ಹೇಳುವಂತೆ ನೇರವಾಗಿ ಧರ್ಮಾಧರ್ಮಗಳನ್ನು ತಿಳಿಸಿಕೊಡುವ ವಾಕ್ಯಗಳೇ ವೇದಗಳು. ಸ್ಮೃತಿಗಳು ವೇದೋಕ್ತಧರ್ಮಗಳನ್ನು ತಿಳಿಸುತ್ತದೆ. ಆದರೆ, ವೇದವು ತಾನೇ ಸಾಕ್ಷಾತ್ ಧರ್ಮವನ್ನು ತಿಳಿಸುತ್ತದೆ.

4. ಅಥವಾ, ಯಾವ ಗ್ರಂಥಕ್ಕೆ ಪ್ರಮಾಕರಣವು ಆಧಾರವಲ್ಲವೋ ಹಾಗೂ ಅದು ಪ್ರಮಾಣವೂ ಆಗಿದೆಯೋ, ಅದೇ ವೇದ. ನೈಯಾಯಿಕರ ಮತದಂತೆ ವೇದಕ್ಕೆ ಈಶ್ವರನ ಪ್ರತ್ಯಕ್ಷವು ಮೂಲವಾದರೂ ಆ ಪ್ರತ್ಯಕ್ಷವು ನಿತ್ಯವಾದುದರಿಂದ ಅದಕ್ಕೆ ಒಂದು ಕರಣವಿಲ್ಲ. ಆದ್ದರಿಂದ ಅವರಿಗೂ ಈ ಲಕ್ಷಣವು ಸಮ್ಮತ.

5. ಅಥವಾ, ಪೂರ್ವಮೀಮಾಂಸದಲ್ಲಿ ಮಂತ್ರದ ಲಕ್ಷಣವನ್ನು 'ಮಂತ್ರ ಇತಿ ಅಭಿಯುಕ್ತ ಪ್ರಯೋಗ–ವಿಷಯತ್ವಮ್' ಎಂದು ಹೇಳಲಾಗಿದೆ. ಇದರಂತೆ, 'ವೇದ ಇತಿ ಅಭಿಯುಕ್ತ ಪ್ರಯೋಗವಿಷಯತ್ವಂ' ಎಂದೇ ವೇದದ ಲಕ್ಷಣ.

## ನ್ಯಾಯದೀಪ–ಕೃತ್ಯವಿಚಾರ

**आद्ये सत्यन्तमात्रस्य वेदसमानार्थस्मृतौ गतत्वाद् विशेष्यम् । वेदार्थस्य शब्दतदुपजीव्यनुमानविषयत्वादसम्भववारणाय शब्दतदुपजीविप्रमाणातिरिक्तेत्युक्तिरिति ।**

ಮೊದಲನೆಯ ವೇದಲಕ್ಷಣದಲ್ಲಿ ಸತ್ಯಂತವನ್ನು ಮಾತ್ರ ಕೊಟ್ಟರೆ ವೇದದ ಸಮಾನಾರ್ಥಕವಾದ ಸ್ಮೃತಿಯಲ್ಲಿ ಅತಿವ್ಯಾಪ್ತಿ. ಆ ಸ್ಮೃತಿಗೂ ವೇದ ಅಥವಾ ತದಾಧಾರಿತಪ್ರಮಾಣಗಳೇ ಮೂಲ. ಅದರ ಪರಿಹಾರಕ್ಕಾಗಿ ವಿಶೇಷ್ಯಭಾಗವನ್ನು ಸೇರಿಸಬೇಕು. ಆ ಅಂಶ ಸ್ಮೃತಿಯಲ್ಲಿ ಇಲ್ಲ. ಸ್ಮೃತಿಗೆ ವೇದರೂಪವಾದ ಶಬ್ದಜನ್ಯವಾದ ಋಷಿಗಳ ಯಥಾರ್ಥಜ್ಞಾನವು ಜನಕವಾಗಿದೆ. ತಜ್ಜನ್ಯವೇ ಆಗಿದೆ ಸ್ಮೃತಿ. ಆದ್ದರಿಂದ ಅದರಲ್ಲಿ ಅತಿವ್ಯಾಪ್ತಿ ಇಲ್ಲ. ಸತ್ಯಂತದಲ್ಲಿ 'ಶಬ್ದಾತಿರಿಕ್ತ–ಪ್ರಮಾಣ–ಜನ್ಯ ಪ್ರಮಿತ್ಯವಿಷಯಾರ್ಥಕತ್ವಂ' ಎಂದಿಷ್ಟೇ ಹೇಳಿದರೆ ಅಸಂಭವ. ವೇದಾರ್ಥವು ಶಬ್ದಾತಿರಿಕ್ತವಾದ, ಶಬ್ದಮೂಲವಾದ ಅನುಮಾನದಿಂದಲೂ ಗಮ್ಯವಾಗಿದೆ. ಅದರ ಪರಿಹಾರಕ್ಕಾಗಿ 'ತದುಪಜೀವಿ' ಎಂಬ ವಿಶೇಷಣವನ್ನು ಸೇರಿಸಲಾಗಿದೆ. ಆಗ ಅಸಂಭವ ಇಲ್ಲ.

## ನ್ಯಾಯದೀಪ

**तात्पर्यं च तत्प्रमितिशेषत्वमित्यग्रे व्यक्तम् । तद्विषयो ज्योतिष्टोमादिरित्यर्थः । साध्ये बाधवारणाय पौरुषेयेत्युक्तिः । स्वतन्त्रपुरुष-**

**पूर्वकशब्देत्यर्थः । पौरुषेयेतरेत्येवोक्तौ यत्किञ्चित्प्रत्यक्षादिरूपपौरुषेयेतरप्रमाणकत्वेनाप्युपपत्तेः । पौरुषेयशब्दसिध्याऽर्थान्तरवारणाय शब्दपदम् । पौरुषेयशब्दार्थे व्यभिचारनिरासाय हेतौ सत्यन्तम् । अप्रयोजकतानिरासाय विशेष्यम् ।**

'ವೇದತಾತ್ಪರ್ಯವಿಷಯಃ' ಎಂದು ಅನುಮಾನದ ದ್ವಿತೀಯಪಕ್ಷ. ತಾತ್ಪರ್ಯವೆಂದರೆ 'ತತ್‌ಪ್ರಮಿತಿಶೇಷತ್ವಂ' ಎಂದು ಇದೇ ಪ್ರಕರಣದಲ್ಲಿ ಮುಂದೆ (ಪು.131) ಹೇಳಲಾಗುವುದು. 'ಶೇಷಃ ಪರಾರ್ಥತ್ವಾತ್' ಎಂಬ ಜೈಮಿನಿ ಸೂತ್ರದಂತೆ 'ತತ್‌ಪ್ರಮಿತ್ಯೇಕೋದ್ದೇಶ್ಯತ್ವಂ' ಎಂದು ಅರ್ಥ. ಅಂತಹ ತಾತ್ಪರ್ಯಕ್ಕೆ ವಿಷಯವಾದುದು–ಜ್ಯೋತಿಷ್ಟೋಮಾದಿಕರ್ಮಗಳಿಗೆ ಸ್ವರ್ಗಸಾಧನತ್ವ.

ಸಾಧ್ಯದಲ್ಲಿ ಶಬ್ದೇತರಪ್ರಮಾಣಕಃ ಎಂದಿಷ್ಟೇ ಇದ್ದರೆ, ಬಾಧ. ಸ್ವರ್ಗಸಾಧನತ್ವಕ್ಕೆ ಶಬ್ದೇತರಪ್ರಮಾಣಗಳು ಇಲ್ಲ. ಆದಕ್ಕಾಗಿ ಪೌರುಷೇಯ ಎಂಬ ವಿಶೇಷಣವನ್ನು ಶಬ್ದಕ್ಕೆ ಕೊಡಲಾಗಿದೆ. ಆಗ ಸ್ವರ್ಗಸಾಧನತ್ವವು ಅಪೌರುಷೇಯ ಶಬ್ದಪ್ರಮಾಣಕವಾದುದರಿಂದ ಬಾಧಪರಿಹಾರವಾಗುತ್ತದೆ. ಶಬ್ದಪದವನ್ನು ಬಿಟ್ಟರೆ ಅರ್ಥಾಂತರದೋಷ ಬರಬಹುದು. ಪೌರುಷೇಯ ಪ್ರಮಾಣವೆಂದರೆ ಪ್ರತ್ಯಕ್ಷ. ತದಿತರಪ್ರಮಾಣ ಪೌರುಷೇಯ ಆಗಮ. ತತ್‌ಪ್ರಮಾಣಕವೆಂದು ಅಂಗೀಕರಿಸಿಯೂ ಸಾಧ್ಯವನ್ನು ಪರ್ಯವಸಾನಗೊಳಿಸಬಹುದು. ಆದರ ಪರಿಹಾರಕ್ಕಾಗಿ 'ಪೌರುಷೇಯ ಶಬ್ದ' ಎಂದು ಹೇಳಲಾಗಿದೆ. ಪೌರುಷೇಯ–ಶಬ್ದೇತರ–ಪ್ರಮಾಣವೆಂದರೆ ಪೌರುಷೇಯಾಗಮವು ಆಗುವುದಿಲ್ಲ. ಆದ್ದರಿಂದ ಅಪೌರುಷೇಯವೇದವೇ ಆಗಬೇಕು.

**ಹೇತು**—ಪೌರುಷೇಯ ಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವಂ, ಎಂದು. ಇಲ್ಲಿ ವಿಶೇಷ್ಯಾಂಶವನ್ನು ಮಾತ್ರ ಹೇತು ಮಾಡಿದರೆ ಪೌರುಷೇಯಶಬ್ದಪ್ರಮಾಣವಾಗಿರುವ ಅರ್ಥದಲ್ಲಿ ಹೇತು ಬರುತ್ತದೆ, ಸಾಧ್ಯ ಇಲ್ಲ. ಆದರ ಪರಿಹಾರಕ್ಕಾಗಿ ಸತ್ಯಂತ ಬೇಕು. ಸತ್ಯಂತವನ್ನು ಮಾತ್ರವೇ ಹೇತು ಮಾಡಿದರೆ ನಿಷ್ಪ್ರಮಾಣಕತ್ವೇನಾಪಿ ಉಪಪತ್ತ್ಯಾ ಹೇತು ಸಾಧ್ಯಸಾಧನೆಗೆ ಪ್ರಯೋಜಕವಾಗುವುದಿಲ್ಲ. ಆದರ ಪರಿಹಾರಕ್ಕಾಗಿ ವಿಶೇಷ್ಯಭಾಗಬೇಕು.

## ನ್ಯಾಯದೀಪ

**यथासंमतमिति ।** श्रोत्राद्यप्रमाणकत्वे सति सप्रमाणकं रूपं श्रोत्रादीतरचक्षुःप्रमाणकमित्यर्थः ।

ननु प्रत्यक्षादिप्रमाणकत्वेनापि साध्योपपत्त्याऽर्थान्तरमित्यत आह–

**वक्ष्यमाणेति ।** ''नचात्र हेतुत्रयेऽपि विशेषणासिद्धिः'' इत्यादौ वक्ष्यमाणदिशा प्रत्यक्षानुमानावेद्ये पक्षे उक्तरूपसप्रमाणकत्वाख्यहेतोः पक्षनिष्ठताया अपौरुषेयप्रमाणकत्वेन विना पर्यवसानाभावादिति भावः ।।

ಯಥಾ ಸಮ್ಮತಂ, ಎಂದು ದೃಷ್ಟಾಂತ. ಉಭಯ ಸಮ್ಮತವಾದ ರೂಪವು ದೃಷ್ಟಾಂತ. ಅದು ಶ್ರೋತ್ರಾದ್ಯಪ್ರಮಾಣಕವಾಗಿದ್ದು ಸಪ್ರಮಾಣಕವಾಗಿದೆ. ಆದ್ದರಿಂದ ಶ್ರೋತ್ರಾದೀತರ–ಚಕ್ಷುಃ ಪ್ರಮಾಣಕವಾಗಿದೆ, ಎಂದು ಹೇತು–ಸಾಧ್ಯಸಮನ್ವಯ.

ಸ್ವರ್ಗಸಾಧನತ್ವವು ಪೌರುಷೇಯಶಬ್ದೇತರವಾದ ಚಕ್ಷುಃಪ್ರಮಾಣಕವೆಂದು ಅಂಗೀಕರಿಸಿಯೂ ಸಾಧ್ಯವನ್ನು ಪರ್ಯವಸಾನಮಾಡುವುದು ಸಾಧ್ಯವಿಲ್ಲವೆಂದು—ವಕ್ಷ್ಯಮಾಣದಿಶಾ–ಎಂಬ ವಾಕ್ಯದಲ್ಲಿ ತಿಳಿಸಲಾಗಿದೆ. 'ನ ಚಾತ್ರ' ಎಂದು ಮುಂದೆ ಹೇಳುವಂತೆ(ಪು.18) ಪ್ರತ್ಯಕ್ಷಾದಿಪ್ರಮಾಣಗಳಿಂದ ವೈದಿಕಾರ್ಥಗಳನ್ನು ತಿಳಿಯಲಾಗುವುದಿಲ್ಲ. ಅಂತಹ ಅರ್ಥದಲ್ಲಿ ಪೌರುಷೇಯಶಬ್ದವೂ ಪ್ರಮಾಣವಲ್ಲವೆಂದಾದಲ್ಲಿ ಸಪ್ರಮಾಣಕತ್ವರೂಪಹೇತ್ವಂಶವು ಪಕ್ಷದಲ್ಲಿ ಇರಲು ಸಾಧ್ಯವಿಲ್ಲ. ಹೀಗಾಗಿ ವೇದರೂಪ ಅಪೌರುಷೇಯ ಪ್ರಮಾಣದಿಂದಲೇ ಅದು ವೇದ್ಯ ಎಂದು ಅಂಗೀಕರಿಸುವುದು ಅನಿವಾರ್ಯವಾಗುತ್ತದೆ.

## ಅವತಾರಿಕೆ

**ननु पक्षधर्मताबलादपि साध्यं सिध्यत् व्यापकतावच्छेदकधर्म-प्रकारेणैव सिध्यति नत्वन्यथा । अतिप्रसङ्गादसामर्थ्याच्च । अन्यथा प्रामाण्याभावसाध्यक–मण्युक्तव्यतिरेकिखण्डनायोगादिति वदन्तं प्रत्याह —अपौरुषेयेति ।।**

ಈ ಅನುಮಾನದಿಂದ ವೇದಾರ್ಥವು ಪೌರುಷೇಯಶಬ್ದೇತರಪ್ರಮಾಣಕ, ಎಂದಿಷ್ಟೇ ಸಿದ್ಧವಾಗುತ್ತದೆ. ಅಪೌರುಷೇಯತ್ವವು ವ್ಯಾಪಕತಾವಚ್ಛೇದಕತಯಾ ಗೃಹೀತವಲ್ಲ. ಆದ್ದರಿಂದ ತದವಚ್ಛಿನ್ನ ಸಾಧ್ಯವು ಸಿದ್ಧವಾಗುವುದಿಲ್ಲ. ಒಂದುವೇಳೆ, ವ್ಯಾಪಕತಾವಚ್ಛೇದಕಾನವಚ್ಛಿನ್ನವಾದ ಸಾಧ್ಯವೂ ಸಿದ್ಧವಾಗುವುದಾದಲ್ಲಿ ಧೂಮದಿಂದ ದ್ರವ್ಯತ್ವೇನ ವಹ್ನಿಯು ಸಿದ್ಧವಾದೀತು; ಹೇತುವಿಗೆ ಅಂತಹ ಸಾಧ್ಯವನ್ನು ಸಾಧನೆ ಮಾಡುವ ಸಾಮರ್ಥ್ಯವೂ ಇಲ್ಲ. ಅದನ್ನು ಪ್ರಾಮಾಣ್ಯಸ್ವತಸ್ತ್ವ ಪ್ರಕರಣದಲ್ಲಿ ವ್ಯಾಸರಾಜರೇ ತಾರ್ಕಿಕರನ್ನು ಕುರಿತು ಹೇಳಿದ್ದಾರೆ—ಪ್ರಥಮ ಪ್ರಾಮಾಣ್ಯಸಾಧನೆ

ಹೇಗೆ? ಎನ್ನುವ ಪ್ರಶ್ನೆಗೆ ತಾರ್ಕಿಕರು, ಅಪ್ರಾಮಾಣ್ಯಾಭಾವಸಾಧಕ ಕೇವಲ ವ್ಯತಿರೇಕ್ಯನುಮಾನವನ್ನು ಹೇಳಿದಾಗ 'ವ್ಯಾಪ್ತ್ಯಾ ವ್ಯಾಪಕತಾವಚ್ಛೇದಕಾವಚ್ಛಿನ್ನತ್ವೇನ ಉಪಸ್ಥಾಪಿತಸ್ಯ ಅಪೂರ್ವಸ್ಯ ವ್ಯಕ್ತಿವಿಶೇಷಸ್ಯೈವ ಪಕ್ಷಧರ್ಮತಯಾ ಪಕ್ಷಸಂಬಂಧಸಿದ್ಧ್ಯಾ ತಥಾನುಪಸ್ಥಿತಸ್ಯ ಉಕ್ತರೂಪ ಪ್ರಾಮಾಣ್ಯಸ್ಯ ಪಕ್ಷಸಂಬಂಧಬೋಧನೇ ತಸ್ಯ ಅಸಾಮರ್ಥ್ಯಾತ್' (ಪ್ರಾಮಾಣ್ಯವಾದ ಪು.427) ಎಂದು. ಹೀಗೆ ಅಪೌರುಷೇಯ ವೇದವು ಈ ಅನುಮಾನದಿಂದ ಸಿದ್ಧವಾಗುವುದಿಲ್ಲ, ಎಂದು ಆಕ್ಷೇಪಿಸುವರಿಗೆ ಅಪೌರುಷೇಯತ್ವವನ್ನೇ ಸಾಧಿಸುವ ಅನುಮಾನಾಂತರವನ್ನು ಹೇಳಲಾಗಿದೆ.

## ಅನುಮಾನ-2

**अपौरुषेयशब्दप्रमाणकत्वं वा साध्यम् । तत्र चेन्द्रियलिङ्गपौरुषेयशब्दाप्रमाणकत्वे सति सप्रमाणकत्वं हेतुः । पूर्ववत्सामान्यव्याप्तिः।**

**अप्रसिद्धविशेषणता तु व्याप्तौ सत्यां न दोषः। त्वन्मते अभावसाध्यके व्यतिरेकिणि हेत्वभावेन साध्याभावरूपस्य भावस्य व्याप्तिग्रहरूपानुमितिकरणस्येव इहापि साध्यप्रसिद्धिं विनैव सामान्यव्याप्तिग्रहरूपस्यानुमितिकरणस्य निष्पन्नत्वात् ।**

**नच तन्निष्पत्तावपि विशेषणज्ञानरूपसहकारिविरहादनुमितिरूपविशिष्टज्ञानानुत्पत्तिरिति वाच्यम् । मन्मते तस्य विशिष्टज्ञानाहेतुत्वात् । त्वन्मतेऽप्यभावसाध्यकव्यतिरेकिणीवात्राप्यादौ साध्यविशेष्यकाया एवानुमितेः सम्भवात् ।।**

ಅಥವಾ, ಸಾಧ್ಯದಲ್ಲಿ ಅಪೌರುಷೇಯತ್ವವನ್ನು ಸೇರಿಸಿ 'ಜ್ಯೋತಿಷ್ಟೋಮಕ್ಕೆ ಸ್ವರ್ಗಸಾಧನತ್ವವು, ಅಪೌರುಷೇಯಶಬ್ದಪ್ರಮಾಣಸಿದ್ಧವಾಗಿದೆ' ಎಂದೇ ಪಕ್ಷ-ಸಾಧ್ಯನಿರ್ದೇಶ. ಇಂದ್ರಿಯ-ಲಿಂಗ-ಪೌರುಷೇಯಶಬ್ದಗಳು ಅದಕ್ಕೆ ಪ್ರಮಾಣವಲ್ಲ. ಆದರೆ, ಅದು ಪ್ರಮಾಣಸಿದ್ಧವಾಗಿದೆ, ಎಂದು ಹೇತು. ಯತ್‌ಯದಿತಾರಾಪ್ರಮಾಣಕತ್ವೇ ಸತಿ ಸಪ್ರಮಾಣಕಂ, ತತ್ ತತ್-ಪ್ರಮಾಣಕಂ ಎಂದು ಸಾಮಾನ್ಯವ್ಯಾಪ್ತಿ.

ಈ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತಾ ದೋಷಕ್ಕೆ ಅವಕಾಶವಿದೆ. ಏಕೆಂದರೆ, ನೈಯಾಯಿಕರು ಅಪೌರುಷೇಯ ವಾಕ್ಯವನ್ನೆ ಒಪ್ಪಿಲ್ಲ. ಆದರೂ ಹೇತುವಿನಲ್ಲಿ ಸಾಧ್ಯದ ವ್ಯಾಪ್ತಿ ಇದ್ದಲ್ಲಿ ಅಪ್ರಸಿದ್ಧವಿಶೇಷಣತಾ ದೋಷವೇ ಅಲ್ಲ. ತಾರ್ಕಿಕರು ಅಭಾವಸಾಧ್ಯಕ-

ಕೇವಲವ್ಯತಿರೇಕ್ಯನುಮಾನದಲ್ಲಿ ಸಾಧ್ಯವು ಅಪ್ರಸಿದ್ಧವಾದರೂ ಸಾಧ್ಯಾವವು ಭಾವರೂಪವಾದುದ ರಿಂದ ಸಾಧ್ಯಜ್ಞಾನವಿಲ್ಲದಿದ್ದರೂ ಸಾಧ್ಯಾಭಾವದಲ್ಲಿ ಹೇತ್ವಭಾವನಿರೂಪಿತವಾದ ವ್ಯಾಪ್ತಿಜ್ಞಾನ ಬರುತ್ತದೆ, ಎಂದು ಹೇಳುತ್ತಾರೆ. ಅದರಂತೆ, ಪ್ರಕೃತದಲ್ಲೂ ಸಾಧ್ಯಜ್ಞಾನವಿಲ್ಲದಿದ್ದರೂ ಸಾಮಾನ್ಯ ವ್ಯಾಪ್ತಿಜ್ಞಾನವು ಬರಬಹುದು. ಆದ್ದರಿಂದ ಸಾಧ್ಯಾಪ್ರಸಿದ್ಧಿಯು ವ್ಯಾಪ್ತಿಜ್ಞಾನವಿಘಟಕವಲ್ಲ.

ವ್ಯಾಪ್ತಿಜ್ಞಾನವೇನೋ ಬರಬಹುದು. ಆದರೆ, ಅನುಮಿತಿಯು ಬರುವುದಿಲ್ಲ. ಅನುಮಿತಿ ಸಾಧ್ಯವಿಶಿಷ್ಟಪಕ್ಷಜ್ಞಾನರೂಪವಾದುದು. ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನ ಕಾರಣ. ಸಾಧ್ಯವು ಪಕ್ಷದಲ್ಲಿ ವಿಶೇಷಣ. ಸಾಧ್ಯವು ಅಪ್ರಸಿದ್ಧವಾದರೆ ವಿಶೇಷಣಜ್ಞಾನವು ಇಲ್ಲದಿರುವುದರಿಂದ ವಿಶಿಷ್ಟಜ್ಞಾನಾತ್ಮಕ-ಅನುಮಿತಿಯು ಬರುವುದಿಲ್ಲ. ಹೀಗೆ ನೈಯಾಯಿಕರು ಆಕ್ಷೇಪಿಸಬೇಕು. ಆದರೆ, ನಮ್ಮ ಸಿದ್ಧಾಂತದಲ್ಲಿ ವಿಶೇಷಣಜ್ಞಾನವು ಕಾರಣವೇ ಅಲ್ಲ. ನೈಯಾಯಿಕರು, ವಿಶೇಷಣಜ್ಞಾನವು ಕಾರಣ ಎಂದು ಹೇಳಿದರೂ ಕೇವಲವ್ಯತಿರೇಕಿಸಾಧ್ಯಕವಾದ ಅನುಮಾನದಲ್ಲಿ ಸಾಧ್ಯವು ಅಪ್ರಸಿದ್ಧವಾದುದರಿಂದ ಸಾಧ್ಯವಿಶೇಷ್ಯಕವಾದ 'ಪಕ್ಷೇ ಸಾಧ್ಯಮ್' ಎಂಬ ಅನುಮಿತಿಯನ್ನು ಅಂಗೀಕರಿಸುತ್ತಾರೆ. ಅದರಂತೆ, ಪ್ರಕೃತಾನುಮಾನದಲ್ಲೂ ವಿಶೇಷ್ಯವಾದ ಸಾಧ್ಯದಜ್ಞಾನ ಇಲ್ಲದೆಯೂ ಆ ರೀತಿಯ ಅನುಮಿತಿ ಬರಬಹುದು.

## ನ್ಯಾಯದೀಪ

नन्वेवं प्रागुक्तहेतोरिन्द्रियलिङ्गविषये व्यभिचार इत्यत आह—**तत्र चेति ।** उक्तरूपसाध्य इत्यर्थः । पूर्वत्रात्र च विशेषणासिद्धिनिरासाय पौरुषेयेत्युक्तिः। "आश्रय-साध्य-व्यधिकरणासिद्धयो न दूषणम्" इत्यादिप्रमाणलक्षणं हृदि कृत्वाह—**न दोष इति ।।**

सा किं साध्याज्ञाने तन्निरूपितव्याप्तिग्रहायोगाद् व्याप्तिज्ञानरूप-करणविघटकत्वेन दोष उत विशिष्टज्ञाने विशेषणज्ञानस्य कारणत्वे-नानुमितिरूपविशिष्टज्ञानानुत्पादकत्वेन । नाद्य इत्याह—**त्वन्मत इति ।** अयं वह्नित्वेनानुभवो, वह्नित्वप्रकारकत्वे सति वह्नित्वाभाव-वद्विशेष्यको न, समर्थप्रवृत्तिजनकत्वादिति व्यतिरेकिणीत्यर्थः । उक्तमेतत्पूर्वं परतस्त्वे प्रामाण्यानुमित्यसम्भववादे ।।

ಎರಡನೆಯ ಅನುಮಾನದಲ್ಲಿ ಮೊದಲ ಅನುಮಾನದ ಹೇತುವೇ ಹೇತುವಾದರೆ,

ಇಂದ್ರಿಯವಿಷಯವಾದ ವಸ್ತುವಿನಲ್ಲಿ ಹಾಗೂ ಅನುಮಾನಗಮ್ಯದಲ್ಲಿ ವ್ಯಭಿಚಾರ ಬರುತ್ತದೆ. ಅವುಗಳಲ್ಲೂ ಪೌರುಷೇಯ–ಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವರೂಪ ಹೇತು ಇದೆ. ಅಪೌರುಷೇಯಶಬ್ದ ಪ್ರಮಾಣಕತ್ವರೂಪ ಸಾಧ್ಯವಿಲ್ಲ. ಆದ್ದರಿಂದ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಹೇತುವನ್ನೂ ಬದಲಿಸಲಾಗಿದೆ.

ಹಿಂದಿನ ಅನುಮಾನದಲ್ಲಿ ಮತ್ತು ಈ ಅನುಮಾನದಲ್ಲಿ ಪೌರುಷೇಯ ಎಂದು ಹೇತುವಿನಲ್ಲಿ ವಿಶೇಷಣವನ್ನು ಬಿಟ್ಟರೆ ಅಸಿದ್ಧಿದೋಷ ಬರುತ್ತದೆ. ಮೊದಲ ಅನುಮಾನದಲ್ಲಿ 'ಅಪ್ರಮಾಣಕತ್ವೇ ಸತಿ' ಎಂಬ ಹೇತುವಿನ ಸತ್ಯಂತವು ಸ್ವರ್ಗಸಾಧನತ್ವರೂಪಪಕ್ಷದಲ್ಲಿ ಇಲ್ಲ. ಪ್ರಕೃತಾನುಮಾನದ ಸತ್ಯಂತ ಶಬ್ದಾಪ್ರಮಾಣಕತ್ವೇ ಸತಿ, ಎಂದಾಗುತ್ತದೆ. ಅದೂ ಪಕ್ಷದಲ್ಲಿ ಇಲ್ಲ. ಅಸಿದ್ಧಿ ಬರುತ್ತದೆ. ಅದರ ಪರಿಹಾರಕ್ಕಾಗಿ 'ಪೌರುಷೇಯ' ಎಂಬ ವಿಶೇಷಣಬೇಕು.

ಪ್ರಮಾಣಲಕ್ಷಣದಲ್ಲಿ ಆಶ್ರಯಾಸಿದ್ಧಿ, ಸಾಧ್ಯಾಪ್ರಸಿದ್ಧಿ ವ್ಯಧಿಕರಣಾಸಿದ್ಧಿಗಳು ದೋಷಗಳಲ್ಲ, ಎನ್ನಲಾಗಿದೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಮೂಲದಲ್ಲಿ 'ನ ದೋಷಃ' ಎಂದು ಸಾಧ್ಯಾಪ್ರಸಿದ್ಧಿ ದೋಷವಲ್ಲ ಎನ್ನಲಾಗಿದೆ. ಸಾಧ್ಯಾಪ್ರಸಿದ್ಧಿಯು ಎರಡು ವಿಧದಿಂದ ದೋಷವಾಗುವ ಸಂಭವವಿದೆ.

1. ಸಾಧ್ಯವು ಅಪ್ರಸಿದ್ಧವಾದರೆ, ಸಾಧ್ಯಜ್ಞಾನವು ಇಲ್ಲವಾದುದರಿಂದ ತನ್ನಿರೂಪಿತ–ವ್ಯಾಪ್ತಿಜ್ಞಾನವು ಹೇತುವಿನಲ್ಲಿ ಬರುವುದಿಲ್ಲ. ಹೀಗೆ ಅನುಮಿತಿಕರಣವಾದ ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾದುದರಿಂದ ಸಾಧ್ಯಾಪ್ರಸಿದ್ಧಿದೋಷವಾಗಬೇಕು.

2. ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ. ಅನುಮಿತಿಯು ವಿಶಿಷ್ಟಜ್ಞಾನ. ಅದರಲ್ಲಿ ವಿಶೇಷಣವಾದುದು ಸಾಧ್ಯ. ಅದರ ಜ್ಞಾನವು ಇಲ್ಲದಿದ್ದರೆ ಅನುಮಿತಿಯೇ ಬರುವುದಿಲ್ಲ. ಹೀಗೆ, ಅನುಮಿತಿ ಪ್ರತಿಬಂಧಕವಾದುದರಿಂದ ಸಾಧ್ಯಾಪ್ರಸಿದ್ಧಿಯು ದೋಷವಾಗಬೇಕು.

ಈ ಎರಡರಲ್ಲಿ ಮೊದಲನೆಯ ತೊಂದರೆ ಇಲ್ಲ, ಎಂದು 'ತ್ವನ್ಮತೇ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ತಾರ್ಕಿಕರು ಹೇಳುವ ಕೇವಲವ್ಯತಿರೇಕ್ಯನುಮಾನ ಹೀಗಿದೆ—

**ಪಕ್ಷ**— ಅಯಂ ವಹ್ನಿತ್ವೇನ ಅನುಭವಃ ।

**ಸಾಧ್ಯ**— ವಹ್ನಿತ್ವಪ್ರಕಾರತ್ವೇ ಸತಿ ವಹ್ನಿತ್ವಾಭಾವವದ್ವಿಶೇಷ್ಯಕೋ ನ ।

**ಹೇತು**— ಸಫಲಪ್ರವೃತ್ತಿ ಜನಕತ್ವಾತ್ ।

ಈ ಅನುಮಾನದಿಂದ ವಹ್ನಿಜ್ಞಾನದಲ್ಲಿ ಅಪ್ರಾಮಾಣ್ಯ ಇಲ್ಲ, ಎಂದು ಸಾಧಿಸಲಾಗಿದೆ. ಇದು ನೈಯಾಯಿಕರು ಮಾಡಿರುವ ಕೇವಲ ವ್ಯತಿರೇಕ್ಯನುಮಾನ. ಇದರಲ್ಲಿ ಅಭಾವವು ಸಾಧ್ಯ. ಸಾಧ್ಯಾಭಾವವು ಭಾವರೂಪವಾದ ಕಾರಣ ಸಾಧ್ಯವು ಅಪ್ರಸಿದ್ಧವಾದರೂ ಇಲ್ಲಿ ವ್ಯತಿರೇಕವ್ಯಾಪ್ತಿ ಜ್ಞಾನವು ಬರುತ್ತದೆ. ಇದನ್ನು ಹಿಂದೆ ಪ್ರಾಮಾಣ್ಯವಾದದಲ್ಲಿ ಪ್ರಾಮಾಣ್ಯಾನುಮಿತ್ಯಸಂಭವ ಪ್ರಕರಣದಲ್ಲಿ (ಪು.427) ಹೇಳಲಾಗಿದೆ.

## न्यायदीप

द्वितीयमाशङ्क्य निराह—**नचेति ।** **तस्येति ।** विशेषणज्ञानस्येत्यर्थः । उपपादयिष्यते चैतन्निर्विकल्पकभङ्ग इति भावः । परमतेप्यनुमित्युत्पादप्रकारमाह—**त्वन्मतेऽपीति ।** विशेषणज्ञानहेतुकत्वमतेऽपीत्यर्थः । **अभावसाध्यकेति ।** प्रागुक्तव्यतिरेकिणीत्यर्थः । मणिकृता ज्ञप्तिप्रामाण्यवादे "विशेषणज्ञानं विना कथं प्रामाण्यविशिष्टानुमितिरिति चेत् । प्रथमं न कथश्चित् । ज्ञाने प्रामाण्यमित्यनुमित्यनन्तरं तेनैव तत्र प्रामाण्याविशिष्टानुमितिः । अभावविशेष्यकप्रतीत्यनन्तरमभाववद्भूतलमिति ज्ञानवत्" इत्युक्तेरिति भावः ।

ಎರಡನೆಯ ಪಕ್ಷವೂ ಸರಿಯಲ್ಲ, ಎಂದು 'ನಚ' ಎಂಬ ವಾಕ್ಯದಲ್ಲಿ ಸಾಧಿಸಲಾಗಿದೆ. ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣವಲ್ಲವೆಂದು, ನಿರ್ವಿಕಲ್ಪಕಭಂಗದಲ್ಲಿ ಹೇಳಲಾಗುವುದು. ನ್ಯಾಯಮತದಲ್ಲೂ ಸಾಧ್ಯಜ್ಞಾನದ ಅಗತ್ಯವಿಲ್ಲ ಎಂದು 'ತ್ವನ್ಮತೇ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಹಿಂದೆ ಹೇಳಿದ ವ್ಯತಿರೇಕ್ಯನುಮಾನದಲ್ಲಿ ಸಾಧ್ಯಜ್ಞಾನವಿಲ್ಲದೆಯೂ ಸಾಧ್ಯವಿಶೇಷಣಕಾನುಮಿತಿಯು ಹುಟ್ಟುತ್ತದೆ ಎಂದು ಮಣಿಕಾರನೇ ಹೇಳಿದ್ದಾನೆ. (ಪು.268) 'ವಿಶೇಷಣವಾದ ಪ್ರಾಮಾಣ್ಯದ ಜ್ಞಾನವು ಇಲ್ಲವಾದುದರಿಂದ 'ಇದಂ ಜ್ಞಾನಂ ಪ್ರಮಾಣಮ್' ಎಂಬ ಪ್ರಾಮಾಣ್ಯವಿಶಿಷ್ಟಾನುಮಿ ಹೇಗೆ ಬರುವುದು? ಪ್ರಥಮಪ್ರಾಮಾಣ್ಯಾನುಮಿತಿ ಹೀಗೆ ಬರುವುದು ಸಾಧ್ಯವಿಲ್ಲ. 'ಜ್ಞಾನೇ ಪ್ರಾಮಾಣ್ಯಮ್' ಎಂದು ಮೊದಲು ಪ್ರಾಮಾಣ್ಯವಿಶೇಷ್ಯಕಾನುಮಿತಿ ಬಂದು ಆಮೇಲೆ 'ಜ್ಞಾನಂ ಪ್ರಮಾಣಂ' ಎಂದು ಪ್ರಾಮಾಣ್ಯವಿಶೇಷಣಕಾನುಮಿತಿ ಬರುತ್ತದೆ. 'ಭೂತಲೇ ಘಟಃ ನಾಸ್ತಿ' ಎಂದು ಅಭಾವವಿಶೇಷ್ಯಕ–ಜ್ಞಾನ ಬಂದು ಆಮೇಲೆ ಘಟಾಭಾವವತ್ ಭೂತಲಮ್, ಎಂದು ಜ್ಞಾನ ಬರುವಂತೆ'[1] ಇದು ಮಣಿಕಾರನ ಸಿದ್ಧಾಂತ.

## ಅವತಾರಿಕೆ

अप्रसिद्धिदोषहीनं प्रयोगान्तरमाह—**यद्वा वेदत्वमिति ।**

---

1. ಅಭಾವಜ್ಞಾನವು ಪೂರ್ವದಲ್ಲಿ ಇಲ್ಲದಿರುವುದರಿಂದ 'ಘಟಾಭಾವವದ್ ಭೂತಲಮ್' ಎಂಬ ವಿಶಿಷ್ಟ ಜ್ಞಾನವು ಮೊದಲೇ ಬರುವುದಿಲ್ಲ.

ಹಿಂದಿನ ಅನುಮಾನದಲ್ಲಿ ಸಾಧ್ಯಾಪ್ರಸಿದ್ಧಿದೋಷಶಂಕೆಗೆ ಅವಕಾಶವಿದೆ. ಇಂತಹ ದೋಷರಹಿತವಾದ ಅನುಮಾನಾಂತರವನ್ನು 'ಯದ್ವಾ' ಎಂಬ ಮೂಲದಲ್ಲಿ ಹೇಳಲಾಗಿದೆ.

**ಅನುಮಾನ-३**

**यद्वा वेदत्वमपौरुषेयवृत्ति । तदितरावृत्तित्वे सति वृत्तिमत्वात् । यदेवं तदेवं । यथा संमतम् ।।**

ವೇದತ್ವ ಎಂಬ ಧರ್ಮವು ಅಪೌರುಷೇಯವಾದ ವಸ್ತುವಿನಲ್ಲಿ ಇದೆ. ಏಕೆಂದರೆ, ಅದು ಅಪೌರುಷೇಯವಲ್ಲದ ವಸ್ತುವಿನಲ್ಲಿ ಇಲ್ಲ. ಆದರೆ, ವೃತ್ತಿಮತ್ತಾದ ಧರ್ಮವಾಗಿದೆ. ಯಾವ ಧರ್ಮವು ತದಿತರದಲ್ಲಿ ಇಲ್ಲ ಹಾಗೂ ವೃತ್ತಿಮತ್ತಾಗಿರುವುದೋ ಆ ಧರ್ಮವು ತದ್‌ವೃತ್ತಿಯಾಗಿರುತ್ತದೆ. ಉದಾಹರಣೆಗೆ–ಘಟತ್ವ. ಅದು ಘಟೇತರದಲ್ಲಿ ಇಲ್ಲ. ಆದರೆ, ವೃತ್ತಿಮತ್ತಾಗಿದೆ. ಆದ್ದರಿಂದ ಘಟವೃತ್ತಿಯಾಗಿದೆ.

## ನ್ಯಾಯದೀಪ

**पक्षनिरुक्तिः पूर्ववत्साक्षाद्धर्मबोधकशब्दत्वादिरूपेण ध्येया । साध्यस्य गगनादिवृत्तित्वे बाधादपौरुषेयशब्दवृत्तित्वेनैव पर्यवसानमिति भावः । हेतौ तदित्यपौरुषेयपरामर्शः । सत्यन्तमात्रस्यावृत्तिमद्गगनादौ व्यभिचारनिरासाय विशेष्यम् । घटत्वादौ तन्निरासाय सत्यन्तम् ।।**

ಈ ಅನುಮಾನದಲ್ಲಿ ವೇದತ್ವವು ಪಕ್ಷ. ವೇದತ್ವವೆಂದರೆ ಏನೆಂದು ಹಿಂದೆ (ಪು.7) ಹೇಳಲಾಗಿದೆ—ಸಾಕ್ಷಾತ್ ಧರ್ಮಬೋಧಕವಾದ ಶಬ್ದವೇ ವೇದ, ಎಂದು. ಇಂತಹ ವೇದತ್ವವು ಅಪೌರುಷೇಯದಲ್ಲಿ ಇದೆ, ಎಂದು ಅನುಮಾನದಿಂದ ಸಾಧಿಸಲಾಗಿದೆ. ಅಪೌರುಷೇಯತಯಾ ಪ್ರಸಿದ್ಧವಾದುದು ಗಗನಾದಿ ನಿತ್ಯವಸ್ತುಗಳು. ಅವುಗಳಲ್ಲಿ ವೇದತ್ವವು ಇರಲು ಸಾಧ್ಯವಿಲ್ಲವಾದ ಕಾರಣ ಅಪೌರುಷೇಯ ವಾಕ್ಯಗಳಲ್ಲೇ ವೇದತ್ವವು ಇದೆ, ಎಂದು ಸಾಧ್ಯವನ್ನು ಪರ್ಯವಸಾನಮಾಡಬೇಕಾಗುತ್ತದೆ. ಇದರಿಂದ ವೇದಾಪೌರುಷೇಯತ್ವವು ಸಿದ್ಧವಾಗುತ್ತದೆ.

'ತದಿತರಾವೃತ್ತಿತ್ವೇ ಸತಿ' ಎಂಬ ಹೇತುವಿನಲ್ಲಿ ತತ್ ಎಂದರೆ 'ಅಪೌರುಷೇಯ' ಎಂದರ್ಥ. ವೇದತ್ವವು ಅಪೌರುಷೇಯೇತರವಾದ ಪೌರುಷೇಯವಾಕ್ಯದಲ್ಲಿ ಇಲ್ಲ, ಎಂದರ್ಥ. ಇಷ್ಟನ್ನು ಮಾತ್ರ ಹೇತು ಮಾಡಿದರೆ ಗಗನದಲ್ಲಿ ವ್ಯಭಿಚಾರದೋಷ ಬರುತ್ತದೆ. ಗಗನವು ಅವೃತ್ತಿಪದಾರ್ಥವಾದ

ಕಾರಣ, ಅಪೌರುಷೇಯೇತರಾವೃತ್ತಿಯಾಗಿದೆ, ಹೇತು ಬಂತು. ಆದರೆ, ಅಪೌರುಷೇಯ ವೃತ್ತಿತ್ವರೂಪ ಸಾಧ್ಯವು ಅದರಲ್ಲಿ ಇಲ್ಲ. ಅದರ ಪರಿಹಾರಕ್ಕಾಗಿ 'ವೃತ್ತಿಮತ್ವಾತ್' ಎಂಬ ವಿಶೇಷ್ಯಾಂಶವನ್ನು ಕೊಡಲಾಗಿದೆ.

ಈ ವಿಶೇಷ್ಯಾಂಶವನ್ನು ಮಾತ್ರ ಹೇತುಮಾಡಿದರೆ ಘಟತ್ವದಲ್ಲಿ ವ್ಯಭಿಚಾರ. ಘಟತ್ವವು ಘಟದಲ್ಲಿ ವೃತ್ತಿಮತ್ತಾಗಿದೆ. ಅದರಲ್ಲಿ ಅಪೌರುಷೇಯವೃತ್ತಿತ್ವ ಇಲ್ಲ. ತದಿತರಾವೃತ್ತಿತ್ವವನ್ನು ಕೊಟ್ಟಾಗ ವ್ಯಭಿಚಾರವು ಪರಿಹಾರವಾಗುತ್ತದೆ. ಏಕೆಂದರೆ, ಘಟತ್ವವು ಅಪೌರುಷೇಯೇತರವಾದ ಘಟದಲ್ಲಿ ವೃತ್ತಿಯಾಗಿದೆ.

## ನ್ಯಾಯದೀಪ

**नच सिद्धान्ते—**

**''एकत्राप्यनवस्थस्य सर्वत्रावस्थितिः कथम्''**

**इत्यादिना वैशेषिकनयानुव्याख्याने गगनादेर्वृत्तिमत्वोक्तेर्विशेष्यं व्यर्थमिति शङ्क्यम् । असति शशशृङ्गादौ स्वमते व्यभिचार-वारकत्वात् ।।**

ದ್ವೈತ ಸಿದ್ಧಾಂತದಲ್ಲಿ ಗಗನವೂ ಅವೃತ್ತಿಪದಾರ್ಥವಲ್ಲ. ''ಏಕತ್ರಾಪಿ'' ಎಂಬ ಅನುವ್ಯಾಖ್ಯಾನದಲ್ಲಿ 'ಒಂದೂ ಕಡೆ ಇಲ್ಲದ ವಸ್ತುವು ಎಲ್ಲಾ ಕಡೆ ಇರುವುದು ಹೇಗೆ?'' ಎಂದು ಪ್ರಶ್ನಿಸಿ ಗಗನವೂ ವೃತ್ತಿಮತ್ ಪದಾರ್ಥವೆಂದೇ ಹೇಳಲಾಗಿದೆ. ಆದ್ದರಿಂದ ಗಗನದಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಹೇತುವಿನಲ್ಲಿ ವಿಶೇಷ್ಯಾಂಶವು ವ್ಯರ್ಥ, ಎಂದು ಆಕ್ಷೇಪಿಸಬಾರದು. ದ್ವೈತದರ್ಶನದಂತೆ ಅಸತ್ಯವಾದ ಶಶಶೃಂಗದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ಆ ವಿಶೇಷಣವು ಸಾರ್ಥಕವಾಗಿದೆ.

## ನ್ಯಾಯದೀಪ

**वृत्तिमत्त्वं च समवायादिवृत्त्येति ज्ञेयम् । तेन जगदाधारताप्रयोजक-सम्बन्धेन 'इदानीं वेदत्वमिदानीं घटत्वम्' इत्यादिप्रतीत्या कालेऽपि वेदत्वादेर्वृत्तिमत्त्वेनार्थान्तरत्वं, हेतौ विशेष्यवैयर्थ्यमिति च शङ्कानव-काशः ।।**

ಸಾಧ್ಯದಲ್ಲಿ 'ಅಪೌರುಷೇಯವೃತ್ತಿತ್ವವು' ಸಮವಾಯಾದಿ ಸಂಬಂಧದಿಂದ ವಿವಕ್ಷಿತ. ಇಲ್ಲದಿದ್ದರೆ ಅರ್ಥಾಂತರತಾದೋಷ ಬರುತ್ತದೆ. ವೇದತ್ವವು ಅಪೌರುಷೇಯವಾದ ಕಾಲದಲ್ಲಿ ಕಾಲಿಕ ಸಂಬಂಧದಿಂದ ಇದೆ. ''ಇದಾನೀಂ ವೇದತ್ವಂ'' ಎಂಬ ಎಲ್ಲರಿಗೂ ಬರುವ ಪ್ರತೀತಿಯಲ್ಲಿ 'ಈ ಕಾಲದಲ್ಲಿ ವೇದತ್ವವು ಇದೆ' ಎಂದು ತೋರುತ್ತದೆ. ಹೀಗೆ ವೇದಾಪೌರುಷೇಯತ್ವವನ್ನು ಒಪ್ಪದೆಯೂ ಘಟತ್ವದಲ್ಲಿ ಸಾಧ್ಯಪರ್ಯಾವಸಾನವಾಗುವಂತೆ ವೇದದಲ್ಲೂ ಸಾಧ್ಯಪರ್ಯವಸಾನವಾಗುತ್ತದೆ. ಆದ್ದರಿಂದ ಅರ್ಥಾಂತರತಾದೋಷ.

ಅಲ್ಲದೆ, ಹೇತುವಿನಲ್ಲಿ ವಿಶೇಷ್ಯಾಂಶವು ವ್ಯರ್ಥವಾದೀತು. ಗಗನದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ವಿಶೇಷ್ಯಾಂಶವಿದೆ. ಆದರೆ, ಗಗನವೂ ಕಾಲಿಕಸಂಬಂಧದಿಂದ ಕಾಲವೃತ್ತಿ ಯಾದುದರಿಂದ ಅದರಲ್ಲಿ ಸಾಧ್ಯವೂ ಇದೆ, ವ್ಯಭಿಚಾರಕ್ಕೆ ಅವಕಾಶವಿಲ್ಲ. ಅದಕ್ಕಾಗಿ ವೃತ್ತಿಮತ್ತ್ವವು ಸಮವಾಯಸಂಬಂಧೇನ, ಎನ್ನಬೇಕು.

## ನ್ಯಾಯದೀಪ

**यदेवमिति ।** यद्यदितरावृत्तित्वे सति वृत्तिमत् तत्तद्वृत्ति । यथा घटेतरावृत्तित्वे सति वृत्तिमद्घटत्वं घटवृत्तीत्यर्थः ।

ಯಾವ ಧರ್ಮವು ಯಾವ ಧರ್ಮಿಗಿಂತ ಭಿನ್ನವಾದ ವಸ್ತುಗಳಲ್ಲಿ ಇರದೆ, ವೃತ್ತಿಮತ್ತಾದ ಧರ್ಮವಾಗಿರುವುದೋ ಅಂತಹ ಧರ್ಮವು ಆ ಧರ್ಮಿಯಲ್ಲಿ ಇರುತ್ತದೆ. ಅದಕ್ಕೆ ಉದಾಹರಣೆ ಘಟತ್ವ. ಅದು ಘಟೇತರವಾದ ಪಟಾದಿಗಳಲ್ಲಿ ಇಲ್ಲ. ಆದರೂ ವೃತ್ತಿಮತ್ತಾದ ಧರ್ಮವಾಗಿದೆ. ಆದ್ದರಿಂದ ಅದು ಘಟವೃತ್ತಿಯಾಗಿದೆ.

## ಅವತಾರಿಕೆ

आद्ये हेतौ विशेषणासिद्धिं नचेत्यादिना ग्रन्थेनोद्धरिष्यन् द्वितीयहेतौ उपात्तस्येन्द्रियलिङ्गाप्रमाणकत्व-रूपाधिकविशेषणस्य असिद्धिं सुधोक्त-विवरणेन तावदुद्धरन्निन्द्रियपदेनाभिमतं प्रत्यक्षं किमस्मदादिप्रत्यक्षम् उतेश्वरयोगिप्रत्यक्षे ? आद्ये आह—**वेदार्थ इति ।** तस्यैव विवरणं—**धर्मेत्यादि ।**

ವೇದಾಪೌರುಷೇಯತ್ವವನ್ನು ಮೂರು ಹೇತುಗಳಿಂದ ಸಾಧಿಸಲಾಗಿದೆ. ಮೊದಲನೆಯ ಹೇತು–ಪೌರುಷೇಯ ಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವಾತ್ ಎಂದು. ಈ ಹೇತುವಿನ

ವಿಶೇಷಣಾಂಶವು ಪಕ್ಷದಲ್ಲಿ ಇಲ್ಲ ಎಂಬ ಅಸಿದ್ಧಿದೋಷವನ್ನು ಮುಂದೆ (ಪು.24) 'ನ ಚ' ಎಂದು ಮೂಲದಲ್ಲಿ ಪರಿಹರಿಸಲಿದ್ದಾರೆ.

ಇಂದ್ರಿಯ-ಲಿಂಗ-ಪೌರುಷೇಯಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವಾತ್, ಎಂದು ಎರಡನೆಯ ಹೇತು. ಈ ಹೇತುವಿನಲ್ಲಿ ಪ್ರಥಮ ಹೇತುವಿನಲ್ಲಿ ಇಲ್ಲದ ಇಂದ್ರಿಯ-ಲಿಂಗಾಪ್ರಮಾಣಕತ್ವವು ಅಧಿಕವಾಗಿದೆ. ಈ ಹೇತುವಿಗೆ ಅಸಿದ್ಧಿದೋಷವನ್ನು ಸುಧಾದಲ್ಲಿ ಹೇಳಿರುವ ವಿವರಣೆಯನ್ನು ನೀಡಿ ಪರಿಹರಿಸುವ .ಸಲುವಾಗಿ ಇಂದ್ರಿಯವೆಂದರೆ ನಮ್ಮನಿಮ್ಮ ಪ್ರತ್ಯಕ್ಷವು ಅಭಿಪ್ರೇತವೋ, ಅಥವಾ ಈಶ್ವರ-ಯೋಗಿಗಳ ಪ್ರತ್ಯಕ್ಷವೋ, ಎಂದು ವಿಕಲ್ಪಮಾಡಿ ಮೊದಲ ಪಕ್ಷದಲ್ಲಿ ದೋಷವನ್ನು "ವೇದಾರ್ಥೇ" ಎಂಬ ವಾಕ್ಯದಿಂದ ಹೇಳಲಾಗಿದೆ.

## ವಿಶೇಷಣಾಸಿದ್ಧಿಪರಿಹಾರ

**नचात्र हेतुत्रयेऽपि विशेषणासिद्धिः । वेदार्थे धर्माधर्मादावस्मदादिप्रत्यक्षस्याप्रवृत्तेः । ईश्वरयोगिप्रत्यक्षयोश्च धर्मादिवद् वेदं विना असिद्धेः । धर्मादिकं, कस्यचित् प्रत्यक्षं, वस्तुत्वाद्, धटवदित्यादावद्यापि धर्माद्यसिद्ध्याऽन्योन्याश्रयात् । ताभ्यामस्मदादीन् प्रति धर्माद्यसिद्धेश्च । इष्टापूर्तयोः प्रेक्षावत्प्रवृत्त्यन्यथानुपपत्त्या फलवत्त्वमात्रानुमानेऽपि 'अस्य याग-होम-दानादेरिदं फलम्' इत्यस्यातिसूक्ष्मस्य विशेषस्यानुमाना-योग्यत्वात् ।**

**फलविशेषोद्देशेन ज्योतिष्टोमादिकर्मविशेषे बहूनां प्रेक्षावतां प्रवृत्तिस्तु चैत्यवन्दनादाविवोपपन्ना । तदुक्तं भगवत्पादैः—**

**"तदभावे सर्वसमयाभिमतधर्माद्यसिद्धेः" । इति ।।**

ಈ ಓಂದೆ ವೇದಾಪೌರುಷೇಯತ್ವವನ್ನು ಸಾಧನೆ ಮಾಡಲು ಹೇಳಿರುವ ಮೂರೂ ಹೇತುಗಳ ವಿಶೇಷಣಾಂಶವು ಅಸಿದ್ಧ, ಎಂದು ಹೇಳಬಾರದು.

ಜ್ಯೋತಿಷ್ಟೋಮಸ್ಯ ಸ್ವರ್ಗಸಾಧನತ್ವಂ—**ಪಕ್ಷ.**

ಅಪೌರುಷೇಯಶಬ್ದಪ್ರಮಾಣಕಮ್ —**ಸಾಧ್ಯ.**

ಇಂದ್ರಿಯ-ಲಿಂಗ-ಪೌರುಷೇಯಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವಾತ್—**ಹೇತು.**

ಈ ಎರಡನೆಯ ಅನುಮಾನದ ಹೇತುವಿನ ವಿಶೇಷಣಾಂಶ–'ಇಂದ್ರಿಯ...' ಇತ್ಯಾದಿ. ಇದು ಅಸಿದ್ಧ. ಏಕೆಂದರೆ, ಜ್ಯೋತಿಷ್ಟೋಮವು ಸ್ವರ್ಗಸಾಧನ ಎನ್ನುವುದಕ್ಕೆ ಇಂದ್ರಿಯಗಳು ಅಂದರೆ ಪ್ರತ್ಯಕ್ಷವು ಪ್ರಮಾಣವಾಗಬಹುದು, ಎಂದು ಆಕ್ಷೇಪ. ಆದರೆ, ವೇದದ ಅರ್ಥವಾಗಿರುವ ಧರ್ಮಾಧರ್ಮಗಳ ಬಗ್ಗೆ ನಮ್ಮ ಪ್ರತ್ಯಕ್ಷಕ್ಕೆ ಸಾಮರ್ಥ್ಯವಿಲ್ಲ. ಆದ್ದರಿಂದ ಅವುಗಳು ಅಸ್ಮದಾದಿಪ್ರತ್ಯಕ್ಷ ಸಿದ್ಧವಾಗಲಾರವು. ಇನ್ನು ಈಶ್ವರ ಅಥವಾ ಯೋಗಿಗಳ ಪ್ರತ್ಯಕ್ಷದಿಂದ ಧರ್ಮಾದಿಗಳು ಸಿದ್ಧವಾಗುತ್ತವೆ, ಎನ್ನಬೇಕು. ಆದರೆ, ಯೋಗಿಗಳಿಗೆ ಧರ್ಮಾದಿ ಅತೀಂದ್ರಿಯವಸ್ತುಗಳ ಪ್ರತ್ಯಕ್ಷವಿದೆ, ಎಂದು ನಮಗೆ ನಿರ್ಧಾರವಾಗಬೇಕಾದರೆ ವೇದವೇ ಹೇಳಬೇಕು. ವೇದದ ಪ್ರಾಮಾಣ್ಯ ಸಂದಿಗ್ಧ.

ಅನುಮಾನದಿಂದ ಧರ್ಮಾದಿಗಳು ಪ್ರತ್ಯಕ್ಷ ಎಂದು ಸಾಧಿಸಬಹುದೇ? ಉದಾಹರಣೆಗೆ– ಧರ್ಮಾದಿಗಳು ವಸ್ತುಗಳಾದುದರಿಂದ ಘಟದಂತೆ ಯಾರದಾದರೂ ಒಬ್ಬರ ಪ್ರತ್ಯಕ್ಷಕ್ಕೆ ವಿಷಯಗಳಾಗಿರಬೇಕು, ಎಂದು ಅನುಮಾನದ ಸ್ವರೂಪ. ಆದರೆ, ಈ ಅನುಮಾನದಲ್ಲಿ ಧರ್ಮಾದಿಗಳು ಪಕ್ಷ. ಪಕ್ಷವು ಸಿದ್ಧವಾದರೆ ಅನುಮಾನ. ಅನುಮಾನ ಇದ್ದರೆ ಪಕ್ಷಸಿದ್ಧಿ. ಹೀಗೆ, ಅನ್ಯೋನ್ಯಾಶ್ರಯ ದೋಷ.

ಅಥವಾ, ಯೋಗಿಗಳಿಗೆ ಧರ್ಮಾದಿಗಳ ಪ್ರತ್ಯಕ್ಷವು ಇದೆ, ಎಂದೇ ಒಪ್ಪೋಣ. ಅದರಿಂದ ನಮಗೇನು ಪ್ರಯೋಜನ? ಅವರ ಪ್ರತ್ಯಕ್ಷವು ನಮ್ಮ ಧರ್ಮಾಚರಣೆಗೆ ಉಪಯೋಗವಾಗುವುದಿಲ್ಲ.

ಇಷ್ಟ(ಯಾಗ) ಪೂರ್ತ(ಕೆರೆಗಳ ನಿರ್ಮಾಣ)ಗಳನ್ನು ಪ್ರೇಕ್ಷಾವಂತರೂ ಮಾಡುತ್ತಾರೆ. ಅವುಗಳು ನಿಷ್ಫಲವಾಗಿದ್ದಲ್ಲಿ ಅವರು ಮಾಡಲಿಕ್ಕಿಲ್ಲ. ಆದ್ದರಿಂದ ಅವುಗಳು ಸಫಲ. ಈ ಅನುಮಾನದಿಂದಲೂ ಇಷ್ಟಾ–ಪೂರ್ತಾದಿ ಪರೋಪಕಾರಕ್ಕೆ ಪುಣ್ಯಫಲ ಇದೆ ಎಂದಷ್ಟೇ ತಿಳಿಯಬಹುದಾದರೂ, ಇಂತಹ ಯಾಗಕ್ಕೆ ಇದು ಫಲ, ಎಂದು ನಿರ್ದಿಷ್ಟವಾದ ಫಲವಿಶೇಷಗಳು ಆ ಅನುಮಾನದಿಂದ ಸಿದ್ಧವಾಗುವುದಿಲ್ಲ. ಅದು ಸಿದ್ಧವಾಗದ ಹೊರತು ಫಲವಿಶೇಷದ ಅಭಿಲಾಷೆಯಿಂದ ಕರ್ಮವಿಶೇಷದಲ್ಲಿ ಪ್ರವೃತ್ತಿಯಾಗದು.

ಸ್ವರ್ಗರೂಪ ಫಲವಿಶೇಷಕ್ಕಾಗಿ ಜ್ಯೋತಿಷ್ಟೋಮರೂಪಯಾಗ ವಿಶೇಷದಲ್ಲಿ ಪ್ರೇಕ್ಷಾವಂತರು ಪ್ರವೃತ್ತಿ ಮಾಡುವುದರಿಂದ ಯಾವಕರ್ಮ ಯಾವ ಫಲಕ್ಕೆ ಸಾಧನ, ಎನ್ನುವುದನ್ನು ತಿಳಿಯಬಹುದು ಎನ್ನುವುದೂ ಸರಿಯಲ್ಲ. ಈ ರೀತಿಯ ಪ್ರೇಕ್ಷಾವತ್ ಪ್ರವೃತ್ತಿಯು ಚೈತ್ಯವಂದನಾದಿಕರ್ಮಗಳಲ್ಲೂ ಇದೆ. ಅದು ಭ್ರಾಂತಿ ಮೂಲಕವಾದಂತೆ ಯಾಗದಲ್ಲಿ ಪ್ರವೃತ್ತಿಯೂ ಭ್ರಾಂತಿಯಾಗಿರಬಹುದು.

ಹೀಗೆ ಧರ್ಮಾದಿಗಳು ಪ್ರತ್ಯಕ್ಷ ಮತ್ತು ಅನುಮಾನಪ್ರಮಾಣಗಳಿಂದ ಸಿದ್ಧವಾಗುವುದಿಲ್ಲ. ಇದನ್ನು ಶ್ರೀಮದಾಚಾರ್ಯರು ತತ್ತ್ವನಿರ್ಣಯದಲ್ಲಿ ಹೇಳಿದ್ದಾರೆ— ಅಪೌರುಷೇಯವಾಕ್ಯವು ಇಲ್ಲದಿದ್ದಲ್ಲಿ ಸರ್ವದಾರ್ಶನಿಕರಿಗೂ ಅಭಿಮತವಾದ ಧರ್ಮಾದಿಗಳು ಸಿದ್ಧವಾಗಲಿಕ್ಕಿಲ್ಲ, ಎಂದು.

## न्यायदीप

ज्योतिष्टोमादिर्धर्मः । श्येनयागादिरधर्मः । आदिपदेन स्वर्गनरकाद्यतीन्द्रियवेदैक–वेद्यार्थग्रहः । अन्त्य आह—**ईश्वरेति । असिद्धेरिति ।** ईश्वरप्रत्यक्षेण योगिप्रत्यक्षेण वा धर्मादिकं सिद्धमित्यस्यास्मदाद्यप्रत्यक्षत्वेन वेदेनैव तस्यावगन्तव्यत्वात् । तथाच वेदेनेश्वरादिप्रत्यक्षं विज्ञाय तेन धर्मादिस्वरूपावगत्यपेक्षया "चोदनालक्षणोऽर्थो धर्मः" इति जैमिन्युक्तदिशा वेदेनैव तन्निर्णयोऽस्तु, किं बकबन्धप्रयासेन? इति प्रत्यक्षाविषयत्वं तस्येति भावः ।।

ಮೂಲದಲ್ಲಿ ಧರ್ಮಪದಕ್ಕೆ ಪುಣ್ಯಕ್ಕೆ ಕಾರಣವಾದ ಜ್ಯೋತಿಷ್ಟೋಮಾದಿ ಸತ್ಕರ್ಮಗಳು, ಅಧರ್ಮಪದಕ್ಕೆ ಶತ್ರುಸಂಹಾರಕ್ಕೆ ಕಾರಣವಾದ ಶ್ಯೇನಯಾಗಾದಿಗಳು ಎಂದು ಅರ್ಥ. ಆದಿಪದದಿಂದ ಸ್ವರ್ಗ–ನರಕ ಮುಂತಾದ ಅತೀಂದ್ರಿಯವಾದ, ಮೇದದಿಂದ ಮಾತ್ರ ತಿಳಿಯಲ್ಪಡುವ ವಿಷಯಗಳು ವಿವಕ್ಷಿತವಾಗಿವೆ.

ಈಶಪ್ರತ್ಯಕ್ಷದಿಂದ ಅಥವಾ ಯೋಗಿಗಳ ಪ್ರತ್ಯಕ್ಷದಿಂದ ಧರ್ಮಾದಿಗಳು ಸಿದ್ಧವಾಗುತ್ತವೆ ಎನ್ನುವುದನ್ನು ನಮ್ಮ ಪ್ರತ್ಯಕ್ಷದಿಂದ ನಾವು ನಿರ್ಧಾರ ಮಾಡಲಾಗುವುದಿಲ್ಲ. ಅದನ್ನು ವೇದದಿಂದಲೇ ತಿಳಿಯಬೇಕು. ಹೀಗೆ ವೇದದಿಂದ ಈಶ್ವರಾದಿಗಳ ಧರ್ಮಪ್ರತ್ಯಕ್ಷವನ್ನು ತಿಳಿದು ಅಂತಹ ಪ್ರತ್ಯಕ್ಷದಿಂದ ಧರ್ಮಾದಿಗಳನ್ನು ನಿರ್ಧರಿಸುವುದು ಬಕಬಂಧನ್ಯಾಯತುಲ್ಯವಾಗುತ್ತದೆ. ಅದಕ್ಕಿಂತಲೂ ವೇದದಿಂದಲೇ ಧರ್ಮಾದಿಗಳನ್ನು ನಿರ್ಧರಿಸುವುದು ಉಚಿತವೆನಿಸುತ್ತದೆ. ಇದನ್ನು ಜೈಮಿನಿಗಳು ಪೂರ್ವಮೀಮಾಂಸಾದಲ್ಲಿ 'ಚೋದನಾಲಕ್ಷಣೋ ಅರ್ಥಃ ಧರ್ಮಃ' ಎಂಬ ಸೂತ್ರದಲ್ಲಿ ಹೇಳಿದ್ದಾರೆ. 'ಚೋದನಾ=ವೇದಃ ಲಕ್ಷಣಂ=ಜ್ಞಾಪಕಃ ಯಸ್ಯ–ಚೋದನಾಲಕ್ಷಣಃ' ವೇದಗಳಿಂದ ಮಾತ್ರ ಧರ್ಮದ ಜ್ಞಾನವು ಬರುತ್ತದೆ, ಎಂದು ಆ ಸೂತ್ರದ ಅಭಿಪ್ರಾಯ.

## न्यायदीप

अस्तु तर्ह्यनुमानेन धर्मादिगोचरेश्वरादिप्रत्यक्षसिद्धिरित्यत आह— **धर्मादिकमिति ।** प्रमेयत्वादिहेतुरादिपदार्थः । **अद्यापीति ।** वेदेन विना धर्मादिसिद्धिर्नेति वदन्तं प्रति धर्मादिसाधकतयोपन्यस्तेश्वरादि प्रत्यक्षसाधकानुमानोपन्यासवेलायामपि । न केवलं पूर्वमित्यर्थः ।

**अन्योन्येति । धर्मादिसिद्धौ तत्पक्षीकारेणे श्वरादिप्रत्यक्षसाधकानुमानसिद्धिः । अनुमानसिद्धौ च तत्सिद्धप्रत्यक्षेण धर्मादिसिद्धिरित्यन्योन्याश्रयादित्यर्थः ।।**

ವೇದದಿಂದ ಈಶ್ವರಾದಿಗಳ ಧರ್ಮಾದಿಪ್ರತ್ಯಕ್ಷವನ್ನು ತಿಳಿಯುವುದು ಬಹುಬಂಧ ನ್ಯಾಯವೆನ್ನುವುದಾದಲ್ಲಿ ಅನುಮಾನದಿಂದ ಅಂತಹ ಪ್ರತ್ಯಕ್ಷವನ್ನು ತಿಳಿಯಬಹುದು ಎಂದು "ಧರ್ಮಾದಿಕಂ" ಎಂಬ ಮೂಲವಾಕ್ಯದಲ್ಲಿ ಆಕ್ಷೇಪಿಸಲಾಗಿದೆ.

ಮೂಲದಲ್ಲಿ ಅದ್ಯಾಪಿ ಎಂದರೆ 'ಈಗಲೂ' ಎಂದರ್ಥ. ಈಗಲೂ ಎಂದರೆ, ವೇದದ ಹೊರತಾಗಿ ಧರ್ಮಾದಿಗಳು ಸಿದ್ಧವಾಗುವುದಿಲ್ಲ ಎನ್ನುವ ಸಿದ್ಧಾಂತಿಗೆ 'ಅನುಮಾನ ಸಿದ್ಧವಾದ ಈಶ್ವರಾದಿ ಪ್ರತ್ಯಕ್ಷಗಳೇ ಧರ್ಮಾದಿಗಳಿಗೆ ಪ್ರಮಾಣ' ಎಂದು ಪ್ರತಿವಾದಿ ಹೇಳುವ ಸಮಯದಲ್ಲಿ, ಎಂದರ್ಥ. ಇದಕ್ಕಿಂತ ಮೊದಲು ಧರ್ಮಾದಿಗಳು ಸಿದ್ಧವಾಗಿಲ್ಲ. ಮಾತ್ರವಲ್ಲ, ಈ ಕಾಲದಲ್ಲೂ ಸಿದ್ಧವಾಗಿಲ್ಲ, ಎಂದು ಅಪಿಶಬ್ದದ ಅರ್ಥ.

ಮೂಲದ ಅನ್ಯೋನ್ಯಾಶ್ರಯ ಹೀಗೆ—ಧರ್ಮಾದಿಗಳು ಸಿದ್ಧವಾದರೆ ಅವುಗಳನ್ನು ಪಕ್ಷಮಾಡಿ ಈಶ್ವರಪ್ರತ್ಯಕ್ಷಸಾಧಕವಾದ ಅನುಮಾನ ಮಾಡಬೇಕು. ಈ ಅನುಮಾನ ಸಿದ್ಧವಾದರೆ ಅದರಿಂದ ಈಶಪ್ರತ್ಯಕ್ಷವು ಸಿದ್ಧವಾಗಿ ಆ ಪ್ರತ್ಯಕ್ಷದಿಂದ ಧರ್ಮಾದಿಗಳು ಸಿದ್ಧವಾಗುತ್ತವೆ. ಹೀಗೆ ಪರಸ್ಪರ ಅವಲಂಬನೆಯಿಂದಾಗಿ ಅನ್ಯೋನ್ಯಾಶ್ರಯ ಬರುತ್ತದೆ.

## ನ್ಯಾಯದೀಪ

**अस्तु वा वेदानुमानाभ्यां धर्मादिगोचरेश्वरप्रत्यक्षसिद्धिः । तथाप्यस्मदादेरनुष्ठानोपयोगिधर्मादिनिश्चयो नेश्वरयोगिप्रत्यक्षाभ्यां सिध्यतीति दोषान्तरं चाह—ताभ्यामिति । तथाचास्मदादिज्ञानोपायो वेद एवैष्टव्य इति किमीश्वरादिप्रत्यक्षोपन्यासेनेति भावः ।।**

ವೇದ ಅಥವಾ ಅನುಮಾನಗಳಿಂದಲೇ ಧರ್ಮಾದಿವಿಷಯಕವಾದ ಈಶ್ವರಪ್ರತ್ಯಕ್ಷವು ಸಿದ್ಧವಾಗುತ್ತದೆ, ಎಂದೇ ಒಪ್ಪೋಣ. ಆದರೂ ನಮ್ಮ ಧರ್ಮಾನುಷ್ಠಾನಕ್ಕೆ ಬೇಕಾಗಿರುವ ನಿರ್ಧಾರವು ಈಶ್ವರ ಅಥವಾ ಯೋಗಿಗಳ ಪ್ರತ್ಯಕ್ಷದಿಂದ ಆಗುವುದಿಲ್ಲ ಎಂಬ ದೋಷಾಂತರವನ್ನು 'ತಾಭ್ಯಾಂ' ಎಂಬ ಮೂಲದಲ್ಲಿ ಹೇಳಲಾಗಿದೆ. ಅದರ ಅಭಿಪ್ರಾಯ— ನಮ್ಮ ಆಚರಣೆಗೆ ಬೇಕಾಗಿರುವ ಧರ್ಮದ ಜ್ಞಾನ ವೇದದಿಂದಲೇ ಆಗಬೇಕು. ಹೀಗಿದ್ದ ಮೇಲೆ ಅನುಮಾನ ಅಥವಾ ವೇದದಿಂದ ಈಶ್ವರಪ್ರತ್ಯಕ್ಷವನ್ನು ತಿಳಿದುಕೊಳ್ಳಬೇಕಾದ ಅಗತ್ಯವೇನು?

## ನ್ಯಾಯದೀಪ

**एवमिन्द्रियाप्रमाणकत्वरूपविशेषणं समर्थ्य लिङ्गाप्रमाणकत्वरूपविशेषणासिद्धिमुद्धरति—इष्टेति ।** इष्टं यागः, पूर्तं तटाकादि । ''अन्येभ्योऽपि दृश्यते'' इति दीर्घविधानादिष्टापूर्तयोरिति साधु । **इत्यस्या पीति ।** तज्ज्ञानस्यैवानुष्ठानोपयोगित्वादिति भावः ॥

ಹೀಗೆ, ಇಲ್ಲಿಯವರೆಗೆ ಧರ್ಮಾದಿಗಳ ಬಗ್ಗೆ ಪ್ರತ್ಯಕ್ಷವು ಪ್ರಮಾಣವಲ್ಲ, ಎಂದು ಸಮರ್ಥಿಸಲಾಗಿದೆ. ಮುಂದೆ, 'ಇಷ್ಟಾಪೂರ್ತ' ಎಂಬ ಮೂಲದಲ್ಲಿ ಅನುಮಾನವೂ ಪ್ರಮಾಣವಲ್ಲ ಎನ್ನುವ ಮೂಲಕ ಹೇತುವಿನ ವಿಶೇಷಣಾಸಿದ್ಧಿಯನ್ನು ಪರಿಹರಿಸಲಾಗಿದೆ.

ಇಷ್ಟ ಎಂದರೆ ಯಾಗ, ಪೂರ್ತ ಎಂದರೆ ಕೆರೆ–ಭಾವಿಗಳು. ಇಷ್ಟ+ಪೂರ್ತ, ಎಂದಿರುವಾಗ 'ಇಷ್ಟಾಪೂರ್ತ' ಎಂಬ ಸಮಸ್ತಪದದಲ್ಲಿ ದೀರ್ಘವು 'ಅನ್ಯೇಭ್ಯೋಽಪಿ ದೃಶ್ಯತೇ' ಎಂಬ ಸೂತ್ರದಿಂದ ಬರುತ್ತದೆ.

## ನ್ಯಾಯದೀಪ

प्रवृत्तिविशेषेण विशेषसिद्धिरस्त्वित्यत आह—**फलविशेषेति ।** स्वर्गादिरूपेत्यर्थः । **चैत्येति ।** यथा वेदबाह्यानामनेकेषामधर्मे च फलाहेतौ धर्मत्वादिभ्रान्त्या प्रवृत्तिस्तथान्धपरंपरयोपपन्ना । ननु धर्मादिस्वरूपं निर्णाययतीत्यर्थः । **तदुक्तमिति ।** अपौरुषेयवाक्यादन्येन प्रत्यक्षेणानुमानेन वा धर्मादिसिद्धिर्नेत्येतत् तत्त्वनिर्णये उक्तमित्यर्थः । तदभावे=अपौरुषेयवाक्याभाव इत्यर्थः ॥

ಪ್ರೇಕ್ಷಾವಂತರ ಪ್ರವೃತ್ತಿವಿಶೇಷದಿಂದ ಕರ್ಮವಿಶೇಷಕ್ಕೆ ಫಲವಿಶೇಷವೂ ಸಿದ್ಧವಾಗಬಹುದು ಎನ್ನುವ ಆಕ್ಷೇಪಕ್ಕೆ—'ಫಲವಿಶೇಷ' ಇತ್ಯಾದಿ ಮೂಲವು ಸಮಾಧಾನರೂಪವಾಗಿದೆ. ಅದರ ಅಭಿಪ್ರಾಯ– ಹೇಗೆ ವೇದಬಾಹ್ಯರು ಅಂದರೆ ಅವೈದಿಕರಾದ ಬೌದ್ಧಾದಿಗಳು ನಿಷ್ಫಲವಾದ ಚೈತ್ಯವಂದನಾದಿ ಅಧರ್ಮಕಾರ್ಯಗಳಲ್ಲಿ ಧರ್ಮವೆಂಬ ಭ್ರಾಂತಿಯಿಂದ ಪ್ರವೃತ್ತಿಮಾಡುವರೋ ಅದರಂತೆ ವೈದಿಕರಾದ ಪ್ರೇಕ್ಷಾವಂತರೂ ಫಲವಿದೆ ಎಂಬ ಅಂಧಶ್ರದ್ಧೆಯಿಂದ ಯಾಗವಿಶೇಷದಲ್ಲಿ ಪ್ರವೃತ್ತಿಮಾಡಿರಬಹುದು. ಅವರು ಧರ್ಮಸ್ವರೂಪವನ್ನು ನಿರ್ಣಯಮಾಡಿಯೇ ಪ್ರವೃತ್ತಿ

ಮಾಡುತ್ತಾರೆ, ಎಂದು ನಿರ್ಧರಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರವೃತ್ತಿವಿಶೇಷವು ನಿರ್ಣಾಯಕ ವಾಗುವುದಿಲ್ಲ.

ಮೂಲದಲ್ಲಿ 'ತದುಕ್ತಂ' ಎಂದರೆ ವಿಷ್ಣುತತ್ತ್ವನಿರ್ಣಯದಲ್ಲಿ ಅಪೌರುಷೇಯ ವಾಕ್ಯವಲ್ಲದೆ ಪ್ರತ್ಯಕ್ಷದಿಂದಲೋ ಅನುಮಾನದಿಂದಲೋ ಧರ್ಮಸಿದ್ಧಿಯಾಗುವುದಿಲ್ಲ ಎಂದು ಆಚಾರ್ಯರು ಹೇಳಿದ್ದಾರೆ, ಎಂದರ್ಥ. 'ತದಭಾವೇ' ಎಂಬ ತತ್ತ್ವನಿರ್ಣಯದ ಪದಕ್ಕೆ 'ಅಪೌರುಷೇಯ ವಾಕ್ಯಾಭಾವೇ' ಎಂದು ಅರ್ಥ.

## ನ್ಯಾಯದೀಪ

**एवम् इन्द्रियलिङ्गप्रमाणकत्वरूप-विशेषणसमर्थनपरग्रन्थेनैव आद्यसाध्ये अपौरुषेयशब्दसिद्धिर्हेतोः पक्षधर्मतावलादित्येतदप्युपपादितं ज्ञेयम् ।।**

ಮೊದಲ ಅನುಮಾನ ಹೀಗಿದೆ— 'ಜ್ಯೋತಿಷ್ಟೋಮಸ್ಯ ಸ್ವರ್ಗಸಾಧನತ್ವಮ್, ಪೌರುಷೇಯ ಶಬ್ದೇತರ ಪ್ರಮಾಣಕಮ್, ಪೌರುಷೇಯ ಶಬ್ದಾಪ್ರಮಾಣಕತ್ವೇ ಸತಿ ಸಪ್ರಮಾಣಕತ್ವಾತ್' ಎಂದು. ಇಲ್ಲಿ ಜ್ಯೋತಿಷ್ಟೋಮಯಾಗವು ಸ್ವರ್ಗಸಾಧನ ಎನ್ನಲು ಪೌರುಷೇಯವಾಕ್ಯವು ಪ್ರಮಾಣವಲ್ಲ ಎಂಬ ಹೇತುವಿನಿಂದ ಅಪೌರುಷೇಯವಾಕ್ಯಪ್ರಮಾಣಕತ್ವವನ್ನು ಸಾಧಿಸಲಾಗಿದೆ. ಆದರೆ, ಅದಕ್ಕೆ ಇಂದ್ರಿಯ ಅಥವಾ ಲಿಂಗ ಪ್ರಮಾಣವಾಗಿರಬಹುದು, ಎಂಬ ಸಂದೇಹ ಬಂದು ಸಾಧ್ಯವು ಸಿದ್ಧವಾಗಲಿಕ್ಕಿಲ್ಲ. ಪ್ರಕೃತದಲ್ಲಿ ಇಂದ್ರಿಯಗಳಾಗಲೀ ಪ್ರವೃತ್ತಿವಿಶೇಷವಾಗಲೀ ಅದಕ್ಕೆ ಪ್ರಮಾಣವಾಗುವುದಿಲ್ಲ ಎಂದು ಸಮರ್ಥನೆ ಮಾಡಿರುವುದರಿಂದ ಈ ಸಂದೇಹಕ್ಕೆ ಅವಕಾಶವಿಲ್ಲ. ಉಕ್ತಹೇತುವು ಪಕ್ಷದಲ್ಲಿ ಇರುವುದರಿಂದ ಸಾಧ್ಯವೂ ಸಿದ್ಧವಾಗಲೇಬೇಕು.

## ಅವತಾರಿಕೆ

**यदप्याद्यद्वितीयहेत्वोः पौरुषेयशब्दाप्रमाणकत्वे सतीति विशेषणं, यच तृतीयहेतावपौरुषेयेतरावृत्तित्वे सतीति विशेषणम् तदसिद्धिं "नच पौरुषेयवाक्येन तत्सिद्धिः । अज्ञानविप्रलम्भयोः प्राप्तेः" इत्यादितत्त्व-निर्णयवाक्यार्थव्यक्तीकरणेनोद्धरति–नचेत्यादिना ।**

ಮೊದಲನೆಯ ಮತ್ತು ಎರಡನೆಯ ಹೇತುವಿನ ವಿಶೇಷಣಭಾಗ—'ಪೌರುಷೇಯ ಶಬ್ದಾ ಪ್ರಮಾಣಕತ್ವೇ ಸತಿ' ಎಂದು. ಮೂರನೆಯ ಹೇತುವಿನ ವಿಶೇಷಣಭಾಗ— ಅಪೌರುಷೇಯೇತರಾ-ವೃತ್ತಿತ್ವೇ ಸತಿ, ಎಂದು. ಈ ಮೂರು ವಿಶೇಷಣಾಂಶಗಳು ಪಕ್ಷದಲ್ಲಿ ಇಲ್ಲ, ಎಂಬ ಆಶಂಕೆಯನ್ನು "ನ

ಚ'' ಇತ್ಯಾದಿ ತತ್ತ್ವನಿರ್ಣಯವಾಕ್ಯದ ಅರ್ಥವನ್ನು ವಿವರಿಸುವ ಮೂಲಕ ಮೂಲದಲ್ಲಿ ಪರಿಹರಿಸಲಾಗಿದೆ—

**नच पौरुषेयवाक्येन तत्सिद्धिः। पुरुषेष्वज्ञान-मिथ्याज्ञान-विप्रलम्भ-प्रमाद-करणापाटवादीनां सम्भावितत्वेनानाश्वासात् ।**

**तन्निवृत्त्यर्थमीश्वरस्य नित्यसार्वज्ञ्याद्यङ्गीकारे च तदर्थं धर्मबोधके शब्द एवापौरुषेयत्वमात्रं कल्प्यताम् । अर्थापत्तेरुत्सर्गतः साक्षादुपपादकविषयत्वात् । नतु परम्परयोपपादके वक्तरि सार्वज्ञ्यादिकम् । अन्यथा वेदस्यासर्वज्ञप्रणीतत्वमङ्गीकृत्याश्वासार्थं तस्य सर्वज्ञप्रणीत-शब्दान्तरमूलत्वं कल्प्यं स्यात् ॥**

ಪುರುಷಪ್ರಣೀತ ವಾಕ್ಯದಿಂದ ಧರ್ಮಾದಿಸಿದ್ಧಿಯಾಗುವುದಿಲ್ಲ. ಪುರುಷರಲ್ಲಿ ಅಜ್ಞಾನ–ವಿಪರೀತಜ್ಞಾನ–ಮೋಸಸ್ವಭಾವ–ಪ್ರಮಾದ–ಇಂದ್ರಿಯಗಳ ಅಪಾಟವ–ಇಂತಹ ದೋಷಗಳು ಇರುವ ಸಂಭವವಿರುವುದರಿಂದ ಅಂತಹ ಪುರುಷರಿಂದ ರಚಿತವಾದ ವಾಕ್ಯಗಳಲ್ಲಿ ವಿಶ್ವಾಸ ಬರುವುದಿಲ್ಲ.

ಇಂತಹ ಸಂಭಾವಿತದೋಷಪರಿಹಾರಕ್ಕಾಗಿ ವೇದಪ್ರಣೇತೃಪುರುಷನಿಗೆ ಸರ್ವಜ್ಞತ್ವಾದಿಗಳನ್ನು ಕಲ್ಪನೆಮಾಡುವುದಕ್ಕಿಂತ ಧರ್ಮಬೋಧಕವಾಕ್ಯದಲ್ಲಿ ಅಪೌರುಷೇಯತ್ವಮಾತ್ರವನ್ನು ಕಲ್ಪನೆ ಮಾಡುವುದು ಲಾಘವ. ಏಕೆಂದರೆ, ಅರ್ಥಾಪತ್ತಿಪ್ರಮಾಣವು ತನಗೆ ಸಾಕ್ಷಾದುಪಜೀವಕವನ್ನು ಆಕ್ಷೇಪಿಸುತ್ತದೆ. ಪ್ರಕೃತದಲ್ಲಿ, ಧರ್ಮಾದಿನಿಶ್ಚಯವು ತನಗೆ ಉಪಪಾದಕ ಪ್ರಮಾಣದ ಹೊರತಾಗಿ ಅನುಪಪದ್ಯಮಾನವಾಗಿದೆ, ಎಂಬುದೇ ಅರ್ಥಾಪತ್ತಿ. ಅದಕ್ಕೆ ಸಾಕ್ಷಾದುಪಪಾದಕವಾದುದು ತನ್ನಿಶ್ಚಾಯಕ ಪ್ರಮಾಣಕ್ಕೆ ಅಪೌರುಷೇಯತ್ವ. ಧರ್ಮಾದಿಬೋಧಕವಾದ ವಾಕ್ಯಕ್ಕೆ ಕರ್ತೃವಾದ ಪುರುಷನಲ್ಲಿ ಸರ್ವಜ್ಞತ್ವ ಕಲ್ಪನೆಯು ಸಾಕ್ಷಾತ್ ಉಪಪಾದಕವಲ್ಲ. ಕರ್ತೃವು ಸರ್ವಜ್ಞನಾದುದರಿಂದ ಅವನಲ್ಲಿ ಅಜ್ಞಾನಾದಿದೋಷಗಳಿಲ್ಲ. ಆದರಿಂದಾಗಿ ಅವನಿಂದ ರಚಿತವಾದ ವಾಕ್ಯವು ವಿಶ್ವಾಸಾರ್ಹ, ಹೀಗೆ ಪರಂಪರಯಾ ಬಹುಕಲ್ಪನೆಯ ಮೂಲಕ ಅದು ಅರ್ಥಾಪತ್ತಿಗೆ ಉಪಪಾದಕವಾಗುತ್ತದೆ. ಆದ್ದರಿಂದ ಕರ್ತೃಸಾರ್ವಜ್ಞ್ಯವು ಅರ್ಥಾಪತ್ತಿಯಿಂದ ಸಿದ್ಧವಾಗುವುದಿಲ್ಲ.

ಸಾಕ್ಷಾದುಪಪಾದಕ ಇದ್ದಾಗಲೂ ಪರಂಪರಯಾ ಉಪಪಾದಕವನ್ನು ಅರಸುವುದಾದಲ್ಲಿ ವೇದವು ಅಸರ್ವಜ್ಞಪುರುಷನಿಂದ ರಚಿತವಾಗಿದೆ ಎಂದು ಅಂಗೀಕರಿಸಿ ಆದರೂ, ಆದರಲ್ಲಿ ನಂಬಿಕೆ ಬರುವುದಕ್ಕಾಗಿ ಸರ್ವಜ್ಞ ರಚಿತವಾದ ವಾಕ್ಯಾಂತರದ ಸಂವಾದವು ಇದೆ ಎಂದು ಕಲ್ಪಿಸಬೇಕಾದೀತು.

**ವಿವರಣೆ**—ಧರ್ಮಾದಿಗಳ ಬಗ್ಗೆ ವಿಶ್ವಾಸ ಬರಬೇಕಾದರೆ ವೇದವನ್ನು ಅಪೌರುಷೇಯ ವೆಂದು ಅಂಗೀಕರಿಸಬೇಕು. ವೇದಾಪೌರುಷೇಯತ್ವವನ್ನು ಅಂಗೀಕರಿಸದಿದ್ದಲ್ಲಿ ಧರ್ಮಾದಿಗಳಲ್ಲಿ ವಿಶ್ವಾಸ ಬರಲಿಕ್ಕಿಲ್ಲ. ಹೀಗೆ ಅರ್ಥಾಪತ್ತಿಯಿಂದ ವೇದಾಪೌರುಷೇಯತ್ವವನ್ನು ಸಾಧಿಸಲಾಗಿದೆ. ತಾರ್ಕಿಕರು, ವೇದವು ಪೌರುಷೇಯವಾದರೂ ಅದನ್ನು ರಚಿಸಿರುವ ಈಶ್ವರನು ಸರ್ವಜ್ಞನಾದುದರಿಂದ ಧರ್ಮಾದಿಗಳಲ್ಲಿ ವಿಶ್ವಾಸವು ಬರುತ್ತದೆ, ಎನ್ನುತ್ತಾರೆ. ಇದು ಧರ್ಮದ ನಂಬಿಕೆಗೆ ಪರಂಪರಯಾ ಉಪಪಾದಕ. ಈಶ್ವರನು ಸರ್ವಜ್ಞ. ಆದ್ದರಿಂದ ಅವನಲ್ಲಿ ಅಜ್ಞಾನಾದಿದೋಷಗಳು ಇಲ್ಲ. ಅಂತಹನು ವೇದವನ್ನು ರಚಿಸಿದ್ದಾನೆ. ಆದ್ದರಿಂದ ವೇದೋಕ್ತವಿಷಯ ನಂಬಿಕೆಗೆ ಅರ್ಹವಾಗಿದೆ. ಹೀಗೆ ಇದು ಪರಂಪರಯಾ ಧರ್ಮದ ನಂಬಿಕೆಗೆ ಕಾರಣವಾಗುತ್ತದೆ. ಧರ್ಮವನ್ನು ನಿರೂಪಿಸುವ ವೇದವು ಅಪೌರುಷೇಯ, ಎಂದು ಕಲ್ಪಿಸುವುದು ಧರ್ಮದ ನಂಬಿಕೆಗೆ ಸಾಕ್ಷಾತ್ ಕಾರಣವಾಗುತ್ತದೆ. ಹೀಗೆ ಅರ್ಥಾಪತ್ತಿಗೆ ಸಾಕ್ಷಾತ್ ಸಾಧಕವಾಗಿರುವುದರಿಂದ ವೇದಾಪೌರುಷೇಯತ್ವವನ್ನೇ ಅಂಗೀಕರಿಸಬೇಕು.

## ನ್ಯಾಯದೀಪ

**पौरुषेयेति ।** ईश्वरकृतेत्यर्थः । तत्सिद्धिः=धर्मादिनिश्चयः । अज्ञानं= विवक्षितार्थतत्त्वज्ञानाभावः। ज्ञात्वापि परप्रतारणं विप्रलम्भः । घटोऽस्तीति वाच्ये पटोऽस्तीत्युक्तिः प्रमादः । **तन्निवृत्त्यर्थमिति ।** पुरुषेषु सम्भाविताज्ञानादिदोष-निमित्तकानाश्वासाभाव-सिद्ध्यर्थ-मित्यर्थः । **नित्येति ।** दोषजन्यत्वेन भ्रमत्वनिवृत्त्यर्थं नित्येति सार्वज्ञ्य-विशेषणम् । शब्द एवेत्यत्र सप्तम्यन्तं शब्दपदम् । को विशेष इत्यत उक्तं—**मात्रमिति ।** तत्रतु सार्वज्ञ्यादिकं वह्नित्यग्रे व्यक्तम् ॥

ಮೂಲದಲ್ಲಿ ಕರ್ತೃದೋಷವಾಗಿ ಪರಿಗಣಿತವಾದ ಅಜ್ಞಾನ ಎಂದರೆ, ತಾನು ಹೇಳಬೇಕಾಗಿರುವ (ವಿವಕ್ಷಿತ) ವಿಷಯಗಳ ಜ್ಞಾನವಿಲ್ಲದಿರುವುದು. ವಿಷಯ ತಿಳಿದಿದ್ದರೂ ಅದನ್ನು ಮುಚ್ಚಿಟ್ಟು ತಪ್ಪು ತಪ್ಪಾಗಿ ಹೇಳುವುದು ವಿಪ್ರಲಂಭ. 'ಘಟಃ ಅಸ್ತಿ' ಎಂದು ಹೇಳಬೇಕಾದಲ್ಲಿ 'ಪಟಃ ಅಸ್ತಿ' ಎಂದು ಹೇಳುವುದು ಪ್ರಮಾದ.

ತನ್ನಿವೃತ್ತ್ಯರ್ಥಂ ಎಂದರೆ ವ್ಯಕ್ತಿಗಳಲ್ಲಿ ಸಂಭಾವಿತಗಳಾದ ಈ ಅಜ್ಞಾನಾದಿ ದೋಷಗಳಿಂದಾಗಿ ಆ ವ್ಯಕ್ತಿಗಳು ರಚಿಸಿರುವ ವಾಕ್ಯಗಳಲ್ಲಿ ಅಪನಂಬಿಕೆಯ ಪರಿಹಾರಕ್ಕಾಗಿ, ಎಂದರ್ಥ. ಅಪನಂಬಿಕೆಯ ಪರಿಹಾರಕ್ಕಾಗಿ ವೇದವನ್ನು ರಚಿಸಿರುವ ಈಶ್ವರನಿಗೆ ಸಾರ್ವಜ್ಞ್ಯವನ್ನು ಒಪ್ಪಿದರಷ್ಟೇ ಸಾಲದು.

ನಿತ್ಯಸಾರ್ವಜ್ಞ್ಯವನ್ನು ಒಪ್ಪಬೇಕು. ಹಾಗೆ ಒಪ್ಪಿದಾಗ ಅವನ ಜ್ಞಾನವು ಎಂದೂ ದೋಷಜನ್ಯವಾಗಿ ಭ್ರಮೆ ಎನಿಸುವುದಿಲ್ಲ. ಮೂಲದಲ್ಲಿ ನಿತ್ಯತ್ವವು ಸರ್ವಜ್ಞತ್ವಕ್ಕೆ ವಿಶೇಷಣ.

ಮೂಲದಲ್ಲಿ 'ಶಬ್ದ ಏವ' ಎನ್ನುವುದನ್ನು 'ಶಬ್ದಃ ಏವ' ಎಂದು ಪ್ರಥಮಾಂತವಾಗಿ ಪರಿಗಣಿಸದೆ ''ಶಬ್ದೇ ಏವ'' ಎಂದು ಸಪ್ತಮ್ಯಂತವನ್ನಾಗಿ ತಿಳಿಯಬೇಕು.

ವೇದಕ್ಕಾದರೆ ಅಪೌರುಷೇಯತ್ವ ಒಂದನ್ನೇ ಕಲ್ಪನೆ ಮಾಡಿದರೆ ಸಾಕು. ಆದರೆ ವೇದವು ಈಶಪ್ರಣೀತ ಎಂದು ಕಲ್ಪಿಸಿದಾಗ ಈಶನಿಗೆ ಸರ್ವಜ್ಞತ್ವ, ಅವಿಪ್ರಲಂಭ ಇತ್ಯಾದಿ ಅನೇಕ ಕಲ್ಪನೆಗಳನ್ನು ಮಾಡಬೇಕಾಗುತ್ತದೆ. ಅದು ಮುಂದೆ (ಪುಟ.29) ಸ್ಪಷ್ಟವಾಗುತ್ತದೆ.

## ನ್ಯಾಯದೀಪ

**विशेषान्तरं चाह—अर्थापत्तेरिति । धर्मादिनिश्चयरूपस्योपपादकप्रमाणेन विनाऽनुपपद्यमानस्यार्थापत्तिशब्दितस्य साक्षादुपपादकं हि धर्मादिप्रमापकशब्दे अपौरुषेयत्वम् । नित्यसार्वज्ञ्यादिकन्तु तत्र धर्मादिनिश्चायकत्वोपपादकोपपादकम् । अज्ञानादिदोषहीनपुरुषकृतत्वं तदुपपादकम् । तदुपपादकं च सार्वज्ञ्यमिति परम्परयोपपादकं, बहु च तत् कल्प्यम् । तथाचाल्पत्वात् साक्षादुपपादकत्वात् तदेव कल्प्यमिति भावः ।**

ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪಿದಾಗ ಇನ್ನೊಂದು ವಿಶೇಷವನ್ನು 'ಅರ್ಥಾಪತ್ತೇಃ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಅದರ ಅಭಿಪ್ರಾಯ ಹೀಗೆ— ಉಪಪಾದಕಪ್ರಮಾಣ ಇಲ್ಲದೆ ಧರ್ಮಾದಿ ನಿಶ್ಚಯವು ಅನುಪಪನ್ನ, ಇದೇ ಅರ್ಥಾಪತ್ತಿ. ಅನುಪಪನ್ನವಾದ ಈ ಅರ್ಥಕ್ಕೆ ಸಾಕ್ಷಾತ್ ಉಪಪಾದಕವಾದುದು ವೇದಾಪೌರುಷೇಯತ್ವ. ವೇದವು ಅಪೌರುಷೇಯವಾದರೆ ಸಾಕು. ಧರ್ಮಾದಿಸಾಧಕವಾದ ವೇದದಲ್ಲಿ ವಿಶ್ವಾಸ ಉಂಟಾಗಿ ಧರ್ಮಾದಿಗಳ ನಿಶ್ಚಯವು ಬರುತ್ತದೆ. ಇದನ್ನು ಬಿಟ್ಟು ವೇದಕರ್ತನಾದ ಈಶ್ವರನಿಗೆ ನಿತ್ಯಸರ್ವಜ್ಞತ್ವವನ್ನು ಅಂಗೀಕರಿಸುವುದು ಉಪಪಾದಕಕ್ಕೆ ಉಪಪಾದಕ. ಹೇಗೆಂದರೆ, ಅರ್ಥಾಪತ್ತಿಗೆ ಸಾಕ್ಷಾತ್ ಉಪಪಾದಕವಾದುದು ಅಜ್ಞಾನಾದಿ ದೋಷರಹಿತನಾದ ವ್ಯಕ್ತಿರಚಿತತ್ವ. ವೇದವು ಅಜ್ಞಾನಾದಿ ರಹಿತವ್ಯಕ್ತಿಯಿಂದವದ ರಚಿತವಾಗಿದೆ, ಎಂದು ದೃಢವಾದರೆ ವೇದೋಕ್ತವಾದ ಧರ್ಮಾದಿಗಳ ನಿರ್ಧಾರವಾಗುತ್ತದೆ. ಈ ದೋಷರಹಿತ ಪುರುಷಪ್ರಣೀತತ್ವಕ್ಕೆ ಉಪಪಾದಕವಾದುದು ವೇದವನ್ನು ರಚಿಸಿರುವ ಈಶ್ವರನು ಸರ್ವಜ್ಞ, ಎಂಬ ಕಲ್ಪನೆ. ಹೀಗೆ ನಿತ್ಯಸರ್ವಜ್ಞತ್ವವು ಅರ್ಥಾಪತ್ತಿಯ ಉಪಪಾದಕಕ್ಕೆ ಉಪಪಾದಕ. ಸಾಕ್ಷಾತ್

ಉಪಪಾದಕವಲ್ಲ. ಈ ಪಕ್ಷದಲ್ಲಿ ಸರ್ವಜ್ಞತ್ವ, ಅವಿಪ್ರಲಂಭಕತ್ವ, ತತ್ತ್ವತತ್ತ್ವ ಇತ್ಯಾದಿ ಅನೇಕ ವಿಷಯಗಳ ಕಲ್ಪನೆಯನ್ನೂ ಮಾಡಬೇಕಾಗುತ್ತದೆ. ಅದಕ್ಕಿಂತ ವೇದಾಪೌರುಷೇಯತ್ವ ಕಲ್ಪನೆಯು ಅಲ್ಪಕಲ್ಪನೆ ಹಾಗೂ ಸಾಕ್ಷಾತ್ ಉಪಪಾದಕವಾದುದರಿಂದ ಅದನ್ನೇ ಕಲ್ಪಿಸಬೇಕು.

## ನ್ಯಾಯದೀಪ

ननु लोके क्वापि शब्देऽपौरुषेयत्वादृष्टेः परम्परा युक्तैवेत्यत आह— **अन्यथेति** । एवं साक्षादुपपादके सम्भवति शब्दत्वपौरुषेयत्वयोः सहदर्शनमात्रेण परम्पराश्रयण इत्यर्थः । **अङ्गीकृत्येति** । शब्दमात्रेऽसर्वज्ञप्रणीतत्वस्य लोके दर्शनादिति भावः ।

ಪೂರ್ವಪಕ್ಷ—ಅರ್ಥಾಪತ್ತಿಗೆ ಪರಂಪರಯಾ ಉಪಪಾದಕ ಕಲ್ಪನೆಯೇ ಉಚಿತವಾಗುತ್ತದೆ. ಏಕೆಂದರೆ, ಸಾಕ್ಷಾತ್ ಉಪಪಾದಕವಾದರೂ ವೇದಾಪೌರುಷೇಯತ್ವವು ಎಲ್ಲೂ ಕಾಣದ ವಿಷಯ. ಅಪೌರುಷೇಯವಾದ ಶಬ್ದವು ಕಂಡೇ ಇಲ್ಲ. ಶಬ್ದಗಳೆಲ್ಲವೂ ಪೌರುಷೇಯಗಳಾಗಿಯೇ ಕಂಡಿವೆ. ಆದ್ದರಿಂದ ಪರಂಪರಾಸಾಧಕವನ್ನೇ ಕಲ್ಪಿಸಬೇಕು.

ಈ ಆಕ್ಷೇಪಕ್ಕೆ ಪ್ರತಿಬಂದಿಯನ್ನು 'ಅನ್ಯಥಾ' ಎಂಬ ಮೂಲ ವಾಕ್ಯದಲ್ಲಿ ಹೇಳಲಾಗಿದೆ. ಅನ್ಯಥಾ ಎಂದರೆ ಅರ್ಥ–ಸಾಕ್ಷಾತ್ ಉಪಪಾದಕವು ಇದ್ದರೂ ಶಬ್ದತ್ವ ಮತ್ತು ಪೌರುಷೇಯತ್ವಗಳಿಗೆ ಸಹಚಾರದರ್ಶನ ಮಾತ್ರದಿಂದ ಅಪೌರುಷೇಯತ್ವರೂಪ ಸಾಕ್ಷಾತ್ ಉಪಪಾದಕವನ್ನು ಬಿಟ್ಟು ಪರಂಪರಯಾ ಉಪಪಾದಕವನ್ನು ಅನುಸರಿಸುವುದಾದರೆ.

ವೇದವು ಅಸರ್ವಜ್ಞಪ್ರಣೀತವೆಂದು ಅಂಗೀಕರಿಸಿ...ಎಂದಿದೆ ಮೂಲದಲ್ಲಿ. ಅದಕ್ಕೂ ಒಂದು ಕಾರಣವಿದೆ— ಲೋಕದಲ್ಲಿ ಎಲ್ಲಾ ವಾಕ್ಯಗಳು ಪುರುಷಪ್ರಣೀತವಾಗಿರುವಂತೆ ಎಲ್ಲಾ ವಾಕ್ಯಗಳೂ ಅಸರ್ವಜ್ಞಪುರುಷಪ್ರಣೀತವಾಗಿಯೇ ಕಂಡಿವೆ. ಹೀಗೆ ಸಹಚಾರದರ್ಶನವು ಇರುವುದರಿಂದ ವೇದವೂ ಅಸರ್ವಜ್ಞಪ್ರಣೀತವೆಂದು ಕಲ್ಪಿಸಬೇಕಾದೀತು.

**तदुक्तं भगवत्पादैः ''अपौरुषेयबाक्याङ्गीकारे न किंश्चित् कल्प्यम्'' इति । साक्षात् बोधके वाक्ये अपौरुषेयत्वमात्राङ्गीकार इत्यर्थः ॥**

ವೇದಾಪೌರುಷೇಯತ್ವಕಲ್ಪನೆಯೇ ಲಘು ಎಂದು ಭಗವತ್ಪಾದರಿಂದ ಹೇಳಲ್ಪಟ್ಟಿದೆ— ''ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪಿದರೆ ಬಹುವಿಧಕಲ್ಪನೆ ಇಲ್ಲ' ಎಂದು. ಅಲ್ಲಿ ಅಪೌರುಷೇಯತ್ವಾಂಗೀಕಾರೇ ಎಂದರೆ 'ಧರ್ಮಾದಿಗಳನ್ನು ನೇರವಾಗಿ ತಿಳಿಸುವ ವೇದವಾಕ್ಯದಲ್ಲಿ ಅಪೌರುಷೇಯತ್ವವನ್ನಷ್ಟೇ ಒಪ್ಪಿದಾಗ, ಎಂದರ್ಥ.

## ನ್ಯಾಯದೀಪ

**तदुक्तमिति ।** अपौरुषेयत्वमात्रकल्पनं लघ्वित्येतत् तत्त्वनिर्णये उक्तमित्यर्थः ।।

यद्वा, अभ्युपेत्योक्तमपौरुषेयत्वमात्रं कल्प्यमिति । तदपि न कल्प्यमेवेत्येतत्संमत्युक्तिव्याजेनाह–**तदुक्तमिति । न किञ्चिदिति ।** अपौरुषेयत्वमपि वेदकर्तुरप्रसिद्धेरेव सिद्धमिति भावः ।

वेदकर्तृपुरुषगतदोषहीनत्वोपपादक-वक्तृसार्वज्ञ्यप्रतिपादकतया परम्परया धर्मादिबोधकापौरुषेयवाक्याङ्गीकार इति भ्रान्तिनिरासाय प्रकृतोपयोगितयार्थमाह—**साक्षादिति ।** साक्षाद्धर्मादिबोधक इत्यर्थः ।।

ತದುಕ್ತಮ್ ಎಂಬ ಮೂಲಕ್ಕೆ, ಅಪೌರುಷೇಯತ್ವಮಾತ್ರವನ್ನು ಕಲ್ಪನೆ ಮಾಡುವುದು ಲಾಘವ ಎನ್ನುವುದನ್ನು ತತ್ತ್ವನಿರ್ಣಯದಲ್ಲಿ ಹೇಳಲಾಗಿದೆ, ಎಂದರ್ಥ.

ಅಥವಾ 'ತದುಕ್ತಂ' ಎಂಬ ಮೂಲವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿಯಬಹುದು— ವೇದದಲ್ಲಿ ಅಪೌರುಷೇಯತ್ವವನ್ನಷ್ಟೇ ಕಲ್ಪನೆ ಮಾಡಿದರೆ ಸಾಕು, ಎಂದು ಹೇಳಿರುವುದು ಅಭ್ಯುಪಗಮವಾದ. ವಸ್ತುತಃ ಅದನ್ನೂ ಕಲ್ಪನೆ ಮಾಡಬೇಕಾಗಿಲ್ಲ, ಅದೂ ಸಿದ್ಧ. ಅದಕ್ಕೆ ಆಚಾರ್ಯರ ಸಮ್ಮತಿ ಇದೆ, ಎಂದು 'ತದುಕ್ತಂ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಆಚಾರ್ಯರ ವಾಕ್ಯದಲ್ಲಿ 'ನ ಕಿಂಚಿತ್ ಕಲ್ಪ್ಯಂ' ಎಂದರೆ, ವೇದಕ್ಕೆ ಅಪೌರುಷೇಯತ್ವವನ್ನೂ ಕಲ್ಪನೆ ಮಾಡಬೇಕಾಗಿಲ್ಲ. ವೇದಕರ್ತೃವು ಅಪ್ರಸಿದ್ಧನಾದುದರಿಂದ ಅಪೌರುಷೇಯತ್ವವು ಸಿದ್ಧವೇ ಆಗಿದೆ, ಎಂದು ಅಭಿಪ್ರಾಯ.

ಆಚಾರ್ಯರ ತತ್ತ್ವನಿರ್ಣಯವಾಕ್ಯ ''ಅಪೌರುಷೇಯವಾಕ್ಯಾಂಗೀಕಾರೇ' ಎಂದಿದೆ. ಇದಕ್ಕೆ ಹೀಗೂ ಅರ್ಥವಾಗಬಹುದು—ವೇದವು ಈಶ್ವರಕರ್ತೃಕ. ಕರ್ತೃವಾದ ಈಶ್ವರನಿಗೆ ಅಜ್ಞಾನಾದಿ ದೋಷಹೀನತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಅವನಿಗೆ ಸರ್ವಜ್ಞತ್ವವನ್ನು ಪ್ರತಿಪಾದಿಸುವ ಒಂದು ವಾಕ್ಯವಿದೆ. ಆ ವಾಕ್ಯವು ಪರಂಪರಯಾ ಧರ್ಮಾದಿಬೋಧಕ. ಅದಕ್ಕೆ ಅಪೌರುಷೇಯತ್ವವನ್ನು ಅಂಗೀಕರಿಸಿದರೆ 'ನ ಕಿಂಚಿತ್ ಕಲ್ಪ್ಯಮ್' ಎಂದು. ಆದರೆ, ಈ ಅರ್ಥ ಅವಿವಕ್ಷಿತ. ಅದಕ್ಕಾಗಿ ವಿವಕ್ಷಿತಾರ್ಥವನ್ನು ತಿಳಿಸಲು ''ಸಾಕ್ಷಾದ್ಬೋಧಕೇ' ಎಂಬ ಮೂಲವಾಕ್ಯವಿದೆ. ಅಂದರೆ ಧರ್ಮಾದಿಗಳನ್ನು ಸಾಕ್ಷಾತ್ ಬೋಧಿಸುವ, ತಾರ್ಕಿಕರು ಈಶಕೃತವೆಂದು ಹೇಳುವ ವಾಕ್ಯಕ್ಕೆ (ವೇದಕ್ಕೆ) ಅಪೌರುಷೇಯತ್ವವನ್ನು ಅಂಗೀಕರಿಸಿದಾಗ ಯಾವ ಕಲ್ಪನೆಗೂ ಅವಕಾಶವಿಲ್ಲ, ಎಂದು ಆಚಾರ್ಯರ

ವಾಕ್ಯದ ಅಭಿಪ್ರಾಯ. ಇದನ್ನು ತಿಳಿಸುವುದಕ್ಕಾಗಿ "ಸಾಕ್ಷಾತ್..." ಎಂಬ ತರ್ಕತಾಂಡವದ ವಾಕ್ಯವಿದೆ.

## ಅವತಾರಿಕೆ

**एवं स्वपक्षे लाघवोपपादनेन पौरुषेयशब्दाप्रमाणकत्वादिरूपम् अपौरुषेयेतरावृत्तित्वरूपं च विशेषणं समर्थ्य परपक्षे वक्ष्यमाणानुव्याख्यानोक्तगौरवोपपादनेन च समर्थयते—किञ्चेति ।**

**यद्वा न किञ्चित् कल्प्यमित्ययुक्तम् । अपौरुषेयत्वस्य कल्प्यत्वात्, इत्यतः अस्तु तावदेतावत् । तथापि न तत्रैव बह्विति भावेनाह—किञ्चेति ॥**

ಇದುವರೆಗಿನ ಮೂಲಗ್ರಂಥದಲ್ಲಿ, ಸ್ವಪಕ್ಷದಲ್ಲಿ (ಅಪೌರುಷೇಯತ್ವಪಕ್ಷದಲ್ಲಿ) ಲಾಘವವನ್ನು ಸಮರ್ಥಿಸಿ ಆ ಮೂಲಕ ಪ್ರಥಮ ಹೇತುಘಟಕವಾದ "ಪೌರುಷೇಯಶಬ್ದಾಪ್ರಮಾಣಕತ್ವೇ ಸತಿ' ಎಂಬ ಹೇತುವಿಶೇಷಣವನ್ನು ಮತ್ತು ಎರಡನೆಯ ಹೇತುಘಟಕವಾದ "ಇಂದ್ರಿಯ–ಲಿಂಗ–ಪೌರುಷೇಯ ಶಬ್ದಾಪ್ರಮಾಣಕತ್ವೇ ಸತಿ" ಎಂಬ ವಿಶೇಷಣವನ್ನು ಹಾಗೂ ಮೂರನೆಯ ಹೇತುಘಟಕವಾದ 'ಅಪೌರುಷೇಯೇತರಾವೃತ್ತಿತ್ವೇ ಸತಿ' ಎಂಬ ವಿಶೇಷಣವನ್ನು ಸಮರ್ಥಿಸಲಾಗಿದೆ. ಮುಂದೆ ಪರಪಕ್ಷದಲ್ಲಿ ಅನುವ್ಯಾಖ್ಯಾನೋಕ್ತವಾದ (ಕಲ್ಪ್ಯಗೌರವದೋಷೇಣ...) ಗೌರವದೋಷವನ್ನು ಹೇಳುವ ಮೂಲಕ ಆ ವಿಶೇಷಣಗಳನ್ನು ಸಮರ್ಥಿಸಲಾಗಿದೆ.

ಅಥವಾ, 'ಕಿಂಚ' ಎಂಬ ಮೂಲವಾಕ್ಯವನ್ನು ಇನ್ನೊಂದು ರೀತಿಯಿಂದ ಪ್ರಕೃತಸಂಗತವನ್ನಾಗಿ ತಿಳಿಯಬಹುದು—"ಅಪೌರುಷೇಯವಾಕ್ಯಾಂಗೀಕಾರೇ ನ ಕಿಂಚಿತ್ ಕಲ್ಪ್ಯಮ್' ಎಂದು ಆಚಾರ್ಯರು ಹೇಳಿರುವುದು ಸರಿಯಲ್ಲ. ಏಕೆಂದರೆ, ಆ ಪಕ್ಷದಲ್ಲೂ ವೇದಕ್ಕೆ ಅಪೌರುಷೇಯತ್ವವನ್ನು ಕಲ್ಪನೆ ಮಾಡಲೇಬೇಕು. ಹೀಗೆ ಆಕ್ಷೇಪ ಬಂದರೆ 'ಆಗಲಿ, ನಮ್ಮ ಪಕ್ಷದಲ್ಲಿ ಅದೊಂದೇ ಕಲ್ಪನೆ. ನಿಮ್ಮಂತೆ ಅನೇಕ ಕಲ್ಪನೆ ಇಲ್ಲ' ಇದನ್ನು ಕಿಂಚ ಎಂಬ ಮೂಲವಾಕ್ಯ ಹೇಳುತ್ತದೆ.

**किञ्च, अप्रामाणिकानां सार्वज्ञ्याविप्रलम्भकत्वाप्रमादकरणपाटवोपदेष्टृत्वादीनां वेदे तत्कृतत्वस्य च कल्पनीयत्वे कल्पनागौरवं स्यात् ।**

**नच सार्वज्ञ्येनैवाविप्रलम्भादिसिद्धिः। सर्वज्ञेश्वरावतारेष्वपि बुद्धादिषु विप्रलम्भादिदर्शनात् । सर्वज्ञस्य शरीरेऽपि शरीरत्वकृतकरणापाटवा-**

**देरवर्जनीयत्वात् । ज्ञानिनामप्युपदेशवैमुख्यदर्शनात् । वेदे तत्कृतत्व-प्रसिद्ध्यभावेन तस्यापि कल्प्यत्वात् ।**

**कार्यत्वाद्यनुमानेनेश्वरस्य सार्वज्ञ्यसिद्धिस्तु निरसिष्यते ॥**

ಪೌರುಷೇಯತ್ವ ಪಕ್ಷದಲ್ಲಿ ಅಪ್ರಾಮಾಣಿಕವಾದ ಕರ್ತೃಸಾರ್ವಜ್ಞ್ಯ, ಅವಿಪ್ರಲಂಭಕತ್ವ, ಅಪ್ರಮಾದ, ಕರಣಪಾಟವ, ಸ್ವಜನೋಪದೇಶಕತ್ವ, ವೇದದಲ್ಲಿ ತತ್‌ಕೃತತ್ವ ಇವುಗಳನ್ನು ಕಲ್ಪನೆ ಮಾಡಬೇಕಾದುದರಿಂದ ಕಲ್ಪನಾಗೌರವದೋಷ ಬರುತ್ತದೆ.

ಕರ್ತೃವಿಗೆ ಸರ್ವಜ್ಞತ್ವವನ್ನು ಮಾತ್ರ ಕಲ್ಪನೆ ಮಾಡಿದರೆ ಸಾಕು. ಅದರಿಂದಲೇ ವಿಪ್ರಲಂಭಾದಿ ದೋಷಾಭಾವಗಳೂ ಸಿದ್ಧವಾಗುತ್ತವೆ, ಎನ್ನುವುದು ಸರಿಯಲ್ಲ. ಸರ್ವಜ್ಞನಾದ ಮಾತ್ರಕ್ಕೆ ವಿಪ್ರಲಂಭಾದಿಗಳು ಇಲ್ಲವೆಂದು ಹೇಳಲಾಗದು. ಸರ್ವಜ್ಞಭಗವದವತಾರನಾದ ಬುದ್ಧನಲ್ಲಿ ವಿಪ್ರಲಂಭಾದಿದೋಷಗಳು ಕಂಡಿವೆ. ವ್ಯಕ್ತಿ ಸರ್ವಜ್ಞನಾದರೂ ಅವನ ದೇಹವು ಪಾಂಚಭೌತಿಕವಾದ ಕಾರಣ ತತ್‌ಪ್ರಯುಕ್ತ ಕರಣಗಳ ಅಪಾಟವಾದಿಗಳು ಅನಿವಾರ್ಯ. (ತಾರ್ಕಿಕರು ಈಶ್ವರನಿಗೆ ಶರೀರವಿಲ್ಲ, ಎನ್ನುತ್ತಾರೆ. ಶರೀರವಿಲ್ಲದಿದ್ದರೆ ವೇದವನ್ನು ಉಪದೇಶ ಮಾಡಲು ಸಾಧ್ಯವಿಲ್ಲ. ಆದಕ್ಕಾಗಿ ಈಶ್ವರನಿಗೆ ತಾತ್ಕಾಲಿಕ ಶರೀರವನ್ನು ಅಂಗೀಕರಿಸಬೇಕಾಗುತ್ತದೆ).[1] ಇಷ್ಟೇ ಕಲ್ಪನೆ ಮಾಡಿದರೆ ಸಾಲದು. ವೇದವು ಈಶ್ವರ ರಚಿತವೆಂದು ಪ್ರಸಿದ್ಧಿ ಇಲ್ಲದಿರುವುದರಿಂದ ಅದನ್ನೂ ಕಲ್ಪನೆ ಮಾಡಬೇಕು.

ಈಶ್ವರಸಾಧಕವಾದ ಕಾರ್ಯತ್ವಾನುಮಾನದಿಂದ ಈಶ್ವರ ಸರ್ವಜ್ಞನಾಗಿಯೇ ಸಿದ್ಧನಾಗುವುದರಿಂದ ಅವನಲ್ಲಿ ಸರ್ವಜ್ಞತ್ವವನ್ನು ಕಲ್ಪನೆ ಮಾಡಬೇಕಾಗಿಲ್ಲ ಎನ್ನುವುದು ಸರಿಯಲ್ಲ. ಈಶ್ವರಾನುಮಾನದಿಂದ ಸಾರ್ವಜ್ಞ್ಯ ಸಿದ್ಧಿಯನ್ನು ಮುಂದೆ ಈಶ್ವರವಾದದಲ್ಲಿ ನಿರಾಕರಿಸಲಾಗುತ್ತದೆ.

## ನ್ಯಾಯದೀಪ

**ननु सार्वज्ञ्यादिकं नाप्रामाणिकं कार्यत्वाद्यनुमानेन सिद्धेः । सार्वज्ञ्येनैव च सर्वदोषहीनता सिध्यति । तथाहि । धर्मादिसाक्षात्कारवतो न रागादिदोषाः सम्भवन्ति । ''अविद्याक्षेत्रत्वमुत्तरेषाम्'' इति**

१. ''सर्गादौ अदृष्टोपगृहीत-भूतभेदात् मीनशरीरोत्पत्तौ...अदृष्टसकृतप्रयतात्नवदीश्वर-संयोगाद्वा सकलवेदार्थगोचर-ज्ञानाद्विवक्षासहितात् मीनकलेवर-कंठताल्वादिक्रिया-तज्जन्यसंयोगात् वेदोत्पत्तिः।...सोऽयं भूतावेशन्यायः'' (मणिः-ईश्वरवादः)

पतञ्जल्युक्त्या तेषामज्ञानमूलत्वात् । सर्वज्ञेऽज्ञानायोगात् । रागादिरहितस्य च तत्कार्यविप्रलम्भायोगात् । एवंभूतमहानुभावस्य करणापाटवादेरनाशङ्क्यत्वात् । ज्ञानी सन्नज्ञलोकाय कुतो नोपदिशेत् ? प्रसिद्धवेदे तदुपदेशकल्पनस्य लघुत्वाचेत्याशङ्क्य प्रत्याह— **नचेत्यादिना निरसिष्यत** इत्यन्तेन ।

ಈಶ್ವರನಿಗೆ ಸರ್ವಜ್ಞತ್ವಾದಿಗಳು ಅಪ್ರಾಮಾಣಿಕವಾದ ಕಲ್ಪನೆಗಳಲ್ಲ. ಈಶ್ವರಸಾಧಕಾನುಮಾನದಿಂದಲೇ ಅವೆಲ್ಲವೂ ಸಿದ್ಧವಾಗುತ್ತವೆ— ಆ ಅನುಮಾನದಿಂದ ಸರ್ವಜ್ಞನಾದ ಈಶ್ವರ ಸಿದ್ಧನಾಗುತ್ತಾನೆ. ಏಕೆಂದರೆ, ಅವನು ಜಗತ್ಕರ್ತನಾಗಬೇಕಾದರೆ ಅವನಿಗೆ ಜಗದುಪಾದಾನಗಳು ತಿಳಿದಿರಬೇಕು. ಹೀಗೆ ಸರ್ವಜ್ಞನೆಂದು ಸಿದ್ಧನಾದ ಮೇಲೆ ಸರ್ವದೋಷರಹಿತತ್ವವೂ ಸಿದ್ಧವಾಗುತ್ತದೆ. ಸರ್ವಜ್ಞನಾದುದರಿಂದ ಧರ್ಮಾದಿಗಳ ಸಾಕ್ಷಾತ್ಕಾರವೂ ಅವನಿಗಿದೆ. ಅಂತಹವನಿಗೆ ರಾಗಾದಿದೋಷಗಳು ಇರಲು ಸಾಧ್ಯವಿಲ್ಲ. ಪತಂಜಲಿಯು ಯೋಗಸೂತ್ರದಲ್ಲಿ (ಅವಿದ್ಯಾಕ್ಷೇತ್ರತ್ವಮುತ್ತರೇಷಾಮ್) ಉತ್ತರೇಷಾಂ=ಮುಂದಿನ ರಾಗಾದಿ ದೋಷಗಳು ಅವಿದ್ಯಾಕ್ಷೇತ್ರತ್ವಂ=ಅವಿದ್ಯೆಯಿಂದ ಜನ್ಯಗಳು ಎಂದಿರುತ್ತಾನೆ. ಸರ್ವಜ್ಞನಾದ ಈಶ್ವರನಿಗೆ ಅಜ್ಞಾನವು ಇಲ್ಲವಾದುದರಿಂದ ಅಜ್ಞಾನಕಾರ್ಯವಾದ ರಾಗಾದಿದೋದಷಗಳೂ ಇಲ್ಲ. ರಾಗಾದಿಗಳು ಇಲ್ಲದಿದ್ದರೆ ವಿಪ್ರಲಂಭಕತ್ವವೂ ಬರಲಾರದು. ವಿಪ್ರಲಂಭವು ರಾಗಾದಿಗಳ ಕಾರ್ಯ. ದುರಾಸೆಯಿಂದ ಅಥವಾ ದ್ವೇಷದಿಂದ ಮತ್ತೊಬ್ಬರಿಗೆ ಮೋಸಮಾಡಬಹುದು. ಅನಾವಶ್ಯಕವಾಗಿ ಮೋಸಮಾಡುವುದಿಲ್ಲ. ಇಂತಹ ಮಹಾನುಭಾವನಿಗೆ ಬಾಯಿ, ಕಿವಿ ಮುಂತಾದ ಕರಣಗಳು ಸರಿ ಇಲ್ಲ, ಎಂಬ ಕಲ್ಪನೆಯೇ ಬರಲಾರದು. ದುಃಖದ ಕಾರಣವನ್ನು ತಿಳಿದಿರುವ ಈಶ್ವರನು ತನ್ನ ಮುಂದೆ ಅಜ್ಞ ಜನರು ದುಃಖಪಡುವುದನ್ನು ನೋಡಿ ಸುಮ್ಮನಿರಲಾರ. ಅವನು ಉಪದೇಶ ಮಾಡಿಯೇ ಇರುತ್ತಾನೆ. ಅವನು ನೀಡಿದ ಉಪದೇಶ ಬೇರಾವುದೋ ಆಗಿದೆ ಎನ್ನುವುದಕ್ಕಿಂತ ಪ್ರಸಿದ್ಧವಾದ ವೇದವೇ ಅವನು ಮಾಡಿರುವ ಉಪದೇಶ ಎಂದು ಕಲ್ಪಿಸುವುದು ಲಾಘವ. ಹೀಗೆ, ಪೌರುಷೇಯತ್ವವಾದದಲ್ಲಿ ಮಾಡಿರುವ ಕಲ್ಪನೆಗಳೆಲ್ಲ ಸಾಧಾರವಾಗಿರುವುದರಿಂದ ಕಲ್ಪನಾಗೌರವದೋಷಕ್ಕೆ ಆಸ್ಪದವಿಲ್ಲ. ಈ ಆಕ್ಷೇಪವನ್ನು 'ನ ಚ' ಎಂಬ ಮೂಲದಲ್ಲಿ ಮಾಡಿ ನಿರಾಕರಿಸಲಾಗಿದೆ.

## ನ್ಯಾಯದೀಪ

आदिपदेन अप्रमादादिकं, उपदेष्टृत्वं, वेदे तत्कृतत्वं च गृह्यते । **शरीरेऽपीति** । त्वन्मते सर्वज्ञस्येश्वरस्य नास्ति शरीरं, उपदेशौप-

**यिकतया शरीरेऽङ्गीकृतेऽपीत्यर्थः । ज्ञानिनामपीति । सिद्धाना-मित्यर्थः । व्यक्तमेतत् सर्वं तत्त्वनिर्णयटीकायाम् ।**

'ವಿಪ್ರಲಂಭಾದಿ' ಎಂಬ ಮೂಲದ ಆದಿಪದದಿಂದ ಕರ್ತೃವಿನಲ್ಲಿ ಸಂಭಾವಿತವಾದ ಅಪ್ರಮಾದ–ಉಪದೇಶದ ಕರ್ತೃತ್ವ–ವೇದದಲ್ಲಿ ತತ್ಕೃತತ್ವ ಇವುಗಳು ವಿವಕ್ಷಿತವಾಗಿವೆ.

'ಸರ್ವಜ್ಞಸ್ಯ ಶರೀರೇಽಪಿ' ಎಂದಿದೆ ಮೂಲದಲ್ಲಿ. ಆದರೆ, ತಾರ್ಕಿಕರು ಸರ್ವಜ್ಞನಾದ ಈಶ್ವರನಿಗೆ ಶರೀರವೇ ಇಲ್ಲ ಎನ್ನುತ್ತಾರೆ. ಆದರೂ ವೇದದ ಉಪದೇಶಕ್ಕಾಗಿ ಈಶ್ವರನಿಗೆ ಶರೀರವನ್ನು ಅಂಗೀಕರಿಸಬೇಕಾಗುತ್ತದೆ.

ಜ್ಞಾನಿಗಳೂ ಉಪದೇಶವಿಮುಖರಾಗಿರುವುದು ಕಂಡಿದೆ ಎಂದು ಮೂಲದಲ್ಲಿದೆ. ಸಿದ್ಧಪುರುಷರು ಜ್ಞಾನಿಗಳಾಗಿದ್ದರೂ ಮೌನವಾಗಿಯೇ ಇರುತ್ತಾರೆ, ಎನ್ನುವುದು ಕಂಡ ವಿಷಯ.

ಈ ರೀತಿಯ ಆಕ್ಷೇಪ, ಆದಕ್ಕೆ ಉತ್ತರ ಇವೆಲ್ಲವು ತತ್ತ್ವನಿರ್ಣಯ ಟೀಕೆಯಲ್ಲಿ ವಿಷದವಾಗಿದೆ.

**नच वेदादेव तस्य सार्वज्ञ्यादिसिद्धिः । वेदप्रामण्यस्येश्वर-सार्वज्ञ्यादिसिद्ध्यधीनत्वेन अन्योन्याश्रयात् । अन्यथा बुद्धाद्यागमात् तस्यापि सार्वज्ञ्यादिकं सिद्ध्येत् । तदुक्तं भगवत्पादैः—**

**''अविप्रलम्भस्तज्ज्ञानं तत्कृतत्वादयोऽपि च ।**
**कल्प्या गौरवदोषेण पुंवाक्यं ज्ञापकं न तत् ।।'' इति ।।**

**तस्मान्न विशेषणासिद्धिः ।।**

ವೇದವು ಈಶಪ್ರಣೀತ. ಆ ವೇದದಿಂದಲೇ ಈಶನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ, ಎನ್ನುವುದು ಸರಿಯಲ್ಲ. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಈಶನು ಸರ್ವಜ್ಞನಾದರೆ ತತ್ಪ್ರಣೀತವಾದ ವೇದವು ಪ್ರಮಾಣವಾಗುತ್ತದೆ. ವೇದಪ್ರಮಾಣವಾದರೆ ಆ ವೇದದಿಂದ ಈಶ್ವರನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಹೀಗೆ ವೇದಪ್ರಾಮಾಣ್ಯವು ಈಶ್ವರಸಾರ್ವಜ್ಞ್ಯ ಸಾಪೇಕ್ಷವಾದುದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ. ತತ್ಪ್ರಣೀತವಾಕ್ಯದಿಂದಲೇ ತತ್ಕರ್ತೃವಿಗೆ ಸರ್ವಜ್ಞತ್ವವು ಸಿದ್ಧವಾಗುವುದಾದಲ್ಲಿ ಬುದ್ಧಾದಿರಚಿತವಾದ ಆಗಮುಗಳಿಂದ ಅವರಿಗೂ ಸರ್ವಜ್ಞತ್ವವು ಸಿದ್ಧವಾದೀತು.

ಈ ವಿಷಯಗಳನ್ನು ಆಚಾರ್ಯರು ಜಿಜ್ಞಾಸಾಧಿಕರಣ–ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರ ಅರ್ಥ– ಕರ್ತೃವಿಗೆ ವಿಪ್ರಲಂಭಾಭಾವ, ಧರ್ಮಾದಿಗಳ ಜ್ಞಾನ, ಧರ್ಮಾದಿ ಪ್ರತಿಪಾದಕ

ವಾಕ್ಯಕ್ಕೆ ತತ್‌ಕೃತತ್ವ-ಇತ್ಯಾದಿ ಕಲ್ಪನೆ ಮಾಡಬೇಕಾಗುತ್ತದೆ. ಹೀಗೆ ಗೌರವದೋಷದಿಂದಾಗಿ ಪುರುಷಕೃತವಾಕ್ಯವು ಧರ್ಮಾದಿಗಳ ನಿಶ್ಚಾಯಕವಾಗುವುದಿಲ್ಲ.

ಆದ್ದರಿಂದ ಅಪೌರುಷೇಯತ್ವಸಾಧಕವಾದ ಅನುಮಾನಗಳ ಹೇತುಗಳಲ್ಲಿ ವಿಶೇಷಣಾಸಿದ್ಧಿ ದೋಷವಿಲ್ಲ.

## न्यायदीप

**अन्योन्येति ।** सिद्धे सार्वज्ञ्ये तत्प्रणीतत्वेन वेदप्रामाण्यसिद्धिः, तत्सिद्धौ च तेन सार्वज्ञ्यसिद्धिरित्यर्थः ।

**तदुक्तमिति ।** जिज्ञासाधिकरणानुव्याख्यान इत्यर्थः । तज्ज्ञानं= धर्मादिप्रमितिः । तत्कृतत्वं=तेन पुरुषेण कृतत्वम् । आदिपदात् करणपाटवादिग्रहः । ज्ञापकं=निश्चायकं, धर्मादेरित्यर्थः । चो यत इत्यर्थे । तत् तस्मादित्यर्थः ।

ಅನುವ್ಯಾಖ್ಯಾನ ಶ್ಲೋಕದಲ್ಲಿ ತಜ್ಜ್ಞಾನಂ ಎಂದರೆ ಧರ್ಮಾದಿಗಳ ಪ್ರಮಾ, ಎಂದರ್ಥ. ತತ್‌ಕೃತತ್ವಂ-ತೇನ ಕೃತತ್ವಂ=ಸರ್ವಜ್ಞನಿಂದ ಕೃತ, ಎನ್ನುವುದನ್ನು. ಆದಿಪದದಿಂದ ಕರಣಪಾಟವ-ಉಪದೇಶಕತ್ವಗಳು ವಿವಕ್ಷಿತ. ಜ್ಞಾಪಕಂ, ಅಂದರೆ ಧರ್ಮಾದಿ ನಿಶ್ಚಾಯಕ ಎಂದರ್ಥ. ಚಶಬ್ದಕ್ಕೆ 'ಯಸ್ಮಾತ್' ಎಂದರ್ಥ. ತತ್ ಎಂದರೆ ತಸ್ಮಾತ್.

## ಅವತಾರಿಕೆ

नियतैकप्रकारत्वमपौरुषेयत्वमिति सुधोक्तिमनुरुध्याह—**यद्वेति ।**

ವರ್ಣಕ್ರಮ, ಪದಕ್ರಮ, ವಾಕ್ಯಕ್ರಮಗಳಲ್ಲಿ ನಿಯತೈಕರೂಪತ್ವವೇ ವೇದದ ಅಪೌರುಷೇಯತ್ವ ಎಂದು ಸುಧಾದಲ್ಲಿ (ಜಿಜ್ಞಾಸಾಧಿಕರಣ) ಇದೆ. ಅದಕ್ಕೆ ಅನುಗುಣವಾದ ಅಪೌರುಷೇಯತ್ವ ಸಾಧಕಾನುಮಾನವನ್ನು 'ಯದ್ವಾ' ಎಂದು ಹೇಳಲಾಗಿದೆ.

### ಅನುಮಾನ-4

**यद्वा ईश्वरज्ञानं न प्रमेति मते—वेदः कालभेदेनानियतानुपूर्वीको न, दोषामूलकत्वे सति प्रमामूलकत्वरहितत्वात्, गगनवत् । प्रमेति मते दोषामूलकत्वे सति प्रमाकरणामूलकत्वं हेतुः ।।**

**ಪಕ್ಷ—** ವೇದವು,

**ಸಾಧ್ಯ—** ಬೇರೆ ಬೇರೆ ಕಾಲಗಳಲ್ಲಿ ವಿಭಿನ್ನವಾದ ವರ್ಣಪದಾದಿ ಆನುಪೂರ್ವಿವುಳ್ಳದ್ದು ಅಲ್ಲ.

**ಹೇತು—** ವೇದಕ್ಕೆ ದೋಷಮೂಲಕತ್ವವಾಗಲೀ, ಪ್ರಮಾಮೂಲಕತ್ವವಾಗಲೀ ಇಲ್ಲದಿರುವುದರಿಂದ.

**ಉದಾಹರಣೆ—**ಆಕಾಶದಂತೆ.

ಈಶ್ವರನ ಜ್ಞಾನವು ಗುಣಜನ್ಯವಲ್ಲದುದರಿಂದ ಪ್ರಮಾ ಅಲ್ಲ, ಎಂಬ ನೈಯಾಯಿಕರ ಪಕ್ಷದಲ್ಲಿ ಈ ಅನುಮಾನ. ಅದೂ ಪ್ರಮಾ ಎಂದು ಅಂಗೀಕರಿಸಿದಲ್ಲಿ ಮುಂದಿನ ಅನುಮಾನ. (ಎರಡೂ ಅನುಮಾನಗಳ ಪಕ್ಷ-ಸಾಧ್ಯ-ದೃಷ್ಟಾಂತಗಳಲ್ಲಿ ಬದಲಾವಣೆ ಇಲ್ಲ. ಹೇತು ಮಾತ್ರ ಬೇರೆ.)

**ಹೇತು**–ವೇದವು ದೋಷಮೂಲಕವೂ ಅಲ್ಲ, ಪ್ರಮಾಕರಣಮೂಲಕವೂ ಅಲ್ಲವಾದುದರಿಂದ.

**ವಿವರಣೆ—**ಪುರಾಣ-ಮಹಾಭಾರತಾದಿಗಳ ವರ್ಣಪದಗಳ ಆನುಪೂರ್ವಿ ಸೃಷ್ಟಿಭೇದೇನ ಭಿನ್ನವಾಗುತ್ತದೆ. ವೇದದ ವರ್ಣ-ಪದ-ವಾಕ್ಯಗಳ ಆನುಪೂರ್ವಿಯಲ್ಲಿ ಕಲ್ಪಭೇದೇನ ಬದಲಾವಣೆ ಆಗುವುದಿಲ್ಲ. ಸರ್ವದಾ ಒಂದೇ ರೀತಿಯ ಆನುಪೂರ್ವಿ ವೇದದಲ್ಲಿ ಇರುತ್ತದೆ. ಇದೇ ವೇದದ ಅಪೌರುಷೇಯತ್ವ. ಇದಕ್ಕೆ ವಿರುದ್ಧವಾದುದು ಪೌರುಷೇಯತ್ವ. ಅಂದರೆ, ಪೌರುಷೇಯ ಗ್ರಂಥಗಳಲ್ಲಿ ವರ್ಣಾದಿ ಆನುಪೂರ್ವಿ ಕಾಲಭೇದೇನ ಬದಲಾಗುತ್ತದೆ. ಅದಕ್ಕೆ ಕಾರಣ ಅವುಗಳು ಒಬ್ಬ ವ್ಯಕ್ತಿಯ ರಚನೆಗಳಾಗಿರುತ್ತವೆ. ಆ ಗ್ರಂಥಗಳು ಅಪ್ರಮಾಣಗಳಾಗಿದ್ದಲ್ಲಿ ವ್ಯಕ್ತಿಯ ದೋಷಗಳು ಅದಕ್ಕೆ ಕಾರಣವಾಗಿರುತ್ತವೆ. ಪ್ರಮಾಣಗಳಾಗಿದ್ದಲ್ಲಿ ವ್ಯಕ್ತಿಯ ಪ್ರಮಾ ಕಾರಣವಾಗಿರುತ್ತವೆ. ವೇದಕ್ಕೆ ಇವೆರಡೂ ಕಾರಣಗಳಲ್ಲ. ನೈಯಾಯಿಕರು ವೇದವು ಈಶ್ವರ ರಚಿತ ಎಂದು ಹೇಳಿದರೂ ಈಶ್ವರನಲ್ಲಿ ದೋಷಗಳು ಇಲ್ಲವಾದುದರಿಂದ ಆ ವೇದ ದೋಷಮೂಲಕವಲ್ಲ ಎನ್ನುತ್ತಾರೆ. ಅದರಂತೆ ಈಶ್ವರನ ಜ್ಞಾನವೇ ವೇದದ ರಚನೆಗೆ ಕಾರಣವಾದರೂ ಆ ಜ್ಞಾನವು ಗುಣಜನ್ಯವಲ್ಲದಿರುವುದರಿಂದ ಪ್ರಮಾ ಅಲ್ಲ. ಪ್ರಮಾ ಮೂಲಕತ್ವವೂ ವೇದದಲ್ಲಿ ಬರುವುದಿಲ್ಲ. ಹೀಗೆ ಹೇತು ಉಭಯಸಮ್ಮತವಾಗಿದೆ.

ಅನಿತ್ಯಪ್ರಮಾಕ್ಕೆ ಮಾತ್ರ ಗುಣಜನ್ಯತ್ವ. ಈಶ್ವರನದು ನಿತ್ಯಪ್ರಮಾ. ಆದ್ದರಿಂದ ಗುಣಜನ್ಯವಲ್ಲದೇ ಹೋದರೂ ದೋಷಾಜನ್ಯವಾಗಿರುವುದರಿಂದ ಅದು ಪ್ರಮಾ ಆಗಿದೆ. ಈ ಪಕ್ಷದಲ್ಲಿ 'ಪ್ರಮಾಮೂಲಕತ್ವರಹಿತತ್ವಾತ್' ಎಂಬ ಹೇತು ಅಸಿದ್ಧವಾಗುತ್ತದೆ. ಅದಕ್ಕಾಗಿ 'ಪ್ರಮಾಣ-ಅಮೂಲಕತ್ವಾತ್' ಎಂದು ಹೇತುವನ್ನು ಬದಲಿಸಲಾಗಿದೆ. ಈಶ್ವರನ ಜ್ಞಾನವು ಪ್ರಮಾ ಆದರೂ ಅದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಜನ್ಯವಲ್ಲ. ಆ ಜ್ಞಾನಕ್ಕೆ ಕರಣ (ಪ್ರಮಾಣ) ಇಲ್ಲ. ಹೀಗಾಗಿ ವೇದದಲ್ಲಿ ಪ್ರಮಾಮೂಲಕತ್ವ ಇದ್ದರೂ ಪ್ರಮಾಣ ಮೂಲಕತ್ವ ಇಲ್ಲ. ಆದ್ದರಿಂದ ಹೇತ್ವಸಿದ್ಧಿ ಇಲ್ಲ.

## न्यायदीप

**हेतोरसिद्धिनिरासायोक्तम्—न प्रमेति । मत इति । गुणजन्यस्यैव प्रमात्वेनेश्वरज्ञानस्य तदजन्यत्वान्न प्रमेति मत इत्यर्थः । सिद्ध-साधनतानिरासाय साध्ये कालभेदेनेत्युक्तिः । पूर्वोत्तरकल्पभेदेने-त्यर्थः । नियतानुपूर्वीक इत्युक्तावेकप्रकारानुपूर्वीकत्वस्य साध्यत्व-प्राप्तौ दृष्टान्ते साध्यवैकल्येन परस्याप्रसिद्धेः, परोक्तसाध्यनिरासलाभाय च नञ्द्वयम् ॥**

ಗುಣಜನ್ಯವಾದ ಜ್ಞಾನವೇ ಪ್ರಮಾ. ಈಶಜ್ಞಾನವು ನಿತ್ಯ. ಗುಣಜನ್ಯವಲ್ಲ. ಆದ್ದರಿಂದ ಅದು ಪ್ರಮಾ ಅಲ್ಲ, ಎಂದು ನೈಯಾಯಿಕರ ಒಂದು ಅಭಿಪ್ರಾಯ.

**ವಿಶೇಷಣಗಳ ಕೃತ್ಯವಿಚಾರ**—ವೇದಃ ಅನಿಯತಾನುಪೂರ್ವಿಕಃ ನ, ಎಂದಿಷ್ಟೇ ಸಾಧನೆ ಮಾಡಿದರೆ ನೈಯಾಯಿಕರಿಗೆ ಸಿದ್ಧಸಾಧನತಾದೋಷ. ಒಂದು ಕಲ್ಪದ ವೇದದಲ್ಲಿ ಕಲ್ಪಸಮಾಪ್ತಿಪರ್ಯಂತವಾಗಿ ಆನುಪೂರ್ವಿ ನಿಯತವಾಗಿಯೇ ಇರುತ್ತದೆ, ಎಂದು ಅವರಿಗೂ ಅಭಿಮತ. ಆದಕ್ಕಾಗಿ ಸಾಧ್ಯದಲ್ಲಿ ಕಾಲಭೇದೇನ, ಎಂದು ವಿಶೇಷಣವನ್ನು ಸೇರಿಸಲಾಗಿದೆ. ಕಾಲಭೇದ ಎಂದರೆ ಪೂರ್ವೋತ್ತರ ಕಲ್ಪಭೇದ, ಎಂದರ್ಥ. ಕಲ್ಪಭೇದವಾದರೂ ಆನುಪೂರ್ವಿ ವ್ಯತ್ಯಾಸವಿಲ್ಲ, ಎಂದೇ ಸಾಧ್ಯ. ಈಗ ಸಿದ್ಧಸಾಧನತಾದೋಷ ಇಲ್ಲ.

ಸಾಧ್ಯದಲ್ಲಿ ''ಅನಿಯತ–ಆನುಪೂರ್ವಿಕಃ ನ'' ಎಂದು ಎರಡು ನಿಷೇಧವಾಚಕ ಪದಗಳಿವೆ. ಇವೆರಡನ್ನೂ ಬಿಟ್ಟು 'ನಿಯತಾನುಪೂರ್ವಿಕಃ' ಎಂದೇ ಸಾಧ್ಯವನ್ನು ಮಾಡಬಹುದು. ಆದರೆ, ಈ ಸಾಧ್ಯ ದೃಷ್ಟಾಂತವಾದ ಗಗನದಲ್ಲಿ ಇಲ್ಲ. ಅಲ್ಲಿ ಆನುಪೂರ್ವಿಯೇ ಇಲ್ಲ. ಹೀಗಾಗಿ ಸಾಧ್ಯಾಪ್ರಸಿದ್ಧಿ. ಆದಕ್ಕಾಗಿ ಎರಡು ನಿಷೇಧಗಳನ್ನು ಹಾಕಲಾಗಿದೆ. ವೇದದಲ್ಲಿ ಆನುಪೂರ್ವಿ ಇದ್ದರೂ ಅದು ನಿಯತವಾದುದರಿಂದ ಅನಿಯತಾನುಪೂರ್ವಿಕತ್ವಾಭಾವವು ಬರುತ್ತದೆ. ಗಗನದಲ್ಲಿ ಆನುಪೂರ್ವಿಯೇ ಇಲ್ಲದಿರುವುದರಿಂದ ಆ ಸಾಧ್ಯ ಬರುತ್ತದೆ. ಅಲ್ಲದೆ, ನೈಯಾಯಿಕರು ವೇದವನ್ನು ಪಕ್ಷಮಾಡಿ ಅನಿಯತಾನುಪೂರ್ವಿಕತ್ವವನ್ನು ಸಾಧನೆ ಮಾಡಿದ್ದಾರೆ. ಆದರ ನಿರಾಸಕ್ಕಾಗಿ ತದಭಾವವನ್ನು ಪ್ರಕೃತಾನುಮಾನದಲ್ಲಿ ಸಾಧಿಸಲಾಗಿದೆ.

## न्यायदीप

**''प्रत्यक्षादिप्रमाणं वा विप्रलम्भादिकं वाऽस्य मूलं नोपलभ्यत इति**

**प्रसिद्धिविषयत्वं वेदत्वम्'' इति तत्वनिर्णयटीकायां प्रमाणपदं प्रमित्यर्थकमुपेत्य तदर्थमेव निष्कृष्य हेतुमाह—दोषेति। विप्रलम्भादिदोषेत्यर्थः। भ्रान्तिमूलकवाक्ये प्रमितिमूलकपुंवाक्ये च व्यभिचारवारणाय क्रमेण विशेषणविशेष्ययोरुक्तिः। प्रमेतीति। गुणाजन्यत्वेऽपि दोषाजन्यज्ञानत्वात्, तद्वति तत्प्रकारकत्वाच्च, ज्ञानत्वस्य प्रमात्वभ्रमत्वान्यतरव्याप्यतया भ्रमत्वहीनस्य प्रमात्वाभावे ज्ञानत्वाभावप्रसङ्गाच्च प्रमेति मत इत्यर्थः ।।**

ಈ ಅನುಮಾನ ತತ್ತ್ವನಿರ್ಣಯಟೀಕಾನುಸಾರಿಯಾದುದು. ಅಲ್ಲಿ 'ತಸ್ಯಾಕರ್ತ್ರ್ಯಕತ್ವಪ್ರಸಿದ್ಧ್ಯಭಾವಾತ್' ಎಂಬ ಮೂಲದ ವಿವರಣೆಯ ಸಂದರ್ಭದಲ್ಲಿ ವೇದತ್ವ ಸ್ವರೂಪವನ್ನು ಹೀಗೆ ನಿರೂಪಿಸಲಾಗಿದೆ—'ವೇದಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳಾಗಲೀ ವಿಪ್ರಲಂಭಾದಿ ದೋಷಗಳಾಗಲೀ ಕಾರಣವೆಂದು ತಿಳಿದು ಬಂದಿಲ್ಲ. ಇಂತಹ ಪ್ರಸಿದ್ಧಿ ಪಡೆದ ಗ್ರಂಥವೇ ವೇದ.' ಇಲ್ಲಿ ಪ್ರತ್ಯಕ್ಷಾದಿಪ್ರಮಾಣ ಎಂಬಲ್ಲಿ ಪ್ರಮಾಣ ಪದಕ್ಕೆ 'ಪ್ರಮಿತಿ' ಎಂದು ಅರ್ಥ. ಆಗ ಪ್ರತ್ಯಕ್ಷಾದಿ ಪ್ರಮಿತಿ ಮೂಲಕವಲ್ಲ ಎಂದೇ ಟೀಕೆಯ ಅರ್ಥವಾಗುತ್ತದೆ. ಅದಕ್ಕೆ ಅನುಗುಣವಾಗಿ ಇಲ್ಲಿ 'ಪ್ರಮಾಮೂಲಕತ್ವರಹಿತತ್ವಾತ್' ಎಂದು ಹೇತುವನ್ನು ಹೇಳಲಾಗಿದೆ.

ಈ ಹೇತುವಿನಲ್ಲಿ 'ಪ್ರಮಾ ಮೂಲಕತ್ವರಹಿತತ್ವಾತ್' ಎಂಬ ವಿಶೇಷ್ಯಾಂಶವನ್ನು ಮಾತ್ರ ಹೇಳಿದರೆ ಭ್ರಾಂತಿಮೂಲಕವಾದ ಅಪ್ರಾಮಾಣಿಕವಾಕ್ಯದಲ್ಲಿ ವ್ಯಭಿಚಾರದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ 'ದೋಷಾಮೂಲಕತ್ವೇ ಸತಿ' ಎಂಬ ವಿಶೇಷಣಾಂಶವನ್ನು ಸೇರಿಸಲಾಗಿದೆ. ಆ ವಾಕ್ಯವು ಭ್ರಮಾದಿ ದೋಷಮೂಲಕವಾದುದರಿಂದ ಹೇತು ಬರುವುದಿಲ್ಲ, ವ್ಯಭಿಚಾರ ಪರಿಹಾರವಾಗುತ್ತದೆ. ಇದರಂತೆ ಪುರುಷಪ್ರಮಾ-ಮೂಲಕವಾದ ಯಥಾರ್ಥವಾಕ್ಯದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ಹೇತುವಿನಲ್ಲಿ ವಿಶೇಷ್ಯಾಂಶವನ್ನು ಕೊಡಲಾಗಿದೆ.

ಈಶಜ್ಞಾನವು ಗುಣಜನ್ಯವಲ್ಲದಿದ್ದರೂ ದೋಷಾಜನ್ಯವಾದುದರಿಂದ ಹಾಗೂ ತದ್ವತಿ ತತ್‌ಪ್ರಕಾರಕವಾದುದರಿಂದಲೂ ಪ್ರಮಾ ಎನಿಸಿದೆ. ಅಷ್ಟೇ ಅಲ್ಲ, ಈಶಜ್ಞಾನವು ಭ್ರಮೆಯಂತೂ ಅಲ್ಲ. ಅದು ಪ್ರಮಾವೂ ಆಗದೇ ಇದ್ದರೆ ಜ್ಞಾನವೇ ಆಗಲಿಕ್ಕಿಲ್ಲ. ಜ್ಞಾನವಾದರೆ ಅದು ಒಂದೋ ಭ್ರಮೆಯಾಗಿರಬೇಕು, ಇಲ್ಲ ಪ್ರಮಾ ಆಗಿರಬೇಕು. ಆದ್ದರಿಂದ ಈಶಜ್ಞಾನವು ಪ್ರಮಾ ಎನ್ನುವುದು ಅನಿವಾರ್ಯ. ಹೀಗೆ, ಹೇಳುವ ತಾರ್ಕಿಕರ ಮತದಲ್ಲಿ ಪ್ರಮಾಮೂಲಕತ್ವರಹಿತತ್ವವು ವೇದದಲ್ಲಿ ಬರುವುದಿಲ್ಲವಾದುದರಿಂದ ಹೇತುವಿನಲ್ಲಿ ಬದಲಾವಣೆ ಮಾಡಬೇಕು.

## ನ್ಯಾಯದೀಪ

इदानीं प्रमाणपदं प्रमितिकरणार्थमुपेत्याह—**प्रमाकरणेति** । परमते वेदस्येश्वरज्ञानमूलकत्वेऽपि तस्याजन्यतया करणाभावात्, स्वयमकरणत्वाच्च नासिद्धिरिति भावः ।

यद्यप्येतन्मतेऽपि पूर्वोक्तदिशा भ्रमसाधारणोपादानादिगोचरज्ञानत्वेनैव ईश्वरज्ञानस्य सर्वत्र हेतुतया, प्रमात्वेनाहेतुत्वात् प्राचीनहेतूक्तावपि नासिद्धिः । तथाप्यभ्युपेत्यवादेन वा प्रमात्वेन प्रमामूलकत्वविवक्षायाः प्रागनुक्तेर्वा हेत्वन्तरोक्तिः ।।

ಈ ಎರಡನೆಯ ಪಕ್ಷದಲ್ಲಿ ತತ್ತ್ವನಿರ್ಣಯ ಟೀಕಾದ ಪ್ರಮಾಣಪದಕ್ಕೆ ಪ್ರಮಿತಿಕರಣ ಎಂದರ್ಥ. ಆದರಿಂದಾಗಿ ಪ್ರಮಾಮೂಲಕತ್ವವು ವೇದದಲ್ಲಿ ಇದ್ದರೂ ಆ ಪ್ರಮೆಯು ನಿತ್ಯವಾದುದರಿಂದ ಅಜನ್ಯವಾಗಿದೆ. ಅದಕ್ಕೆ ಕರಣ ಇಲ್ಲ. ಸ್ವಯಂ ಪ್ರಮೆಯೂ ಕರಣವಲ್ಲ. ಹೀಗಾಗಿ ವೇದದಲ್ಲಿ ಪ್ರಮಾಕರಣ-ಅಮೂಲಕತ್ವವು ಬರುತ್ತದೆ, ಅಸಿದ್ಧಿ ಇಲ್ಲ.

ವಸ್ತುತಃ ಈ ಪಕ್ಷದಲ್ಲೂ 'ಪ್ರಮಾಮೂಲಕತ್ವರಹಿತತ್ವಾತ್' ಎಂಬ ಮೊದಲನೆಯ ಹೇತುವೂ ವೇದದಲ್ಲಿ ಇದೆ. ಈಶಜ್ಞಾನವು ಪ್ರಮಾ ಆದರೂ ಅದು ಸಕಲಜನ್ಯವಸ್ತುಗಳಿಗೂ ಉಪಾದಾನಾದಿ ವಿಷಯಕಅಪರೋಕ್ಷಜ್ಞಾನತ್ವೇನ ಕಾರಣ, ಪ್ರಮಾತ್ವೇನ ಕಾರಣವಲ್ಲ. ಹೀಗಾಗಿ ವೇದದಲ್ಲಿ ಪ್ರಮಾತ್ವೇನ ಪ್ರಮಾಮೂಲಕತ್ವವು ಬರುವುದಿಲ್ಲ. ಅಸಿದ್ಧಿ ಇಲ್ಲ. ಆದರೂ ತನ್ಮೂಲಕತ್ವವೂ ಇದೆ ಎಂದು ಅಭ್ಯುಪೇತ್ಯ ಹೇತ್ವಂಶವನ್ನು ಬದಲಿಸಲಾಗಿದೆ. ಅಥವಾ ಮೊದಲ ಹೇತು ಪ್ರಮಾಮೂಲಕತ್ವ ರಹಿತತ್ವಾತ್, ಎಂದಿಷ್ಟೇ ವಿವಕ್ಷಿತ. 'ಪ್ರಮಾತ್ವೇನ' ಅಂಶದ ವಿವಕ್ಷೆ ಇಲ್ಲ. ಆಗ ವೇದದಲ್ಲಿ ಈಶ್ವರ ಪ್ರಮಾಮೂಲಕತ್ವ ಬರುತ್ತದೆ. ತದ್ರಹಿತತ್ವ ಇಲ್ಲ. ಅಸಿದ್ಧಿ ಬಂತು. ಪರಿಹಾರಕ್ಕಾಗಿ ಈ ಪಕ್ಷದಲ್ಲಿ ಹೇತುವನ್ನು ಬದಲಿಸಲಾಗಿದೆ.

## ಅವತಾರಿಕೆ

पर्यवसितसाध्ये साध्यवैकल्यमाङ्क्य निराह—**यद्यपीति** ।

ಈ ಅನುಮಾನದ ಸಾಧ್ಯ-'ಅನಿಯತಾನುಪೂರ್ವೀಕಭೇದ'. ಅದರ ಫಲಿತಾರ್ಥ-ಸದಾ ಏಕವಿಧಾನುಪೂರ್ವೀಕತ್ವ. ಇಂತಹ ಸಾಧ್ಯವು ದೃಷ್ಟಾಂತದಲ್ಲಿ ಇಲ್ಲ, ಎಂದು ಆಶಂಕೆ ಮಾಡಿ 'ಯದ್ಯಪಿ' ಎಂಬ ಮೂಲದಲ್ಲಿ ಪರಿಹಾರ ಮಾಡಲಾಗಿದೆ.

**यद्यप्यानुपूर्व्यगर्भितस्वरूपे गगने शश्वदेकप्रकारानुपूर्विकत्व-मपौरुषेयत्वं नास्ति । तथाप्यनियतानुपूर्वीराहित्यरूपं तदस्त्येव ।।**

ಈ ಅನುಮಾನದ ದೃಷ್ಟಾಂತ ಗಗನ. ಅದರ ಸ್ವರೂಪ ಅನುಪೂರ್ವೀಘಟಿತವಲ್ಲ. ಆದ್ದರಿಂದ ಅದರಲ್ಲಿ ಸದಾ ಏಕವಿಧಾನುಪೂರ್ವೀಕತ್ವರೂಪವಾದ ಸಾಧ್ಯವು ಬರುವುದಿಲ್ಲ. ಆದರೂ, ಯಥಾಶ್ರುತವಾದ ಅನಿಯತಾನುಪೂರ್ವೀಕತ್ವರಹಿತತ್ವ ಎಂಬ ಸಾಧ್ಯವು ಬರುತ್ತದೆ. ಅದರಲ್ಲಿ ಆನುಪೂರ್ವಿಯೇ ಇಲ್ಲವಾದುದರಿಂದ. ಹೀಗೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವಿಲ್ಲ.

## ಅವತಾರಿಕೆ

**ननूक्तरूपहेतुद्वयस्य घटादावपि सतस्तत्रानित्यत्वेनेव पक्षेऽप्यनित्यत्वेनैव पर्यवसानसम्भवान्न शश्वदेकप्रकारानुपूर्वीकत्वरूपसाध्यसिद्धिः स्यात् । विशेष्याभावमात्रेण विशिष्टाभावोपपत्तेरिति भावेनाशङ्क्य निराह— यद्यपीति ।**

ಹಿಂದೆ ಹೇಳಿರುವ ಎರಡೂ ಹೇತುಗಳು ಘಟಾದಿಗಳಲ್ಲೂ ಇವೆ. ಅವುಗಳಲ್ಲಿ ಅನಿತ್ಯತ್ವ ಇದೆ. ಅಂತಹ ಹೇತುಗಳು ಪಕ್ಷವಾದ ವೇದದಲ್ಲಿ ಇದ್ದರೂ ಘಟಾದಿಗಳಂತೆ ವೇದವೂ ಅನಿತ್ಯವೆಂದಾದೀತು, ಶಶ್ವತ್–ಏಕವಿಧಾನುಪೂರ್ವೀಕತ್ವರೂಪವಾದ ಸಾಧ್ಯವು ಹೇಗೆ ಸಿದ್ಧವಾದೀತು? ಹೇಗೆ ಘಟದಲ್ಲಿ ಅನುಪೂರ್ವೀರೂಪವಾದ ವಿಶೇಷ್ಯಾಂಶವು ಇಲ್ಲದಿರುವುದರಿಂದ ಅನಿಯತಾನುಪೂರ್ವೀಕತ್ವ ರೂಪವಾದ ವಿಶಿಷ್ಟವು ಇಲ್ಲವೋ ಅದರಂತೆ ಪಕ್ಷದಲ್ಲೂ ಅನುಪೂರ್ವೀಕತ್ವಾತ್ಮಕ ವಿಶೇಷ್ಯಾಭಾವ ಪ್ರಯುಕ್ತವಾಗಿಯೇ ಸಾಧ್ಯವು ಪರ್ಯವಸಾನವಾಗಲಿ, ಎಂಬ ಈ ಅಭಿಪ್ರಾಯದಿಂದ ಆಕ್ಷೇಪಿಸಿ 'ಯದ್ಯಪಿ' ಇತ್ಯಾದಿ ಮೂಲದಲ್ಲಿ ಪರಿಹರಿಸಲಾಗಿದೆ.

**यद्यपीदमनित्याद्घटादेर्न व्यावृत्तम् । तथापि पौरुषेयवाक्याद् व्यावृत्तत्वात्, परोक्तं यद्बुद्धिपूर्वकाबुद्धिपूर्वकवाक्यसाधारणं पौरुषेयत्वं तदभावरूपत्वाच्च न तद्व्यतिरेकसाधनेऽर्थान्तरम् ।।**

ಈ ಅನುಮಾನದ ಹೇತು ಅನಿತ್ಯವಾದ ಘಟಾದಿಗಳಿಂದ ವ್ಯಾವೃತ್ತವಾಗಿಲ್ಲ. ಆರ್ಥಾತ್ ಅನಿತ್ಯತ್ವ ಸಹಚರಿತವಾಗಿದೆ. ಹೀಗಾಗಿ ಪಕ್ಷದಲ್ಲೂ ಅದು ಅನಿತ್ಯತ್ವಕ್ಕೇ ಸಾಧಕವಾಗಬಹುದು. ಅಥವಾ, ಘಟದಲ್ಲಿ ಅನುಪೂರ್ವೀಕತ್ವರೂಪವಾದ ವಿಶೇಷ್ಯಾಂಶವು ಇಲ್ಲದಿರುವುದರಿಂದ 'ಅನಿಯತಾನುಪೂರ್ವೀಕತ್ವ' ರೂಪವಾದ ವಿಶಿಷ್ಟದ ಅಭಾವವು ಇದೆ. ಅದರಂತೆ, ವೇದದಲ್ಲೂ

ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಹೀಗೆ ಈ ಹೇತುವು ವಿವಕ್ಷಿತವಾದ ಅನಿಯತಾನು ಪೂರ್ವೀಕತ್ವಾ ಭಾವಕ್ಕೆ ಸಾಧಕವಾಗಲಿಕ್ಕಿಲ್ಲ. ಆದರೂ ಈ ಹೇತು ಪೌರುಷೇಯ ವಾಕ್ಯದಲ್ಲಿ ಇಲ್ಲ. ಪೌರುಷೇಯವಾಕ್ಯವು ಅನಿಯತಾನುಪೂರ್ವೀಕವಾಗಿರುತ್ತದೆ. ಅಂತಹ ವಾಕ್ಯದಲ್ಲಿ ಈ ಹೇತು ಇಲ್ಲದಿರುವುದಕ್ಕೆ ವರ್ಣ-ಪದಾದಿಗತ-ಆನುಪೂರ್ವೀನ್ನೈಯತ್ಯಾಭಾವವೇ ಪ್ರಯೋಜಕವೆಂದು ನಿರ್ಧರಿಸಬಹುದು. ಅಂತಹ ಹೇತು ವೇದದಲ್ಲಿ ಇದೆ ಎಂದರೆ ವೇದದಲ್ಲಿ ಆನುಪೂರ್ವೀನ್ನೈಯತ್ಯ ಅಥವಾ ನಿಯತಾನುಪೂರ್ವೀಕತ್ವವು ಸಿದ್ಧವಾಗುತ್ತದೆ.

ಅಲ್ಲದೆ, ಪೌರುಷೇಯವಾದ ಕಾಳಿದಾಸಾದಿವಾಕ್ಯಗಳು ಬುದ್ಧಿಪೂರ್ವಕವಾಗಿರುತ್ತವೆ. ಪಿಪೀಲಿಕಾಲಿಪಿ ಅಥವಾ ಶುಕೋಚ್ಚರಿತವಾಕ್ಯವು ಅಬುದ್ಧಿಪೂರ್ವಕವಾಗಿರುತ್ತದೆ. ಇಂತಹ ಉಭಯವಿಧ ವಾಕ್ಯಗಳಲ್ಲೂ ಪೌರುಷೇಯತ್ವವು ಸಾಧಾರಣವಾದ ಧರ್ಮ. ಅಂತಹ ಉಭಯ ಸಾಧಾರಣ ಪೌರುಷೇಯತ್ವವೆಂದರೆ ನಿಯತಾನುಪೂರ್ವೀಕತ್ವಾಭಾವ. ಅಪೌರುಷೇಯತ್ವವು ಪೌರುಷೇಯತ್ವಾಭಾವರೂಪ. ಅಂದರೆ, ನಿಯತಾನುಪೂರ್ವಕತ್ವರೂಪ. ಹೀಗಾಗಿ ಪೌರುಷೇಯ ವಾಕ್ಯವ್ಯಾವೃತ್ತವಾದ ಹೇತುವಿನಿಂದ ಪೌರುಷೇಯತ್ವಾಭಾವರೂಪವಾದ ಅನಿಯತಾನು ಪೂರ್ವೀಕತ್ವಾಭಾವವನ್ನು ಸಾಧನೆ ಮಾಡುವುದರಿಂದ ಅನಿತ್ಯತ್ವಮಾದಾಯ ಅರ್ಥಾಂತರತ್ವವನ್ನು ಹೇಳಲಾಗದು.

## ನ್ಯಾಯದೀಪ

**पौरुषेयेति ।** तथाच पुंवाक्यव्यावृत्तत्वस्यानुपूर्वीगतानैयत्याभाव-निमित्तत्वस्यैव वाच्यत्वात्, प्रकृतेऽपि पक्षे हेतुसत्त्वस्यानुपूर्वीयुक्ते तदभावेन पर्यवसाने बाधात् तद्गतानैयत्याभावेनैव पर्यवसानमिति भावः । **परोक्तमिति ।** सजातीयोच्चारणानपेक्षो-च्चरितजातीयत्वं पौरुषेयत्वमिति मण्युक्तमित्यर्थः (पु.३६४) । **बुद्धीति ।** चैत्रादिवाक्यं बुद्धिपूर्वकं, शुकबालादिवाक्यं चाबुद्धिपूर्वकम् । तदुभयसाधारणं यन्नियतानुपूर्वीकत्वाभावरूपं तत्परोक्तमित्यर्थः ।।

ಪ್ರಕೃತ ಹೇತುವು ಪೌರುಷೇಯವಾಕ್ಯದಲ್ಲಿ ಇಲ್ಲದಿರುವುದಕ್ಕೆ ಆನುಪೂರ್ವೀನ್ನೈಯತ್ಯಾ ಭಾವವೇ ನಿಮಿತ್ತವೆಂದು ಹೇಳಬೇಕು. ಅಂತಹ ಹೇತುವು ಪ್ರಕೃತ ವೇದರೂಪಪಕ್ಷದಲ್ಲಿ ಇರುವುದಕ್ಕೆ ಘಟದಂತೆ ಆನುಪೂರ್ವೀಕತ್ವಾಭಾವ ಎಂಬ ವಿಶೇಷ್ಯಾಭಾವವು ಕಾರಣ ಅಲ್ಲ. ಏಕೆಂದರೆ, ವೇದವಾಕ್ಯದಲ್ಲಿ ಆನುಪೂರ್ವೀರೂಪ ವಿಶೇಷ್ಯಭಾಗವು ಇದೆ. ಹೀಗಾಗಿ, ವಿಶೇಷ್ಯಾಭಾವವು ಬಾಧಿತ

ವಾಗಿದೆ. ಆದ್ದರಿಂದ ಆನುಪೂರ್ವೀಗತವಾದ ಅನ್ಯೈಯ್ಯತ್ವಾಭಾವಪ್ರಯುಕ್ತವಾಗಿಯೇ ವಿಶಿಷ್ಟಾಭಾವವನ್ನು ಹೇಳಬೇಕು. ಆಗ ವೇದಾನುಪೂರ್ವೀ ಅನಿಯತವಲ್ಲ, ನಿಯತ ಎಂದೇ ಸಿದ್ಧವಾಗುತ್ತದೆ.

[1]'ಪರೋಕ್ತಂ ಪೌರುಷೇಯತ್ವಂ' ಎಂಬ ಮೂಲದಲ್ಲಿ ಪರೋಕ್ತ ಎಂದರೆ ಮಣಿಗ್ರಂಥದಲ್ಲಿ ಹೇಳಿರುವ ಎಂದರ್ಥ. ಸಜಾತೀಯ ಉಚ್ಚಾರಣೆಯ ಅಪೇಕ್ಷೆ ಇಲ್ಲದೆ ಉಚ್ಚರಿಸಲ್ಪಟ್ಟವಾಕ್ಯಕ್ಕೆ ಸಜಾತೀಯವಾದುದು ಪೌರುಷೇಯವಾಕ್ಯ ಎಂದು ಮಣಿಗ್ರಂಥದಲ್ಲಿದೆ. ಕಾಳಿದಾಸನು ತಾನು ರಚಿಸಿರುವ ಪದ್ಯಗಳನ್ನು ಮತ್ತೊಬ್ಬರ ಉಚ್ಚಾರಣೆಯನ್ನು ಕೇಳಿ ಉಚ್ಚಾರಣೆ ಮಾಡಿರುವುದಲ್ಲ. ಅವನೇ ಸ್ವತಂತ್ರವಾಗಿ ಅವುಗಳನ್ನು ಉಚ್ಚರಿಸಿದ್ದಾನೆ. ಆದ್ದರಿಂದ ಆ ವಾಕ್ಯ ಹಾಗೂ ಆ ವಾಕ್ಯಕ್ಕೆ ವಾಕ್ಯತ್ವೇನ ಸಜಾತೀಯವಾದ ಮೌನಿಶ್ಲೋಕ ಎಲ್ಲವೂ ಪೌರುಷೇಯ.

ಬುದ್ಧಿಪೂರ್ವಕವಾಕ್ಯ ಚೈತ್ರೋಚ್ಚರಿತವಾಕ್ಯ. ಶುಕ-ಬಾಲಾದಿಗಳಿಂದ ಉಚ್ಚರಿತವಾಕ್ಯಗಳು ಅಬುದ್ಧಿಪೂರ್ವಕಗಳು. ಆ ಎರಡೂ ವಾಕ್ಯಗಳಲ್ಲಿ ಸಾಧಾರಣವಾದ ಪೌರುಷೇಯತ್ವ ಎಂದರೆ ನಿಯತಾನುಪೂರ್ವೀಕತ್ವಾಭಾವ. ಇದೇ ಪರೋಕ್ತವಾದ (ಮಣ್ಯುಕ್ತವಾದ) ಪೌರುಷೇಯತ್ವ.

## ಅವತಾರಿಕೆ

**वाक्यार्थगोचरज्ञानजन्यत्वं पौरुषेयत्वम् इति मते तदभावसाधकमनुमानमाह—यद्वा स्वेति ।**

ವಾಕ್ಯಾರ್ಥವಿಷಯಕಜ್ಞಾನದಿಂದ ಜನ್ಯವಾದ ವಾಕ್ಯವು ಪೌರುಷೇಯ. ರಚನೆ ಮಾಡುವ ವ್ಯಕ್ತಿಯು ಮೊದಲು ಅರ್ಥಜ್ಞಾನವನ್ನು ಮಾಡಿಕೊಂಡು ಅದಕ್ಕೆ ಅನುಗುಣವಾಗಿ ವಾಕ್ಯವನ್ನು ರಚಿಸುತ್ತಾನೆ. ಇಂತಹ ಪೌರುಷೇಯತ್ವವನ್ನು ಹೇಳುವವರಿಗೆ ವಿರುದ್ಧವಾದ ತದಭಾವಸಾಧಕಾನುಮಾನವನ್ನು 'ಯದ್ವಾ' ಎಂದು ಮೂಲದಲ್ಲಿ ಹೇಳಲಾಗಿದೆ.

### ಅನುಮಾನ-5

**यद्वा स्वप्रतिपाद्यगोचरज्ञानत्वावच्छिन्न-कारणताप्रतियोगिककार्यतानाश्रय इति साध्यम् । तत्र भ्रमामूलकत्वे सति प्रमाकरणामूलकत्वं**

---

1. ಉಪಲಬ್ಧ ಮೂಲದಲ್ಲಿ 'ಪರೋಕ್ತಮ್' ಎಂಬ ಪದ ಇಲ್ಲ. ಆದರೂ ನ್ಯಾಯದೀಪಾನುಸಾರವಾಗಿ ಮೂಲದ ವಾಕ್ಯ ಹೀಗಿದೆ ಎಂದು ತಿಳಿಯಬಹುದು—ಪರೋಕ್ತಂ ಯತ್ ಬುದ್ಧಿಪೂರ್ವಕಾಬುದ್ಧಿಪೂರ್ವಕ-ವಾಕ್ಯಸಾಧಾರಣಂ ಪೌರುಷೇಯತ್ವಂ ತದಭಾವರೂಪತ್ವಾಚ್ಚ... ಎಂದು. ಮುಂದಿನ ಅನುಮಾನ ನಿರೂಪಣೆಯಲ್ಲೂ 'ಪರೋಕ್ತಸ್ಯ' ಎಂದಿದೆ.

**हेतुः । अपौरुषेयत्वपक्षेऽपि वेदस्य पदावलीगोचरज्ञानत्वावच्छिन्न-कारणताप्रतियोगिककार्यताश्रयत्वात् तदभावसाधने बाधः । तन्निवृत्यर्थं स्वप्रतिपाद्येत्युक्तम् । स्वप्रतिपाद्यज्ञानजन्य इत्येवोक्ते पदावलीगोचरमेवेश्वरनिष्ठं ज्ञानं वेदप्रतिपाद्यगोचरमपि भवतीति पुनरपि बाधः । तन्निवृत्त्यर्थं ज्ञानत्वावच्छिन्नेत्याद्युक्तम् ॥**

ಅಥವಾ, ಹೀಗೂ ಅಪೌರುಷೇಯತ್ವವನ್ನು ಸಾಧಿಸಬಹುದು.

**ಪಕ್ಷ**—ವೇದಃ ।

**ಸಾಧ್ಯ**—ಸ್ವಪ್ರತಿಪಾದ್ಯಗೋಚರ–ಜ್ಞಾನತ್ವಾವಚ್ಛಿನ್ನಕಾರಣತಾ–ಪ್ರತಿಯೋಗಿಕ–ಕಾರ್ಯತಾನಾಶ್ರಯಃ ।

**ಹೇತು**—ಭ್ರಮಾಮೂಲಕತ್ವೇ ಸತಿ ಪ್ರಮಾಕರಣಾಮೂಲಕತ್ವಾತ್।

**ಸಾಧ್ಯಸಮನ್ವಯ**–ಸ್ವಂ=ವೇದ. ವೇದಪ್ರತಿಪಾದ್ಯವಾದುದು ಧರ್ಮಾದಿಗಳು. ತದ್ವಿಷಯಕವಾದ ಜ್ಞಾನವು ವೇದರಚನೆಗೆ ಕಾರಣವಲ್ಲ. ಆದ್ದರಿಂದ ತಾದೃಶಜ್ಞಾನತ್ವಾವಚ್ಛಿನ್ನ–ಕಾರಣತಾ ನಿರೂಪಿತ–ಕಾರ್ಯತಾ ವೇದದಲ್ಲಿ ಇಲ್ಲ. ಪೌರುಷೇಯವಾಕ್ಯಗಳು ಪುರುಷರಚಿತವಾಗಿವೆ. ಅಂದರೆ, ಆ ವಾಕ್ಯಗಳ ಅರ್ಥಜ್ಞಾನವಿರುವ ವ್ಯಕ್ತಿಯಿಂದ ಅವುಗಳ ರಚನೆಯಾಗಿದೆ. ಅವುಗಳ ರಚನೆಗೆ ಅವುಗಳ ಅರ್ಥಜ್ಞಾನವು ಕಾರಣ. ತಾದೃಶಜ್ಞಾನತ್ವಾವಚ್ಛಿನ್ನ–ಕಾರಣತಾ–ನಿರೂಪಿತ–ಕಾರ್ಯತಾ ಆ ವಾಕ್ಯಗಳಲ್ಲಿ ಇವೆ. ಅವುಗಳನ್ನು ಓದುವ ಇತರರು ವಾಕ್ಯಜ್ಞಾನದಿಂದ ಅರ್ಥಜ್ಞಾನವನ್ನು ಪಡೆಯುತ್ತಾರೆ. ಆಗ, ವಾಕ್ಯವು ಕಾರಣ, ಅರ್ಥಜ್ಞಾನಕಾರ್ಯ. ರಚಿಸುವವನಿಗೆ ಮೊದಲು ಅರ್ಥಜ್ಞಾನ, ಆಮೇಲೆ ವಾಕ್ಯ. ವಾಕ್ಯವು ಕಾರ್ಯ, ಅರ್ಥಜ್ಞಾನ ಕಾರಣ. ವೇದ ಮಾತ್ರ ಯಾರೊಬ್ಬರ ಅರ್ಥಜ್ಞಾನಪೂರ್ವಕವಾದ ರಚನೆಯಲ್ಲ.

**ಕೃತ್ಯವಿಚಾರ**—ಸಾಧ್ಯದಲ್ಲಿ ಸ್ವಪ್ರತಿಪಾದ್ಯಗೋಚರ, ಎಂಬ ಅಂಶವನ್ನು ಬಿಟ್ಟರೆ ಜ್ಞಾನತ್ವಾವಚ್ಛಿನ್ನ–ಕಾರಣತಾ–ನಿರೂಪಿತ–ಕಾರ್ಯತಾನಾಶ್ರಯತ್ವವು ಸಾಧ್ಯವಾಗುತ್ತದೆ. ವೇದವು ಜ್ಞಾನಜನ್ಯವಲ್ಲ, ಎಂದು ಸಾಧ್ಯದ ಅರ್ಥವಾಗುತ್ತದೆ. ಇಂತಹ ಸಾಧ್ಯ ಅಪೌರುಷೇಯತ್ವಪಕ್ಷದಲ್ಲಿ ವೇದದಲ್ಲಿ ಇಲ್ಲ. ಬಾಧ ಬರುತ್ತದೆ. ಏಕೆಂದರೆ, ವೇದವೆಂದರೆ ಕ್ರಮವಿಶೇಷ–ವಿಶಿಷ್ಟವಾದ ವರ್ಣಸಮೂಹ. ವರ್ಣಗಳ ಕ್ರಮವು ಬೌದ್ಧಿಕ. ಅಂದರೆ, ನಮ್ಮ ಬುದ್ಧಿಯು ಒಂದೊಂದೇ ವರ್ಣಗಳನ್ನು ಗ್ರಹಿಸುತ್ತಾ ಹೋಗುತ್ತದೆ. ಮೊದಲು ಬಂದ ಜ್ಞಾನಕ್ಕೆ ವಿಷಯವಾದುದು ಪ್ರಥಮವರ್ಣ. ಆಮೇಲಿನ ಜ್ಞಾನಕ್ಕೆ ವಿಷಯ ದ್ವಿತೀಯವರ್ಣ. ಹೀಗೆ ಕ್ರಮವು ನಮ್ಮ

ಬುದ್ಧಿಗತವಾಗಿದ್ದು ಅನಿತ್ಯ, ತಾದೃಶ ಅನಿತ್ಯಕ್ರಮವಿಶಿಷ್ಟವಾದ ವೇದವೂ ಅನಿತ್ಯ. ಅದು ವರ್ಣಜ್ಞಾನ ಜನ್ಯ. ಆದ್ದರಿಂದ ಬಾಧ. ಅದರ ಪರಿಹಾರಕ್ಕಾಗಿ 'ಸ್ವಪ್ರತಿಪಾದ್ಯಗೋಚರ' ಎಂದು ಜ್ಞಾನಕ್ಕೆ ವಿಶೇಷಣವನ್ನು ಕೊಡಬೇಕು. ವೇದವು ವರ್ಣಜ್ಞಾನಜನ್ಯವಾದರೂ ಸ್ವಾರ್ಥಜ್ಞಾನಜನ್ಯವಲ್ಲ. ಬಾಧ ಪರಿಹಾರವಾಗುತ್ತದೆ.

'ಸ್ವಪ್ರತಿಪಾದ್ಯಾರ್ಥ ವಿಷಯಕ ಜ್ಞಾನತ್ವಾವಚಿನ್ನ' ಎನ್ನುವ ಬದಲು ಸ್ವಪ್ರತಿಪಾದ್ಯಾರ್ಥ ವಿಷಯಕ-ಜಾನಾಜನ್ಯತ್ವವನ್ನು ಸಾಧ್ಯ ಮಾಡಿದರೂ ಬಾಧಪರಿಹಾರವಾಗುವುದಿಲ್ಲ. ಏಕೆಂದರೆ, ವೇದವು ನಮ್ಮ ಪದಜ್ಞಾನಜನ್ಯವಾದಂತೆ ಈಶ್ವರನ ಪದಾವಲೀ ಜ್ಞಾನದಿಂದಲೂ ಜನ್ಯವಾಗಿದೆ. ಈಶಜ್ಞಾನವು (ನ್ಯಾಯಮತದಂತೆ) ಒಂದೇ ಆಗಿದ್ದು ಸರ್ವವಿಷಯಕವಾದುದರಿಂದ ಸ್ವಪ್ರತಿಪಾದ್ಯಾರ್ಥವಿಷಯಕವೂ ಆಗಿದೆ. ತಜ್ಜನ್ಯತ್ವ ವೇದದಲ್ಲಿ ಇದೆ. ಬಾಧ ಬಂತು. ಜ್ಞಾನತ್ವಾವಚ್ಛಿ-ಕಾರಣತಾ-ನಿರೂಪಿತ-ಕಾರ್ಯತಾಶ್ರಯತ್ವವನ್ನು ಹೇಳಿದಾಗ ಈ ಬಾಧವು ಪರಿಹಾರವಾಗುತ್ತದೆ. ಏಕೆಂದರೆ, ಈಶಜ್ಞಾನವು ವೇದಾರ್ಥವಿಷಯಕವಾದರೂ ಅದು ತದ್ವಿಷಯಕತ್ವೇನ ಕಾರಣವಲ್ಲ. ಪದವಿಷಯಕತ್ವೇನೈವ ಕಾರಣ. ಏವಂಚ ಅರ್ಥವಿಷಯಕ-ಜ್ಞಾನತ್ವವು ಕಾರಣತಾವಚ್ಛೇದಕವಲ್ಲ. ತದವಚ್ಛಿನ್ನ ಕಾರಣಕತ್ವವು ವೇದದಲ್ಲಿ ಇಲ್ಲ. ಬಾಧವು ಪರಿಹಾರವಾಗುತ್ತದೆ.

## ನ್ಯಾಯದೀಪ

**ईश्वरज्ञानं प्रमेति मत इति ज्ञेयम् । वेद इत्यनुकर्षः । स्वेन=वेदेन प्रतिपाद्यो योऽर्थो=धर्मादिः, तद्गोचरं यज्ज्ञानं तत्त्वावच्छिन्नकारण-तानिरूपिता या कार्यता तदनाश्रय इत्यर्थः । गगनमेव दृष्टान्त इति भावः ॥**

ಈಶಜ್ಞಾನವೂ ಪ್ರಮಾ ಎಂಬ ಪಕ್ಷದಲ್ಲಿ ಈ ಅನುಮಾನ. ಅದು ಪ್ರಮಾ ಅಲ್ಲದೇ ಹೋದರೆ ಅರ್ಥಜ್ಞಾನರೂಪ ಪ್ರಮಾಜನ್ಯವಲ್ಲದ, ಭ್ರಮಜನ್ಯವಾದ ವಾಕ್ಯವು ಅಪ್ರಮಾಣವಾದಂತೆ ವೇದವೂ ಅಪ್ರಮಾಣವಾಗುತ್ತದೆ.

'ವೇದಃ' ಎಂದು ಪಕ್ಷವಾಚಕ ಪದವನ್ನು ಅನುಸಂಧಾನ ಮಾಡಿಕೊಳ್ಳಬೇಕು. ಸಾಧ್ಯದ ಅರ್ಥ-ಸ್ವೇನ=ವೇದದಿಂದ ಪ್ರತಿಪಾದ್ಯವಾದ ಯಾವ ಅರ್ಥ ಇದೆಯೋ ಧರ್ಮಾದಿ ರೂಪವಾದುದು, ತದ್ವಿಷಯಕವಾದ ಯಾವ ಜ್ಞಾನವೋ (ಈಶಜ್ಞಾನ) ತಾದೃಶಜ್ಞಾನತ್ವಾಚ್ಛಿನ್ನ ಕಾರಣತಾ-ನಿರೂಪಿತ-ಕಾರ್ಯತಾಶ್ರಯವಲ್ಲ ಎಂದು. ಅರ್ಥಾತ್ ವೇದವು ವಾಕ್ಯಾರ್ಥಜ್ಞಾನ ಜನ್ಯವಲ್ಲ ಎಂದರ್ಥ. ಗಗನವೇ ಈ ಅನುಮಾನಕ್ಕೂ ದೃಷ್ಟಾಂತ.

## ನ್ಯಾಯದೀಪ

**साध्यगतविशेषणयोः कृत्यं व्यनक्ति—अपौरुषेयत्वेति । वेदस्येति । क्रमविशेषविशिष्टवर्णानां वेदत्वात् क्रमस्य च कृतकत्वात् कार्यताश्रयत्वमस्तीति भावः—इत्युक्तमिति । प्रतिपाद्येत्युक्तावपि पदावलीत्यादिशब्दप्रतिपाद्यत्वं पदावल्या अप्यस्तीत्युक्तदोषनिरासायैव स्वेत्यप्युक्तिरिति भावः ।।**

ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದ. ಕ್ರಮವು ಬುದ್ಧಿನಿಮಿತ್ತಕವಾದ ಕಾರಣ ಜನ್ಯವಾದುದು. ಆದರಿಂದಾಗಿ ಕ್ರಮವಿಶಿಷ್ಟವಾದ ವೇದವೂ ಕಾರ್ಯತಾಶ್ರಯವಾಗುತ್ತದೆ. ಪದವಿಷಯಕಜ್ಞಾನಜನ್ಯತ್ವವು ವೇದದಲ್ಲಿ ಬರುತ್ತದೆ. ಆದರಿಂದಾಗಿ ''ಸ್ವಪ್ರತಿಪಾದ್ಯಗೋಚರ' ಎಂಬ ಸಾಧ್ಯಾಂಶವನ್ನು ಬಿಟ್ಟರೆ ಬಾಧದೋಷಬರುತ್ತದೆ.

ಸ್ವಪದವನ್ನು ಬಿಟ್ಟು 'ಪ್ರತಿಪಾದ್ಯಾರ್ಥ ವಿಷಯಕ ಜ್ಞಾನತ್ವಾವಚ್ಛಿನ್ನ' ಎಂದು ಸಾಧ್ಯವನ್ನು ಹೇಳಿದರೂ ಬಾಧವು ಬರುತ್ತದೆ. 'ಪದಾವಲೀ' ಎಂಬ ಪದಪ್ರತಿಪಾದ್ಯವಾದ ಪದಸಮೂಹ ವಿಷಯಕ ಜ್ಞಾನಜನ್ಯವೇ ಆಗಿದೆ, ವೇದ. ಆದಕ್ಕಾಗಿ 'ಸ್ವಪ್ರತಿಪಾದ್ಯ' ಎಂದು ಸ್ವಪದವನ್ನು ಸೇರಿಸಬೇಕು. ಸ್ವ ಎಂದರೆ ವೇದ. ವೇದಪದಗಳು ಸ್ವಪ್ರತಿಪಾದ್ಯಗಳಲ್ಲ, ವೇದಪ್ರತಿಪಾದ್ಯಗಳಲ್ಲ. ವೇದಾರ್ಥವಾಗಿರುವ ಧರ್ಮಾದಿಗಳು ಸ್ವಪ್ರತಿಪಾದ್ಯಗಳು. ಅವುಗಳ ಜ್ಞಾನದಿಂದ ವೇದವು ಜನ್ಯವಲ್ಲವಾದ ಕಾರಣ ಬಾಧ ದೋಷವಿಲ್ಲ.

### ಅವತಾರಿಕೆ

**नन्वत्राप्युक्तसाध्यवतो गगनघटादितोऽव्यावृत्तोऽयं हेतुस्तत्रैवोक्तरूपज्ञानाजन्यत्वेनैवोपपन्नः सन् शश्वदेकप्रकारानुपूर्वीकत्वरूपविवक्षितापौरुषेयत्वं न साधयतीत्यर्थान्तरमित्यत आह—इदमपीति ।**

ಈ ಅನುಮಾನದಲ್ಲೂ ಹಿಂದಿನಂತೆಯೇ ಅರ್ಥಾಂತರತಾ ದೋಷವಿದೆ. ಈ ಹೇತುವು ಗಗನದಲ್ಲೂ ಇದೆ, ಘಟಾದಿಗಳಲ್ಲೂ ಇದೆ. ಅವುಗಳಲ್ಲಿ ಜ್ಞಾನಜನ್ಯತ್ವ ಇಲ್ಲದಿರುವುದರಿಂದ ಸ್ವಪ್ರತಿಪಾದ್ಯಾರ್ಥವಿಷಯಕ ಜ್ಞಾನಜನ್ಯತ್ವ ಇಲ್ಲ. ಹೀಗೆ ಸಪಕ್ಷದಲ್ಲಿ ಇಂತಹ ಸಾಧ್ಯದೊಂದಿಗೆ ಸಹಚರಿತವಾದ ಹೇತುವು ಪಕ್ಷದಲ್ಲಿ ಇರಬೇಕಾದರೆ ಅಂತಹ ಸಾಧ್ಯವು ಅಲ್ಲೂ ಇದ್ದರೆ ಸಾಕು. ಇದರಿಂದ, ಶಶ್ವದೇಕಪ್ರಕಾರಾನುಪೂರ್ವೀಕತ್ವರೂಪವಾದ, ವಿವಕ್ಷಿತವಾದ ಅಪೌರುಷೇಯತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಅರ್ಥಾಂತರತಾದೋಷ. ಈ ಆಕ್ಷೇಪಕ್ಕೆ ಮುಂದಿನ ಗ್ರಂಥ ಪರಿಹಾರ ಹೇಳುತ್ತದೆ.

**इदमपि साध्यं परोक्तस्य प्रमाप्रमामूलकवाक्यसाधारणस्य पौरुषेयत्वस्याभावरूपम् ॥**

ಪ್ರಾಚೀನ-ತಾರ್ಕಿಕರು ಪ್ರಮಾ ಮೂಲಕವಾದ ಹಾಗೂ ಅಪ್ರಮಾ ಮೂಲಕವಾದ ಸಕಲ ಪೌರುಷೇಯವಾಕ್ಯಗಳಲ್ಲೂ ಸಾಧಾರಣವಾದ ಸ್ವಪ್ರತಿಪಾದ್ಯಾರ್ಥ-ವಿಷಯಕ-ಜ್ಞಾನತ್ವಾವಚ್ಛಿನ್ನ-ಜನಕತಾ-ನಿರೂಪಿತ-ಜನ್ಯತ್ವ-ರೂಪವಾದ ಪೌರುಷೇಯತ್ವವನ್ನು ನಿರ್ವಚನ ಮಾಡಿದ್ದಾರೆ. ಅಂತಹ ಧರ್ಮವುಳ್ಳ ಪೌರುಷೇಯವಾಕ್ಯವ್ಯಾವೃತ್ತವಾದ ಪ್ರಕೃತಹೇತುವು ವೇದರೂಪಪಕ್ಷದಲ್ಲಿ ಇದೆ. ಆದರಿಂದಾಗಿ ಉಕ್ತಪೌರುಷೇಯತ್ವಾಭಾವವು ವೇದದಲ್ಲಿ ಸಿದ್ಧವಾಗುತ್ತದೆ. ಶಬ್ದವೇಕಪ್ರಕಾರಾನುಪೂರ್ವೀಕತ್ವದಂತೆ ಇದೂ ಒಂದು ಪಾರಿಭಾಷಿಕವಾದ ಅಪೌರುಷೇಯತ್ವ. ಇದನ್ನು ತಾರ್ಕಿಕರು ವೇದದಲ್ಲಿ ಒಪ್ಪಿಲ್ಲ. ಸ್ವಪಕ್ಷದಲ್ಲಿ ಇಂತಹ ಅಪೌರುಷೇಯತ್ವಸಾಧನೆಯೂ ಸಮ್ಮತವಾಗಿದೆ. ಆದ್ದರಿಂದ ಅರ್ಥಾಂತರತಾ ದೋಷವಿಲ್ಲ.

**नच शुकबालादिवाक्ये परीत्या व्यभिचारः । तस्यापि पक्षतुल्यत्वात् ॥**

ಈ ಹೇತುವು ಶುಕೋಚ್ಚರಿತವಾದ ಮತ್ತು ಅರ್ಥಜ್ಞಾನವಿಲ್ಲದ ಬಾಲಕನಿಂದ ಉಚ್ಚರಿತವಾದ ವಾಕ್ಯಗಳಲ್ಲಿ ಸಾಧ್ಯವ್ಯಭಿಚಾರಿಯಾಗಿದೆ. ನೈಯಾಯಿಕರು ಎಲ್ಲಾ ಕಾರ್ಯಗಳೂ ಈಶ್ವರಜ್ಞಾನಜನ್ಯ, ಈಶ್ವರಜ್ಞಾನವು ಸರ್ವವಿಷಯಕವಾದುದರಿಂದ ವಾಕ್ಯಾರ್ಥವಿಷಯಕವೂ ಆಗಿದೆ, ಎಂದು ಹೇಳುತ್ತಾರೆ. ಆದರಿಂದ ಆ ವಾಕ್ಯಗಳೂ ಸ್ವಪ್ರತಿಪಾದ್ಯಾರ್ಥಗೋಚರ ಜ್ಞಾನಾಜನ್ಯಗಳಲ್ಲ. ಅವುಗಳಲ್ಲಿ ತಾದೃಶಜ್ಞಾನಾಜನ್ಯತ್ವರೂಪಸಾಧ್ಯ ಇಲ್ಲ. ಹೇತು ಇದೆ, ವ್ಯಭಿಚಾರ.

ವ್ಯಭಿಚಾರ ಇಲ್ಲ. ಶುಕಾದಿವಾಕ್ಯಗಳು ಪಕ್ಷತುಲ್ಯವಾಗಿವೆ. ಯದ್ಯಪಿ, ಈಶಜ್ಞಾನವು ಆ ವಾಕ್ಯಪ್ರತಿಪಾದ್ಯಾರ್ಥ ವಿಷಯಕವಾಗಿದೆ. ಅಂತಹ ಜ್ಞಾನದಿಂದ ಶುಕಾದಿವಾಕ್ಯಗಳು ಜನ್ಯಗಳೂ ಆಗಿವೆ. ಆದರೆ, ಈಶಜ್ಞಾನ ಉಪಾದಾನಗೋಚರಜ್ಞಾನತ್ವೇನ ಸಕಲಕಾರ್ಯಗಳಿಗೂ ಜನಕ ಹೊರತು ಪ್ರತಿಪಾದ್ಯಾರ್ಥ-ವಿಷಯಕಜ್ಞಾನತ್ವೇನ ಜನಕವಲ್ಲ. ಆದ್ದರಿಂದ ತಾದೃಶಜ್ಞಾನತ್ವಾವಚ್ಛಿನ್ನ-ಜನಕತಾನಿರೂಪಿತ-ಜನ್ಯತ್ವಾಭಾವ ಎಂಬ ಸಾಧ್ಯವೇ ಆ ವಾಕ್ಯಗಳಲ್ಲಿ ಇದೆ, ಸಾಧ್ಯಾಭಾವ ಇಲ್ಲ.

## ನ್ಯಾಯದೀಪ

**परोक्तस्येति ।** चिरन्तनोक्तस्येत्यर्थः[१] । **पौरुषेयत्वस्येति ।** तथाच

१. ''स्वतन्त्रपुरुष-प्रणीतत्त्वं हि पौरुषेयत्वम्। अर्थप्रतीत्येकविषयौ हि विवक्षाप्रयत्नौ स्वातन्त्र्यम् ।''-कुसुमाञ्जलिः पं.स्त. ।

**पौरुषेयवाक्यादुक्तरूपसाध्यहीनाद् व्यावृत्तोऽयं हेतुस्तादृशज्ञानाजन्यत्वरूपसाध्यमादाय पर्यवस्यन्नपि पराभिमतपौरुषेयत्वाभावरूपत्वात् तस्य, नार्थान्तरम् । शश्वदेकप्रकारानुपूर्वीकत्वमिवेदमपि पारिभाषिकं किञ्चिदपौरुषेयत्वमिति भावः । एवमग्रेऽपि ।**

**परीत्येति । तन्मते वाक्यमात्रस्येश्वरज्ञानजन्यतयोक्तरूपसाध्याभावेऽपि तत्र हेतुसत्त्वादिति भावः । पक्षेति । तस्येशज्ञानजन्यत्वेऽपि घटादिसाधारणोपादानादिगोचरज्ञानत्वेनैव तज्जन्यतया स्वप्रतिपाद्यगोचरज्ञानत्वावच्छिन्नेत्यादिरूपसाध्यस್यापि सत्त्वेन तदभावासंमतेरिति भावः ॥**

ನೈಯಾಯಿಕ ರೀತ್ಯಾ ಸಕಲವಾಕ್ಯಗಳೂ ಈಶ್ವರ ಪ್ರಮಾಜನ್ಯವಾದುದರಿಂದ ಶುಕಾದ್ಯುಚ್ಚರಿತ ವಾಕ್ಯದಲ್ಲಿ ವ್ಯಭಿಚಾರ. ಈಶ್ವರಜ್ಞಾನವು ವಾಕ್ಯಪ್ರತಿಪಾದ್ಯಾರ್ಥವಿಷಯಕ-ಜ್ಞಾನತ್ವೇನ ಜನಕವಲ್ಲವಾದುದರಿಂದ ವ್ಯಭಿಚಾರಪರಿಹಾರ.

## ಅವತಾರಿಕೆ

**''वेदाः शब्दाजन्यवाक्यार्थगोचरयथार्थज्ञानजन्याः प्रमाणशब्दत्वात्'' इति मण्युक्तसाध्यस्याभावसाधकमाह—यद्वा स्वेति ।**

[1]ಮಣಿಗ್ರಂಥದಲ್ಲಿ ಪೌರುಷೇಯತ್ವ-ಸಾಧಕವಾದ ಇನ್ನೊಂದು ಅನುಮಾನ ಹೀಗಿದೆ—ವೇದಗಳು, ಶಬ್ದದಿಂದ ಅಜನ್ಯವಾದ, ವಾಕ್ಯಾರ್ಥವಿಷಯಕವಾದ (ವಕ್ತೃವಿನ) ಯಥಾರ್ಥಜ್ಞಾನದಿಂದ ಜನ್ಯವಾಗಿವೆ. ಅವುಗಳು ಪ್ರಮಾಣಶಬ್ದಗಳಾದುದರಿಂದ, ಎಂದು. ಈ ಸಾಧ್ಯಕ್ಕೆ ವಿರುದ್ಧವಾದ ಸಾಧ್ಯವನ್ನು ಸಾಧಿಸುವ ಅನುಮಾನವನ್ನು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

### ಅನುಮಾನ-6

**यद्वा स्वप्रतिपाद्यगोचरयथार्थज्ञानत्वावच्छिन्नकारणताप्रतियोगिक-**

---

१. ''यद्वा वेदाः शब्दाजन्य-वाक्यार्थगोचर-यथार्थज्ञानजन्याः, प्रमाणशब्दत्वात्, भारतवत्'' (मणि.पु.३६६)

**कार्यतानाश्रय इति साध्यम् । तत्रच प्रमाकरणामूलकत्वमात्रं हेतुः ।।**

ಪಕ್ಷ—ವೇದವು.

ಸಾಧ್ಯ—ಸ್ವಪ್ರತಿಪಾದ್ಯಾರ್ಥವಿಷಯಕ-ಯಥಾರ್ಥ-ಜ್ಞಾನತ್ವಾವಚ್ಛಿನ್ನಕಾರಣತಾ-ನಿರೂಪಿತ-ಕಾರ್ಯತಾಕ್ಕೆ ಅನಾಶ್ರಯವಾಗಿದೆ.

ಹೇತು—ಪ್ರಮಾಕರಣ (ಪ್ರಮಾಣ)ವಾದುದು ಈ ವೇದಕ್ಕೆ ಮೂಲವಲ್ಲವಾದುದರಿಂದ.

ತಾರ್ಕಿಕರು ವೇದಕ್ಕೆ ಈಶ್ವರಪ್ರಮಾವು ಮೂಲವೆಂದು ಹೇಳಿದರೂ ಆ ಪ್ರಮಾ ನಿತ್ಯವಾದುದರಿಂದ ಅದಕ್ಕೊಂದು ಕರಣವಿಲ್ಲ. ಆದ್ದರಿಂದ ಪ್ರಮಾಕರಣ-ಮೂಲಕತ್ವಾಭಾವವು ಅವರಿಗೂ ಸಮ್ಮತವಾದ ಹೇತು.

## ನ್ಯಾಯದೀಪ

**वेद इत्यनुकर्षोऽत्रापि ध्येयः । प्रागुक्तमेव साध्यपदकृत्यं ध्येयम् । भ्रान्तवाक्ये उक्तरूपसाध्यस्यापि सत्त्वेन विशेष्यमात्रस्याव्यभिचाराद् दोषमूलकत्वविशेषणस्य व्यर्थत्वमुपेत्याह-तत्रचेति । निरुक्तसाध्य इत्यर्थः ।**

ಈ ಹೇತುವಿನಲ್ಲಿ ಹಿಂದಿನ ಹೇತುವಿನಲ್ಲಿ ಕೊಟ್ಟಿರುವಂತೆ 'ದೋಷಾಮೂಲಕತ್ವೇ ಸತಿ' ಎಂಬ ವಿಶೇಷಣವನ್ನು ಕೊಡಬೇಕಾದ ಅಗತ್ಯವಿಲ್ಲ. ಏಕೆಂದರೆ, ಹಿಂದಿನ ಅನುಮಾನದಲ್ಲಿ ಜ್ಞಾನಾಜನ್ಯತ್ವವು ಸಾಧ್ಯವಾಗಿತ್ತು. ಭ್ರಾಂತವಾಕ್ಯವು ಜ್ಞಾನಜನ್ಯವಾದ ಕಾರಣ ಅದರಲ್ಲಿ ಸಾಧ್ಯವಿಲ್ಲ. ಅಲ್ಲಿ ಹೇತುವೂ ಇರಬಾರದು. ಆದಕ್ಕಾಗಿ 'ಭ್ರಮಾಮೂಲಕತ್ವೇ ಸತಿ' ಎಂಬ ವಿಶೇಷಣವನ್ನು ಸೇರಿಸಿ ಹೇತುವನ್ನು ಆ ವಾಕ್ಯದಲ್ಲಿ ಬರದಿರುವಂತೆ ಮಾಡಲಾಗಿದೆ. ಆದರೆ, ಈ ಅನುಮಾನದ ಸಾಧ್ಯ-ಪ್ರಮಾಜನ್ಯತ್ವಾಭಾವ. ಅದು ಭ್ರಾಂತವಾಕ್ಯದಲ್ಲಿ ಇದೆ. ಹೇತುವೂ ಭ್ರಾಂತವಾಕ್ಯದಲ್ಲಿ ಬರುತ್ತದೆ. ವ್ಯಭಿಚಾರದ ಪ್ರಸಕ್ತಿ ಇಲ್ಲ. ಹೇತುವಿನಲ್ಲಿ ವಿಶೇಷಣ ಕೊಡಬೇಕಾಗಿಲ್ಲ.

**इदमपि साध्यं परोक्तस्य[1] प्रमाणवाक्यमात्रासाधारणपौरुषेयत्वस्याभावरूपम् ।**

**विपक्षे सर्वसमयाभिमतधर्माद्यसिद्धेरुक्तत्वात्, अनुकूलतर्काणां च वक्ष्यमाणत्वान्नाप्रयोजकता ।।**

१. ''वाक्यार्थगोचर-यथार्थज्ञानपूर्वकत्वमेव शब्दप्रामाण्ये तन्त्रम्'' (मणिः-पु.३६७)

ಈ ಸಾಧ್ಯವು ತಾರ್ಕಿಕಾಭಿಮತವಾದ, ಪ್ರಮಾಣವಾಕ್ಯಗಳಲ್ಲಿ ಮಾತ್ರ ಇರುವ ಪೌರುಷೇಯತ್ವದ (ಸ್ವಪ್ರತಿಪಾದ್ಯಗೋಚರ) ಯಥಾರ್ಥಜ್ಞಾನಜನ್ಯತ್ವದ ಅಭಾವರೂಪವಾಗಿದೆ. ಆದ್ದರಿಂದ ಅರ್ಥಾಂತರತಾ ದೋಷವಿಲ್ಲ.

ಹಿಂದೆ ಹೇಳಿರುವ ಪೌರುಷೇಯತ್ವಗಳು ಪ್ರಮಾಣಾಪ್ರಮಾಣವಾಕ್ಯಗಳಲ್ಲಿ ಸಾಧಾರಣ ವಾಗಿವೆ. ಆದರೆ, ಪ್ರಕೃತದಲ್ಲಿ 'ಯಥಾರ್ಥಜ್ಞಾನತ್ವಾವಚ್ಛಿನ್ನ-ಜನಕತಾ' ಎಂದಿರುವುದರಿಂದ ಯಥಾರ್ಥಜ್ಞಾನ ಮೂಲಕವಾದ ಪ್ರಮಾಣವಾಕ್ಯಗಳಲ್ಲಿ ಮಾತ್ರ ಪೌರುಷೇಯತ್ವವು ಬರುತ್ತದೆ. ತದಭಾವವನ್ನು ವೇದದಲ್ಲಿ ಸಾಧನೆ ಮಾಡಲಾಗಿದೆ.

ಈ ಎಲ್ಲ ಅನುಮಾನಗಳಲ್ಲೂ 'ಹೇತುರಸ್ತು, ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕತ್ವ ಶಂಕೆಯನ್ನು ಮಾಡಬಾರದು. ವೇದವು ಅಪೌರುಷೇಯವಾಗದಿದ್ದಲ್ಲಿ ಸರ್ವದಾರ್ಶನಿಕರಿಗೂ ಸಮ್ಮತವಾದ ಧರ್ಮಾದಿಗಳು ಸಿದ್ಧವಾಗಲಿಕ್ಕಿಲ್ಲ, ಎಂಬ ಬಾಧಕತರ್ಕವಿದೆ. ಮುಂದೆಯೂ ಅನುಕೂಲತರ್ಕಗಳನ್ನು ಹೇಳಲಾಗಿದೆ.

## ಸಿದ್ಧಾಂತಾಭಿಮತಾಪೌರುಷೇಯತ್ವ

**एतेन, वेदस्यानादित्वरूपमपौरुषेयत्वं बाधितं सिद्धान्तविरुद्धश्च । क्रमविशेषविशिष्टानां वर्णानां वेदत्वान्नित्यानां सर्वगतानां च तेषां स्वतः क्रमस्यायोगेनाभिव्यक्तिगतस्यैव तस्य वक्तव्यत्वादभिव्यक्तेश्च जन्यत्वेन तद्गतस्य क्रमस्यापि जन्यत्वात्, टीकायां ''क्रमस्य कृतकत्वेऽपि'' इत्युक्तेश्चेति निरस्तम् । क्रमस्य कृतकत्वेपि आधुनिकाध्यापकेन स्वबुद्धिस्थपूर्वपूर्वदिवसीय-क्रमानुसारेणैवोत्तरदिवसेषु इव ईश्वरेणापि स्वबुद्धिस्थप्रवाहानादिपूर्वपूर्वकल्पीय-क्रमानुसारेणैवोत्तरोत्तरकल्पेष्वपि वेदस्योच्चरितत्वेन स्वातन्त्र्याभावेन अनियतानुपूर्वीरहितत्वादिरूपोक्त-त्रिविधापौरुषेयत्वे बाधाद्यभावात् ।**

**उक्तश्च सुधायाम् ''नियतैकप्रकारत्वमपौरुषेयत्वम्''इति ।**

ಹಿಂದೆ (ಪು.33) ''ಈಶ್ವರಜ್ಞಾನಂ ನ ಪ್ರಮಾ...'' ಎಂಬಲ್ಲಿಂದ ಹೇಳಲಾದ ಮೂರುಪಕ್ಷ ಗಳಲ್ಲಿ 'ನಿಯತಾನುಪೂರ್ವೀಕತ್ವಾದಿ' ರೂಪವಾದ ಅಪೌರುಷೇಯತ್ವವು ವಿವಕ್ಷಿತವಾದುದರಿಂದ ಈ ಆಕ್ಷೇಪಕ್ಕೆ ಅವಕಾಶವಿಲ್ಲ—ವೇದಕ್ಕೆ ಅನಾದಿತ್ವರೂಪವಾದ ಅಪೌರುಷೇಯತ್ವವು ಬಾಧಿತವೂ ಆಗಿದೆ,

ಸಿದ್ಧಾಂತಕ್ಕೆ ವಿರುದ್ಧವೂ ಆಗಿದೆ. ಹೇಗೆಂದರೆ—ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದಗಳು. ವರ್ಣಗಳು ನಿತ್ಯಗಳಾದುದರಿಂದ ಎಲ್ಲಾ ಕಾಲಗಳಲ್ಲೂ ಎಲ್ಲ ವರ್ಣಗಳೂ ಇವೆ. ಆದ್ದರಿಂದ ಬ್ರಹ್ಮಪದವಿಗೆ ಬರುವ ಋಜುಗಳಿಗೆ ಇರುವಂತೆ ವರ್ಣಗಳಿಗೆ ಕಾಲಿಕವಾದ ಕ್ರಮವು ಇಲ್ಲ. ಅವುಗಳು ಸರ್ವಗತವಾದುದರಿಂದ ಸರದಲ್ಲಿ ಪೋಣಿಸಿರುವ ಮುತ್ತುಗಳಂತೆ ದೈಶಿಕಕ್ರಮವೂ ಇಲ್ಲ. ಹೀಗಾಗಿ ಉಚ್ಚಾರಣೆಗೆ ಅನುಸಾರವಾಗಿ ವರ್ಣಗಳು ಒಂದೊಂದಾಗಿ ಅಭಿವ್ಯಕ್ತಿಗೊಳ್ಳುವುದರಿಂದ ಅಭಿವ್ಯಕ್ತಿಕ್ರಮವನ್ನೇ ವರ್ಣಗಳಲ್ಲಿ ಹೇಳಬೇಕು. ಈ ಅಭಿವ್ಯಕ್ತಿಯು(ಜ್ಞಾನವಿಷಯತ್ವ) ಜನ್ಯವಾದುದರಿಂದ ವರ್ಣಕ್ರಮವೂ ಜನ್ಯವಾಗುತ್ತದೆ. ಕ್ರಮವು ಜನ್ಯವಾದುದರಿಂದ ಕ್ರಮವಿಶಿಷ್ಟವರ್ಣಾತ್ಮಕ ವೇದವೂ ಜನ್ಯವಾಗುತ್ತದೆ. ಆದ್ದರಿಂದ ವೇದದಲ್ಲಿ ಅನಾದಿತ್ವವು ಬಾಧಿತ.

ಅದು ಸಿದ್ಧಾಂತ ವಿರುದ್ಧವೂ ಆಗಿದೆ—ತತ್ತ್ವನಿರ್ಣಯ ಟೀಕಾದಲ್ಲಿ[1] 'ಕ್ರಮಸ್ಯ ಕೃತಕತ್ವೇऽಪಿ'' ಎಂದು ಕ್ರಮಕ್ಕೆ ಜನ್ಯತ್ವವನ್ನು ಹೇಳಲಾಗಿದೆ.

ಹೀಗೆ, ಅನಾದಿತ್ವರೂಪವಾದ ಅಪೌರುಷೇಯತ್ವವು ಬಾಧಿತ ಹಾಗೂ ಸಿದ್ಧಾಂತ ವಿರುದ್ಧ. ಅಂತಹ ಅಪೌರುಷೇಯತ್ವವನ್ನು ಅನುಮಾನದಿಂದ ಸಾಧಿಸಿದರೆ ಬಾಧ ಮತ್ತು ಅಪಸಿದ್ಧಾಂತ ದೋಷಗಳು ಬರುತ್ತವೆ.

ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಹಿಂದಿನ ಅನುಮಾನಗಳಿಂದ ಅನಾದಿತ್ವರೂಪವಾದ ಅಪೌರುಷೇಯತ್ವವನ್ನು ಸಾಧನೆ ಮಾಡಲಾಗಿಲ್ಲ. ಅನಿಯತಾನುಪೂರ್ವೀಕತ್ವರಹಿತತ್ವವನ್ನಷ್ಟೇ ಸಾಧಿಸಲಾಗಿದೆ. ಅದು ವೇದದಲ್ಲಿ ಬಾಧಿತವಲ್ಲ. ವೇದದ ವರ್ಣಾದಿ ಕ್ರಮವು ಕೃತಕವಾದರೂ ಅದರ ವರ್ಣಾದಿ ಆನುಪೂರ್ವೀ ಅನಿಯತವಲ್ಲ. ಪ್ರತಿಸರ್ಗದಲ್ಲೂ ಅದು ಒಂದೇ ರೀತಿಯಾಗಿರುತ್ತದೆ. ಆಧುನಿಕ ಅಧ್ಯಾಪಕನೊಬ್ಬ ಮೊದಮೊದಲ ದಿನಗಳಲ್ಲಿ ತನ್ನ ಬುದ್ಧಿಯಲ್ಲಿ ಕಂಡುಕೊಂಡ ಕ್ರಮಕ್ಕೆ ಅನುಗುಣವಾಗಿಯೇ ಅನಂತರದ ದಿನಗಳಲ್ಲಿ ವೇದವನ್ನು ಉಚ್ಚಾರಣೆ ಮಾಡುತ್ತಾನೆ. ಮೊದಲದಿನ 'ಅಗ್ನಿಮೀಳೇ ಪುರೋಹಿತಂ' ಎಂದು ವೇದಮಂತ್ರವನ್ನು ಉಚ್ಚರಿಸಿ ಮರುದಿನ 'ವಹ್ನಿಮೀಳೇ' ಎಂದಾಗಲೀ 'ಈಳೇ ಅಗ್ನಿಮ್' ಎಂದಾಗಲೀ ಉಚ್ಚಾರಣೆ ಮಾಡುವುದಿಲ್ಲ. ಅದರಂತೆ ಈಶ್ವರನೂ ಅನಾದಿಯಾದ ತನ್ನ ಬುದ್ಧಿಯಲ್ಲಿ ಪ್ರವಾಹತಃ ಅನಾದಿಯಾಗಿ ಹರಿದು ಬಂದಿರುವ ಪೂರ್ವ–ಪೂರ್ವಕಲ್ಪದ ವರ್ಣಾದಿಕ್ರಮವನ್ನು ಅನುಸರಿಸಿಯೇ ಮುಂದು ಮುಂದಿನ ಕಲ್ಪಗಳಲ್ಲೂ ವೇದವನ್ನು ಉಚ್ಚರಿಸುತ್ತಾನೆ. ಹೀಗೆ ವೈದಿಕ ವರ್ಣಾದಿಕ್ರಮಗಳಲ್ಲಿ ಈಶ್ವರನೂ ತನ್ನ ಸ್ವಾತಂತ್ರ್ಯವನ್ನು ಬಳಸುವುದಿಲ್ಲ. ಆದ್ದರಿಂದ ಹಿಂದೆ ಹೇಳಿರುವ ಅನಿಯತಾನುಪೂರ್ವೀರಹಿತತ್ವ, ಸ್ವಪ್ರತಿಪಾದ್ಯಾರ್ಥ–ಗೋಚರಜ್ಞಾನತ್ವಾವಚ್ಛಿನ್ನ–ಜನಕತಾನಿರೂಪಿತ–ಕಾರ್ಯತಾನಾಶ್ರಯತ್ವ, ಸ್ವಪ್ರತಿಪಾದ್ಯಗೋಚರ

१. ततश्च क्रमस्य कृतकत्वेऽपि, पुरुषाभिप्रायप्रवेशेऽपि स्वतन्त्रस्य वक्तुरभावात् अपौरुषेयत्वमुपपद्यते । (वि.टी. 'ನಿತ್ಯಾ ವೇದಾಃ ಮೂಲವ್ಯಾ.)

ಯಥಾರ್ಥಜ್ಞಾನತ್ವಾವಚ್ಛಿನ್ನ-ಕಾರಣತಾ-ನಿರೂಪಿತ-ಕಾರ್ಯತಾನಾಶ್ರಯತ್ವರೂಪವಾದ ಮೂರೂ ವಿಧದ ಅಪೌರುಷೇಯತ್ವಗಳು ವೇದದಲ್ಲಿ ಅಬಾಧಿತವಾಗಿವೆ.

ಇದನ್ನು ನ್ಯಾಯಸುಧಾ ಜಿಜ್ಞಾಸಾಧಿಕರಣದಲ್ಲೂ ಹೇಳಲಾಗಿದೆ—'ನಿಯತೈಕ ಪ್ರಕಾರತ್ವಮ್ ಅಪೌರುಷೇಯತ್ವಮ್' ಎಂದು.

## ನ್ಯಾಯದೀಪ

पूर्ववदर्थान्तरताव्युदासायाह—**इदमपीति** । उक्तहेतूनामपौरुषेयत्वेन विनाऽप्युपपत्तिमाशङ्क्याह—**विपक्ष इति** ।

**एतेनेति** । यद्वेश्वरज्ञानमित्यादिनोक्तपक्षत्रयेणेत्यर्थः ।।

ಏತೇನ ಎಂದರೆ 'ಯದ್ವಾ' ಎಂಬ ಗ್ರಂಥದಿಂದ (ಪು.33) ಇದುವರೆಗೆ ಹೇಳಿರುವ ಮೂರು ವಿಧವಾದ ಅಪೌರುಷೇಯತ್ವಪಕ್ಷಗಳಿಂದ, ಎಂದರ್ಥ.

## ನ್ಯಾಯದೀಪ

प्रतिज्ञातं द्वयमपि क्रमेण व्यनक्ति—**क्रमेत्यादिना** । **टीकायामिति** । तत्त्वनिर्णयटीकायामित्यर्थः । एतेनेत्युक्तं व्यनक्ति—**क्रमस्येति** ।

**उक्तश्चेति** । जिज्ञासानये ''न मानमपि वेदानाम्'' इत्यत्र ।

न मानमपि वेदानाम् अङ्गीकार्या हि नित्यता ।।

ಎಂಬ ಅನುವ್ಯಾಖ್ಯಾನದ ವಿವರಣೆ ಸುಧಾದಲ್ಲಿ ಹೀಗಿದೆ—

''ननु कोऽयं वेदो नाम ? क्रमविशेष-विशिष्टवर्णा एव वेदाः । तस्य नियतैकप्रकारत्वं नित्यत्वम् ।''

**एतदप्युक्तं ''गौरवदोषेण''इति । क्रमाकृतकत्वस्याप्यपौरुषेयत्वप्रवेशे गौरवदोषेणेत्यर्थः ।।**

ಈ ಮೂರುವಿಧದ ಅಪೌರುಷೇಯತ್ವಗಳನ್ನು ''ಗೌರವದೋಷೇಣ' ಎಂಬ ಅನುವ್ಯಾಖ್ಯಾನ ದಲ್ಲಿ ಹೇಳಲಾಗಿದೆ. ಅದರ ಅರ್ಥ—ಕ್ರಮವೂ ಕೃತಕವಲ್ಲ, ಎಂಬ ಅಂಶವನ್ನೂ ಅಪೌರುಷೇಯತ್ವ ಶರೀರದಲ್ಲಿ ಪ್ರವೇಶ ಮಾಡಿದರೆ ಗೌರವದೋಷವು ಇರುವುದರಿಂದ, ಎಂದು.

## ನ್ಯಾಯದೀಪ

**प्रकृतोपयोगितया अर्थमाह—क्रमाकृतकत्वस्येति ।।**

'ಗೌರವದೋಷೇಣ' ಎಂಬುದಕ್ಕೆ ಸುಧಾದಲ್ಲಿ ಹೇಳಿದ ಅರ್ಥವು ಪ್ರಕೃತಸಂಗತ ವಾಗುವುದಿಲ್ಲ. ಅದಕ್ಕೆ ಪ್ರಕೃತಸಂಗತವಾಗುವಂತೆ ಅರ್ಥಾಂತರವನ್ನು 'ಕ್ರಮಾಕೃತಕತ್ವಸ್ಯ' ಎಂಬ ಮೂಲದಲ್ಲಿ ಹೇಳಲಾಗಿದೆ.

## ಅವತಾರಿಕೆ

''वेदः आप्तप्रणीतः, वेदत्वाद्, व्यतिरेकेण लौकिकवाक्यवत्'' इति परोक्तस्य प्रत्यनुमानमाह—**यद्वा वेद इति ।**

''ವೇದವು ವೇದವಾದುದರಿಂದ ಆಪ್ತಪ್ರಣೀತವಾಗಿದೆ. ಯಾವುದು ಆಪ್ತಪ್ರಣೀತವಲ್ಲವೋ ಅದು ವೇದವೂ ಆಗಿರುವುದಿಲ್ಲ. ಉದಾಹರಣೆಗೆ, ಲೌಕಿಕವಾದ ಅಪ್ರಾಮಾಣಿಕವಾಕ್ಯ. ಅದು ಆಪ್ತರಚಿತವಲ್ಲ, ವೇದವೂ ಅಲ್ಲ''. ಇದು ನೈಯಾಯಿಕರ ಅನುಮಾನ. ಇದಕ್ಕೆ ವಿರುದ್ಧವಾದ ಅನುಮಾನವನ್ನು 'ಯದ್ವಾ' ಎಂಬ ಗ್ರಂಥದಿಂದ ಮಾಡಲಾಗಿದೆ.

## ಅನುಮಾನ-7

**यद्वा, वेदः आप्ताप्रणीतः प्रमाकरणामूलकत्वात् । गगनवत् शुकादिवाक्यवद्वा। अत्रच पक्षतावच्छेदकं वेदत्वं प्रमाकरणामूलकत्वे सति प्रमाणशब्दत्वं, नतु हेतुमात्रम् । प्रत्यक्षाभासादिमूलकशब्दाभासेऽति-व्याप्तेः । येन पक्षतावच्छेदकस्यैव हेतुत्वे तत्समानाधिकरणसाध्य-प्रतीतिरूपस्यानुमानफलस्य व्याप्तिग्रहकाल एव सिद्धत्वादनुमानवैयर्थ्य-मिति शङ्क्येत ।।**

**ಪಕ್ಷ**—ವೇದ.

**ಸಾಧ್ಯ**—ಆಪ್ತರಚಿತವಲ್ಲ.

**ಹೇತು**—ವೇದಕ್ಕೆ ಪ್ರಮಾಕರಣವು ಮೂಲವಲ್ಲವಾದುದರಿಂದ.

**ದೃಷ್ಟಾಂತ**—ಗಗನ. ಆಕಾಶವು ನಿತ್ಯವಾದುದರಿಂದ ಅದಕ್ಕೆ ಮೂಲವೇ ಇಲ್ಲ. ಆದ್ದರಿಂದಲೇ ಅದು ರಚಿತವೂ ಅಲ್ಲ.

ವೇದವನ್ನು ಈಶ್ವರ ರಚಿಸಿದ್ದಾನೆಂದು ನೈಯಾಯಿಕರು ಹೇಳುವರಾದರೂ ಈಶ್ವರನ ಪ್ರಮಾವು ವೇದಕ್ಕೆ ಮೂಲ ಎನ್ನುತ್ತಾರೆ. ಆದರೆ, ಆ ಪ್ರಮಾ ನಿತ್ಯವಾದುದರಿಂದ ಅದಕ್ಕೆ ಕರಣ ಇಲ್ಲ. ಆದ್ದರಿಂದ ಪ್ರಮಾಕರಣ ಮೂಲಕತ್ವಾಭಾವ ಎಂಬ ಹೇತು ಅವರಿಗೂ ಸಮ್ಮತವಾಗಿದೆ.

ಶುಕ-ಬಾಲಾದಿ ವಾಕ್ಯಗಳೂ ದೃಷ್ಟಾಂತವಾಗಬಹುದು. ಅವುಗಳನ್ನು ಶುಕಾದಿಗಳು ಅರ್ಥ-ಪ್ರಮಾಪೂರ್ವಕವಾಗಿ ಉಚ್ಚರಿಸುವುದಿಲ್ಲ. ಆದ್ದರಿಂದ ಅಂತಹ ವಾಕ್ಯಗಳು ಪ್ರಮಾಕರಣಪೂರ್ವಕ ವಾಗಿಲ್ಲ. ಆದರಿಂದಾಗಿಯೇ ಆಪ್ತರಚಿತಗಳೂ ಅಲ್ಲ.

ಈ ಅನುಮಾನದ ಪಕ್ಷ ವೇದ. ಪಕ್ಷತಾವಚ್ಛೇದಕ ವೇದತ್ವ. ವೇದತ್ವ ಎಂದರೆ ಪ್ರಮಾಕರಣಾಮೂಲಕತ್ವ ಮಾತ್ರವಲ್ಲ. ಇಷ್ಟುಮಾತ್ರ ವೇದತ್ವವಾದರೆ ಭ್ರಾಂತಿಮೂಲಕವಾದ ಶಬ್ದಾಭಾಸದಲ್ಲೂ ಅದು ಇದೆ. ಅತಿವ್ಯಾಪ್ತಿ ಬರುತ್ತದೆ. ಅದಕ್ಕಾಗಿ 'ಪ್ರಮಾಣಶಬ್ದತ್ವಂ' ಎಂಬ ಅಂಶವನ್ನೂ ಅದರಲ್ಲಿ ಸೇರಿಸಬೇಕು. ಹೀಗಾಗಿ ಹೇತುವೂ ಪಕ್ಷತಾವಚ್ಛೇದಕವೂ ಒಂದೇ ಆಗುವು ದಿಲ್ಲ. ಪಕ್ಷತಾವಚ್ಛೇದಕವೇ ಹೇತುವಾದಲ್ಲಿ ವ್ಯಾಪ್ತಿಜ್ಞಾನ ಬರುವಾಗಲೇ ಪಕ್ಷದಲ್ಲಿ ಸಾಮಾನಾಧಿ ಕರಣ್ಯೇನ ಸಾಧ್ಯನಿಶ್ಚಯವೂ ಆಗುವುದರಿಂದ ಸಾಧ್ಯಸಿದ್ಧವಾಗಿ ಅನುಮಾನವೇ ವ್ಯರ್ಥವಾದೀತು.

**ವಿವರಣೆ**—ಹೇತುವೇ ಪಕ್ಷತಾವಚ್ಛೇದಕವಾದರೆ ''ಹೇತುಃ ಸಾಧ್ಯಸಮಾನಾಧಿಕರಣಃ'' ಎಂಬ ವ್ಯಾಪ್ತಿ ನಿಶ್ಚಯ ಬಂದಾಗ ಹೇತು ಇದ್ದಲ್ಲಿ ಸಾಧ್ಯವೂ ಇದೆ, ಎಂಬ ಜ್ಞಾನವೂ ತುಲ್ಯವಿತ್ತಿವೇದ್ಯತಯಾ ಬರುತ್ತದೆ. ಹೇತುವೇ ಪಕ್ಷತಾವಚ್ಛೇದಕವಾದುದರಿಂದ 'ಹೇತು ಇದ್ದಲ್ಲಿ' ಎಂದರೆ 'ಪಕ್ಷದಲ್ಲಿ' ಎಂದೇ ಅರ್ಥ. ಅಲ್ಲಿಗೆ ಪಕ್ಷದಲ್ಲಿ ಸಾಧ್ಯವಿದೆ ಎಂಬ ನಿಶ್ಚಯವಾದಂತೆ. ಆದ್ದರಿಂದ ಅವೆರಡೂ ಒಂದೇ ಆಗಿರಬಾರದು.

## ನ್ಯಾಯದೀಪ

वाक्यार्थप्रमावत्त्वे सति विप्रलम्भादिदोषहीनो ह्याप्तः । तदप्रणीत इत्यर्थः । भ्रान्ताप्रणीतत्वेन अर्थान्तरतानिरासाय आप्तेत्युक्तिः । **प्रमाकरणेति** । परमते वेदस्येश्वरप्रमामूलकत्वेऽपि तत्करणामूलकत्वस्य नासिद्धिरिति भावः ।।

ಆಪ್ತ ಎಂದರೆ ತಾನು ಹೇಳಿರುವ ವಾಕ್ಯದ ಅರ್ಥವನ್ನು ಯಥಾರ್ಥವಾಗಿ ತಿಳಿದವನು. ಜೊತೆಗೆ ವಿಪ್ರಲಂಭಾದಿ ದೋಷರಹಿತನಾದವನು. ಅಂತಹ ಆಪ್ತನಿಂದ ವೇದವು ರಚಿತವಲ್ಲ ಎಂದು ಸಾಧ್ಯದ ಅರ್ಥ. 'ಅಪ್ರಣೀತಃ' ಎಂದಿಷ್ಟೇ ಸಾಧ್ಯಮಾಡಿದರೆ ನೈಯಾಯಿಕರು ಭ್ರಾಂತಪುರುಷನಿಂದ ಅಪ್ರಣೀತ ಎಂದು ಹೇಳಿ ಪಕ್ಷದಲ್ಲಿ ಸಾಧ್ಯಪರ್ಯವಸಾನ ಮಾಡುತ್ತಾರೆ. ಇದರಿಂದ ನಮಗೆ ಅಭಿಮತವಾದ, ಆಪ್ತಾಪ್ರಣೀತತ್ವರೂಪವಾದ ಸಾಧ್ಯವು ಸಿದ್ಧವಾಗದೆ ಅರ್ಥಾಂತರದೋಷವು ಬರುತ್ತದೆ. ಅದರ ಪರಿಹಾರಕ್ಕಾಗಿ ಆಪ್ತಾಪ್ರಣೀತಃ ಎಂದು ಆಪ್ತಪದವನ್ನು ಸೇರಿಸಲಾಗಿದೆ.

ನೈಯಾಯಿಕಮತದಂತೆ ವೇದವು ಈಶ್ವರಪ್ರಮಾ'ಮೂಲಕ'ವಾಗಿದ್ದರೂ ಆ ಪ್ರಮಾಕ್ಕೆ ಕರಣವು ಇಲ್ಲದಿರುವುದರಿಂದ ಪ್ರಮಾಕರಣಾಮೂಲಕತ್ವವು ವೇದದಲ್ಲಿ ಇದೆ. ಆದ್ದರಿಂದ ಹೇತ್ವಸಿದ್ಧಿದೋಷವಿಲ್ಲ.

## ನ್ಯಾಯದೀಪ

**अन्तरङ्गदृष्टान्तमाह—शुकादीति । शुकबालादिवाक्यवदित्यर्थः । प्रणीतत्वस्योच्चारणघटितत्वेन वा, वाक्यार्थप्रमात्वेन रूपेण आप्तप्रमामूलकत्वेन वा विवक्षितत्वाच्छुकादिवाक्येऽपीश्वरप्रणीतत्वं नेति न साध्यवैकल्यम् । परमतेऽपि तत्रेश्वरज्ञानस्य भ्रमसाधारण्येनैव हेतुत्वस्य प्रागुपपादनादिति भावः ।।**

ಮೂಲದಲ್ಲಿ ಗಗನ ಮತ್ತು ಶುಕಾದಿವಾಕ್ಯ ಎರಡು ದೃಷ್ಟಾಂತಗಳಿವೆ. ಅವುಗಳಲ್ಲಿ ಗಗನ ಬಹಿರಂಗದೃಷ್ಟಾಂತ, ಶುಕವಾಕ್ಯ ಅಂತರಂಗ ದೃಷ್ಟಾಂತ. ಪ್ರಕೃತದಲ್ಲಿ ವಾಕ್ಯರೂಪವಾದ ವೇದವು ಪಕ್ಷ. ಅದಕ್ಕೆ ಸಜಾತೀಯವಾದುದರಿಂದ ಶುಕವಾಕ್ಯವು ಅಂತರಂಗ ದೃಷ್ಟಾಂತ. ಈ ದೃಷ್ಟಾಂತದಲ್ಲಿ ಆಪ್ತಾಪ್ರಣೀತತ್ವರೂಪ ಸಾಧ್ಯವು ಬರಬೇಕು. ಆದರೆ ಈಶ್ವರನು ಸಕಲಕಾರ್ಯಕಾರಣನಾದುದರಿಂದ ಆಪ್ತಪ್ರಣೀತವಾಗಿದೆ ಶುಕವಾಕ್ಯ. ಆದ್ದರಿಂದ ಸಾಧ್ಯವು ಬರುವುದಿಲ್ಲ, ಎಂದು ಪೂರ್ವಪಕ್ಷ. ಇದಕ್ಕೆ ಸಿದ್ಧಾಂತವನ್ನು ಎರಡು ರೀತಿಯಾಗಿ ಹೇಳಲಾಗಿದೆ—

1. ಪುರುಷಪ್ರಣೀತ ಎಂದರೆ ಸ್ವತಂತ್ರ ಪುರುಷೋಚ್ಚರಿತ ಎಂದರ್ಥ. ಶುಕಾದಿವಾಕ್ಯಗಳನ್ನು ಈಶ್ವರ ಉಚ್ಚಾರಣೆ ಮಾಡಿಲ್ಲ. ಆದ್ದರಿಂದ ಆಪ್ತಾಪ್ರಣೀತತ್ವವು ಅದರಲ್ಲಿದೆ.

2. ವಾಕ್ಯಾರ್ಥ ಪ್ರಮಾತ್ವೇನ ಪ್ರಮಾಜನ್ಯತ್ವವೇ ಪ್ರಣೀತತ್ವ. ಈಶ್ವರಜ್ಞಾನವು ಶುಕವಾಕ್ಯಕ್ಕೆ ಉಪಾದಾನವಿಷಯಕಜ್ಞಾನತ್ವೇನ ಕಾರಣ, ಉಕ್ತಪ್ರಮಾತ್ವೇನ ಅಲ್ಲ. ಆದ್ದರಿಂದ ಶುಕವಾಕ್ಯದಲ್ಲಿ ಆಪ್ತಪ್ರಣೀತತ್ವ ಇಲ್ಲ.

ಈಶ್ವರಜ್ಞಾನವು ತಾರ್ಕಿಕಮತದಲ್ಲಿ ಭ್ರಮಸಾಧಾರಣವಾದ ಜ್ಞಾನತ್ವೇನ ಹೇತು. ಆದ್ದರಿಂದ ಈಶ ಪ್ರಮಾಮೂಲಕತ್ವವು ಶುಕವಾಕ್ಯದಲ್ಲಿ ಇಲ್ಲ. ಆಪ್ತಪ್ರಣೀತತ್ವ ಬರುವುದಿಲ್ಲ. ಈಶ್ವರಜ್ಞಾನವು ಭ್ರಮಸಾಧಾರಣ್ಯೇನ ಕಾರಣ ಎಂದು ಹಿಂದೆ ಸಮರ್ಥಿಸಲಾಗಿದೆ. (ಪ್ರಾಮಾಣ್ಯವಾದ-ಕನ್ನಡಾನುವಾದ-ಪು.549)

## ನ್ಯಾಯದೀಪ

पक्षतावच्छेदकहेत्वोरैक्यमाशङ्क्य निराह–**अत्र चेति**। ''अकर्तृकत्व-प्रसिद्धिमत्त्वं वेदत्वम्। अकर्तृकप्रसिद्धिमत्त्वं नाम प्रत्यक्षादिप्रमाणं वा विप्रलम्भादिकं वाऽस्य मूलं नोपलभ्यत इति प्रसिद्धिविषयत्वम्'' इति तत्वनिर्णयटीकोक्तस्य निष्कृष्टार्थमाह—**प्रमेति**।।

ತತ್ತ್ವನಿರ್ಣಯದಲ್ಲಿ 'ಅಕರ್ತೃಕತ್ವ-ಪ್ರಸಿದ್ಧಿಮತ್ತ್ವಂ ವೇದತ್ವಂ' ಎಂದು ಹೇಳಿ ಆ ಅಕರ್ತೃಕತ್ವಪ್ರಸಿದ್ಧಿಮತ್ತ್ವವನ್ನು ಹೀಗೆ ವಿವರಿಸಲಾಗಿದೆ—ಪ್ರತ್ಯಕ್ಷಾದಿಪ್ರಮಾಣಗಳಾಗಲೀ, ವಿಪ್ರಲಂಭಾದಿಗಳಾಗಲೀ, ವೇದಕ್ಕೆ ಮೂಲವಾಗಿ ಉಪಲಬ್ಧವಾಗಿಲ್ಲ ಎಂಬ ಪ್ರಸಿದ್ಧಿಗೆ ವಿಷಯವಾದುದು ವೇದ. ಹೀಗೆ ತತ್ತ್ವನಿರ್ಣಯಟೀಕೆಯಲ್ಲಿ ಹೇಳಿರುವುದಕ್ಕೆ ಅನುಗುಣವಾದ ವೇದತ್ವದ ನಿಷ್ಕೃಷ್ಟಸ್ವರೂಪವನ್ನು ಮೂಲದ 'ಪ್ರಮಾಕರಣಾಮೂಲಕತ್ವೇ' ಇತ್ಯಾದಿ ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪ

ननु न हेतुमात्रमित्ययुक्तं। तथात्वेऽपि दोषाभावात् किमधिकप्रवेशे-नेत्यत आह— **प्रत्यक्षेति**। तथाच वेदपदेन शब्दाभासस्यापि पक्षतापत्तावंशे सिद्धसाधनता स्यादिति भावः। दोषान्तरश्चाह— **येनेति**। तन्मात्रस्य पक्षतावच्छेदकीकरणेनेत्यर्थः। **तदिति**। पक्षतावच्छेदकसमानाधिकरणं यत् साध्यं तत्प्रतीतिरूपस्येत्यर्थः। यत्र प्रमाकरणामूलकत्वं तत्राप्ताप्रणीतत्वमिति गगनादौ व्याप्तिग्रहदशायामेव हेतुसामानाधिकरण्येन तत्साध्यज्ञानस्य जातत्वात्। हेतोरेव पक्षतावच्छेदकत्वेनानुमानफलस्य सिद्धत्वादित्यर्थः।।

ಪಕ್ಷತಾವಚ್ಛೇದಕ ಹೇತುಮಾತ್ರವಲ್ಲ, ಎನ್ನಲಾಯಿತು. ಹೇತುಮಾತ್ರವನ್ನು ಪಕ್ಷತಾವಚ್ಛೇದ ಮಾಡಿದರೂ ದೋಷವಿಲ್ಲದಿರುವುದರಿಂದ ಅದರಲ್ಲಿ ಅಧಿಕಾಂಶವನ್ನು (ಪ್ರಮಾಣಶಬ್ದತ್ವ) ಏಕೆ ಸೇರಿಸಬೇಕು? ಅದಕ್ಕೆ ಉತ್ತರ–''ಪ್ರತ್ಯಕ್ಷ'' ಇತ್ಯಾದಿವಾಕ್ಯದಲ್ಲಿ ಇದೆ. ಪ್ರಮಾಕರಣಾಮೂಲಕತ್ವ ವನ್ನು ಮಾತ್ರ ಪಕ್ಷತಾವಚ್ಛೇದಕವನ್ನಾಗಿ ಮಾಡಿದರೆ ಶಬ್ದಾಭಾಸವೂ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಆಪ್ತಾಪ್ರಣೀತತ್ವರೂಪ-ಪ್ರಕೃತ ಸಾಧ್ಯವು ಸಿದ್ಧವಾದುದರಿಂದ ಸಿದ್ಧಸಾಧನತಾ ಬಂದೀತು. ಅದಕ್ಕಾಗಿ ಅಧಿಕಾಂಶವನ್ನು ಸೇರಿಸಬೇಕು.

'ಯೇನ' ಎಂಬ ವಾಕ್ಯದಲ್ಲಿ ಅಂಶೇಸಿದ್ಧಸಾಧನತಾದೋಷಾಂತರವನ್ನೂ ಹೇಳಲಾಗಿದೆ. ''ತತ್ ಸಮಾನಾಧಿಕರಣಸಾಧ್ಯ'' ಎಂಬ ಮೂಲಕ್ಕೆ ಪಕ್ಷತಾವಚ್ಛೇದಕ ಸಮಾನಾಧಿಕರಣವಾದುದು ಸಾಧ್ಯ ಎಂಬ ಜ್ಞಾನವು ಬರುತ್ತದೆ, ಎಂದರ್ಥ.

ಎಲ್ಲಿ ಪ್ರಮಾಕರಣಾಮೂಲಕತ್ವವು ಇದೆಯೋ ಅಲ್ಲಿ ಆಪ್ತಾಪ್ರಣೀತತ್ವವು ಇದೆ, ಎಂಬ ವ್ಯಾಪ್ತಿಜ್ಞಾನ ಬಂದಾಗ ಹೇತುವಾದ ಪ್ರಮಾಕರಣಾಮೂಲಕತ್ವವೇ ಪಕ್ಷತಾವಚ್ಛೇದವಾದುದರಿಂದ ಪಕ್ಷದಲ್ಲಿ ಸಾಧ್ಯನಿಶ್ಚಯವೂ ಆಗಿಬಿಡುತ್ತದೆ. ಇದರಿಂದ ವ್ಯಾಪ್ತಿನಿಶ್ಚಯಕಾಲದಲ್ಲೇ ಅನುಮಾನದ ಫಲವು ಸಿದ್ಧವಾಗುತ್ತದೆ.

## ನ್ಯಾಯದೀಪ

**यद्यपि साध्यविशेष्यकप्रतीतेर्व्याप्तिग्रहणदशायां जातत्वेऽपि साध्य-विशेषणकप्रतीतेरुद्देश्यायास्तदानीमभावेन नानुमानवैयर्थ्यम् । तथा-प्यतिशयाभावेन तादृशप्रतीतेरुद्देश्यत्वस्यैवायोगात् यत् प्रमाकरणा-मूलकत्ववत् तदाप्ताप्रणीतत्ववदित्यपि व्याप्तिग्रहसम्भवाच्चैवमुक्तमिति ज्ञेयम् ।।**

ವಸ್ತುತಃ ವ್ಯಾಪ್ತಿಗ್ರಹಣದ ಆಕಾರಕ್ಕೂ ಅನುಮಿತಿಯ ಆಕಾರಕ್ಕೂ ವೈಷಮ್ಯ ಇದೆ. ''ಹೇತು ಸಮಾನಾಧಿಕರಣಂ ಸಾಧ್ಯಂ'' ಎಂದು ವ್ಯಾಪ್ತಿಗ್ರಹಣ. ಪಕ್ಷತಾವಚ್ಛೇದಕವೂ ಹೇತುವೂ ಒಂದೇ ಆದುದರಿಂದ 'ಪಕ್ಷತಾವಚ್ಛೇದಕ–ಸಮಾನಾಧಿಕರಣಂ ಸಾಧ್ಯಂ' ಎಂದೇ ವ್ಯಾಪ್ತಿನಿಶ್ಚಯವಾದರೂ ಈ ನಿಶ್ಚಯದಲ್ಲಿ ಸಾಧ್ಯವು ವಿಶೇಷ್ಯ. ಆದರೆ ಅನುಮಿತಿಯ ಆಕಾರ 'ಸಾಧ್ಯವಾನ್ ಪಕ್ಷಃ' ಎಂದು. ಇಲ್ಲಿ ಸಾಧ್ಯವು ವಿಶೇಷಣ. ಇಂತಹ ಸಾಧ್ಯವಿಶೇಷಣಕಾನುಮಿತಿಯೇ ಉದ್ದಿಷ್ಟ. ಈ ಉದ್ದೇಶವು ವ್ಯಾಪ್ತಿಜ್ಞಾನದಿಂದ ಸಿದ್ಧವಾಗುವುದಿಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ. ಅನುಮಾನಕ್ಕೆ ವೈಯರ್ಥ್ಯವೂ ಇಲ್ಲ. ಆದರೂ ಸಾಧ್ಯವಿಶೇಷ್ಯಕಾನುಮಿತಿಯಲ್ಲಿ ತದ್ವಿಶೇಷಣಕಾನುಮಿತಿಗಿಂತ

ವಿಶೇಷವೇನೂ ಇಲ್ಲ. ಆದ್ದರಿಂದ ಅಂತಹ ಅನುಮಿತಿಯೇ ಉದ್ದೇಶ್ಯ ಎಂದು ಆಗ್ರಹ ಮಾಡುವುದಕ್ಕೆ ಕಾರಣವಿಲ್ಲ. ಅಥವಾ ವ್ಯಾಪ್ತಿಜ್ಞಾನವೂ ಸಾಧ್ಯವಿಶೇಷಣಕವಾಗಿಯೇ ಬರಬಹುದು. 'ಯಃ ಹೇತುಮಾನ್ ಸಃ ಸಾಧ್ಯವಾನ್' ಎಂದು. ಪ್ರಕೃತದಲ್ಲಿ 'ಯತ್ ಪ್ರಮಾಕರಣಾಮೂಲಕತ್ವವತ್ ತತ್ ಆಪ್ತಾಪ್ರಣೀತತ್ವವತ್' ಎಂದು ಪಕ್ಷವಿಶೇಷ್ಯಕಜ್ಞಾನವೂ ವ್ಯಾಪ್ತಿಜ್ಞಾನವಾಗಬಹುದು. ಈಗ ಅನುಮಿತಿಯ ಉದ್ದೇಶ ಈಡೇರಿದಂತೆ ಆಗುತ್ತದೆ. ಅದಕ್ಕಾಗಿ ಪಕ್ಷತಾವಚ್ಛೇದಕ–ಹೇತುಗಳು ಒಂದಾಗಿರಬಾರದು.

## ಅವತಾರಿಕೆ

**सामान्यपरिशेषाभ्यामप्यौरुषेयत्वं साधयति—यद्वा वेदेति ।**

ಸಾಮಾನ್ಯಸಿದ್ಧಿ–ಪರಿಶೇಷಗಳಿಂದಲೂ ವೇದಾಪೌರುಷೇಯತ್ವವನ್ನು ಸಾಧಿಸುವ ಅನುಮಾನ ವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ—

### ಅನುಮಾನ-8

**यद्वा, वेदानुपूर्वीनिष्ठादृष्टादिकारणता केनचिदवच्छिन्ना, कारण-तात्मकत्वात्, दण्डगतकरणतावत्।।**

ವೇದದ ಬೇರೆಬೇರೆ ಸೂಕ್ತಗಳಿಗೆ ಬೇರೆ ಬೇರೆ ಫಲಗಳಿವೆ. ಸೂಕ್ತಭೇದಕ್ಕೆ ವರ್ಣಪದಾದಿ ಆನುಪೂರ್ವೀಭೇದವು ಕಾರಣ. ಇದನ್ನು ಆಧರಿಸಿ ಹೀಗೆ ಅನುಮಾನಮಾಡಬಹುದು—

**ಪಕ್ಷ**—ವೇದಾನುಪೂರ್ವೀನಿಷ್ಠವಾದ ಅದೃಷ್ಟಕಾರಣತಾ.

**ಸಾಧ್ಯ**—ಕಿಂಚಿದ್ಧರ್ಮದಿಂದ ಅವಚ್ಛಿನ್ನವಾಗಿದೆ.

**ಹೇತು**—ಕಾರಣತಾತ್ಮಕತ್ವಾತ್.

**ದೃಷ್ಟಾಂತ**—ದಂಡನಿಷ್ಠಕಾರಣತಾವತ್.

ದಂಡವು ಘಟಕ್ಕೆ ಕಾರಣ. ಕಾರಣತಾ ದಂಡದಲ್ಲಿದೆ. ಆ ಕಾರಣತಾವಚ್ಛೇದಕವಾದ ಧರ್ಮ ದಂಡತ್ವ. ಕಾರಣತಾ ದಂಡತ್ವಾವಚ್ಛಿನ್ನ. ಹೀಗೆ ಕಾರಣತಾಗಳೆಲ್ಲವೂ ಕಿಂಚಿದ್ಧರ್ಮಾವಚ್ಛಿನ್ನ ವಾಗಿರುತ್ತವೆ. ವೇದದ ಒಂದೊಂದು ಸೂಕ್ತಗಳೂ ಒಂದೊಂದು ರೀತಿಯ ಫಲಕ್ಕೆ ಕಾರಣವಾಗುತ್ತವೆ. ಫಲದೊರಕುವುದು ಅದೃಷ್ಟದ್ವಾರಾ. ಆದ್ದರಿಂದ ಸೂಕ್ತಗಳು ಅದೃಷ್ಟಕ್ಕೆ ಕಾರಣವಾಗಿವೆ. ಅದೃಷ್ಟಕಾರಣತಾ ಸೂಕ್ತಗಳಲ್ಲಿ ಇದೆ. ಆ ಕಾರಣತಾವು ಕಿಂಚಿದ್ಧರ್ಮಾವಚ್ಛಿನ್ನವಾಗಿದೆ. ಇದು ಸಾಮಾನ್ಯ ಸಿದ್ಧಿ.

## ನ್ಯಾಯದೀಪ

**आनुपूर्वी नाम वर्णानां क्रमविशेषः। स च नित्यसर्वगतानां वर्णानामुच्चारणघटितो वा बुद्धिघटितो वा वाच्यः। नतु स्वतः। तथाच तादृशानुपूर्वी दृष्टरूपार्थज्ञानार्थापि नियमादृष्टार्था। जपेन चादृष्टार्था सर्ववादिसंमतेत्यदृष्टजनिका भवतीति तत्र विद्यमानादृष्ट-कारणता पक्षः इत्यर्थः। आदिपदेनार्थज्ञानकारणताग्रहः ॥**

ಆನುಪೂರ್ವೀ ಎಂದರೆ ವರ್ಣಗಳ ಕ್ರಮವಿಶೇಷ. ವರ್ಣಗಳು ನಿತ್ಯವಾಗಿವೆ, ಸರ್ವಗತವಾಗಿವೆ. ಆದ್ದರಿಂದ ಅವುಗಳಲ್ಲಿ ಕಾಲಿಕ ಅಥವಾ ದೈಶಿಕಕ್ರಮಗಳು ಇಲ್ಲ. ಆದ್ದರಿಂದ ಉಚ್ಚಾರಣಘಟಿತವಾದ ಅಥವಾ ಬುದ್ಧಿಘಟಿತವಾದ ಕ್ರಮವನ್ನೇ ವರ್ಣಗಳಲ್ಲಿ ಹೇಳಬೇಕು. (ಮೊದಲು ಉಚ್ಚರಿತವರ್ಣ ಪ್ರಥಮ, ಅನಂತರ ಉಚ್ಚರಿತವರ್ಣ ದ್ವಿತೀಯ. ಹೀಗೆ ಕ್ರಮಶಃ ಉಚ್ಚರಿತತ್ವ, ಇದು ಉಚ್ಚಾರಣ-ಘಟಿತಕ್ರಮ. ಅಥವಾ, ಮೊದಲು ಶ್ರೋತೃಬುದ್ಧಿಯಲ್ಲಿ ವಿಷಯವಾದ ವರ್ಣ ಪ್ರಥಮ, ಆಮೇಲೆ ವಿಷಯವಾದುದು ದ್ವಿತೀಯ. ಹೀಗೆ ಕ್ರಮಿಕಜ್ಞಾನವಿಷಯತ್ವ, ಇದು ಬುದ್ಧಿಘಟಿತಕ್ರಮ.) ಇದನ್ನು ಬಿಟ್ಟು ಸ್ವಾಭಾವಿಕವಾದ ಒಂದು ಕ್ರಮ ವರ್ಣಗಳಲ್ಲಿ ಇಲ್ಲ. ಇಂತಹ ಕ್ರಮರೂಪ ಆನುಪೂರ್ವೀಯ ದೃಷ್ಟಫಲ ಅರ್ಥಜ್ಞಾನ. ಸರ, ರಸ ಇತ್ಯಾದಿ ಪದಗಳಿಂದ ಭಿನ್ನಾರ್ಥಗಳ ಜ್ಞಾನಬರಬೇಕಾದರೆ ಕ್ರಮಜ್ಞಾನವು ಅರ್ಥಜ್ಞಾನಕ್ಕೆ ಕಾರಣವೆಂದು ಹೇಳಲೇಬೇಕು. ಅದೃಷ್ಟಫಲ ಎಂದರೆ, 'ನಿಯಮಾದೃಷ್ಟ'. ಬೇರೆಬೇರೆ ವೇದಮಂತ್ರಗಳ ಪಾರಾಯಣವು ಭಿನ್ನವಾದ ಅದೃಷ್ಟಜನಕ ಎಂದು ಸರ್ವವಾದಿಗಳೂ ಹೇಳುತ್ತಾರೆ. ಹೀಗೆ, ವೈದಿಕ ಕ್ರಮಗಳಲ್ಲಿರುವ ಅದೃಷ್ಟಜನಕತಾ ಎಂಬ 'ಪಕ್ಷ'ವನ್ನು ಅವಲಂಬಿಸಿ ಈ ಅನುಮಾನ ಇದೆ. ಆದಿಪದದಿಂದ, ಅರ್ಥವಿಶೇಷಜ್ಞಾನಕಾರಣತಾವನ್ನೂ ಪಕ್ಷವನ್ನಾಗಿ ಮಾಡಬಹುದು, ಎಂದು ಸೂಚಿಸಲಾಗಿದೆ.

## ಅವತಾರಿಕೆ

**एवं सामान्यतः कारणतावच्छेदकसिद्धौ प्रसक्तमीश्वररचितत्वं निरसिष्यन् स्वाभिमतमवच्छेदकमाह—नच क्रमिति।**

ಹೀಗೆ ಈ ಅನುಮಾನದಿಂದ ಕಾರಣತಾದಲ್ಲಿ ಅವಚ್ಛೇದಕವಾದ ಒಂದು ಧರ್ಮ ಇದೆ, ಎಂದು ಸಿದ್ಧವಾಗುತ್ತದೆ. ವೇದಗತವಾದ ಅಂತಹ ಧರ್ಮ ಎರಡು ಸಂಭಾವಿತಗಳಾಗಿವೆ. ಒಂದು,

ಈಶ್ವರರಚಿತತ್ವ, ಇನ್ನೊಂದು, ನಿಯತಾನುಪೂರ್ವೀಕತ್ವ, ಇವುಗಳಲ್ಲಿ ಮೊದಲಧರ್ಮವನ್ನು ನಿರಾಸಮಾಡಿದಾಗ ಎರಡನೆಯ ಧರ್ಮವು ಅವಚ್ಛೇದಕವೆಂದು ಸಿದ್ಧವಾಗುತ್ತದೆ. ಇದನ್ನು 'ನ ಚ' ಎಂಬ ಮೂಲದಲ್ಲಿ ಹೇಳಲಾಗಿದೆ.

**नच क्रमानुपूर्वीगतनियततत्तद्वर्णपदादिनिरूप्यत्वं विनाऽन्यदवच्छेदकमस्ति । नचेश्वरविरचितत्वमेव तदवच्छेदकम् । तस्य वेदानुपूर्वीमात्रसाधारण्येन सूक्तविशेषजपादिना फलविशेषानुपपत्तेरिति नियतानुपूर्वीकत्वरूपापौरुषेयत्वसिद्धिः ॥**

ಅನುಪೂರ್ವೀನಿಷ್ಠವಾದ ಕಾರಣತಾದಲ್ಲಿ ಅವಚ್ಛೇದಕವಾದ ಧರ್ಮ ಅನುಪೂರ್ವೀಗತವಾದ ನಿಯತ ತತ್ತದ್ವರ್ಣ-ಪದಾದಿನಿರೂಪ್ಯತ್ವ. ಸೂಕ್ತವಿಶೇಷಗತ ಅನುಪೂರ್ವೀ ವೈದಿಕ ತತ್ತದ್ವರ್ಣಗಳಲ್ಲಿ ಮತ್ತು ಪದಗಳಲ್ಲಿ ನಿಯತವಾಗಿ ಅಂದರೆ ಯಾವ ಕಲ್ಪದಲ್ಲೂ ವ್ಯತ್ಯಾಸವಿಲ್ಲದೆ ಇದೆ. ಆದ್ದರಿಂದ ಆ ಅನುಪೂರ್ವೀ ನಿರ್ದಿಷ್ಟವರ್ಣ-ಪದಗಳಿಂದ ನಿರೂಪ್ಯವಾಗಿದೆ. ನಿರೂಪ್ಯತ್ವವು ಅನುಪೂರ್ವೀಗತವಾದ ಧರ್ಮ. ಅದೇ ಅನುಪೂರ್ವೀನಿಷ್ಠಕಾರಣತಾದಲ್ಲಿ ಅವಚ್ಛೇದಕವಾದ ಧರ್ಮ. ಇದಲ್ಲದೆ ಬೇರೆ ಧರ್ಮವು ಅವಚ್ಛೇದಕವಲ್ಲ.

ಅನುಪೂರ್ವೀಯಲ್ಲಿ ಇರುವ ಈಶ್ವರರಚಿತತ್ವ-ಧರ್ಮವೇ ಕಾರಣತಾವಚ್ಛೇದಕವಾಗಬಹುದಲ್ಲವೇ? ಇಲ್ಲ. ಈಶ್ವರರಚಿತತ್ವವು ವೇದದ ಸಕಲಾಪೂರ್ವೀಯಲ್ಲೂ ಸಮಾನವಾದುದು. ವೇದದ ಕೆಲವು ಸೂಕ್ತಗಳನ್ನು ಜಪಿಸಿದರೆ, ಭಯಪರಿಹಾರವಾಗುತ್ತದೆ, ಕೆಲವನ್ನು ಜಪಿಸಿದರೆ ರೋಗಪರಿಹಾರವಾಗುತ್ತದೆ, ಇನ್ನು ಕೆಲವನ್ನು ಜಪಿಸಿದರೆ ಪಾಪಪರಿಹಾರವಾಗುತ್ತದೆ. ಹೀಗೆ ಒಂದೊಂದು ಸೂಕ್ತದಲ್ಲೂ ಇರುವ ಕಾರಣತ್ವವು ಒಂದೊಂದು ರೀತಿಯಾದುದು. ಕಾರಣತಾದಲ್ಲಿ ಈ ವೈಲಕ್ಷಣ್ಯ ಬರಬೇಕಾದರೆ ಅವಚ್ಛೇದಕಧರ್ಮವೂ ಬೇರೆಯಾಗಿರಬೇಕು. ಈಶ್ವರರಚಿತತ್ವ ಒಂದೇ. ನಿಯತತತ್ತದ್ವರ್ಣ-ಪದಾದಿನಿರೂಪ್ಯತ್ವವು ಭಿನ್ನಭಿನ್ನ ಅನುಪೂರ್ವೀಗಳಲ್ಲಿ ಭಿನ್ನಭಿನ್ನವಾಗಿದೆ. ಆದ್ದರಿಂದ ಅದೇ ಕಾರಣತಾವಚ್ಛೇದಕವಾದ ಧರ್ಮ. ಹೀಗೆ ವೇದಕ್ಕೆ ಈ ಪರಿಶೇಷಾನುಮಾನದಿಂದ ನಿಯತಾನುಪೂರ್ವೀಕತ್ವರೂಪವಾದ ಅಪೌರುಷೇಯತ್ವವು ಸಿದ್ಧವಾಗುತ್ತದೆ.

## ನ್ಯಾಯದೀಪ

पक्षान्तरं निराह—**नचेश्वरेति ।** **सूक्तविशेषेति ।** पवमानसूक्तपुरुषसूक्तादिजपेन पठनादिना च श्रुतफलविशेषो न स्यादित्यर्थः ।

श्रूयते च फलविशेषः—

''यन्मे गर्भे वसतः पापमुग्रं यज्जायमानस्य च किञ्चिदन्यत् ।
जातस्य च यच्चापि च वर्धतो मे तत्पावमानीभिरहं पुनामि'' ।।
इत्यादिना ।

'ಸೂಕ್ತವಿಶೇಷ' ಎಂಬ ಮೂಲವಾಕ್ಯದ ಅಭಿಪ್ರಾಯ ಹೀಗೆ—ಪವಮಾನಸೂಕ್ತ ಮತ್ತು ಪುರುಷಸೂಕ್ತಾದಿಗಳ ಜಪದಿಂದ ಅಥವಾ ಪಠನದಿಂದ ಶಾಸ್ತ್ರದಲ್ಲಿ ಹೇಳಲ್ಪಟ್ಟ ಫಲವಿಶೇಷವು ಆಗಲಿಕ್ಕಿಲ್ಲ. ಶಾಸ್ತ್ರಗಳಲ್ಲಿ ಫಲವಿಶೇಷವು ಶ್ರುತವಾಗಿದೆ—ಗರ್ಭದಲ್ಲಿ ಇದ್ದಾಗ, ಹುಟ್ಟುವಾಗ, ಹುಟ್ಟಿದಮೇಲೆ, ಬೆಳೆದು ದೊಡ್ಡವನಾದ ಮೇಲೆ ನಾನು ಏನೇನು ಪಾಪ ಮಾಡಿರುವೆನೋ ಪವಮಾನ ಮಂತ್ರಗಳಿಂದ ಅವೆಲ್ಲವುಗಳಿಂದ ಪವಿತ್ರನಾಗುವೆನು''.

## ಅವತಾರಿಕೆ

आनुपूर्वीगतेत्यादिनोक्तमेवावच्छेदकम् । नत्वीश्वररचितत्वमित्येतदेवानेकविपक्षबाधकोक्त्या द्रढयति—**अन्यथेति ।**

ಆನುಪೂರ್ವೀಗತವಾದ ನಿಯತವರ್ಣಾದಿ ನಿರೂಪ್ಯತ್ವವೇ ಕಾರಣತಾವಚ್ಛೇದಕ. ಹೊರತು, ಈಶ್ವರರಚಿತತ್ವವು ಅಲ್ಲ. ಇದನ್ನು ಅಂಗೀಕರಿಸದಿದ್ದಲ್ಲಿ ಅನೇಕ ಬಾಧಕಗಳನ್ನು ಹೇಳುವ ಮೂಲಕ ಮುಂದಿನ ಮೂಲದಲ್ಲಿ ದೃಢಪಡಿಸಲಾಗಿದೆ.

**अन्यथैतत्कल्पेऽनर्थहेतुभूताया अन्यादृश्या आनुपूर्व्याः कल्पान्तरे श्रेयःसाधनत्वम्, एतत्कल्पेऽनर्थहेतोर्ज्योतिष्टोमाद्यङ्गव्युत्क्रमस्य, ब्रह्महत्यादेश्च कल्पान्तरे श्रेयःसाधनत्वम्, एतत्कल्पे दाहकत्वादिस्वभावस्य वह्न्यादेः कल्पान्तरेष्वदाहकत्वादिकं च कल्प्यं स्यात् ।।**

ಹಿಂದೆ ಹೇಳಿರುವ ಧರ್ಮವನ್ನು ಕಾರಣತಾವಚ್ಛೇದಕ ಎಂದು ಒಪ್ಪದಿದ್ದಲ್ಲಿ ಈ ಅನರ್ಥಗಳೆಲ್ಲ ಆದೀತು—ಈ ಕಲ್ಪದಲ್ಲಿ ಅನರ್ಥಕ್ಕೆ ಕಾರಣವಾದ ವ್ಯತ್ಯಸ್ತ ವರ್ಣಾನುಪೂರ್ವಿಯಿಂದ ಪಠಿತವಾದ ಮಂತ್ರವು ಮುಂದಿನ ಕಲ್ಪದಲ್ಲಿ ಶ್ರೇಯಸ್ಸಿಗೆ ಸಾಧನವಾದೀತು. ಏಕೆಂದರೆ, ಈಶ್ವರರಚಿತತ್ವವು ಎಲ್ಲಾ ಸೂಕ್ತಗಳಲ್ಲೂ ಸಮಾನವಾದರೂ ವಿಭಿನ್ನಸೂಕ್ತಗಳ ಪಠನದಿಂದ ಫಲಭೇದವು ಸಿಗುವಂತೆ ಈ ಕಲ್ಪದಲ್ಲಿ ಆನುಪೂರ್ವೀ ವ್ಯತ್ಯಾಸದಿಂದ ಪಠಿತವಾದ ಸೂಕ್ತವೇ ಕಲ್ಪಾಂತರದಲ್ಲಿ ಹಾಗೆ ಪಠಿತವಾದಾಗ ಶ್ರೇಯಃ

ಸಾಧನವಾಗಬಹುದು. ವ್ಯತ್ಯಸ್ತಫಲತತ್ವವು ಸಮಾನವಾದರೂ ಕೆಲವೊಮ್ಮೆ ಅನರ್ಥಫಲ, ಕೆಲವೊಮ್ಮೆ ಶ್ರೇಯಸ್ಸು ಸಿಗಬಹುದು, ಎಂದರ್ಥ. ಆದರಂತೆ, ಈಶ್ವರರಚಿತತ್ವವು ಕಲ್ಪಭೇದೇನ ಅನರ್ಥಕ್ಕೊ ಶ್ರೇಯಸ್ಸಿಗೂ ಎರಡಕ್ಕೂ ಪ್ರಯೋಜಕವಾಗುವುದಾದಲ್ಲಿ ಈ ಕಲ್ಪದಲ್ಲಿ ಜ್ಯೋತಿಷ್ಟೋಮಾದಿ ಅಂಗಗಳ ವ್ಯುತ್ಕ್ರಮಾನುಷ್ಠಾನವು ಹಾಗೂ ಬ್ರಹ್ಮಹತ್ಯಾದಿ ಪಾತಕಗಳು ಅನರ್ಥಕ್ಕೆ ಕಾರಣವಾದರೂ ಮುಂದಿನ ಕಲ್ಪದಲ್ಲಿ ಶ್ರೇಯಸ್ಸಿಗೆ ಸಾಧನವಾದೀತು. ಕಾರಣತಾವಚ್ಛೇದಕವು ಒಂದಾದರೂ ಕಾರ್ಯಬೇರೆಯಾಗುವುದಿಲ್ಲ, ಈ ಕಲ್ಪದಲ್ಲಿ ದಾಹಕಸ್ವಭಾವದ ಅಗ್ನಿಯು ಕಲ್ಪಾಂತರದಲ್ಲಿ ಅದಾಹಕವಾದೀತು. ಹೀಗೆಲ್ಲ ಕಲ್ಪನೆ ಮಾಡಬೇಕಾದೀತು.

**एतदप्युक्तम् ''गौरवदोषेण'' इति ।।**

'ಅನ್ಯಥಾ' ಎಂಬ ಗ್ರಂಥದಲ್ಲಿ ಆಪಾದಿಸಿರುವ ಆಪಾದನೆಗಳನ್ನು 'ಗೌರವದೋಷೇಣ' ಎಂಬ ಆಚಾರ್ಯರ ಮಾತು ತಿಳಿಸುತ್ತದೆ.

## ನ್ಯಾಯದೀಪ

**एतदप्युक्तमिति ।।** अन्यथेत्यादिनोक्तमित्यर्थः ।

### ಅವತಾರಿಕೆ

रीत्यन्तरमाश्रित्य सामान्यपरिशेषाभ्यामपौरुषेयवाक्यसिद्धिं वदन् ''धर्मादिकं प्रमाणोपेतं वस्तुत्वात्'' इति सुधोक्तसामान्यानुमानमुपलक्षणं मत्वा त्रेधा सामान्यानुमानमाह—**यद्वा प्रत्यक्षेति ।**

ಇನ್ನೊಂದು ರೀತಿಯಿಂದ ಸಾಮಾನ್ಯ-ಪರಿಶೇಷಗಳಿಂದ ಅಪೌರುಷೇಯ ವಾಕ್ಯವನ್ನು ಸಾಧಿಸುತ್ತಾ ''ಧರ್ಮಾದಿಕಂ ಪ್ರಮಾಣೋಪೇತಂ ವಸ್ತುತ್ವಾತ್' ಎಂದು ಸುಧಾದಲ್ಲಿ ಹೇಳಿರುವ ಅಪೌರುಷೇಯತ್ವಸಾಧಕವಾದ ಸಾಮಾನ್ಯಾನುಮಾನವು ಉಪಲಕ್ಷಣ ಎಂದು ಪರಿಗಣಿಸಿ ಮೂರು ರೀತಿಯ ಸಾಮಾನ್ಯಾನುಮಾನಗಳನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

### ಅನುಮಾನ-9

**यद्वा प्रत्यक्ष-न्यायामूला मन्वादिस्मृतिः, प्रमाणमूला, प्रमाणभूतस्मृतित्वात् । न्यायमूलस्मृतिवत् ।**

**जन्या धर्मादिप्रमा करणजन्या, जन्यज्ञानत्वात्, संमतवत् ।**

**धर्मादिकं प्रमाणोपेतं, वस्तुत्वात्, घटवदित्यादिनाऽपौरुषेयवाक्य-सिद्धिः ॥**

1. **ಪಕ್ಷ**—ಪ್ರತ್ಯಕ್ಷ ಅಥವಾ ನ್ಯಾಯ ಮೂಲವಲ್ಲದ ಮನ್ವಾದಿ ಸ್ಮೃತಿಗಳು.

**ಸಾಧ್ಯ**—ಪ್ರಮಾಣ ಮೂಲಕವಾಗಿವೆ.

**ಹೇತು**—ಪ್ರಮಾಣಭೂತವಾದ ಸ್ಮೃತಿಗಳಾದ ಕಾರಣ.

**ದೃಷ್ಟಾಂತ**—ನ್ಯಾಯ ಮೂಲವಾಗಿರುವ ಸ್ಮೃತಿಯಂತೆ.

**ವಿವರಣೆ**—ಕೆಲವು ಸ್ಮೃತಿಗಳು(ಪೌರುಷೇಯಗ್ರಂಥ) ಪ್ರತ್ಯಕ್ಷ ಮೂಲವಾಗಿರುತ್ತವೆ. ವ್ಯಾಸರು ಪ್ರತ್ಯಕ್ಷವಾಗಿ ಪಾಂಡವರ ಚರಿತ್ರೆಯನ್ನು ನೋಡಿ ಮಹಾಭಾರತವನ್ನು ರಚಿಸಿದ್ದಾರೆ. ಇನ್ನು ಕೆಲವು ಪೌರುಷೇಯಗ್ರಂಥಗಳಿಗೆ ಯುಕ್ತಿಯು ಆಧಾರವಾಗಿರುತ್ತದೆ. ಕರ್ಮಮೀಮಾಂಸಾ ಸೂತ್ರಗಳಿಗೆ ಯುಕ್ತಿಯೇ ಮೂಲ. ಏಕೆಂದರೆ, ಅವುಗಳು ಶ್ರುತ್ಯರ್ಥನಿರ್ಣಾಯಕಗಳಾದ ಯುಕ್ತಿಗಳನ್ನು ತಿಳಿಸುತ್ತವೆ. ಇವೆರಡೂ ಮೂಲವಲ್ಲದ ಮನ್ವಾದಿ ಸ್ಮೃತಿಗೆ ಯಾವುದಾದರೊಂದು ಪ್ರಮಾಣವು ಮೂಲವಾಗಿರಬೇಕು. ಆ ಪ್ರಮಾಣವಾಕ್ಯವು ಪೌರುಷೇಯವಾದಲ್ಲಿ ನಂಬಿಕೆ ಬರುವುದಿಲ್ಲವಾದುದರಿಂದ ಅಪೌರುಷೇಯವೇ ಆಗಬೇಕು.

2. **ಪಕ್ಷ**—ಧರ್ಮಾದಿಪ್ರಮಾ.

**ಸಾಧ್ಯ**—ಕರಣಜನ್ಯಾ.

**ಹೇತು**—ಜನ್ಯಜ್ಞಾನತ್ವಾತ್.

**ದೃಷ್ಟಾಂತ**—ಚಾಕ್ಷುಷಾದಿಜ್ಞಾನವತ್.

**ವಿವರಣೆ**—ಧರ್ಮದ ಯಥಾರ್ಥಜ್ಞಾನವು ಜನ್ಯಜ್ಞಾನವಾದುದರಿಂದ ಕರಣಜನ್ಯವಾಗಿದೆ. ನಮಗೆ ಘಟಪಟಾದಿಗಳ ಯಥಾರ್ಥಜ್ಞಾನವು ಬರುತ್ತದೆ. ಅದು ಕಣ್ಣು ಮುಂತಾದ ಕರಣಗಳಿಂದ ಜನ್ಯವಾಗಿದೆ. ಅದರಂತೆ ಧರ್ಮಾದಿಗಳ ಯಥಾರ್ಥಜ್ಞಾನವೂ ನಮಗಿದೆ. ಅದಕ್ಕೂ ಒಂದು ಕರಣವಿರಬೇಕು. ಆ ಕರಣವೇ ಅಪೌರುಷೇಯವಾದ ವಾಕ್ಯ.

3. **ಪಕ್ಷ**—ಧರ್ಮಾದಿಗಳು,

**ಸಾಧ್ಯ**—ಪ್ರಾಮಾಣಿಕವಾಗಿವೆ.

**ಹೇತು**—ವಸ್ತುವಾದರಿಂದ.

**ದೃಷ್ಟಾಂತ**—ಘಟದಂತೆ.

**ವಿವರಣೆ**—ಪ್ರತಿಯೊಂದುವಸ್ತುವಿಗೂ ಪ್ರಮಾಣವಿರಲೇಬೇಕು. ಧರ್ಮಾದಿಗಳೂ ವಸ್ತುಗಳಾಗಿವೆ. ಅವುಗಳಿಗೂ ಪ್ರಮಾಣವಿರಬೇಕು. ಆ ಪ್ರಮಾಣವೇ ಅಪೌರುಷೇಯವಾದ ವಾಕ್ಯ.

ಹೀಗೆ ಈ ಪ್ರಕರಣದಲ್ಲಿ ಹೇಳಿರುವ ಪ್ರಮಾಣಗಳಿಂದ ಧರ್ಮಾದಿಸಾಧಕವಾದ ಪ್ರಮಾಣವು ಸಿದ್ಧವಾಗುತ್ತವೆ.

## ನ್ಯಾಯದೀಪ

**प्रत्यक्षादिमूलान्तरेण अर्थान्तरवारणाय प्रत्यक्ष-न्यायामूलेत्युक्तिः । प्रत्यक्षामूला न्यायामूला चेत्यर्थः। प्रत्यक्षतोऽर्थमुपलभ्य रचितस्मृतिः प्रत्यक्षमूला । यथा आद्यभारतपुराणादिरूपा । तस्याः सर्वज्ञव्यास-प्रत्यक्षमूलत्वात् । युक्तिवलादर्थं विज्ञाय रचिता स्मृतिर्न्यायमूला । यथा 'अथातो धर्मजिज्ञासा' इत्यादिमीमांसासूत्रादिरूपा स्मृतिः । अतादृशी या स्मृतिरित्यर्थः ।।**

ಮೂಲದಲ್ಲಿ ಪಕ್ಷವಾಗಿ ಪರಿಗಣಿಸಲ್ಪಟ್ಟ ಸ್ಮೃತಿಗೆ ಪ್ರತ್ಯಕ್ಷ–ನ್ಯಾಯಾಮೂಲಾ ಎಂಬ ವಿಶೇಷಣವನ್ನು ಕೊಡಲಾಗಿದೆ. ಅದರಿಂದಾಗಿ ಅರ್ಥಾಂತರತಾ ಪರಿಹಾರವಾಗುತ್ತದೆ. ಅದನ್ನು ಹೀಗೆ ವಿಂಗಡಿಸಿಕೊಳ್ಳಬೇಕು—ಪ್ರತ್ಯಕ್ಷಾಮೂಲಾ=ಪ್ರತ್ಯಕ್ಷವು ಮೂಲವಾಗದಿರುವ, ನ್ಯಾಯಾಮೂಲಾ= ಯುಕ್ತಿಯು ಮೂಲವಲ್ಲದ, ಎಂದು. ಪ್ರತ್ಯಕ್ಷದಿಂದ ವಿಷಯಗಳನ್ನು ತಿಳಿದು ರಚಿಸಿರುವ ಸ್ಮೃತಿಯು ಪ್ರತ್ಯಕ್ಷಮೂಲ. ಉದಾಹರಣೆಗೆ—ಆದ್ಯಭಾರತ[1] ಮತ್ತು ಪುರಾಣಾದಿಗಳು. ಸರ್ವಜ್ಞರಾದ ವೇದವ್ಯಾಸರು ಅವುಗಳ ವಿಷಯಗಳನ್ನು ಪ್ರತ್ಯಕ್ಷವಾಗಿ ತಿಳಿದು ರಚಿಸಿದ್ದಾರೆ. ಅದರಂತೆ, ಯುಕ್ತಿಗಳಿಂದ ಅರ್ಥವನ್ನು ತಿಳಿದು ರಚಿಸಿರುವ ಸ್ಮೃತಿ ನ್ಯಾಯಮೂಲಕವಾದುದು. ''ಅಥಾತೋ ಧರ್ಮಜಿಜ್ಞಾಸಾ'' ಇತ್ಯಾದಿ ಪೂರ್ವಾಮೀಮಾಂಸಾ ಸೂತ್ರಗಳನ್ನು ಜೈಮಿನಿಗಳು ವೇದಾರ್ಥ ನಿರ್ಣಾಯಕವಾದ ಯುಕ್ತಿಗಳಿಂದ ವೇದದ ಅರ್ಥಗಳನ್ನು ನಿರ್ಣಯಿಸಿ ರಚಿಸಿದ್ದಾರೆ. ಇಂತಹ ಸ್ಮೃತಿಗಳಿಗಿಂತ ಹೊರತಾದ ಮನುಸ್ಮೃತಿಯು ಪಕ್ಷ, ಎಂದು ಅಭಿಪ್ರಾಯ.

---

1. **ಆದ್ಯಭಾರತ ಎಂದರೆ–ವ್ಯಾಸರು ರಚಿಸಿರುವ ಭಾರತ. ಆ ಭಾರತವೇ ಇಂದಿಲ್ಲ. ಆನುಪೂರ್ವೀ ಅನಿತ್ಯವಾದುದರಿಂದ ಆನುಪೂರ್ವೀವಿಶಿಷ್ಟ ವರ್ಣಸಮೂಹರೂಪಭಾರತವೂ ನಾಶವಾಗಿದೆ. ಇಂದು ನಾವು ಹೇಳುವ ಭಾರತ ವ್ಯಾಸರು ರಚಿಸಿರುವ ಭಾರತ ಸಜಾತೀಯ ಭಾರತ. 'ಆದ್ಯಭಾರತೇಽಪಿ ಸಜಾತೀಯತ್ವಭಾವಾತ್ ನ ವ್ಯಭಚಾರಃ' (ಪು.365) ಎಂಬ ಮಣಿಗ್ರಂಥದಲ್ಲಿ ಇದೇ ಅರ್ಥದಲ್ಲಿ 'ಆದ್ಯಭಾರತ' ಶಬ್ದವನ್ನು ಪ್ರಯೋಗಿಸಲಾಗಿದೆ.**

## ನ್ಯಾಯದೀಪ

**नच न्यायमते वाक्यमात्रस्येश्वरनिष्ठप्रत्यक्षप्रमाजन्यत्वात् प्रत्यक्षा-मूलस्मृतिरप्रसिद्धेति वाच्यम् । वाक्यार्थप्रमात्वेन तज्जन्यत्वस्यैव तन्मूलत्वेनेहाभिप्रेतत्वात् । प्रत्यक्षप्रमाकरणं वा प्रत्यक्षपदार्थो ध्येयः ।**

ಇದು ನೈಯಾಯಿಕರನ್ನು ಕುರಿತು ಮಾಡಿರುವ ಅನುಮಾನ. ಅವರ ಮತದಂತೆ ಎಲ್ಲಾವಾಕ್ಯಗಳೂ [1]ಈಶ್ವರನ ಪ್ರತ್ಯಕ್ಷಪ್ರಮಾದಿಂದಲೇ ಜನ್ಯವಾಗಿವೆ. ಹೀಗಾಗಿ, ಪ್ರತ್ಯಕ್ಷ ಮೂಲವಲ್ಲದ ಸ್ಮೃತಿಯೇ ಅಪ್ರಸಿದ್ಧವಾದುದರಿಂದ ಪಕ್ಷಾಪ್ರಸಿದ್ಧಿ ದೋಷಬರುತ್ತದೆ ಎಂದು ಆಕ್ಷೇಪ. ಅದಕ್ಕೆ ಪರಿಹಾರ–ಪ್ರಕೃತದಲ್ಲಿ 'ಪ್ರತ್ಯಕ್ಷಮೂಲ'ವೆಂದರೆ ಪ್ರಕೃತ–ವಾಕ್ಯಾರ್ಥ ವಿಷಯಕಪ್ರಮಾತ್ವೇನ ಪ್ರಮಾಜನ್ಯ ಎಂದರ್ಥ. ಮನುಪ್ರಣೀತಸ್ಮೃತಿಗೆ ಈಶ್ವರ ಪ್ರಮಾವು [2]ಪ್ರಮಾತ್ವೇನ ಕಾರಣವಾದರೂ ವಾಕ್ಯಾರ್ಥಪ್ರಮಾತ್ವೇನ ಕಾರಣವಲ್ಲ. ಆದ್ದರಿಂದ ಅದು ಪ್ರತ್ಯಕ್ಷಾಮೂಲವಾಗುತ್ತದೆ. ಇದು ಮೂಲದ ಅಭಿಪ್ರಾಯ.

ಅಥವಾ 'ಪ್ರತ್ಯಕ್ಷಮೂಲಾ' ಎನ್ನುವುದಕ್ಕೆ ಪ್ರತ್ಯಕ್ಷಪ್ರಮಾಕರಣಮೂಲಾ, ಎಂದು ಅರ್ಥ. ಮನ್ವಾದಿಸ್ಮೃತಿಗಳು ಈಶ್ವರ ಪ್ರಮಾ ಮೂಲಕಗಳಾದರೂ ಆ ಪ್ರಮಾ ನಿತ್ಯವಾದುದರಿಂದ ಅದಕ್ಕೆ ಕರಣವಿಲ್ಲ. ಆದ್ದರಿಂದ ಪ್ರಮಾಕರಣ ಮೂಲಕಗಳಾಗುವುದಿಲ್ಲ. ಅಥವಾ, ಪ್ರತ್ಯಕ್ಷಸಿದ್ಧ ಪದಾರ್ಥಗಳು ಸ್ಮೃತಿಗೆ ಮೂಲಗಳಲ್ಲ, ಎಂದೂ ಪ್ರತ್ಯಕ್ಷಾಮೂಲಶಬ್ದಾರ್ಥ.

## ನ್ಯಾಯದೀಪ

**नैयायिकानां न्याय एवातिविश्वासात् न्यायमूलस्मृतिवदित्युक्तम् । ईश्वरप्रमांशे बाधवारणाय जन्येति प्रमाविशेषणम् । संमतवदिति । चाक्षुषादिज्ञानवदित्यर्थः ।।**

ಈ ಅನುಮಾನಕ್ಕೆ ಪ್ರತ್ಯಕ್ಷಮೂಲವಾದ ಮಹಾಭಾರತವನ್ನು ಉದಾಹರಣೆಯನ್ನಾಗಿ

---

1. "ಭ್ರಾಂತಪ್ರತಾರಕವಾಕ್ಯೇ ಶುಕಾದಿ ವಾಕ್ಯೇ ಚ ಈಶ್ವರಸ್ಯೈವ ಯಥಾರ್ಥವಾಕ್ಯಾರ್ಥಜ್ಞಾನಂ ಜನಕಂ" ಮಣಿವಾಕ್ಯ. ಕಾರ್ಯ ಸಾಮಾನ್ಯಕ್ಕೆ ಕಾರಣವಾದ ಈಶಪ್ರಮಾವು ವಾಕ್ಯಾರ್ಥವಿಷಯಕವೂ ಆಗಿರುವುದರಿಂದ ಈಶ ವಾಕ್ಯಾರ್ಥಪ್ರಮಾ ವಾಕ್ಯರಚನೆಗೆ ಕಾರಣ–ಎಂದು ಮಣಿಕಾರನ ಅಭಿಪ್ರಾಯ.
2. ಇದರ ಖಂಡನೆ ತರ್ಕತಾಂಡವದ ಪ್ರಾಮಾಣ್ಯವಾದದ 'ಪ್ರತ್ಯಕ್ಷಾದಿ ಪ್ರಮಾಸು ಪ್ರತ್ಯೇಕಾನುಗತಗುಣ ಹೇತುತ್ವಭಂಗ' ಪ್ರಕರಣದಲ್ಲಿ ಹೀಗೆ ಮಾಡಲಾಗಿದೆ– "ತಸ್ಯ ಜ್ಞಾನಸಾಮಾನ್ಯಂ ಭ್ರಮಂ ಚ ಪ್ರತೀವ ಉಪಾದಾನಾ ಪರೋಕ್ಷಜ್ಞಾನತ್ವೇನೈವ ಹೇತುತಯಾ ಪ್ರಮಾಂ ಪ್ರತ್ಯಸಾಧಾರಣ್ಯಾಭಾವಾತ್ ।"

ಕೊಡಬಹುದಿತ್ತು. ಆದರೂ ನೈಯಾಯಿಕರಿಗೆ ಅನುಮಾನ ಪ್ರಮಾಣದಲ್ಲಿ ವಿಶ್ವಾಸ ಹೆಚ್ಚು. ಆದುದರಿಂದ ನ್ಯಾಯಮೂಲಕ ಸ್ಮೃತಿಯನ್ನು ಉದಾಹರಣೆಯನ್ನಾಗಿ ಕೊಡಲಾಗಿದೆ.

ಎರಡನೆಯ ಅನುಮಾನದಲ್ಲಿ ಜನ್ಯಪ್ರಮಾ ಪಕ್ಷ. ಪ್ರಮಾವನ್ನು ಮಾತ್ರ ಪಕ್ಷವನ್ನಾಗಿ ಮಾಡಿದರೆ ಈಶ್ವರ ಪ್ರಮಾವೂ ಪಕ್ಷದಲ್ಲಿ ಸೇರುತ್ತದೆ. ಅದು ಕರಣಜನ್ಯವಲ್ಲ. ಬಾಧದೋಷ. ಅದರ ಪರಿಹಾರಕ್ಕಾಗಿ ಜನ್ಯತ್ವವಿಶೇಷಣ. ಇಲ್ಲಿ ಸಮ್ಮತವತ್ ಎಂದು ದೃಷ್ಟಾಂತ. ಕರಣಜನ್ಯತ್ವೇನ ಸಮ್ಮತವಾದ ಚಾಕ್ಷುಷಾದಿ ಇಂದ್ರಿಯಜನ್ಯಜ್ಞಾನಗಳು ದೃಷ್ಟಾಂತವೆಂದು ಭಾವ.

## ಅವತಾರಿಕೆ

**नन्वेतावता प्रमाणसामान्यसिद्धावपि कथमपौरुषेयवाक्यरूपप्रमाणविशेषसिद्धिरित्यतः परिशेषप्रमाणमाह—धर्मादावुक्तरीत्येत्यादिना पर्यवसानादित्यन्तेन ।**

ಹಿಂದಿನ ಅನುಮಾನಗಳಿಂದ ಧರ್ಮಾದಿಗಳನ್ನು ಹೇಳುವ ಪ್ರತ್ಯಕ್ಷಾನುಮಾನಾತಿರಿಕ್ತವಾದ ಪ್ರಮಾಣ ಒಂದಿದೆ ಎಂದು ಸಿದ್ಧವಾದರೂ ಅಪೌರುಷೇಯ ವಾಕ್ಯರೂಪವಾದ ಪ್ರಮಾಣವಿಶೇಷವು ಸಿದ್ಧವಾಗುವುದು ಹೇಗೆ? ಇದಕ್ಕೆ ಉತ್ತರವಾಗಿ ಪರಿಶೇಷಪ್ರಮಾಣವನ್ನು ಈ ಮೂಲದಲ್ಲಿ ಹೇಳಲಾಗಿದೆ.

**धर्मादावुक्तरीत्या प्रत्यक्षानुमानप्रामाण्यस्य बाधितत्वादनन्तकल्पेषु भिन्नानन्तपौरुषेयवाक्याङ्गीकारे च गौरवात् । एतदप्युक्तं ''गौरवदोषेण'' इति ।**

**कार्यत्वहेतोर्नित्यज्ञान इव, कर्त्रैक्य इव चास्यापि सामान्यतो दृष्टस्यापौरुषेयवाक्ये, तत्राप्यन्येषां सकर्तृकत्वप्रसिद्धेर्वेदे च तदभावाद् वेदापौरुषेयत्वे पर्यवसानात् ।।**

ಧರ್ಮಾದಿ ಅತೀಂದ್ರಿಯವಸ್ತುಗಳ ಬಗ್ಗೆ ಹಿಂದೆ ಹೇಳಿರುವಂತೆ (ಪು.18) ಪ್ರತ್ಯಕ್ಷವಾಗಲೀ ಅನುಮಾನವಾಗಲೀ ಪ್ರಮಾಣವಾಗುವುದಿಲ್ಲ. ಇನ್ನು ಪೌರುಷೇಯವಾಕ್ಯವು ಪ್ರಮಾಣವೆಂದು ಹೇಳಬೇಕು. ಆಗ ಅನಂತಕಲ್ಪಗಳಲ್ಲಿ ಬೇರೆಬೇರೆ ರೀತಿಯ ಅನಂತ ಪೌರುಷೇಯವಾಕ್ಯಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಅದು ಗೌರವ. ಹೀಗೆ ಗೌರವತರ್ಕ ಸಹಕೃತವಾದ ಹಿಂದಿನ ಸಾಮಾನ್ಯಾನುಮಾನಗಳು ಅಪೌರುಷೇಯವಾಕ್ಯದಲ್ಲೇ ಪರ್ಯವಸಾನಗೊಳ್ಳುತ್ತವೆ. ಅದಕ್ಕೆ

ಉದಾಹರಣೆ, ನೈಯಾಯಿಕರು ಹೇಳುವ ಈಶ್ವರಸಾಧಕಾನುಮಾನ. ಕ್ಷಿತ್ಯಾದಿಗಳು ಕಾರ್ಯವಾದ ಕಾರಣ ಸಕರ್ತೃಕ, ಅಂತಹ ಕರ್ತನೇ ಈಶ್ವರ. ಇದು ಈಶ್ವರಸಾಧಕಾನುಮಾನ. ಇದರಿಂದ ಕರ್ತನಾದ ಈಶ್ವರನಿಗೆ ಜ್ಞಾನವಿದೆ ಎಂದಿಷ್ಟೇ ಸಿದ್ಧವಾಗದೆ ಲಾಘವಾತ್ ಆ ಜ್ಞಾನವು ನಿತ್ಯ–ಏಕ ಎಂದೂ ಸಿದ್ಧವಾಗುತ್ತದೆ, ಎನ್ನುತ್ತಾರೆ ತಾರ್ಕಿಕರು. ಅದರಂತೆ, ಪ್ರಕೃತಾನುಮಾನಗಳಿಂದಲೂ ಅಪೌರುಷೇಯ ವಾಕ್ಯವು ಸಿದ್ಧವಾಗುತ್ತದೆ. ಅಂತಹ ಅಪೌರುಷೇಯವಾಕ್ಯ ಯಾವುದು? ಎಂದು ವಿಚಾರಮಾಡಿದಾಗ ಇತರೆಲ್ಲ ಗ್ರಂಥಗಳಿಗೂ ಸಕರ್ತೃಕತ್ವಪ್ರಸಿದ್ಧಿ ಇರುವುದರಿಂದ ವೇದದಲ್ಲಿ ಅಂತಹ ಪ್ರಸಿದ್ಧಿ ಇಲ್ಲದಿರುವುದರಿಂದ ವೇದಾಪೌರುಷೇಯತ್ವದಲ್ಲೆ ಅನುಮಾನಗಳು ಪರ್ಯವಸಾನ ಗೊಳ್ಳುತ್ತವೆ.

ಇದನ್ನೂ ಆಚಾರ್ಯರು 'ಗೌರವದೋಷೇಣ' ಎಂದು ಸೂಚಿಸಿದ್ದಾರೆ.

## ನ್ಯಾಯದೀಪ

**'नचात्र हेतुत्रयेऽपि विशेषणासिद्धिः' इत्यादिग्रन्थेनोक्तरीत्येत्यर्थः । एतदपीति । अनन्तकल्पेष्वित्यादिनोक्तमपीत्यर्थः ।**

**एवं प्रसक्तं प्रत्यक्षानुमानपुंवाक्यरूपपक्षत्रयं प्रतिक्षिप्य विवक्षित-साध्यपर्यवसानमाह–कार्यत्वेति । नित्यज्ञानादिसिद्धिप्रकारोऽग्रे कार्य-त्वादिहेतुभङ्गे व्यक्तः ॥**

ಮೂಲದಲ್ಲಿ ಉಕ್ತರೀತ್ಯಾ ಎಂದಿದೆ. ಈ ಹಿಂದೆ ಬಂದಿರುವ 'ನ ಚಾತ್ರಹೇತುತ್ರಯೇಽಪಿ' ಎಂಬ ಗ್ರಂಥದಲ್ಲಿ (ಪು.18) ಹೇಳಿರುವಂತೆ ಎಂದರ್ಥ. ಏತದಪಿ, ಎಂದರೆ ಅನಂತಕಲ್ಪಗಳಲ್ಲಿ ಅನಂತ ಪೌರುಷೇಯವಾಕ್ಯಗಳನ್ನು ಕಲ್ಪಿಸುವುದು ಗೌರವ ಎಂಬುದನ್ನು 'ಗೌರವ ದೋಷೇಣ' ಎಂದು ಆಚಾರ್ಯರು ಹೇಳಿದ್ದಾರೆ, ಎಂದರ್ಥ. (ಪ್ರಚಲಿತ ಪಾಠದಲ್ಲಿ 'ಏತದಪ್ಯುಕ್ತಂ' ಎಂಬ ವಾಕ್ಯವು ಕೊನೆಯಲ್ಲಿದೆ. ಆದರೆ, ನ್ಯಾಯದೀಪಕ್ಕೆ ಅನುಸಾರವಾಗಿ ಆ ವಾಕ್ಯವನ್ನು ಮಧ್ಯದಲ್ಲಿ ಸೇರಿಸಲಾಗಿದೆ. ಮೈಸೂರಿನ ಓ.ಆರ್.ಐ. ಪ್ರಕಾಶನದಲ್ಲಿ ಈ ಆನುಪೂರ್ವಿಯ ಪಾಠಾಂತರವನ್ನು ತೋರಿಸಲಾಗಿದೆ.)

'ಕಾರ್ಯತ್ವಹೇತೋಃ' ಎಂಬ ಗ್ರಂಥದಲ್ಲಿ, ಧರ್ಮದ ಬಗ್ಗೆ ಪ್ರತ್ಯಕ್ಷ–ಅನುಮಾನ–ಪುರುಷವಾಕ್ಯಗಳು ಪ್ರಮಾಣವಲ್ಲ ಎಂದು ನಿರಾಕರಿಸಿ ಪ್ರಕೃತವಿವಕ್ಷಿತಾರ್ಥದಲ್ಲಿ ಅನುಮಾನದ ಸಾಧ್ಯಪರ್ಯವಸಾನವನ್ನು ಮಾಡಲಾಗಿದೆ.

ಕಾರ್ಯತ್ವಾನುಮಾನದಿಂದ ನಿತ್ಯಜ್ಞಾನವು ಹೇಗೆ ಸಿದ್ಧವಾಗುತ್ತದೆ, ಎಂಬ ಕ್ರಮವು ಮುಂದಿನ ಪ್ರಕರಣದಲ್ಲಿ ಕಾರ್ಯತ್ವಹೇತುವನ್ನು ನಿರಾಸಮಾಡುವಾಗ ಸ್ಪಷ್ಟವಾಗುತ್ತದೆ.

**ಇಲ್ಲಿಗೆ ಈ ಪ್ರಕರಣ ಮುಗಿಯಿತು.**

## ಈ ಪ್ರಕರಣದ ಸಾರಾಂಶ

ನೈಯಾಯಿಕರು ವೇದವು ಈಶ್ವರರಚಿತ ಎನ್ನುತ್ತಾರೆ. ವೇದಾಂತಿಗಳು ವೇದಾಪೌರುಷೇಯತ್ವ ವಾದಿಗಳು. ವೇದದ ಅಪೌರುಷೇಯತ್ವವನ್ನು ಈ ಪ್ರಕರಣದಲ್ಲಿ ಅನುಮಾನಗಳಿಂದ ಸಾಧಿಸಲಾಗಿದೆ. ಮೊದಲು ಅಪೌರುಷೇಯವಾಕ್ಯವನ್ನು ಸಾಧನೆ ಮಾಡಿ ಆಮೇಲೆ ವೇದವೇ ಅಂತಹ ಅಪೌರುಷೇಯವಾಕ್ಯ ಎಂದು ಸಾಧಿಸಲಾಗಿದೆ. ಹೀಗೆ ಈ ಪ್ರಕರಣದಲ್ಲಿ ಸಾಮಾನ್ಯಸಿದ್ಧಿ–ಪರಿಶೇಷಾನುಮಾನಗಳ ಮೂಲಕ ವೇದಾಪೌರುಷೇಯತ್ವವನ್ನು ಸಾಧಿಸಲಾಗಿದೆ.

1. ಅನೇಕ ಹೋಮಹವನಗಳು ಸ್ವರ್ಗಾದಿಪುರುಷಾರ್ಥಗಳಿಗೆ ಸಾಧನವೆನಿಸಿವೆ. ಆದರೆ, ನಿರ್ದಿಷ್ಟವಾದ ಯಾಗವು ನಿರ್ದಿಷ್ಟಫಲಕ್ಕೆ ಸಾಧನ ಎಂದು ನಿರ್ಧಾರವಾಗಬೇಕಾದರೆ ಅಪನಂಬಿಕೆಗೆ ಆಸ್ಪದವಿಲ್ಲದ ಪ್ರಮಾಣವಿರಬೇಕು. ಅದನ್ನು ಪ್ರತ್ಯಕ್ಷಪ್ರಮಾಣದಿಂದ ನಿರ್ಧರಿಸಲಾಗದು. ಅದನ್ನು ಸಾಧಿಸುವ ಅನುಮಾನವೂ ಇಲ್ಲ. ಅದನ್ನು ತಿಳಿಸುವ ವಾಕ್ಯವೂ ಯಾರದೋ ರಚನೆಯಾದರೆ ಅದರಲ್ಲಿ ನಂಬಿಕೆ ಬರುವುದಿಲ್ಲ. ಆದ್ದರಿಂದ ಅಪೌರುಷೇಯವಾಕ್ಯವೇ ಅದಕ್ಕೆ ಆಧಾರ.

ಈ ವಿಧದ ಅನುಮಾನಗಳಲ್ಲಿ ಪಕ್ಷಸಾಧ್ಯಗಳನ್ನು ಅಲ್ಪಸ್ವಲ್ಪ ಬದಲಾವಣೆ ಮಾಡಿ ಮೂರು ವೈವಿಧ್ಯವನ್ನು ತೋರಿಸಲಾಗಿದೆ.

2. ಸಾಕ್ಷಾದ್ಧರ್ಮಾದಿಬೋಧಕವಾಕ್ಯಗಳೇ ವೇದಗಳು. ಅಥವಾ ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದಗಳು. ಇಂತಹ ವೇದಗತವಾದ ವೇದತ್ವವನ್ನು ಪಕ್ಷವನ್ನಾಗಿ ಮಾಡಿ ಅದು ಅಪೌರುಷೇಯ ವೃತ್ತಿಯಾಗಿದೆ, ಎಂದು ಅನುಮಾನ ಮಾಡುವ ಮೂಲಕ ಈ ಪ್ರಕರಣದಲ್ಲಿ ಅಪೌರುಷೇಯತ್ವವನ್ನು ಸಾಧಿಸಲಾಗಿದೆ.

ಈ ಅನುಮಾನಗಳದು ಒಂದು ಗುಂಪು. ಯಾಗಕ್ಕೆ ಫಲವಿಶೇಷಸಾಧನತ್ವವನ್ನು ಪ್ರತ್ಯಕ್ಷ ಅಥವಾ, ಅನುಮಾನಗಳಿಂದ ನಿರ್ಧರಿಸಲು ಸಾಧ್ಯವಿಲ್ಲ. ಪುರುಷಕೃತವಾದರೆ ಆ ವ್ಯಕ್ತಿಯು ನಾವಾರೂ ತಿಳಿಯದ ವಿಷಯಗಳನ್ನು ತಿಳಿದಿದ್ದಾನೆ, ಅವನು ಮೋಸಗಾರನಲ್ಲ, ಈ ವಾಕ್ಯವನ್ನು ಅವನೇ ರಚಿಸಿದ್ದಾನೆ, ಇತ್ಯಾದಿ ಅನೇಕ ಕಲ್ಪನೆಗಳನ್ನು ಮಾಡಬೇಕಾಗುತ್ತದೆ. ಹಾಗೆಲ್ಲ ಕಲ್ಪನೆ ಮಾಡಿ ಒಬ್ಬ ವ್ಯಕ್ತಿಯನ್ನು ನಂಬಿ ಅವನು ಹೇಳಿದ್ದೇ ಸರಿ, ಎಂದು ನಿರ್ಧರಿಸಿದರೆ ಅಂತಹ ವ್ಯಕ್ತಿಗಳು ಅನೇಕರು ಇರುವುದರಿಂದ ಯಾರ ಆಚಾರ ಸರಿ, ಯಾರದು ಸರಿಯಲ್ಲ ಎಂಬ ನಿರ್ಧಾರವೇ ಆಗಲಿಕ್ಕಿಲ್ಲ. ಆಯಾಯ ದಾರ್ಶನಿಕರು ತಮ್ಮ ತಮ್ಮ ಗುರುಗಳಲ್ಲಿ ನಂಬಿಕೆ ಇಟ್ಟು ತಮ್ಮ ತಮ್ಮ ಸಂಪ್ರದಾಯದಲ್ಲಿ ತೊಡಗುವಂತೆ ವೈದಿಕ ಸಂಪ್ರದಾಯವೂ ಕುರುಡು ನಂಬಿಕೆಯಾದೀತು. ಅಪೌರುಷೇಯ ವಾಕ್ಯವಿದ್ದಲ್ಲಿ ಇಂತಹ ಅನಾಹುತಕ್ಕೆ ಅವಕಾಶವಿಲ್ಲ. ಈ ತರ್ಕದ ಆಧಾರದಲ್ಲಿ ಈ ಅನುಮಾನಗಳ ಹೇತುಗಳನ್ನು ನಿರ್ದೇಶಿಸಲಾಗಿದೆ.

3. ಮೂರನೇ ವಿಧದ ಅನುಮಾನಗಳು ಒಟ್ಟು ನಾಲ್ಕು ಇವೆ. ಅವುಗಳಿಂದ, ನೇರವಾಗಿ ವೇದವನ್ನೇ ಪಕ್ಷಮಾಡಿ ಅಪೌರುಷೇಯತ್ವವನ್ನು ಸಾಧನೆಮಾಡಲಾಗಿದೆ. ಮೊದಲ ಅನುಮಾನದಲ್ಲಿ 'ನಿಯತಾನುಪೂರ್ವೀಕತ್ವಂ ಅಪೌರುಷೇಯತ್ವಂ' ಎಂದು ಪರಿಗಣಿಸಿ 'ವೇದವು ಅನಿಯತಾನು ಪೂರ್ವೀಕವಲ್ಲ' ಎಂದು ತಾರ್ಕಿಕಾಭಿಮತವಾದ ಪೌರುಷೇಯತ್ವವನ್ನು ನಿರಾಕರಿಸಲಾಗಿದೆ. ಇದಕ್ಕೆ ಹೇತು ತಾರ್ಕಿಕಮತಾನುಸಾರಿಯಾದುದು. ವೇದವು ಈಶ್ವರ ಪ್ರಣೀತವಾದರೂ ಈಶ್ವರನ ಜ್ಞಾನವು ಪ್ರಮಾ–ಭ್ರಮಾ ಬಹಿರ್ಭೂತವಾದುದು, ಎನ್ನುತ್ತಾರೆ ತಾರ್ಕಿಕರು. ಈ ವಾದದಂತೆ, ವೇದವು ಈಶ ರಚನೆಯಾದರೂ ಅದು ಭ್ರಮ ಮೂಲಕವೂ ಅಲ್ಲ, ಪ್ರಮಾಮೂಲಕವೂ ಅಲ್ಲ. ಆದ್ದರಿಂದ ಗಗನದಂತೆ ಅದೂ ಅಪೌರುಷೇಯ ಎಂದು ಮೊದಲ ಅನುಮಾನ.

(ಅ) ಈಶ್ವರಜ್ಞಾನವು ಪ್ರಮಾ ಆದರೂ ಅದು ನಿತ್ಯವಾದುದರಿಂದ ಅದಕ್ಕೆ ಕರಣವಿಲ್ಲ. ಆದ್ದರಿಂದ ಈಶರಚಿತವಾದರೂ ವೇದಕ್ಕೆ ಪ್ರಮಾಕರಣವಾಗಲೀ ಭ್ರಮೆಯಾಗಲೀ ಮೂಲವಲ್ಲ. ಆದರಿಂದಾಗಿ, ವೇದವು ಅರ್ಥಜ್ಞಾನಪೂರ್ವಕರಚಿತವಾದ ಕೃತಿಯಲ್ಲ. ಹೀಗೆ ಇಲ್ಲೂ ಪೌರುಷೇಯತ್ವವನ್ನು ನಿರಾಕರಿಸಲಾಗಿದೆ.

(ಆ) ಈ ಅನುಮಾನದಲ್ಲಿ ಪ್ರಮಾಕರಣಾಮೂಲಕತ್ವವನ್ನು ಮಾತ್ರ ಹೇತುಮಾಡಿ ಅರ್ಥಪ್ರಮಾಪೂರ್ವಕ ಕೃತಿಯಲ್ಲ, ಎಂದು ವೇದದ ಪೌರುಷೇಯತ್ವವನ್ನು ನಿರಾಕರಿಸಲಾಗಿದೆ.

(ಇ) ನಾಲ್ಕನೆಯ ಅನುಮಾನದಲ್ಲಿ ಇದೇ ಹೇತುವಿನಿಂದ ಆಪ್ತಾಪ್ರಣೀತತ್ವವನ್ನು ಸಾಧನೆ ಮಾಡಲಾಗಿದೆ.

ಈ ಸಂದರ್ಭದಲ್ಲಿ, ವೇದಗಳ ವರ್ಣಗಳು ನಿತ್ಯಗಳಾದರೂ ಆ ವರ್ಣಗಳ ಕ್ರಮ ಕೃತಕವಾಗಿದೆ. ಅದು ಕೃತಕವಾದರೂ ಆ ಕ್ರಮದಲ್ಲಿ ಎಂದೂ ಬದಲಾವಣೆ ಇಲ್ಲ. ಹೀಗೆ, 'ನಿಯತಾನುಪೂರ್ವೀಕತ್ವವೇ' ಅಪೌರುಷೇಯತ್ವ ಎಂದು ಹೇಳಿ 'ನಿಯತ್ಯೆಕಪ್ರಕಾರತ್ವಮ್ ಅಪೌರುಷೇಯತ್ವಮ್' ಎಂಬ ಸುಧಾಸಮ್ಮತಿಯನ್ನು ಕೊಡಲಾಗಿದೆ.

4. ನಾಲ್ಕನೆಯದು ಈ ಮೂರಕ್ಕಿಂತ ಭಿನ್ನವಾದ ಅನುಮಾನ. ಪೂರ್ಣ ತಾರ್ಕಿಕವಾದುದು. ವೇದದ ವರ್ಣಾದಿ ಆನುಪೂರ್ವಿಗಳು ಪುಣ್ಯಜನಕವಾಗಿವೆ. ಅವುಗಳಲ್ಲಿರುವ ಜನಕತಾದಲ್ಲಿ ಒಂದು ಧರ್ಮವು ಅವಚ್ಛೇದವಾಗಿದೆ. ಈಶ್ವರ ಕೃತತ್ವವೇ ಆ ಅದೃಷ್ಟಕ್ಕೆ ಕಾರಣ ಎನ್ನುವಂತಿಲ್ಲ. ಏಕೆಂದರೆ, ವೇದದ ಒಂದೊಂದು ಸೂಕ್ತದ ಫಲ ಒಂದೊಂದು. ಆದರೆ, ಈಶ್ವರಕರ್ತೃತ್ವವು ಎಲ್ಲದರಲ್ಲೂ ಸಮಾನವಾಗಿದೆ. ಆನುಪೂರ್ವಿವಿಶೇಷವೂ ಅದಕ್ಕೆ ನಿಮಿತ್ತವಲ್ಲ. ಅದು ಪುರಾಣಾದಿ ಆನುಪೂರ್ವಿಯಲ್ಲೂ ಇದೆ. ಅದಕ್ಕಾಗಿ ನಿಯತಾನುಪೂರ್ವಿವಿಶೇಷ ಪ್ರಯುಕ್ತವಾಗಿಯೇ ಫಲವಿಶೇಷ ಎನ್ನುವುದು ಅನಿವಾರ್ಯ. ಎಲ್ಲಾ ವೈದಿಕ ಮಂತ್ರಗಳ ಆನುಪೂರ್ವಿ ನಿಯತವಾದರೂ ಒಂದು ಮಂತ್ರದಲ್ಲಿರುವ ಆನುಪೂರ್ವಿ ಇನ್ನೊಂದರಲ್ಲಿ ಇಲ್ಲ. ಆದ್ದರಿಂದ ಮಂತ್ರಭೇದನ

ಫಲಭೇದವು ಇರಬಹುದು. ಹೀಗೆ ತತ್ತತ್ಫಲವಿಶೇಷಕ್ಕೆ ತತ್ತನ್ಮಂತ್ರಗತವಾದ ನಿಯತಾನೂಪೂರ್ವೀವಿಶೇಷವೇ ನಿಮಿತ್ತ. ವೇದಾನುಪೂರ್ವೀ ನಿಯತೈಕಪ್ರಕಾರ, ಎಂದು ಸಿದ್ಧವಾಗುತ್ತದೆ. ಇದೇ ಅಪೌರುಷೇಯತ್ವ.

5. ಕೊನೆಯದು ಮನ್ವಾದಿ ಸ್ಮೃತಿಪಕ್ಷಕಾನುಮಾನ. ಮನ್ವಾದಿ ಸ್ಮೃತಿಗಳು ವ್ಯಕ್ತಿವಿಶೇಷ ರಚಿತವಾದರೂ ಅವುಗಳನ್ನು ನಾವು ನಂಬುತ್ತೇವೆ. ಆ ನಂಬಿಕೆಗೆ ಮೂಲ–ಮನ್ವಾದಿಗಳು ತಾವು ಹೇಳಿರುವ ವಿಷಯಗಳನ್ನು ಇಂದ್ರಿಯಗಳಿಂದ ನೋಡಿದ್ದಾರೆ, ಎನ್ನುವುದಲ್ಲ. ಏಕೆಂದರೆ, ಹೀಗೆ ಮಾಡಿದರೆ ಪಾಪ, ಹೀಗೆ ಮಾಡಿದರೆ ಪುಣ್ಯ ಎನ್ನುವುದನ್ನು ನೋಡಿ ತಿಳಿಯಲು ಸಾಧ್ಯವಿಲ್ಲ. ಅನುಮಾನದಿಂದಲೂ ನಿರ್ಧರಿಸಲಾಗದು. ಆದ್ದರಿಂದ ಮನ್ವಾದಿಸ್ಮೃತಿಗಳಿಗೆ ವೇದವೇ ಮೂಲ ಎನ್ನಬೇಕು. ಅದಕ್ಕೆ ಮತ್ತೆ ಕರ್ತೃ ಇದ್ದರೆ ಅಲ್ಲೂ ನಂಬಿಕೆ ಬರಲಿಕ್ಕಿಲ್ಲ. ಹೀಗಾಗಿ ವೇದವು ಅಪೌರುಷೇಯ.

ಹೀಗೆ ಈ ಪ್ರಕರಣದಲ್ಲಿ ವೇದಾಪೌರುಷೇಯತ್ವವನ್ನು ಅನೇಕವಿಧದ ಅನುಮಾನಗಳಿಂದ ಸಾಧಿಸಲಾಗಿದೆ.

**ಇಲ್ಲಿಗೆ ವೇದಾಪೌರುಷೇಯತ್ವದಲ್ಲಿ ಅನುಮಾನಪ್ರಮಾಣಕಥನ ಪ್ರಕರಣವು ಮುಗಿಯಿತು.**

श्रीमद्व्यासराज विरचिते तर्कताण्डवे

# वेदापौरुषेयत्ववादः

## अपौरुषेयत्वे अनुकूलतर्कः

### प्रकरणम्-२

**नचोक्तहेतूनामप्रयोजकता । यदि वेदः पौरुषेयः स्यात् तर्हि—**

**''यतस्ता हरिणा दृष्टाः श्रुता एवाखिलैर्जनैः ।**

**श्रुतयो दृष्टयश्चेति तेनोच्यन्ते पुरातनैः ।।''**

**इत्यादिस्मृतिष्वीश्वरेणापि दृष्टत्वस्यैवोक्तिर्न स्यात् ।**

**वेदाध्येतृणां तत्र कर्तृविशेषस्मृतिश्च स्यात् । मुक्तकश्लोकादौ तन्नियमाभावेऽप्यनेककर्तृकाविच्छिन्नाध्ययन-धारणादिमति उरुतरप्रबन्धात्मके भारतादौ तन्नियमात् ।**

**एतेन कर्तृस्मरणस्याविध्यर्थत्वादिति निरस्तम् ।।**

ಹಿಂದಿನ ಪ್ರಕರಣದಲ್ಲಿ ಹೇಳಿರುವ ವೇದಾಪೌರುಷೇಯತ್ವಸಾಧಕವಾದ ಅನುಮಾನಗಳಲ್ಲಿ ಅಪ್ರಯೋಜಕತಾಶಂಕೆಯನ್ನು ಮಾಡಬಾರದು. ಅಪೌರುಷೇಯತ್ವವನ್ನು ಅಂಗೀಕರಿಸದಿದ್ದಲ್ಲಿ ಬಾಧಕತರ್ಕವಿದೆ. ಸ್ಮೃತಿಗಳಲ್ಲಿ ಹೀಗಿದೆ—

1. ''ವೇದಗಳು ಶ್ರೀಹರಿಯಿಂದ ದೃಷ್ಟವಾಗಿವೆ. ಇತರೆಲ್ಲ ಜನರು ಅವುಗಳನ್ನು ಕೇಳುತ್ತಾರೆ. ಶ್ರೀಹರಿಯಿಂದ ದೃಷ್ಟವಾದ ಕಾರಣ ವೇದಗಳನ್ನು ದೃಷ್ಟಗಳೆಂದೂ ಇತರ ಜನಗಳಿಂದ ಶ್ರುತವಾದ ಕಾರಣ ಅವುಗಳನ್ನು ಶ್ರುತಿಗಳೆಂದೂ ಪ್ರಾಚೀನರು ಹೇಳುತ್ತಾರೆ''. ಇಂತಹ ಶ್ರುತಿಸ್ಮೃತಿಗಳು ಈಶ್ವರನಿಂದಲೂ ವೇದಗಳು ದೃಷ್ಟವೆಂದೇ ಹೇಳಿರುವುದು ಪೌರುಷೇಯತ್ವಪಕ್ಷದಲ್ಲಿ ಅಯುಕ್ತವೆನಿಸೀತು.

2. ಒಂದುವೇಳೆ ವೇದಕ್ಕೂ ಒಬ್ಬ ಕರ್ತೃವಿದ್ದಲ್ಲಿ ವೇದಗಳನ್ನು ಅಧ್ಯಯನ ಮಾಡಿಕೊಂಡು ಬಂದಿರುವ ಅನೇಕರಲ್ಲಿ ಒಬ್ಬರಿಗಾದರೂ ಆ ಕರ್ತೃವಿನ ಅನುಸಂಧಾನವಿರಬೇಕಾಗಿತ್ತು.

3. 'ಮುಕ್ತಕ ಶ್ಲೋಕಾದಿಗಳಲ್ಲಿ' (ಸುಭಾಷಿತಗಳು) ಯದ್ಯಪಿ ಕರ್ತೃಸ್ಮರಣೆ ಇಲ್ಲ. ಆದರೆ ವೇದ ಹೀಗಲ್ಲ. ಅದನ್ನು ಅನೇಕರು ಅವಿಚ್ಛಿನ್ನವಾಗಿ ಅಧ್ಯಯನಮಾಡುತ್ತಾ ಬಂದಿದ್ದಾರೆ. ಅದು ಕಿರುಕೃತಿಯಲ್ಲ, ಬೃಹದ್‌ಗ್ರಂಥ. ಇಂತಹ ಬೃಹತ್ ಕೃತಿಯಾಗಿರುವ ಮಹಾಭಾರತಕ್ಕೆ ವ್ಯಾಸರು ಕರ್ತರು ಎಂದು ಪ್ರಸಿದ್ಧಿ ಇದೆ. ವೇದಕ್ಕೂ ಒಬ್ಬ ಕರ್ತೃ ಇದ್ದಲ್ಲಿ ವ್ಯಾಸರಂತೆ ಅವನ ಪ್ರಸಿದ್ಧಿಯೂ ಇರಬೇಕಿತ್ತು. ಅಂತಹ ನಿರ್ದಿಷ್ಟಕರ್ತೃವಿನ ಪ್ರಸಿದ್ಧಿಯು ಅಧ್ಯಯನ ಪರಂಪರೆಯಲ್ಲಿ ಇಲ್ಲವಾದ ಕಾರಣ ಅದಕ್ಕೆ ಕರ್ತೃ ಇಲ್ಲ.

"ನ ಚ ಕಾರ್ಯಪರಮೇವ ಪ್ರಮಾಣಂ। ಕರ್ತ್ರಸ್ಮರಣಸ್ಯ ಸರ್ವತ್ರಾವಿಧ್ಯರ್ಥತ್ವಾತ್" ಎಂದು ಮಣಿಗ್ರಂಥದಲ್ಲಿದೆ. (ಪು.373) "ವಿಧಿಯ ಶೇಷವಾದರೆ ಮಾತ್ರ ವಾಕ್ಯವು ಪ್ರಮಾಣ. ವೇದಕ್ಕೆ ಸಕರ್ತೃಕತ್ವವನ್ನು ಹೇಳುವ 'ತಸ್ಮಾತ್ತೇಪಾನಾತ್ ತ್ರಯೋ ವೇದಾ ಅಜಾಯಂ ತ' ಎಂಬ ವಾಕ್ಯವು ವಿಧಿಶೇಷವಲ್ಲವಾದುದರಿಂದ ಪ್ರಮಾಣವಲ್ಲ, ಎನ್ನುವುದು ಸರಿಯಲ್ಲ. ಕರ್ತೃಬೋಧಕ ಸ್ಮೃತಿಗಳಾವುವೂ ವಿಧಿಸಮಭಿವ್ಯಾಹೃತಗಳಲ್ಲ. ಆದ್ದರಿಂದ ಮಹಾಭಾರತಕ್ಕೆ ಸಕರ್ತೃಕತ್ವವನ್ನು ಹೇಳುವ ವಾಕ್ಯವೂ ಅಪ್ರಮಾಣವಾಗಿ ಅದೂ ವ್ಯಾಸಪ್ರಣೀತವೆಂದು ಸಿದ್ಧವಾಗಲಿಕ್ಕಿಲ್ಲ" ಎಂದು ಮಣಿಗ್ರಂಥದ ಅಭಿಪ್ರಾಯ. ಇದೂ ನಿರಸ್ತವಾಯಿತು. ವೇದಕ್ಕೆ ಕರ್ತೃವಿದ್ದಲ್ಲಿ ಅಧ್ಯಾಪಕ ಪರಂಪರೆಯು ಅದನ್ನು ಸ್ಮರಿಸುತ್ತಾ ಬರಬೇಕಾಗಿತ್ತು, ಎಂದು ಅಪೌರುಷೇಯತ್ವವಾದಿಗಳ ವಾದ ಹೊರತು, ಕರ್ತೃಬೋಧಕ 'ಸ್ಮೃತಿ' ಇಲ್ಲ ಎಂದಲ್ಲ.

## ನ್ಯಾಯದೀಪ

**पौरुषेयत्वरूपविपक्षे बाधकानि विवक्षुस्तत्त्वनिर्णयोदाहृतब्रह्माण्ड-स्मृतौ दृष्टत्वोक्तिविरोधं तावदाह—यदीत्यादिना । पौरुषेय इति । स्वतन्त्रपुरुषेणेश्वरेण प्रणीतो यदीत्यर्थः । श्रुता एव नतु कृता इत्यर्थः । 'दृष्टा एव' इत्यप्येवकारान्वयमुपेत्याह—दृष्टत्वस्यैवेति । "वेदकर्तुर-प्रसिद्धेः" इति तत्वनिर्णयवाक्यसूचितं बाधकमाह–वेदेति । यदीत्या-द्यापादकानुवृत्तिः सर्वत्र ज्ञेया ।।**

ಮೂಲದಲ್ಲಿ 'ಯದಿ ವೇದಃ ಪೌರುಷೇಯಃ' ಎಂದಿದೆ. ಅಲ್ಲಿ ಪೌರುಷೇಯ ಅಂದರೆ 'ಸ್ವತಂತ್ರನಾದ ವ್ಯಕ್ತಿಯೊಬ್ಬನಿಂದ ರಚಿಸಲ್ಪಟ್ಟದ್ದಾದಲ್ಲಿ' ಎಂದರ್ಥ. ಉದಾಹೃತ ಸ್ಮೃತಿಯು 'ಶ್ರುತಾ ಏವ' ಎಂದರೆ, ವೇದವು ಎಲ್ಲರಿಂದ ಕೇಳಲ್ಪಟ್ಟದ್ದು ಮಾತ್ರ, ರಚಿಸಲ್ಪಟ್ಟಿಲ್ಲ. ಇದು ಏವಕಾರಾರ್ಥ. ಸ್ಮೃತಿಯ ಪೂರ್ವಾರ್ಧದಲ್ಲಿರುವ ಏವಶಬ್ದವನ್ನು 'ದೃಷ್ಟಾಃ ಏವ' ಎಂದು ಅನ್ವಯ

ಮಾಡಿಕೊಂಡಾಗ ಲಭ್ಯವಾಗುವ ಅರ್ಥವನ್ನು 'ದೃಷ್ಟತ್ವಸ್ಯೈವ' ಎಂಬ ಮೂಲವಾಕ್ಯದಲ್ಲಿ ಹೇಳಲಾಗಿದೆ. ಆರಂಭದಲ್ಲಿ ಹೇಳಿರುವ 'ಯದಿ ವೇದಃ' ಇತ್ಯಾದಿ ಆಪಾದಕವನ್ನು ಮುಂದೆ ಮಾಡಿರುವ ಎಲ್ಲಾ ಆಪಾದನೆಗಳಲ್ಲೂ ಅನ್ವಯಮಾಡಿಕೊಳ್ಳಬೇಕು.

ತತ್ತ್ವನಿರ್ಣಯದಲ್ಲಿ 'ವೇದಕರ್ತುಃ ಅಪ್ರಸಿದ್ಧೇಃ' ಎಂದಿದೆ. ಅದರಿಂದ ಸೂಚಿತವಾದ ಬಾಧಕವನ್ನು 'ವೇದಾಧ್ಯೇತೃಣಾಂ' ಎಂದು ಮುಂತಾಗಿ ಹೇಳಲಾಗಿದೆ.

## ನ್ಯಾಯದೀಪ

**मुक्तकश्लोका नाम तत्रतत्र नानाग्रन्थस्थाः ततस्तत उद्धृता इति वा प्रबन्धेष्वनिबद्धा एव तेनतेन पुरुषेण कृताः सुभाषितश्लोका इत्याहुः ।।**

ಅನೇಕ ಗ್ರಂಥಗಳಿಂದ ಮಧ್ಯಮಧ್ಯದ ಶ್ಲೋಕಗಳನ್ನು ಹೆಕ್ಕಿತೆಗೆದು ಸಂಗ್ರಹಿಸಿರುವ ಶ್ಲೋಕಗಳು–ಮುಕ್ತಕ ಶ್ಲೋಕಗಳು. ಒಬ್ಬನಿಂದ ಒಂದು ಗ್ರಂಥವಾಗಿ ರಚಿಸಲ್ಪಡದ, ಬೇರೆ ಬೇರೆ ವ್ಯಕ್ತಿಗಳು ಬಿಡಿಬಿಡಿಯಾಗಿ ರಚಿಸಿರುವ ಸುಭಾಷಿತಶ್ಲೋಕಗಳು ಮುಕ್ತಕಶ್ಲೋಕಗಳು, ಎಂದು ಕೆಲವರು ಹೇಳುತ್ತಾರೆ.

## ನ್ಯಾಯದೀಪ

**अनेकेति । अनेककर्तृकं यदविच्छिन्नमध्ययनं, यच्च तादृशं धारणं= अविस्मरणेनानुसन्धानं, आदिपदोक्तप्रवचनादिकं तद्वतीत्यर्थः । तथाचाल्पप्रबन्धे तदभावेऽपि भारतादाविवोक्तविशेषणवत्युरुतरप्रबन्धे वेदे स्यादेव कर्तृस्मृतिरध्यापकानाम् । नच साऽस्तीति भावः ।।**

'ಅನೇಕ ಕರ್ತೃಕ–ಅವಿಚ್ಛಿನ್ನ' ಇತ್ಯಾದಿ ಮೂಲದ ಅರ್ಥಹೀಗೆ—ಅನೇಕ ಕರ್ತೃಕವಾದ ವಿಚ್ಛೇದವಿಲ್ಲದ ಅಧ್ಯಯನ, ಅದರಂತೆ ಅಂತಹ ಧಾರಣೆ=ಮರೆಯದ ಅನುಸಂಧಾನ ಎಂದರ್ಥ. ವೇದದ ಅಧ್ಯಯನವನ್ನು ಅನೇಕರು ಎಡೆಬಿಡದೆ ಮಾಡಿಕೊಂಡು ಬಂದಿದ್ದಾರೆ. ಅದನ್ನು ಮರೆಯದೆ ಬುದ್ಧಿಯಲ್ಲಿ ಧಾರಣೆ ಮಾಡಿದ್ದಾರೆ. ಆದರೆ, ಅವರಾರಿಗೂ ಕರ್ತೃವಿನ ಜ್ಞಾನ ಇಲ್ಲ. ಆದ್ದರಿಂದ ವೇದಕ್ಕೆ ಕರ್ತೃಗಳು ಇಲ್ಲ.

ಇಲ್ಲಿರುವ ಆದಿಪದದಿಂದ ಅನೇಕರು ಅವಿಚ್ಛಿನ್ನವಾಗಿ ವೇದವನ್ನು ಪ್ರವಚನಮಾಡುತ್ತಲೂ ಬಂದಿದ್ದಾರೆ, ಎಂಬ ಅಂಶವನ್ನೂ ಕಾರಣವನ್ನಾಗಿ ಹೇಳಲಾಗಿದೆ.

ಪ್ರಪಂಚ ಚಿಕ್ಕ-ಪುಟ್ಟ ಗ್ರಂಥಗಳ ಕರ್ತೃಗಳನ್ನು ಮರೆತು ಆದರ ಅಧ್ಯಯನ ಪರಂಪರೆ ಇರಬಹುದಾದರೂ ಹಿಂದೆ ಹೇಳಿದ ವಿಶೇಷಣವಿಶಿಷ್ಟ ಬೃಹದ್‌ಗ್ರಂಥವಾದ ವೇದದಲ್ಲಿ ಅಧ್ಯೇತೃಗಳಿಗೆ (ಕರ್ತೃವಿದ್ದಲ್ಲಿ) ಮಹಾಭಾರತದಲ್ಲಿರುವಂತೆ ಕರ್ತೃವಿನ ಸ್ಮರಣೆಯೂ ಇರಲೇಬೇಕು. ಆದರೆ, ಯಾರಿಗೂ ಕರ್ತೃಸ್ಮರಣೆ ಇಲ್ಲ. ಆದ್ದರಿಂದ ವೇದಕ್ಕೆ ಕರ್ತೃಗಳೇ ಇಲ್ಲ, ಎಂದರ್ಥ.

**एतेन, गूढकर्तृकवाक्ये सत्यपि पौरुषेयत्वे कर्तृस्मृतिर्नेति व्यभिचार इति प्रत्युक्तम् । उक्तविशेषणवत्युरुतरप्रबन्धे तस्यावश्यकत्वादिति ।**

**एतेन ''कपिलकणादगौतमैस्तच्छिष्यैश्चाद्यपर्यन्तं वेदे सकर्तृकत्व-स्मृतिरस्ति'' इति मणिकुसुमाञ्जल्यादावुक्तं निरस्तम् । अध्यापकानां स्मृतेरसिद्धेः ॥**

ವೇದಕ್ಕೆ ಹಿಂದೆ ಹೇಳಿರುವ ವಿಶೇಷಣಗಳನ್ನು ಕೊಟ್ಟಿರುವುದರಿಂದ ಮುಂದಿನ ಈ ಆಕ್ಷೇಪಕ್ಕೂ ಅವಕಾಶವಿಲ್ಲ—ಕರ್ತೃ ಯಾರೆಂದು ತಿಳಿಯದ ವಾಕ್ಯ ಗೂಢಕರ್ತೃಕವಾಕ್ಯ. ಕರ್ತೃಗೊತ್ತಿಲ್ಲದೇ ಹೋದರೂ ಅದು ಪೌರುಷೇಯ. ಆದರೂ ಯಾರಿಗೂ ಕರ್ತೃಸ್ಮರಣೆ ಇಲ್ಲ. ಅಂದಮಾತ್ರಕ್ಕೆ ಆ ವಾಕ್ಯದಲ್ಲಿ ಅಪೌರುಷೇಯತ್ವವಿಲ್ಲ. ಆದ್ದರಿಂದ, ಕರ್ತೃಸ್ಮೃತ್ಯಭಾವವು ವ್ಯಭಿಚಾರಿಯಾಗಿದೆ, ಇದು ಆಕ್ಷೇಪ. ಈ ಆಕ್ಷೇಪ ಯುಕ್ತವಲ್ಲ. ಹಿಂದೆ ಹೇಳಿದಂತೆ ಅವಿಚ್ಛಿನ್ನ-ಅಧ್ಯೇತೃಪರಂಪರೆ ಇರುವ ವೇದದಂತಹ ಬೃಹದ್‌ಗ್ರಂಥದಲ್ಲಿ ಕರ್ತೃಸ್ಮರಣೆ ಇಲ್ಲದಿರುವುದರಿಂದ ಅದು ಅಪೌರುಷೇಯ ಎಂದು ಮೂಲದಲ್ಲಿ ಸಾಧಿಸಲಾಗಿದೆ. ಗೂಢಕರ್ತೃಕವಾಕ್ಯ ಮಹಾಭಾರತದಂತಹ ಬೃಹದ್ ಗ್ರಂಥವೇನಲ್ಲ. ಅದಕ್ಕೆ ಅವಿಚ್ಛಿನ್ನಪರಂಪರೆಯೂ ಇಲ್ಲ. ಆದ್ದರಿಂದ ಅದರಲ್ಲಿ ವಿವಕ್ಷಿತ ಹೇತು ಇಲ್ಲ.

ಇದರಿಂದಾಗಿ, ಮಣಿಗ್ರಂಥ (ಪು.379 ಶಬ್ದಖಂ.) ಮತ್ತು ಉದಯನಾಚಾರ್ಯಕೃತವಾದ ನ್ಯಾಯಕುಸುಮಾಂಜಲಿ ಗ್ರಂಥಗಳಲ್ಲಿ ಹೇಳಿರುವ ಆಕ್ಷೇಪವೂ ಸರಿಯಲ್ಲವೆಂದು ಸಿದ್ಧವಾಗುತ್ತದೆ—''ವೇದಗಳು ಸಕರ್ತೃಕಗಳೆಂದು ಕಪಿಲ, ಕಣಾದ, ಗೌತಮ ಮೊದಲಾದ ಋಷಿಗಳು ಹಾಗೂ ಅವರ ಶಿಷ್ಯರು ಸ್ಮೃತಿಗಳಲ್ಲಿ ತಿಳಿಸಿದ್ದಾರೆ. (ಸಕರ್ತೃಕತ್ವಸ್ಮರಣಸ್ಯೇತಿ=ಪೌರುಷೇಯತ್ವಬೋಧಕ ಸ್ಮೃತೇರಿತ್ಯರ್ಥಃ-ಮಣಿವ್ಯಾ.) ಆದ್ದರಿಂದ ವೇದಗಳಲ್ಲಿ ಅಕರ್ತೃಕತ್ವಪ್ರಸಿದ್ಧಿ ಇಲ್ಲ'' ಎಂದು. ಆದರೆ, ಇಲ್ಲಿ ಮಾಡಿರುವ ಆಕ್ಷೇಪ—'ವೇದಕ್ಕೆ ಕರ್ತೃಗಳಿದ್ದಲ್ಲಿ ಅಧ್ಯಾಪಕರಿಗೆ ಕರ್ತೃಸ್ಮರಣೆ ಇರಬೇಕಾಗಿತ್ತು' ಎಂದು. ಈ ಆಕ್ಷೇಪಕ್ಕೆ ಅದು ಸಮಾಧಾನವಲ್ಲ.

## ಅವತಾರಿಕೆ

**यत्तु सुधायां ''किञ्चेश्वरः सर्गादौ यं वेदं निर्मायैकस्मै शिष्यायोपदिशति तमेवान्यस्मा उपदिशति वेदान्तरं वा'' इत्यादिनोक्तं तदपि बाधकं स्पष्टं विवृण्वन्नाह—वेद इत्यादिना ।**

ನ್ಯಾಯಸುಧಾದಲ್ಲಿ ಹೇಳಿರುವ ಬಾಧಕತರ್ಕವನ್ನು ಮುಂದಿನಮೂಲದಲ್ಲಿ ತೋರಿಸಲಾಗಿದೆ—''ವೇದವು ಈಶ್ವರಕೃತವಾದಲ್ಲಿ ಆ ಈಶ್ವರನು ಯಾವ ವೇದವನ್ನು ರಚಿಸಿ ಸೃಷ್ಟಿಯ ಆದಿಯಲ್ಲಿ ಬ್ರಹ್ಮದೇವರಿಗೆ ಉಪದೇಶಿಸುವನೋ ಅದೇ ವೇದವನ್ನು ಮತ್ತೊಬ್ಬರಿಗೆ ಉಪದೇಶಿಸುವನೋ ಅಥವಾ ವೇದಾಂತರವನ್ನು ರಚಿಸಿ ಉಪದೇಶಿಸುವನೋ? ಇದಕ್ಕೆ ಉತ್ತರವಾಗಿ– ಮೊದಲು ರಚಿಸಿರುವ ವೇದವೇ ಸರ್ವಜ್ಞನಾದ ಅವನ ತಲೆಯಲ್ಲಿ ಇರುವಾಗ ವೇದಾಂತರವನ್ನು ಏಕೆ ರಚಿಸಬೇಕು? ಅದೇ ವೇದವನ್ನೇ ಉಪದೇಶಿಸುತ್ತಾನೆ, ಎನ್ನುವುದಾದರೆ ಹಿಂದಿನ ಕಲ್ಪದಲ್ಲಿ ರಚಿಸಿರುವ ವೇದವೇ ಅವನ ಸ್ಮೃತಿಯಲ್ಲಿರುವಾಗ ಈ ಕಲ್ಪದಲ್ಲಿ ವೇದಾಂತರವನ್ನು ರಚಿಸುವ ಅಗತ್ಯವೇನು? ಎಂದು ಇಲ್ಲೂ ಕೇಳಬಹುದು''. ಸುಧಾದಲ್ಲಿರುವ ಆ ಆಕ್ಷೇಪವನ್ನೇ ಇಲ್ಲಿ ಸ್ಪಷ್ಟವಾಗಿ ವಿವರಿಸಿ ಹೇಳಲಾಗಿದೆ.

**वेदे प्रतिकल्पमनियतान्यनेकानुपूर्व्याणि, तेषां यथावदध्ययनानि चाभ्युदयकारणानि, अन्यथाध्ययनानि च वाग्वज्रतयाऽनर्थकारणानि, अभ्युदयादीनि च विजातीयकारणजन्यत्वात्, तार्णाद्यग्निवद् विजातीयानीति कल्प्यत्वात् कल्पनागौरवं च स्यात् । अन्यथेश्वर एकस्मिन्नेव कल्प एकस्मा एकयानुपूर्व्या विशिष्टवेदमुपदिश्यान्यस्मा अन्ययानुपूर्व्या विशिष्टवेदमुपदिशतीति स्यात् । एककल्पीयायाः पूर्वस्या आनुपूर्व्या अपि स्मरणान्न तत्त्याग इति चेत् तत् किमीश्वरः कल्पान्तरीयां पूर्वामानुपूर्वीं व्यस्मार्षीत् ?**

ವೇದವು ಈಶ್ವರಕೃತ, ಅದರ ವರ್ಣಾದ್ಯಾನುಪೂರ್ವೀ ಪ್ರತಿಕಲ್ಪದಲ್ಲೂ ವಿಭಿನ್ನವಾಗಿದೆ, ಅನೇಕವಾಗಿದೆ. ಆ ಆ ಕಲ್ಪಗಳಲ್ಲಿ ಅದೇ ರೀತಿಯ ಆನುಪೂರ್ವೀ ಇರುವ ವೇದಗಳ ಅಧ್ಯಯನ-ಪಾರಾಯಣಾದಿಗಳೇ ಅಭ್ಯುದಯಕ್ಕೆ ಕಾರಣವಾಗುತ್ತವೆ, ಆನುಪೂರ್ವೀಯನ್ನು ಅನ್ಯಥಾ ಅಧ್ಯಯನ ಮಾಡಿದರೆ ಅದು ವಾಗ್ವಜ್ರದಂತೆ ಅನರ್ಥಕಾರಿ. ಹೀಗೆಂದು ಕಲ್ಪಿಸಬೇಕು.

ಇದರಿಂದ ಪ್ರತಿಕಲ್ಪದಲ್ಲಾಗುವ ಒಂದೇ ವಿಧದ ಅಭ್ಯುದಯ–ಅನರ್ಥಗಳಿಗೆ ಕಾರಣಗಳು ಬೇರೆಬೇರೆಯಾದಂತಾಗುತ್ತವೆ. ಆಗ ವಹ್ನಿಗೆ ತೃಣಾರಣಿಮಣಿಗಳಂತೆ ಅಭ್ಯುದಯ ಮತ್ತು ಅನರ್ಥಗಳಿಗೆ ಅನಿಯತ ಕಾರಣಕತ್ವವನ್ನು ಕಲ್ಪಿಸಬೇಕು. ಇದರಿಂದ ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ವಹ್ನಿಯಲ್ಲಿ ಕಾರ್ಯವೈಜಾತ್ಯವನ್ನು ಕಲ್ಪಿಸುವಂತೆ ಪ್ರಕೃತದಲ್ಲೂ ಕಲ್ಪ–ಕಲ್ಪದ ಅಭ್ಯುದಯಾದಿಕಾರ್ಯಗಳಲ್ಲೂ ವೈಜಾತ್ಯವನ್ನು ಕಲ್ಪಿಸಬೇಕು. ಇದೂ ಒಂದು ಕಲ್ಪನಾಗೌರವರೂಪ ಬಾಧಕತರ್ಕ.

ಇಷ್ಟು ಕಲ್ಪನೆಗಳೂ ದೋಷವಲ್ಲ, ಎಂದು ಪರಿಗಣಿಸಿ ಪ್ರತಿಕಲ್ಪದಲ್ಲೂ ವೇದಾನುಪೂರ್ವೀ ಭೇದವನ್ನು ಕಲ್ಪಿಸಿದರೆ ಹೀಗೆ ಆಪಾದನೆ ಮಾಡಬೇಕಾಗುತ್ತದೆ– ಈಶ್ವರನು ಒಂದೇ ಕಲ್ಪದಲ್ಲಿ ಒಬ್ಬನಿಗೆ ಒಂದು ವಿಧವಾದ ಆನುಪೂರ್ವೀವಿಶಿಷ್ಟವಾದ ವೇದವನ್ನು ಉಪದೇಶಿಸುತ್ತಾನೆ. ಮತ್ತೊಬ್ಬನಿಗೆ ಬೇರೊಂದುವಿಧದ ಆನುಪೂರ್ವೀವಿಶಿಷ್ಟವಾದ ವೇದವನ್ನು ಉಪದೇಶಿಸುತ್ತಾನೆ, ಎಂದೂ ಕಲ್ಪಿಸಬೇಕಾದೀತು.

ಹಾಗೇಕೆ ಮಾಡುತ್ತಾನೆ? ಆ ಕಲ್ಪದ ಮೊದಲ ಆನುಪೂರ್ವಿಯು ಈಶ್ವರನ ಸ್ಮರಣೆಯಲ್ಲಿರುವಾಗ ಅದನ್ನು ಏಕೆ ಬಿಡುತ್ತಾನೆ? ಅದೇ ಆನುಪೂರ್ವೀ ವಿಶಿಷ್ಟವಾದ ವೇದವನ್ನೇ ಎಲ್ಲರಿಗೂ ಹೇಳುತ್ತಾನೆ, ಎಂದು ಸಮಾಧಾನಿಸುವುದಾದಲ್ಲಿ ನಾವೂ ಕೇಳುತ್ತೇವೆ– "ಹಾಗಾದರೆ, ಈಶ್ವರನು ಹಿಂದಿನ ಕಲ್ಪದ ಆನುಪೂರ್ವಿಯನ್ನು ಈ ಕಲ್ಪದಲ್ಲಿ ಮರೆತನೇನು? ಮರೆತಿಲ್ಲವಾದರೆ, ಮತ್ತೇಕೆ ಹೊಸದಾದ ಆನುಪೂರ್ವಿಯನ್ನು ಈ ಕಲ್ಪದಲ್ಲಿ ಉಪದೇಶಿಸುತ್ತಾನೆ?" ಎಂದು.

## ನ್ಯಾಯದೀಪ

आनुपूर्व्याणीत्यस्य अभ्युदयकारणानि, अनर्थकारणानीत्यनयोश्च 'इति कल्प्यत्वादि'त्यनेन प्रत्येकमन्वयः। **यथावदिति।** तस्मिंस्तस्मिन् कल्प इत्यर्थः। **वाग्वज्रतयेति।** वाग्रूपवज्रतयेत्यर्थः।

"मन्त्रो हीनः स्वरतो वर्णतो वा मिथ्याप्रयुक्तो न तमर्थमाह।
स वाग्वज्रो यजमानं हिनस्ति यथेन्द्रशत्रुः स्वरतोऽपराधात्"॥

इत्यादेरिति भावः।

ಮೂಲದಲ್ಲಿರುವ, ಆನುಪೂರ್ವ್ಯಾಣಿ, ಅಭ್ಯುದಯ ಕಾರಣಾನಿ, ಅನರ್ಥಕಾರಣಾನಿ ಈ ಮೂರು ಪದಗಳಿಗೂ 'ಕಲ್ಪ್ಯತ್ವಾತ್' ಎಂಬ ಪದದೊಂದಿಗೆ ಅನ್ವಯ.

ವಾಗ್ವಜ್ರ, ಎಂದರೆ ವಾಗ್ರೂಪವಾದ ವಜ್ರ. ''ಸ್ವರ-ವರ್ಣಾದಿಗಳನ್ನು ವ್ಯತ್ಯಾಸಮಾಡಿ ವೇದಮಂತ್ರಗಳನ್ನು ಪಠಿಸಿದರೆ ಅದೇ ವಜ್ರಾಘಾತವಾಗಿ ಪರಿಣಮಿಸುತ್ತದೆ'' ಎಂಬ ಪ್ರಮಾಣಾನುಸಾರವಾಗಿ ಹೀಗೆ ಹೇಳಲಾಗಿದೆ.

## ನ್ಯಾಯದೀಪ

**अभ्युदयादीनि चेति ।** प्रतिकल्पं जायमानानि स्वर्गादीनीत्यर्थः । **विजातीयेति ।** भिन्नभिन्नानुपूर्वीरूपत्वाद् विजातीयकारणेत्यर्थः । **तार्णेति ।** तृणजन्याग्नावरणिजन्याग्नितो वैजात्यम्, आरणेयाग्नौ च तार्णाद्यग्नितो वैजात्यं यथा त्वन्मते तथेत्यर्थः । एतच्चाग्रे तृणादीनामेकशक्तिसाधनवादे द्वितीयपरिच्छेदे व्यक्तम् ।।

ಅಭ್ಯುದಯವೆಂದರೆ- ಕಲ್ಪ-ಕಲ್ಪಗಳಲ್ಲೂ ಆಗುವ ಸ್ವರ್ಗಾದಿ ಫಲಗಳು. ಅಭ್ಯುದಯಕ್ಕೆ ವಿಜಾತೀಯಕಾರಣಕಲ್ಪನೆ ಎಂದರೆ ಒಂದೊಂದು ಕಲ್ಪದಲ್ಲಿ ಬೇರೆಬೇರೆ ಆನುಪೂರ್ವೀವಿಶಿಷ್ಟವಾದ ವಿಲಕ್ಷಣವೇದಗಳೆಂಬ ಕಾರಣಗಳ ಕಲ್ಪನೆ, ಎಂದರ್ಥ. ತಾರ್ಣಾದ್ಯಗ್ನೌ ಎಂದರೆ, ತೃಣಜನ್ಯವಾದ ಅಗ್ನಿಯಲ್ಲಿ ಅರಣಿಜನ್ಯವಾದ ಅಗ್ನಿಗಿಂತ ವಿಲಕ್ಷಣವಾದ ಜಾತಿಯನ್ನೂ ಅದರಂತೆ, ಅರಣಿ-ಅಗ್ನಿಯಲ್ಲಿ ತಾರ್ಣಾಗ್ನಿಯಲ್ಲಿ ಇಲ್ಲದ ಜಾತಿಯನ್ನೂ ತಾರ್ಕಿಕರು ಹೇಗೆ ಕಲ್ಪಿಸುವರೋ ಅದರಂತೆ ಪ್ರತಿಸೃಷ್ಟಿಕಾಲದ ಅಭ್ಯುದಯಗಳಲ್ಲೂ ವೈಜಾತ್ಯವನ್ನು ಕಲ್ಪಿಸಬೇಕಾದೀತು. ಈ ವಿಷಯವು ಎರಡನೇ ಪರಿಚ್ಛೇದದ ಶಕ್ತಿವಾದದಲ್ಲಿ ಸ್ಫುಟವಾಗುತ್ತದೆ.

(ವಹ್ನಿಗೆ ತೃಣವೂ ಕಾರಣ, ಅರಣಿಯೂ ಕಾರಣವಾದಲ್ಲಿ ತೃಣವಿದ್ದಲ್ಲಿ ಅರಣಿ ಇಲ್ಲ, ಅರಣಿ ಇದ್ದಲ್ಲಿ ತೃಣವಿಲ್ಲ. ಹೀಗೆ ಪರಸ್ಪರ ವ್ಯಭಿಚಾರ. ಇದರ ಪರಿಹಾರಕ್ಕಾಗಿ ತೃಣಜನ್ಯವಾದ ವಹ್ನಿಯ ಜಾತಿಯೇ ಬೇರೆ, ಅರಣಿಜನ್ಯವಾದ ವಹ್ನಿಯ ಜಾತಿಯೇ ಬೇರೆ ಎಂದು ನೈಯಾಯಿಕರು ಕಲ್ಪಿಸುತ್ತಾರೆ.)

## ನ್ಯಾಯದೀಪ

ननूक्तकल्पनाचतुष्टयमपि न दोषायेत्यतः प्रागुक्तापाद्यस्यानिष्टत्व-द्योतनाय विपक्षे बाधकमाह—**अन्यथेति ।** उक्तकल्पनाचतुष्टयस्य गौरवतया दोषत्वानभ्युपगम इत्यर्थः । **इति स्यादिति ।** गौरवस्य

**तवादोषत्वादिति भावः। वैलक्षण्यमाशङ्क्य समं प्रकृतेऽपीति भावेनाह—एकेत्यादिना ॥**

1. ವೇದದಲ್ಲಿ ಕಲ್ಪಾನುಸಾರೇಣ ಆನುಪೂರ್ವೀಭೇದ ಕಲ್ಪನೆ. 2.ಅಭ್ಯುದಯಕ್ಕೆ ಕಲ್ಪಾನುಸಾರೇಣ ವಿಭಿನ್ನಕಾರಣ ಕಲ್ಪನೆ. 3.ವಿಭಿನ್ನ-ಆನುಪೂರ್ವೀಕ ವೇದಗಳಿಗೆ, ಕಲ್ಪಭೇದೇನ ಅನ್ಯಥಾಪಠಿತವಾದಾಗ ಅನರ್ಥಹೇತುತ್ವ ಕಲ್ಪನೆ. 4.ಅಭ್ಯುದಯಾದಿಗಳಲ್ಲಿ ವೈಜಾತ್ಯಕಲ್ಪನೆ ಈ ನಾಲ್ಕೂ ಕಲ್ಪನೆಗಳು ದೋಷಗಳೇ ಅಲ್ಲ ಎಂದು ಹೇಳಿದರೆ ''ಯದಿ ವೇದಃ ಪೌರುಷೇಯಃ ಸ್ಯಾತ್ ತರ್ಹಿ ಏತಾವತ್ ಕಲ್ಪ್ಯಂ ಸ್ಯಾತ್'' ಎಂಬ ಈ ಬಾಧಕ ತರ್ಕದಲ್ಲಿ ಆಪಾದ್ಯಕ್ಕೆ ಅನಿಷ್ಟತ್ವವನ್ನು ತಿಳಿಸಲು ವಿಪಕ್ಷೇ ಬಾಧಕವನ್ನು 'ಅನ್ಯಥಾ' ಎಂಬಲ್ಲಿ ಹೇಳಲಾಗಿದೆ. ಅನ್ಯಥಾ ಎಂದರೆ, ನಾಲ್ಕೂ ವಿಧದ ಕಲ್ಪನೆಗಳು ದೋಷಗಳೆಂದು ಒಪ್ಪದಿದ್ದಲ್ಲಿ ಎಂದರ್ಥ. 'ಇತಿ ಸ್ಯಾತ್' ಎಂದರೆ ನಿಮಗೆ (ತಾರ್ಕಿಕರಿಗೆ) ಗೌರವವು ದೋಷವಲ್ಲವಾದ ಕಾರಣ (ಒಂದೇ ಕಲ್ಪದಲ್ಲಿ ಒಂದೊಂದು ಆನುಪೂರ್ವೀಘಟಿತ ವೇದವನ್ನು ಈಶ್ವರ ಒಬ್ಬೊಬ್ಬರಿಗೆ ಹೇಳುತ್ತಾನೆ, ಎಂದೂ ಹೇಳಬಹುದು.) ಎಂದರ್ಥ.

## ಅವತಾರಿಕೆ

**''नहि धर्मादिसिद्धिः स्यान्नित्यवाक्यं विना क्वचित् ।''**

**इत्यनुभाष्यायुक्तबाधकश्चाह—धर्मादीति ।**

ಅನುವ್ಯಾಖ್ಯಾನದ 'ನಹಿ ಧರ್ಮಾದಿಸಿದ್ಧಿಃ' ಎಂಬ ಶ್ಲೋಕಾರ್ಧದಲ್ಲಿ 'ನಿತ್ಯವಾಕ್ಯವಿಲ್ಲದೆ ಧರ್ಮಾದಿಗಳ ನಿಶ್ಚಯವಾಗುವುದಿಲ್ಲ' ಎನ್ನಲಾಗಿದೆ. ಅಲ್ಲಿ ಸೂಚಿತ ಬಾಧಕವನ್ನೂ 'ಧರ್ಮಾದಿ' ಎಂಬ ಮುಂದಿನ ಮೂಲದಲ್ಲಿ ಹೇಳಲಾಗಿದೆ.

**धर्मादिसिद्धिश्च न स्यात् । प्रकारान्तरेण तदसिद्धेरुक्तत्वात् । वेदस्य पौरुषेयत्वे ईश्वरस्य बुद्धजिनादिना, वेदस्य च बुद्धाद्यागमादिना तुल्यताया अपरिहार्यत्वेन वेदप्रामाण्यं च न स्यात् ॥**

ವೇದಕ್ಕೆ ಅಪೌರುಷೇಯತ್ವವನ್ನು ಅಂಗೀಕರಿಸದಿದ್ದರೆ ಅತೀಂದ್ರಿಯ ಪದಾರ್ಥಗಳ ನಿಶ್ಚಯವಾಗಲಿಕ್ಕಿಲ್ಲ. ಪ್ರತ್ಯಕ್ಷಾದಿಗಳಿಂದ ಧರ್ಮಾದಿಗಳ ನಿರ್ಧಾರವಾಗುವುದಿಲ್ಲ ಎಂದು ಹಿಂದೆಯೇ ಹೇಳಲಾಗಿದೆ. ವೇದವು ಪೌರುಷೇಯವಾದಲ್ಲಿ ಅದನ್ನು ರಚಿಸಿರುವ ಈಶ್ವರನು ಬುದ್ಧ-ಜಿನಾದಿಗಳಂತಾದಾನು. ವೇದವೂ ಬೌದ್ಧಾಗಮದಂತಾದೀತು. ಇದು ಅಪರಿಹಾರ್ಯವಾಗಿ ವೇದವೂ ಅಪ್ರಮಾಣವಾದೀತು.

## ನ್ಯಾಯದೀಪ

यदि वेदः पौरुषेयः स्यादित्यनुवृत्तिः । **उक्तत्वादिति** । नच हेतुत्रयेऽपि विशेषणासिद्धिरित्यादिग्रन्थेनेत्यर्थः । अन्यत्रादृष्टस्य सर्वज्ञत्वस्य कल्पनमित्यत्र तत्त्वनिर्णयटीकायां 'तर्हि जिनादावपि तत् स्या' दित्यापादितं साम्यमीश्वरवादेऽपि सममिति भावेनाह—**वेदस्य पौरुषेयत्व इति** । ईश्वरकृतत्व इत्यर्थः । **बुद्धजिनादिनेति** । ईश्वर-सार्वज्ञ्यवत् बुद्धादावपि तद्भावस्यापादनसम्भवादिति भावः ।।

''ಅನ್ಯತ್ರಾದೃಷ್ಟಸ್ಯ'' ಎಂಬ ತತ್ತ್ವನಿರ್ಣಯಟೀಕಾದಲ್ಲಿ, ಇತರ ಯಾರಲ್ಲೂ ಕಾಣದ ಸರ್ವಜ್ಞತ್ವವನ್ನು ಈಶ್ವರನಲ್ಲಿ ಕಲ್ಪಿಸಿದರೆ ಜಿನಾದಿಗಳಲ್ಲೂ ಹೀಗೆಯೇ ಕಲ್ಪನೆ ಮಾಡಬೇಕಾಗುತ್ತದೆ, ಎಂದು ಆಪಾದಿಸಲಾಗಿದೆ. ಈ ಸಾಮ್ಯಾಪಾದನೆಯು ಈಶ್ವರವಾದದಲ್ಲೂ ಇದೆ, ಎಂದು 'ವೇದಸ್ಯ ಪೌರುಷೇಯತ್ವ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ಈಶ್ವರವಾದದಲ್ಲಿ ಈಶ್ವರನಿಗೆ ಸರ್ವಜ್ಞತ್ವಾದಿಗಳನ್ನು ಕಲ್ಪನೆ ಮಾಡುವಂತೆ ಬೌದ್ಧವಾದದಲ್ಲಿ ಬುದ್ಧನಿಗೂ ಸರ್ವಜ್ಞತ್ವವನ್ನು ಕಲ್ಪಿಸಬೇಕಾಗುತ್ತದೆ. ಬುದ್ಧ ಸರ್ವಜ್ಞನಲ್ಲವಾದರೆ ಈಶನೂ ಸರ್ವಜ್ಞನಲ್ಲ. ತತ್ಪ್ರಣೀತವಾದ ವೇದವೂ ಅಪ್ರಮಾಣವಾದೀತು.

## ಅವತಾರಿಕೆ

''वेदस्य प्रामाण्यं महाजनपरिग्रहादवधार्यते'' इति मण्युक्तमाशङ्क्य निराह—**नचेति** ।

''ಮಹಾಜನರು ಸ್ವೀಕರಿಸಿರುವುದರಿಂದ ವೇದಕ್ಕೆ ಪ್ರಾಮಾಣ್ಯವು ನಿರ್ಧಾರವಾಗುತ್ತದೆ'' ಎಂದು ಮಣಿಗ್ರಂಥದಲ್ಲಿದೆ. (ಪು.370) ಇದನ್ನೇ ಆಶಂಕೆ ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**नच वौद्धागमाद् वेदे महाजनपरिग्रहो विशेषः । महत्त्वस्य पूज्यत्वरूपत्वे वेदपरिग्रहीतॄणां पूज्यत्वस्याद्याप्यसिद्धेः । सङ्ख्याधिक्य-रूपत्वे सन्दिग्धासिद्धेः । तुरुष्कागमादौ व्यभिचाराच्च ।**

ಬೌದ್ಧಾಗಮಸಾಮ್ಯವು ವೇದಕ್ಕಿಲ್ಲ. 'ವೇದದಲ್ಲಿ ಮಹಾಜನಪರಿಗ್ರಹೀತತ್ವ' ಎಂಬ

ವಿಶೇಷವಿದೆ. ಅದು ಬೌದ್ಧಾಗಮದಲ್ಲಿ ಇಲ್ಲ, ಎಂದರೆ ಇದು ಸರಿಯಲ್ಲ. 'ಮಹಾಜನ' ಎಂಬಲ್ಲಿ ಜನರಲ್ಲಿರುವ ಮಹತ್ವವೆಂದರೇನು? ಪೂಜ್ಯತ್ವರೂಪವಾದ ಮಹತ್ವವನ್ನು ವೇದಬಾಹ್ಯರು ವೇದಪರಿಗ್ರಹೀತೃಗಳಿಗೆ ಅಂಗೀಕರಿಸುವುದಿಲ್ಲ. ಇನ್ನು ಸಂಖ್ಯೆಯಲ್ಲಿ ಮಹತ್ವವು ಸಂದಿಗ್ಧ. ವೈದಿಕರ ಸಂಖ್ಯೆ ಹೆಚ್ಚೋ ಬೌದ್ಧಾದಿ ಅವೈದಿಕರ ಸಂಖ್ಯೆಯು ಹೆಚ್ಚೋ ಎಂದು ನಿರ್ಧರಿಸಲಾಗದು. ತುರುಕರ 'ಕುರಾನನ್ನು' ಅಧಿಕಸಂಖ್ಯೆಯಲ್ಲಿ ಪರಿಗ್ರಹಿಸುವವರು ಇದ್ದಾರೆ. ಅದು ಪ್ರಮಾಣವಲ್ಲ. ಆದ್ದರಿಂದ ಅಲ್ಲಿ ವ್ಯಭಿಚಾರವೂ ಇದೆ.

## ನ್ಯಾಯದೀಪ

**''अपौरुषेयत्वाद् वेदस्य'' इत्येतद्व्याख्यावसरे तत्त्वनिर्णयटीकोक्त-खण्डनरीतिमनुसृत्य महत्त्वं विकल्प्य निराह— महत्त्वस्येति । अद्यापीति । पौरुषेयतया वेदप्रामाण्यविवादवलायामेव न । किन्तु महाजनपरिग्रहात् तत्प्रामाण्यमित्युक्तिदशायामपीत्यर्थः । सन्दिग्धेति । बौद्धेषु वा वैदिकेषु वा सङ्ख्याप्रकर्षस्यानिर्णयादिति भावः ।।**

ಮೂಲದಲ್ಲಿ 'ಅದ್ಯಾಪಿ' ಎಂದರೆ ಅಪೌರುಷೇಯವಾದ ಕಾರಣ ವೇದದ ಪ್ರಾಮಾಣ್ಯ ಹೇಗೆ? ಎಂಬ ವಿವಾದಕಾಲದಲ್ಲಿ ಮಾತ್ರವಲ್ಲ. ಹೊರತು, ಮಹಾಜನಪರಿಗ್ರಹದಿಂದಾಗಿ ವೇದಕ್ಕೆ ಪ್ರಾಮಾಣ್ಯ, ಎಂದು ತಾರ್ಕಿಕರು ವಾದಿಸುವ ಕಾಲದಲ್ಲೂ ವೇದಪರಿಗ್ರಹೀತೃಗಳಿಗೆ ಮಹತ್ವವು ಸಿದ್ಧವಾಗಿಲ್ಲ, ಎಂದರ್ಥ.

### ಅವತಾರಿಕೆ

**यत्तु कुसुमाञ्जलौ द्वितीयपरिच्छेदे ''हेतुदर्शनशून्यैर्ग्रहणाध्ययन-धारणार्थानुष्ठानादिरेव महाजनपरिग्रहः'' इत्युक्त्वा सप्तघटिकान्तर-भोजनादिरूपजीविकारूपो हेतुर्बौद्धेष्वस्ति न वैदिकेष्वित्युक्तम् तदाशङ्क्य निराह— सप्तेति ।।**

ಉದಯನಾಚಾರ್ಯಕೃತ ಕುಸುಮಾಂಜಲಿ ಗ್ರಂಥದ ಎರಡನೆಯ ಪರಿಚ್ಛೇದದಲ್ಲಿ ಮಹಾಜನಪರಿಗ್ರಹೀತತ್ವವನ್ನು ಹೀಗೆ ನಿರೂಪಿಸಲಾಗಿದೆ— ವೇದವಿಹಿತವಾದ ಕರ್ಮಗಳನ್ನು ಮತ್ತು ವೇದದ ಉಪದೇಶ-ಅಧ್ಯಯನ-ಧಾರಣೆಗಳನ್ನು ನಿಮಿತ್ತಾಂತರಗಳಿಲ್ಲದೆ, ವಿಹಿತವಾದುದು ಎಂದಿಷ್ಟೇ ಕಾರಣದಿಂದ ಯಾರು ಅನುಷ್ಠಾನ ಮಾಡುವರೋ ಅವರೇ ಮಹಾಜನರು. ಅವರಿಂದ

ಆದರಿಸಲ್ಪಡುವುದೇ ಮಹಾಜನ—ಪರಿಗ್ರಹ. ಹೀಗೆ ಹೇಳಿ, ಪ್ರಾತಃಸಪ್ತಘಟಿಕಾ ಮಧ್ಯದಲ್ಲಿ ಭೋಜನಕ್ಕೆ ಸುಖಜೀವನ ರೂಪವಾದ ನಿಮಿತ್ತ ಬೌದ್ಧರಲ್ಲಿದೆ, ವೈದಿಕರಲ್ಲಿ ವಿಹಿತಕರಣಕ್ಕೆ ಇಂತಹ ನಿಮಿತ್ತ ಇಲ್ಲ, ಎನ್ನಲಾಗಿದೆ. ಇದನ್ನು ಶಂಕೆ ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**सप्तघटिकाभ्यन्तर-भोजनादिरूप-जीविकादिहेतुदर्शनशून्यत्वरूपत्वे वैदिकेष्वपि केषुचिज्जीविकादिहेतोर्दर्शनात् । बौद्धादिष्वपि केषुचित् तददर्शनाच्च ।**

ಬೌದ್ಧಧರ್ಮವನ್ನು ಅವಲಂಬಿಸಲು ನಿಮಿತ್ತಗಳಿವೆ. ಆ ಧರ್ಮದಲ್ಲಿದ್ದರೆ ಬೆಳಿಗ್ಗೆ ಏಳು ಘಳಿಗೆಯ ಸಮಯದಲ್ಲಿ ಭೋಜನ, ಅಭ್ಯಂಜನದ ಸೌಲಭ್ಯವಿದೆ. ಧಾರ್ಮಿಕ ಕಟ್ಟುಪಾಡುಗಳಿಲ್ಲ. ಪಾಷಾಣಭೇದನಾದಿರೂಪ ಅದ್ಭುತಕಾರ್ಯಗಳನ್ನೂ ಮಾಡುವ ಮೂಲಕ ಜನರನ್ನು ವಂಚಿಸಬಹುದು, ಪವಾಡಾದಿಕುಹಕಗಳನ್ನು ನಡೆಸಿ ಜನಪ್ರಿಯರಾಗಬಹುದು. ಇಂತಹ ನಿಮಿತ್ತಗಳಿಂದ ಜೈನ–ಬೌದ್ಧಾದಿ ಧರ್ಮಗಳನ್ನು ಅವಲಂಬಿಸಲಾಗುತ್ತದೆ. ಆದ್ದರಿಂದ ಅದನ್ನು ಅನುಸರಿಸುವವರು ಮಹಾಜನರಲ್ಲ, ಹೀಗೆ ಹೇಳುವುದು ಉಚಿತವಲ್ಲ. ವೈದಿಕರಲ್ಲೂ ಅನೇಕರು ತಮ್ಮ ಜೀವನ ನಿರ್ವಹಣೆಗಾಗಿ, ಸ್ವಾರ್ಥದಿಂದ ವೈದಿಕಧರ್ಮವನ್ನು ಅನುಸರಿಸುವವರಿದ್ದಾರೆ. ಬೌದ್ಧರಲ್ಲೂ ಕೆಲವರು ಇಂತಹ ಕ್ಷುಲ್ಲಕಸ್ವಾರ್ಥ ಇಲ್ಲದೆ ಧರ್ಮವನ್ನು ಅನುಸರಿಸುವವರಿದ್ದಾರೆ. ಆದ್ದರಿಂದ ಯಾರು ಮಹಾಜನರು ಎಂದು ನಿರ್ಧರಿಸುವುದು ಕಷ್ಟದ ಕೆಲಸ.

## ನ್ಯಾಯದೀಪ

**सप्तेति ।** सप्तघटिकाभ्यन्तरे=सप्तघटिकामध्ये प्रातःकाले भोजनाभ्यञ्जनादिरूपजीविकाहेतुर्येषु न दृश्यते ते महान्त इत्यर्थः । जीविकादीत्यादिपदेन [१]राग-कुहकवञ्चनादिरूप–कुसुमाञ्जल्युक्तहेत्वन्तरग्रहः । **दर्शनादिति ।** तथाच भागासिद्धिरिति भावः । व्यभिचारञ्चाह— **बौद्धेति ।।**

ಸಪ್ತಘಟಿಕಾಭ್ಯಂತರೇ=ಏಳು ಘಳಿಗೆಯ ಕಾಲದಲ್ಲಿ ಬೆಳಿಗ್ಗೆ ಭೋಜನ–ಅಭ್ಯಂಜನ

१. इतः पतितानामपि अनुप्रवेशः इति अनन्यगतिकाः। भक्ष्याद्यनियम इति रागिणः । आदित्यस्तम्भनं, पाषाणपाटनं, शाखापातः, भूतावेशः, प्रतिमाजल्पनम्, धातुवादः इत्यादि वञ्चनात् कुहकवञ्चिताः तान् परिगृह्णन्ति इति सम्भाव्यते । (कुसु.द्वि.स्तव.)

ರೂಪವಾದ ಐಷಾರಾಮದ ಬದುಕಿನ ಆಸೆ ಯಾರಲ್ಲಿ ಕಾಣುವುದಿಲ್ಲವೋ ಅವರು ಮಹಾತ್ಮರು. ಮೂಲದ ಜೀವಿಕಾದಿ ಎಂಬಲ್ಲಿ ಆದಿಪದದಿಂದ ರಾಗ, ಮಂತ್ರವಾದ, ವಂಚನಾದಿರೂಪವಾದ ಕುಸುಮಾಂಜಲಿಯಲ್ಲಿ ಹೇಳಲಾದ ನಿಮಿತ್ತಗಳನ್ನು ಸೂಚಿಸಲಾಗಿದೆ.

## ಅವತಾರಿಕೆ

**महत्त्वं निरस्य तत्परिगृहीतत्वं विकल्प्य निराह—नापीति ।**

ಈವರೆಗೆ ವೈದಿಕರಿಗೆ ನೈಯಾಯಿಕರು ಹೇಳಿರುವ ಮಹತ್ವವನ್ನು ನಿರಾಕರಿಸಲಾಗಿದೆ. ಮುಂದೆ ತತ್‌ಪರಿಗೃಹೀತತ್ವವನ್ನು ವಿಕಲ್ಪಮಾಡಿ ನಿರಾಕರಿಸಲಾಗಿದೆ.

**नापि सर्वसम्मतवैद्यशास्त्रपरिगृहीतार्थकत्वं महाजनपरिगृहीतत्वम्, वैद्यशास्त्रे रोगशान्त्यर्थं वैदिककर्मविशेषविधानादिति वाच्यम् । बौद्धानुसारिवैद्यशास्त्रे तच्छान्त्यर्थं बौद्धागमोक्तकर्मणोऽपि विधानात् ॥**

ಮಹಾಜನ ಪರಿಗೃಹೀತತ್ವವೆಂದರೆ—ಸರ್ವಸಮ್ಮತ-ವೈದ್ಯಶಾಸ್ತ್ರದಿಂದ ಅಂಗೀಕೃತವಾಗಿರುವ ಅರ್ಥವುಳ್ಳದ್ದು ಎಂದು ಅರ್ಥ. ವೈದ್ಯಶಾಸ್ತ್ರದಲ್ಲಿ ರೋಗಪರಿಹಾರಕ್ಕಾಗಿ ವೇದದಲ್ಲಿ ಹೇಳಿರುವ ಧನ್ವಂತರೀಮಂತ್ರದ ಹತ್ತುಸಾವಿರ-ಜಪಹೋಮಾದಿಕರ್ಮಗಳನ್ನು ಹೇಳಲಾಗಿದೆ. ಹೀಗೆ ವೈದ್ಯಶಾಸ್ತ್ರ ಸಮ್ಮತವಾಗಿರುವುದೇ ಮಹಾಜನಪರಿಗೃಹೀತತ್ವ, ಎಂದರೆ-ಇದೂ ಸರಿಯಲ್ಲ. ಬೌದ್ಧಾನುಸಾರಿ ವೈದ್ಯಶಾಸ್ತ್ರದಲ್ಲಿ ರೋಗಶಾಂತಿಗಾಗಿ ಬೌದ್ಧಾಗಮಗಳಲ್ಲಿ ಹೇಳಲಾದ ಕರ್ಮಗಳನ್ನು ಹೇಳಲಾಗಿದೆ. ಹೀಗೆ ಬೌದ್ಧಾಗಮದಲ್ಲೂ ಇಂತಹ ಮಹಾಜನ ಪರಿಗೃಹೀತತ್ವವು ಇದೆ.

## ನ್ಯಾಯದೀಪ

वैद्यशास्त्रपरिगृहीतार्थकत्वं व्यनक्ति—**वैद्यशास्त्र इति ।** धान्वन्तरमन्त्रैरयुतहोमजपादिरूपवैदिककर्मेत्यर्थः । **बौद्धागमोक्तेति ।** ज्वरादिशान्त्यर्थं बुद्धार्चनादिकर्मण इत्यर्थः ।

ಜ್ವರಾದಿಶಾಂತಿಗಾಗಿ ಬುದ್ಧಾರ್ಚನಾದಿಕರ್ಮಗಳನ್ನು ಬೌದ್ಧಾಗಮಗಳಲ್ಲಿ ಹೇಳಲಾಗಿದೆ.

**नापि सर्वसम्मतव्याकरणपरिपालनीयत्वम् । जैनव्याकरणपरिपालनीयत्वस्य जैनागमेऽपि सत्त्वात् ॥**

ಸರ್ವಸಮ್ಮತವಾದ ವ್ಯಾಕರಣಶಾಸ್ತ್ರದಿಂದ ರಕ್ಷಿಸಲ್ಪಟ್ಟಿರುವುದೇ ಮಹಾಜನಪರಿಗ್ರಹೀತತ್ವ ಎನ್ನುವುದೂ ಸರಿಯಲ್ಲ. ಜೈನವ್ಯಾಕರಣದ ರಕ್ಷಣೆ ಜೈನ-ಆಗಮಕ್ಕೂ ಇದೆ. ಅದೂ ಮಹಾಜನಪರಿಗ್ರಹೀತವೆಂದಾದೀತು.

## ನ್ಯಾಯದೀಪ

**जैनेति ॥**

**''इन्द्रश्चन्द्रः काशकृत्स्नः पिशली शाकटायनः ।**
**पाणिन्यमरजैनेन्द्रा जयन्त्यष्टादिशाब्दिकाः ॥''**

**इति कविकल्पद्रुमोक्तेस्तस्यापि व्याकरणकर्तृत्वप्रसिद्धेरिति भावः ।**

ಇಂದ್ರ, ಚಂದ್ರ, ಕಾಶಕೃತ್ಸ್ನ, ಪಿಶಲೀ, ಶಾಕಟಾಯನ, ಪಾಣಿನಿ, ಅಮರ, ಜೈನೇಂದ್ರ ಈ ಎಂಟುಮಂದಿ ಶಾಬ್ದಿಕರು, ಎಂದು ಕವಿಕಲ್ಪದ್ರುಮದಲ್ಲಿದೆ. ಅಲ್ಲಿ ಜೈನೇಂದ್ರನೂ ಸೇರಿರುವುದರಿಂದ ಜೈನವ್ಯಾಕರಣವೂ ಇದೆ.

**नच सर्वदर्शनानुमतार्थकत्वम् । वेदोक्तसत्यभाषणादीनां धर्मत्वस्य सर्वदर्शनानुमतत्वादिति वाच्यम् । बौद्धोक्ताहिंसाधर्मत्वस्यापि सर्वैः स्वीकारात् । साङ्ख्यैर्वैदिकहिंसाया अधर्मत्वस्वीकाराच्च ॥**

ಯಾವ ಗ್ರಂಥೋಕ್ತವಾದ ಧರ್ಮವು ಸಕಲದರ್ಶನಗಳಿಗೂ ಸಮ್ಮತವಾಗಿದೆಯೋ ಅಂತಹ ಗ್ರಂಥವೇ ಮಹಾಜನಪರಿಗ್ರಹೀತ. ವೇದೋಕ್ತವಾದ ಸತ್ಯಭಾಷಣ, ಅಹಿಂಸೆಗಳು ಸರ್ವರಿಗೂ ಸಮ್ಮತವಾಗಿವೆ. ಆದ್ದರಿಂದ ವೇದವು ಮಹಾಜನ ಪರಿಗ್ರಹೀತವಾದುದು, ಎನ್ನುವುದೂ ಸರಿಯಲ್ಲ. ಬೌದ್ಧಾಗಮೋಕ್ತವಾದ ಅಹಿಂಸೆ ಎಂಬ ಧರ್ಮವೂ ಸರ್ವಸಮ್ಮತವಾಗಿದೆ. ವೇದೋಕ್ತವಾದರೂ ಯಾಗೀಯಹಿಂಸೆಯನ್ನು ಸಾಖ್ಯರು ಅಧರ್ಮವೆನ್ನುತ್ತಾರೆ. ಹೀಗೆ ಈ ಹೇತುವಿಗೆ ವ್ಯಭಿಚಾರ ಮತ್ತು ಅಸಿದ್ಧಿ ಎಂಬ ಎರಡೂ ದೋಷಗಳು ಇವೆ.

## ನ್ಯಾಯದೀಪ

**व्यभिचारासिद्धी क्रमेणाह—बौद्धेति । साङ्ख्यैरिति ॥**

ಮೇಲೆ ಹೇಳಿರುವ ಮಹಾಜನಪರಿಗ್ರಹೀತತ್ವಹೇತುವಿಗೆ ಬೌದ್ಧಾಗಮದಲ್ಲಿ ವ್ಯಭಿಚಾರ ಮತ್ತು ವೇದದಲ್ಲಿ ಅಸಿದ್ಧಿ.

**नच मन्त्रायुर्वेदादौ संवादित्वम् । एकदेशसंवादित्वस्य बौद्धोक्ताग्निस्तम्भादिकर्मस्वपि दर्शनात् । विसंवादाभावस्य च वेदेऽप्यभावात् ।।**

ವೈದಿಕಮಂತ್ರ ಪಠನದಿಂದ ಜ್ವರಶಾಂತಿಯಾಗುತ್ತದೆ ಎಂದು ಆಯುರ್ವೇದದಲ್ಲಿದೆ. ಹಾಗೆ ಮಾಡಿದಾಗ ಜ್ವರವಾಸಿಯಾಗಿರುವುದು ಕಂಡಿದೆ. ಹೀಗೆ ವೇದಮಂತ್ರಗಳಿಗೆ ಫಲಸಂವಾದವು ಇರುವುದರಿಂದ ವೇದವು ಪ್ರಮಾಣವೆನ್ನುವುದೂ ಯುಕ್ತವಲ್ಲ. ಬೌದ್ಧೋಕ್ತವಾದ ಅಗ್ನಿಸ್ತಂಭನ ವಿದ್ಯೆಗೂ ಫಲ ಸಂವಾದ ಇದೆ. ಆದ್ದರಿಂದ ವ್ಯಭಿಚಾರ. ಫಲವಿಸಂವಾದಾಭಾವವನ್ನು ಹೇತು ಮಾಡಿದರೆ ಬೌದ್ಧಾಗಮದಲ್ಲಿ ವ್ಯಭಿಚಾರವು ಪರಿಹಾರವಾದರೂ ವೇದದಲ್ಲಿ ಅಸಿದ್ಧಿದೋಷವಿದೆ. ವೇದೋಕ್ತ ಕೆಲವು ಕರ್ಮಗಳೂ ಫಲವಿಸಂವಾದಿಯಾಗಿವೆ.

**तस्मादपौरुषेयवेदपरिग्रहादेव वैदिकानां पूज्यत्वम् । नतु तत्परिग्रहाद् वेदस्य प्रामाण्यम् ।।**

ಆದ್ದರಿಂದ ಅಪೌರುಷೇಯವಾದ ವೇದವನ್ನು ಅವಲಂಬಿಸಿರುವ ಕಾರಣದಿಂದ ವೈದಿಕರಿಗೇ ಪೂಜ್ಯತ್ವ ಹೊರತು, ವೈದಿಕರಿಂದ ಪರಿಗೃಹೀತವಾದುದರಿಂದ ವೇದಕ್ಕೆ ಪ್ರಾಮಾಣ್ಯವಲ್ಲ. ಹೀಗೆ, ಮಹಾಜನಪರಿಗೃಹೀತತ್ವ ಹೇತುವಿನಿಂದ ವೇದಕ್ಕೆ ಪ್ರಾಮಾಣ್ಯವನ್ನು ನಿರ್ಧರಿಸಲಾಗದು.

**एतदप्युक्तं ''गौरवदोषेणेति ।'' बौद्धागमतुल्यत्वेन, विपरीत-लक्षणया लाघवदोषेणेत्यर्थः । तस्मात् पौरुषेयत्वे वेदस्य बौद्धागमतौल्यमेवेति सुस्थ एवानुकूलतर्कः ।।**

ಇದುವರೆಗೆ ಹೇಳಿದ ಬೌದ್ಧಾಗಮಸಾಮ್ಯವಿಷಯವೂ 'ಗೌರವದೋಷೇಣ' ಎಂಬ ಆಚಾರ್ಯರ ಮಾತಿನಿಂದ ಸೂಚಿತವಾಗಿವೆ. ವೇದವೂ ಬೌದ್ಧಾಗಮತುಲ್ಯವಾದುದರಿಂದ ಗೌರವದೋಷೇಣ=ಲಾಘವದೋಷದಿಂದ (ಗೌರವ ಪದದ ವಿಪರೀತಲಕ್ಷಣಯಾ ಲಭ್ಯಾರ್ಥ.) ಅರ್ಥಾತ್ ಅಪ್ರಯೋಜಕತ್ವರೂಪದೋಷದಿಂದಾಗಿ, ಎಂದರ್ಥ.

ಹೀಗೆ, ವೇದವು ಪೌರುಷೇಯವಾದರೆ ಅದು ಬೌದ್ಧಾಗಮದಂತೆಯೇ ಆದೀತು, ಎಂಬ ತರ್ಕವು ಬಾಧಕವಾಗಿರುವುದರಿಂದ ಅಪೌರುಷೇಯತ್ವಹೇತುವಿಗೆ ಅನುಕೂಲತರ್ಕವಿದೆ.

## ನ್ಯಾಯದೀಪ

**एतदपीति ।** बौद्धाद्यागमसाम्यमित्येतदपीत्यर्थः । लाघवदोषेण=अप्रयोजकतापत्तिरूपदोषेणेत्यर्थः । तत्र हेतुः बौद्धाद्यागमतुल्यत्वेनेति ।।

('ಬುದ್ಧಾದ್ಯಾಗಮ....' ಎಂದು ಮೂಲಪಾಠ ಕೆಲವೆಡೆ. ಆದರೆ ರಾಯರ ವ್ಯಾಖ್ಯಾನದಂತೆ ''ಬೌದ್ಧಾದ್ಯಾಗಮತುಲ್ಯತ್ವೇನ'' ಎಂಧು.)

## ವೇದಪೌರುಷೇಯತ್ವ ಶ್ರುತಿವಿರುದ್ಧ

### ಅವತಾರಿಕೆ

वेदस्य पौरुषेयत्वे तत्त्वनिर्णयाद्युक्तश्रुत्यादिविरोधं च बाधकमाह- **किञ्चेति ।।**

ವೇದಪೌರುಷೇಯತ್ವಕ್ಕೆ ತತ್ತ್ವನಿರ್ಣಯಾದಿ ಗ್ರಂಥಗಳಲ್ಲಿ ಹೇಳಿರುವ ಶ್ರುತಿವಿರೋಧವನ್ನು ಮೂಲದಲ್ಲಿ ಹೇಳಲಾಗಿದೆ.

किञ्च ''वाचा विरूप नित्यया, श्रुतिर्वाव नित्या । अनित्या वा व स्मृतयो याश्चान्या वाचः'' इत्यादिश्रुत्या,

''अनादिनिधना नित्या वागुत्सृष्टा स्वयंभुवा ।''

''नित्या वेदाः समस्ताश्च शाश्वता विष्णुबुद्धिगाः''

इत्यादिस्मृत्या च विरोधः ।।

ವೇದಪೌರುಷೇಯತ್ವವು ''ವಾಚಾ ವಿರೂಪ ನಿತ್ಯಯಾ'' ''ಶ್ರುತಿರ್ವಾವ ನಿತ್ಯಾ'' ಇತ್ಯಾದಿ ಶ್ರುತಿಗಳಿಗೂ ''ಅನಾದಿನಿಧನಾ ನಿತ್ಯಾ'' ''ನಿತ್ಯಾ ವೇದಾಃ'' ಇತ್ಯಾದಿ ಸ್ಮೃತಿಗಳಿಗೂ ವಿರುದ್ಧವಾಗಿದೆ.

## ನ್ಯಾಯದೀಪ

''तस्मै नूनमभिद्यवे वाचा विरूप नित्यया ।

वृष्णे चोदस्व सुष्टुतिम्''

**इति मन्त्रस्यायमर्थः– अभितो द्यौः=प्रकाशो यस्यासावभिद्युः, तस्मा अभिद्यवे, वृष्णे=वर्षित्रे नूनं=निश्चितम् । हे विरूप ! नित्यया वाचा वेदलक्षणया सुष्टुतिं=शोभनां स्तुतिं चोदस्व-चोदयस्व=प्रेरय, कुर्विति विरूपमृषिं प्रत्युच्यते ।।**

ಪೂರ್ಣಶ್ರುತಿಪಾಠ ಹೀಗೆ—

ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ ।

ವೃಷ್ಣೇ ಚೋದಸ್ವ ಸುಷ್ಟುತಿಮ್ ।

ಈ ಮಂತ್ರದ ಅರ್ಥ ಹೀಗೆ— ಅಭಿತಃ=ಸುತ್ತಲೂ ದ್ಯೌಃ=ಪ್ರಕಾಶವು ಯಾರಿಗಿದೆಯೋ ಅಂತಹವನು 'ಅಭಿದ್ಯು'. ಅಂತಹ, ವೃಷ್ಣೇ=ಅಭೀಷ್ಟಗಳನ್ನು ಸುರಿಸುವ ಪರಮಾತ್ಮನಿಗೆ, ಹೇ ವಿರೂಪ=ಎಲೈ ವಿರೂಪಋಷಿಯೇ, ನಿತ್ಯಯಾ ವಾಚಾ=ನಿತ್ಯವಾದ ವೇದರೂಪವಾದ ಮಾತಿನಿಂದ, ಸುಷ್ಟುತಿಂ=ಶೋಭನವಾದ ಸ್ತೋತ್ರವನ್ನು ಚೋದಸ್ವ=ಪ್ರೇರಿಸು–ಮಾಡು. ಹೀಗೆಂದು ವೇದಪುರುಷನು ವಿರೂಪ–ಋಷಿಗೆ ಹೇಳುತ್ತಾನೆ.

## ನ್ಯಾಯದೀಪ

**वाक्छब्दो वागिन्द्रियेऽपि प्रसिद्ध इति स्पष्टां वेदविषयां श्रुतिमाह- श्रुतिरिति । आदिपदेन,**

**''विज्ञेयं परमं ब्रह्म ज्ञापिका परमा श्रुतिः ।**

**अनादिनित्या सा तच्च''**

**इत्यादिग्रहः ।**

ಹಿಂದೆ ಉದಾಹೃತಶ್ರುತಿಯಲ್ಲಿ 'ವಾಕ್' ಶಬ್ದವಿದೆ. ಅದಕ್ಕೆ ವಾಗಿಂದ್ರಿಯ ಎಂದೂ ಅರ್ಥಹೇಳಬಹುದು. ಅದರಿಂದ ವಾಗಿಂದ್ರಿಯಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ. ಅದಕ್ಕಾಗಿ ವೇದವಿಷಯಕವಾದ ಸ್ಪಷ್ಟಶ್ರುತ್ಯಂತರವನ್ನು ''ಶ್ರುತಿರ್ವಾವ'' ಎಂದು ಉದಾಹರಿಸಲಾಗಿದೆ. ಮೂಲದ ಆದಿಪದದಿಂದ ''ವಿಜ್ಞೇಯಂ ಪರಮಂ ಬ್ರಹ್ಮ'' ಎಂಬ ಶ್ರುತ್ಯಂತರವನ್ನು ಸೂಚಿಸಲಾಗಿದೆ. ಅದರ ಅರ್ಥ–ಪರಮ–ವಿಜ್ಞೇಯ–ಬ್ರಹ್ಮ, ಪರಮಜ್ಞಾಪಕ–ಶ್ರುತಿ. ಅವೆರಡೂ ಅನಾದಿ ಮತ್ತು ನಿತ್ಯಗಳು.

## न्यायदीप

उक्तश्रुतिद्वयेनानादित्वानुक्तेः देवताधिकरण-भष्योक्तस्मृतिं चाह— **अनादीति ।** आदिनिधनवर्जितत्वेन नित्येत्यर्थः ।

ननु विधिः प्रेरणा नियोग इत्यनर्थान्तरत्वाद् विध्युद्देशानां लौकिकवत् स्वतन्त्रवक्तृकत्वमेवेत्यादिचोद्यनिरासाय तत्त्वनिर्णयोक्तं ब्रह्माण्डपुराण वाक्यं चाह—**नित्या वेदाः समस्ताश्चेति ।** समस्तपदेन बिधिभाग-स्यापि गृहीतेरिति भावः । **विरोध इति ।** वेदस्य पौरुषेयत्व इत्या-पादकानुवृत्तिर्ज्ञेया ।

ಹಿಂದೆ ಹೇಳಿರುವ ಎರಡೂ ಶ್ರುತಿಗಳಲ್ಲಿ ವೇದಕ್ಕೆ ಅನಾದಿತ್ವವನ್ನು ಹೇಳಲಾಗಿಲ್ಲ. ಅದಕ್ಕಾಗಿ ಬ್ರಹ್ಮಸೂತ್ರದ ದೇವತಾಧಿಕರಣ (1.3.8) ಭಾಷ್ಯದಲ್ಲಿ ಉದಾಹೃತವಾದ ಸ್ಮೃತಿಯನ್ನು ಮೂಲದಲ್ಲಿ ಉದಾಹರಿಸಲಾಗಿದೆ. ಅನಾದಿನಿಧನಾ, ಎಂದರೆ ಆದಿ ಇಲ್ಲದ್ದು ಅದರಂತೆ ನಾಶವಿಲ್ಲದ್ದು, ಆದ್ದರಿಂದ, ನಿತ್ಯಾ=ನಿತ್ಯವಾದುದು ಎಂದರ್ಥ.

ವಿಧಿ, ನಿಯೋಗ, ಪ್ರೇರಣಾ ಈ ಶಬ್ದಗಳು ಪರ್ಯಾಯಗಳು. ಅಂತಹ ವಿಧಿಯೇ ಉದ್ದೇಶವಾಗಿರುವ ವಾಕ್ಯಗಳು ವೇದಗಳಲ್ಲಿ ಇವೆ. ಲೋಕದಲ್ಲಿ 'ಹೋಗು, ಬಾ' ಇತ್ಯಾದಿ ವಿಧಿ ವಾಕ್ಯಗಳು ಸ್ವತಂತ್ರ ವಕ್ತೃಕಗಳಾಗಿವೆ. ವೇದದಲ್ಲೂ ಅಂತಹ ವಾಕ್ಯಗಳು ಸ್ವತಂತ್ರಪುರುಷ ಪೂರ್ವಕಗಳೇ ಆಗಬೇಕು. ಇದರಿಂದ ವೇದಕ್ಕೆ ಪೌರುಷೇಯತ್ವವು ಸಿದ್ಧವಾಗುತ್ತದೆ, ಈ ಆಕ್ಷೇಪಪರಿಹಾರಕ್ಕಾಗಿ ತತ್ತ್ವನಿರ್ಣಯದಲ್ಲಿ ಉದಾಹೃತವಾದ ಬ್ರಹ್ಮಾಂಡಪುರಾಣದ ವಾಕ್ಯವನ್ನು ''ನಿತ್ಯಾ ವೇದಾಃ'' ಎಂದು ಉಲ್ಲೇಖಿಸಲಾಗಿದೆ. ಈ ವಾಕ್ಯದಲ್ಲಿ 'ಸಮಸ್ತಾಃ' ಎಂಬ ಪದದಿಂದ ವಿಧಿ ವಾಕ್ಯಗಳನ್ನೂ ಪರಿಗ್ರಹಿಸಿ 'ನಿತ್ಯಾಃ' ಎಂದು ನಿತ್ಯತ್ವವನ್ನು ಹೇಳಲಾಗಿದೆ. ''ವಿರೋಧಃ'' ವೇದಪೌರುಷೇಯತ್ವಕ್ಕೆ ಈ ಶ್ರುತಿ–ಸ್ಮೃತಿಗಳ ವಿರೋಧವಿದೆ, ಎಂದರ್ಥ.

**न चेदं वाक्यं श्रुतीनां बहुकालीनत्वादुपचरितार्थम् । वावेत्यव-धारणात् । तादृशीनामपि स्मृतीनामनित्यत्वोक्तेश्च। स्मृतौ वाक्यशेषे-**

**''सर्गेसर्गेऽमुनैवैत उद्गीर्यन्ते तथैव च ।**
**तत्क्रमेणैव तैर्वर्णैः तैः स्वैरेव नान्यथा''**

**इति क्रमाद्यव्यत्यासोक्तेश्च ।।**

**''तदुत्पत्तिवचश्चैव भवेद् व्यक्तिमपेक्ष्य तु''**

**इति वेदोत्पत्तिवाक्यगतिकीर्तनाच्च ।**

**''विज्ञेयं परमं ब्रह्म ज्ञापिका परमा श्रुतिः ।**
**अनादिनित्या सा तच्च विना तां न स गम्यते''**

**इति श्रुत्यन्तरस्थाऽनादिनित्यशब्दयोर्ब्रह्मणि मुख्यवृत्तिः वेदे त्वमुख्येति वृत्तिद्वयापाताच्च ।**

**''यावद् ब्रह्मविष्ठितं तावती वाक्''**

**इति श्रुत्यन्तरे ब्रह्मतुल्यत्वेन सर्वदेशकालव्याप्ततयाऽवस्थित्युक्तेश्च ।**

ಅಪೌರುಷೇಯತ್ವವನ್ನು ಹೇಳುವ ಈ ವಾಕ್ಯಗಳು ದೀರ್ಘಕಾಲೀನವಾಗಿರುವ ಕಾರಣದಿಂದ ವೇದಗಳಿಗೆ ನಿತ್ಯತ್ವವನ್ನು ಹೇಳುತ್ತವೆ. ಅವುಗಳು ಉಪಚರಿತ ನಿತ್ಯತ್ವಪರಗಳು, ಮುಖ್ಯನಿತ್ಯತ್ವದಲ್ಲಿ ತಾತ್ಪರ್ಯವಿಲ್ಲ, ಎನ್ನುವುದು ಉಚಿತವಲ್ಲ.

1. ಆ ಮಂತ್ರದ ''ಶ್ರುತಿರ್ವಾವ'' ಎಂಬಲ್ಲಿರುವ ವಾವಶಬ್ದಗಳು ಅವಧಾರಣಾರ್ಥಕ ಗಳಾಗಿದ್ದು 'ನಿತ್ಯೈವ' ಎನ್ನುವ ಮೂಲಕ ಮುಖ್ಯನಿತ್ಯತ್ವವನ್ನೇ ಪ್ರತಿಪಾದಿಸುತ್ತಿವೆ.

2. ಬಹುಕಾಲೀನಗಳೇ ಆಗಿರುವ ಸ್ಮೃತಿಗಳನ್ನು ಅದೇ ವಾಕ್ಯದಲ್ಲಿ ಅನಿತ್ಯಗಳೆನ್ನಲಾಗಿದೆ.

3. ಅದೇ ಸ್ಮೃತಿಯ ವಾಕ್ಯಶೇಷದಲ್ಲಿ–ಪ್ರತಿಸರ್ಗದಲ್ಲೂ ಭಗವಂತನಿಂದಲೇ ಅದೇ ಶ್ರುತಿಗಳು ಪದ, ವರ್ಣ, ಸ್ವರಕ್ರಮಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ಉಚ್ಚರಿಸಲ್ಪಡುತ್ತವೆ, ಎಂದು ಕ್ರಮಾದಿ ವ್ಯತ್ಯಾಸಗಳಿಲ್ಲವೆಂದು ತಿಳಿಸಲಾಗಿದೆ.

4. ವೇದಗಳ ಉತ್ಪತ್ತಿ ವಚನಗಳಿಗೆ ಅಭಿವ್ಯಕ್ತಿಯೇ ಅರ್ಥ, ಎಂದು ಸ್ಮೃತಿಯಲ್ಲೇ ವೇದೋತ್ಪತ್ತಿವಚನಗಳಿಗೆ ಸಾವಕಾಶತ್ವವನ್ನು ಹೇಳಲಾಗಿದೆ.

5. 'ವಿಜ್ಞೇಯಂ ಪರಮಂ ಬ್ರಹ್ಮ' ಎಂಬ ಸ್ಮೃತಿಯಲ್ಲಿ ಬ್ರಹ್ಮನನ್ನೂ ಸೇರಿಸಿಕೊಂಡು ಶ್ರುತಿಗಳಿಗೆ ಅನಾದಿನಿತ್ಯತ್ವವನ್ನು ಹೇಳಲಾಗಿದೆ. ಅವುಗಳು ಸಕೃತ್ ಪ್ರಯುಕ್ತವಾಗಿರುವುದರಿಂದ ಬ್ರಹ್ಮನಲ್ಲಿ ಮುಖ್ಯವೃತ್ತಿ, ವೇದದಲ್ಲಿ ಅಮುಖ್ಯವೃತ್ತಿ ಎಂದು ಯುಗಪತ್ ವೃತ್ತಿದ್ವಯವನ್ನು ಅಂಗೀಕರಿಸಬಾರದು.

6. ''ಯಾವದ್ ಬ್ರಹ್ಮ ವಿಷ್ಠಿತಂ'' ಎಂಬ ಶ್ರುತ್ಯಂತರದಲ್ಲಿ ಬ್ರಹ್ಮಸಮಾನವಾದ ದೇಶ–ಕಾಲಗಳ ವ್ಯಾಪ್ತಿಯನ್ನು ಶ್ರುತಿಗಳಿಗೆ ಹೇಳಲಾಗಿದೆ.

ಹೀಗೆ ಈ ಆರು ಕಾರಣಗಳಿಂದಾಗಿ ಶ್ರುತಿಯ ಅನಿತ್ಯತ್ವವು ಗೌಣವೆಂದು ಪರಿಗಣಿಸಬಾರದು.

## ನ್ಯಾಯದೀಪ

**तादृशीनां** बहुकालीनानामित्यर्थः । **स्मृताविति** । नित्या वेदा, इति स्मृतावित्यर्थः । **तदुत्पत्तीति** । स्मृतौ वाक्यशेषे इत्यनुकृष्यते । नोपचरितार्थमिति साध्येन पञ्चम्यन्तानामन्वयः । तच=ब्रह्म चानादिनित्यमित्यर्थः । 'न स गम्यत' इति तच्छब्दस्य ब्रह्मशब्दोक्तः परमात्मेत्यर्थः । **यावदिति** ॥

''सहस्रधा महिमानः सहस्रं, यावद् ब्रह्म...'

इति श्रुतौ यस्य सहस्रं=अपरिमिता महिमानः प्रत्येकमपि सहस्रधा= अपरिमितविधाः, तद् ब्रह्म यावद् देशकालव्यापितया विष्ठितं=विशेषेण स्थितं वाग्=वेदवागपि तावद्देशकालव्यापिनी, इत्युक्तेरित्यर्थः ।

ತಾದೃಶೀನಾಂ ಎಂದರೆ ಬಹುಕಾಲೀನಗಳಾದ. 'ಯಾವದ್ ಬ್ರಹ್ಮ ವಿಷ್ಠಿತಂ' ಎಂಬ ಶ್ರುತಿಯ ಪೂರ್ಣಪಾಠ ಮತ್ತು ಅರ್ಥ ಹೀಗೆ—

ಸಹಸ್ರಧಾ ಮಹಿಮಾನಃ ಸಹಸ್ರಂ

ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್।

ಯಸ್ಯ=ಯಾವ ಬ್ರಹ್ಮನ, ಸಹಸ್ರಂ=ಅಪರಿಮಿತವಾದ ಮಹಿಮಾನಃ=ಮಹಿಮೆಗಳು ಒಂದೊಂದೂ ಸಹಸ್ರಧಾ=ಅಪರಿಮಿತವೈವಿಧ್ಯವುಳ್ಳವುಗಳೋ ತದ್‌ಬ್ರಹ್ಮ=ಅಂತಹ ಬ್ರಹ್ಮನು ಯಾವತ್=ಎಷ್ಟು ದೇಶ–ಕಾಲಗಳನ್ನು ವ್ಯಾಪಿಸಿ ವಿಷ್ಠಿತಂ=ವಿಶೇಷವಾಗಿ ಇದೆಯೋ ವಾಕ್=ವೇದವಾಕ್ಯವೂ ತಾವತ್=ಅಷ್ಟೇ ದೇಶ–ಕಾಲಗಳನ್ನು ವ್ಯಾಪಿಸಿದೆ.

**एतदप्युक्तं ''गौरवदोषेण'' इति । श्रुत्यादिविरुद्ध-क्रमवैजात्यरूप-गौरवेणेत्यर्थः ॥**

ಇದುವರೆಗೆ ಹೇಳಿರುವ ''ವೇದಪೌರುಷೇಯತ್ವವು ಶ್ರುತಿವಾಕ್ಯವಿರುದ್ಧ'' ಎಂಬ ವಿಷಯವೂ ''ಗೌರವದೋಷೇಣ'' ಎಂಬ ಆಚಾರ್ಯರ ವಾಕ್ಯದಿಂದ ಸೂಚಿತವಾಗಿದೆ. ಅದಕ್ಕರ್ಥ—

ಶ್ರುತಿಗಳಲ್ಲಿ ಹೇಳಿದ್ದಕ್ಕೆ ವಿರುದ್ಧವಾದ ವಿಜಾತೀಯ-ಕ್ರಮಕಲ್ಪನಾರೂಪಗೌರವದೋಷವಿರುವುದರಿಂದ, (ಶ್ರುತಿಗಳಿಗೆ ಅನಿತ್ಯತ್ವವನ್ನು ಹೇಳಬಾರದು.) ಎಂದು.

## ನ್ಯಾಯದೀಪ

**एतदपीति ।** पौरुषेयत्वे श्रुत्यादिविरोध इत्येतदपीत्यर्थः । तद् व्यनक्ति— **श्रुत्यादीति ।।**

ಏತದಪಿ ಎಂದರೆ ''ಪೌರುಷೇಯತ್ವದ ಬಗ್ಗೆ ಶ್ರುತ್ಯಾದಿ ವಿರೋಧವೂ'' ಎಂದರ್ಥ.

**ಇಲ್ಲಿಗೆ ಈ ಪ್ರಕರಣ ಮುಗಿಯಿತು.**

# ಈ ಪ್ರಕರಣದ ಸಾರಾಂಶ

ಈ ಪ್ರಕರಣದಲ್ಲಿ, ಹಿಂದಿನ ಪ್ರಕರಣದಲ್ಲಿ ಹೇಳಿರುವ ಅಪೌರುಷೇಯತ್ವ-ಸಾಧಕವಾದ ಅನುಮಾನಗಳಲ್ಲಿ 'ಹೇತುರಸ್ತು ಸಾಧ್ಯಂ ಮಾಸ್ತು' ಎಂಬ ಅಪ್ರಯೋಜಕತಾಶಂಕೆಯ ನಿರಾಸಕಕ್ಕಾಗಿ ಬಾಧಕತರ್ಕಗಳನ್ನು ಹೇಳಲಾಗಿದೆ.

1. **ವೇದವು ಪೌರುಷೇಯವೆಂದಾದರೆ,** 'ಯತಸ್ತಾಃ ಹರಿಣಾ ದೃಷ್ಟಾಃ' ಇತ್ಯಾದಿ ಸ್ಮೃತಿಗಳಲ್ಲಿ 'ಬ್ರಹ್ಮದೃಷ್ಟ' ಎಂದು ಹೇಳಿರುವುದು ಅನುಚಿತವಾದೀತು. ಬ್ರಹ್ಮಕೃತ, ಎಂದೇ ಹೇಳಬಹುದಿತ್ತು.

2. ವೇದದಂತಹ ಅವಿಚ್ಛಿನ್ನ-ಅಧ್ಯೇತೃಪರಂಪರೆಯುಳ್ಳ ಬೃಹದ್‌ಗ್ರಂಥದ ಅಧ್ಯಯನ-ಅಧ್ಯಾಪನ ಮಾಡುವವರಿಗೆ ವೇದಕರ್ತೃವು ಇಂತಹವನೇ ಎಂಬ ಅನುಸಂಧಾನ ಇರಬೇಕಾಗಿತ್ತು.

3. ವೇದದ ಒಂದೊಂದು ಮಂತ್ರಗಳು ಒಂದೊಂದು ಅಭೀಷ್ಟಸಿದ್ಧಿಗೆ ಕಾರಣವಾಗುತ್ತವೆ. ಅದಕ್ಕೆ ಅಲ್ಲಿರುವ ವರ್ಣ-ಪದ-ವಾಕ್ಯಗಳ ಜೋಡಣೆಯ ವಿನ್ಯಾಸ ವೈಚಿತ್ರ್ಯ ಕಾರಣ. ಅದು ಕಲ್ಪ-ಕಲ್ಪದಲ್ಲೂ ಬದಲಾದರೆ ಅರ್ಥಾತ್ ವೇದವು ನಿರ್ಮಿತವಾದರೆ ಒಂದೊಂದು ಕಲ್ಪದಲ್ಲೂ ಬೇರೆಬೇರೆಯೇ ವಾಕ್ಯಕ್ರಮವು ನಿರ್ದಿಷ್ಟವಾದ ಅಭೀಷ್ಟ ಸಿದ್ಧಿಗೆ ಕಾರಣವೆಂದು ಕಲ್ಪಿಸಬೇಕಾಗುತ್ತದೆ. ಇದು ಗೌರವ.

3. ನಿತ್ಯ-ಶಾಶ್ವತನಾದ ಈಶ್ವರ ಈ ಕಲ್ಪದಲ್ಲಿ ಯಾವ ವೇದವನ್ನು ರಚಿಸಿ ಒಬ್ಬನಿಗೆ ಉಪದೇಶಿಸುವನೋ ಮತ್ತೊಬ್ಬನಿಗೆ ಇನ್ನೊಂದು ರೀತಿಯ ವೇದವನ್ನು ರಚಿಸಿ ಏಕೆ ಉಪದೇಶಿಸುವುದಿಲ್ಲ? ಮೊದಲವೇದವೇ ತಲೆಯಲ್ಲಿರುವಾಗ ಇನ್ನೊಂದರ ರಚನೆ ಏಕೆ? ಎನ್ನುವುದಾದಲ್ಲಿ, ಹಾಗಾದರೆ, ಹಿಂದಿನ ಕಲ್ಪದಲ್ಲಿದ್ದ ವೇದವನ್ನು ಅವನು ಈ ಕಲ್ಪದಲ್ಲಿ ಮರೆತನೋ? ಮರೆತರೆ ಅವನು ದೇವರೇ ಅಲ್ಲ. ಇಲ್ಲವಾದರೆ ಅದೇ ಅವನ ತಲೆಯಲ್ಲಿದ್ದಮೇಲೆ ಇನ್ನೊಂದು ವೇದವನ್ನೇಕೆ ರಚಿಸಬೇಕು?

4. ವೇದವು ಈಶ್ವರ ರಚಿತವಾದರೆ ಬುದ್ಧಾದಿಗಳಂತೆ ಈಶ್ವರನಲ್ಲೂ ಅವಿಶ್ವಾಸ ಬಂದೀತು. ಬೌದ್ಧಾಗಮದಂತೆ ವೇದದಲ್ಲೂ ಅಪ್ರಾಮಾಣ್ಯಸಂದೇಹವು ಬಂದೀತು. ಇದರಿಂದಾಗಿ, ಅತೀಂದ್ರಿಯವಾದ ಪುಣ್ಯಪಾಪಾದಿಗಳ ಬಗ್ಗೆ ದೃಢವಾದ ನಂಬಿಕೆಯೇ ಕುಸಿದೀತು.

ಹೀಗೆ ನಾಲ್ಕು ಬಾಧಕಗಳನ್ನು ಹೇಳುವ ಮೂಲಕ ಅಪೌರುಷೇಯತ್ವ-ಸಾಧಕಾನುಮಾನಗಳಲ್ಲಿ ಅಪ್ರಯೋಜಕತಾಶಂಕೆಯನ್ನು ನಿರಾಕರಿಸಲಾಗಿದೆ.

ಕೊನೆಯಲ್ಲಿ ವೇದೋಕ್ತವಾದ ನಿತ್ಯತ್ವವು ಬಹುಕಾಲೀನತ್ವಪ್ರಯುಕ್ತ ಉಪಚರಿತ, ಎಂದು ಕಲ್ಪಿಸಿದರೆ ಆರು ಬಾಧಕಗಳನ್ನು ಹೇಳಲಾಗಿದೆ.

**ಇಲ್ಲಿಗೆ ಅಪೌರುಷೇಯತ್ವೇ ಅನುಕೂಲತರ್ಕ ಪ್ರಕರಣವು ಮುಗಿಯಿತು.**

श्रीमद्व्यासराज विरचिते तर्कताण्डवे

# वेदापौरुषेयत्ववादः

## पौरुषेयत्वानुमानादिभङ्गः

### ಅವತಾರಿಕೆ

**पञ्चमस्तवके कुसुमाञ्जल्याद्युक्तमनुमानमाशङ्क्य प्रतिज्ञादोषेण निराह–वेद इति ।**

ಉದಯನಾಚಾರ್ಯಕೃತಕುಸುಮಾಂಜಲಿ ಗ್ರಂಥದ ಐದನೆಯ ಸ್ತಬಕದಲ್ಲಿ ವೇದಪೌರುಷೇಯತ್ವಸಾಧಕವಾದ ಅನೇಕ ಅನುಮಾನಗಳನ್ನು ಹೇಳಲಾಗಿದೆ. ಆ ಅನುಮಾನಗಳ ಪ್ರತಿಜ್ಞಾಭಾಗಕ್ಕೆ ದೋಷವನ್ನು ಮೂಲದಲ್ಲಿ ಹೇಳಲಾಗಿದೆ.

**नचोक्तानुमानानां सत्प्रतिपक्षत्वं शङ्क्यम् । 'वेदः पौरुषेयो वाक्यत्वाल्लौकिकवाक्यवत्'इत्यत्र पुरुषाधीनोत्पत्तिकत्वरूपे सकर्तृकत्वे साध्ये उक्तरीत्या क्रमस्य कृतकत्वेन सिद्धसाधनात् ।**

ಮೊದಲನೆಯ ಪ್ರಕರಣದಲ್ಲಿ ವೇದಾಪೌರುಷೇಯತ್ವ ಸಾಧಕವಾದ ಅನುಮಾನಗಳನ್ನು ಹೇಳಲಾಗಿದೆ. ಅವುಗಳಿಗೆ ಪೌರುಷೇಯತ್ವ ಸಾಧಕವಾಗಿರುವ ಅನುಮಾನಗಳಿಂದ ಸತ್‌ಪ್ರತಿಪಕ್ಷ ದೋಷವು ಬರುವುದಿಲ್ಲ. ಏಕೆಂದರೆ, ಪೌರುಷೇಯತ್ವಸಾಧಕಾನುಮಾನಗಳು ದುಷ್ಟವಾಗಿವೆ.

ವೇದವು ಕಾಳಿದಾಸಾದಿ ಲೌಕಿಕವಾಕ್ಯಗಳಂತೆಯೇ ವಾಕ್ಯವಾದುದರಿಂದ ಪೌರುಷೇಯ ವಾಗಿದೆ, ಈ ಅನುಮಾನಕ್ಕೆ ಸಿದ್ಧಸಾಧನತಾದೋಷವಿದೆ. ಪೌರುಷೇಯವೆಂದರೆ ಪುರುಷನಿಂದ ನಿರ್ಮಿತವಾದುದು, ಎಂದರ್ಥ. ಕ್ರಮವಿಶಿಷ್ಟವಾದ ವರ್ಣರಾಶಿಯೇ ವೇದ. ಕ್ರಮವು ಬೌದ್ಧಿಕ ವಾದುದರಿಂದ ಕೃತಕವಾಗಿದೆ. ಹೀಗಾಗಿ ಕ್ರಮವಿಶಿಷ್ಟವಾದ ವೇದವೂ ಪುರುಷಕೃತ. ಆದ್ದರಿಂದ ಸಿದ್ಧಸಾಧನತಾ.

### ನ್ಯಾಯದೀಪ

प्रमाकरणामूलकत्वे सति प्रमाणशब्दरूपो वेद इत्यर्थः । **उक्तरीत्येति ।**

**वेदापौरुषेयत्वानुमानवादे क्रमविशेषविशिष्टानां वर्णानामित्यादिनोक्त-रीत्येत्यर्थः ।**

'ವೇದಃ ಪೌರುಷೇಯಃ' ಎಂಬ ಅನುಮಾನದಲ್ಲಿ ಪಕ್ಷ ವೇದ. ಪರಸಮ್ಮತವಾದ ವೇದದ ಲಕ್ಷಣ—ಪ್ರಮಾಕರಣವು ಯಾವುದಕ್ಕೆ ಮೂಲವಲ್ಲವೋ ಅಂತಹ ಪ್ರಮಾಣಶಬ್ದ. ಇದೇ ಪಕ್ಷ.

ಉಕ್ತರೀತ್ಯಾ, ಎಂದರೆ ವೇದಾಪೌರುಷೇಯತ್ವಾನುಮಾನ ಪ್ರಕರಣದಲ್ಲಿ 'ಕ್ರಮವಿಶೇಷ ವಿಶಿಷ್ಟವಾದ ವರ್ಣಗಳೇ ವೇದ' ಎಂದಂತೆ, ಎಂದರ್ಥ.

## ಅವತಾರಿಕೆ

**''नच लौकिकवाक्यवत् सकर्तृकत्वम् । तस्याकर्तृकत्व-प्रसिध्यभावात्'' इत्यादिना तत्वनिर्णयतट्टीकयोरभिमतमप्रयोजकत्वं व्यनक्ति–अर्थमुपलभ्येत्यादिना ।**

ತತ್ತ್ವನಿರ್ಣಯ ಮೂಲ ಮತ್ತು ಟೀಕೆಯಲ್ಲಿ 'ವೇದವು ಲೌಕಿಕವಾಕ್ಯದಂತೆ ಸಕರ್ತೃಕವಲ್ಲ. ಏಕೆಂದರೆ ವೇದಕ್ಕೆ ಲೌಕಿಕವಾಕ್ಯದಂತೆ ಸಕರ್ತೃಕತ್ವಪ್ರಸಿದ್ಧಿ ಇಲ್ಲ' ಎನ್ನಲಾಗಿದೆ. ಇದಕ್ಕೆ ಅಭಿಮತ ವಾಗಿರುವ ಅಪ್ರಯೋಜಕತ್ವವನ್ನು ಪೌರುಷೇಯತ್ವಸಾಧಕವಾದ ಅನುಮಾನಕ್ಕೆ ಹೇಳುತ್ತಾರೆ.

**अर्थमुपलभ्य रचितत्वरूपे विप्रतिपन्ने पौरुषेयत्वे साध्ये च अबुद्धिपूर्वकत्वेऽपि रेखाविशेषवत्त्वेनैव पिपीलिकादिलिपेर्लिपित्ववत्, गुणाजन्ययोः साक्षिज्ञानेश्वरज्ञानयोर्याथार्थ्यवत्, आकाङ्क्षादिमत्त्वेनैवाका-ङ्क्षादिमत्स्वप्रादिवाक्यस्य वाक्यत्ववच्च वेदस्यापि वाक्यत्वस्योपपत्त्या गौरवेणोक्तसाध्यं प्रत्यप्रयोजकत्वात् ।**

**अन्यथा, वेदो ज्ञानकरणेनार्थमुपलभ्य रचितो वाक्यत्वादित्यपि स्यात् ।**

ವೇದದಲ್ಲಿ 'ಅರ್ಥಜ್ಞಾನಪೂರ್ವಕ ರಚಿತತ್ವವು' ವಿವಾದಾಸ್ಪದ. ತಾರ್ಕಿಕರು ಇದೆ, ಎನ್ನುತ್ತಾರೆ, ಸಿದ್ಧಾಂತಿಗಳು ಇಲ್ಲವೆನ್ನುತ್ತಾರೆ. ಹೀಗೆ ಈ ಅಂಶದಲ್ಲಿ ವಿವಾದ ಇರುವುದರಿಂದ ಇಂತಹ ಪೌರುಷೇಯತ್ವವನ್ನು ವಾಕ್ಯತ್ವಹೇತುವಿನಿಂದ ಸಾಧನೆ ಮಾಡಿದರೆ ಆಗ ಆ ವಾಕ್ಯತ್ವವು ಉಕ್ತ–ಪೌರುಷೇಯತ್ವದ ಅಪೇಕ್ಷೆಯೇ ಇಲ್ಲದೆ, ಆಕಾಂಕ್ಷಾದಿಮತ್ ಪದಕದಂಬಕತ್ವೇನ್ನೈವ ವೇದದಲ್ಲಿ

ಉಪಪನ್ನವಾಗುತ್ತದೆ. ಅದಕ್ಕೆ ಉದಾಹರಣೆ—ಸ್ವಾಪ್ನಾದಿವಾಕ್ಯ. ಸ್ವಪ್ನದಲ್ಲಿ ಕೇಳಿಸಿದ ವಾಕ್ಯ, ಮತ್ತು ಉನ್ಮತ್ತವಾಕ್ಯ ಇವುಗಳಲ್ಲಿ ಅಬುದ್ಧಿಪೂರ್ವಕತ್ವವು (ಅಪೌರುಷೇಯತ್ವವು) ಇದ್ದರೂ ಆಕಾಂಕ್ಷಾದಿಮತ್ತ್ವೇನೈವ ವಾಕ್ಯತ್ವವು ಇದೆ. ಅಂದರೆ, ಇತರ ವಾಕ್ಯಗಳು ಬುದ್ಧಿಪೂರ್ವಕವಾಗಿದ್ದರೂ ಸ್ವಾಪ್ನಾದಿವಾಕ್ಯಗಳು ಬುದ್ಧಿಪೂರ್ವಕಗಳಲ್ಲ. ಆದರೂ. ಅವುಗಳಲ್ಲಿ ವಾಕ್ಯತ್ವವು ಇದೆ. ಏಕೆಂದರೆ, ಆಕಾಂಕ್ಷಾದಿಮತ್ತ್ವ ಇದೆ. ಅದರಂತೆ, ಇತರ ವಾಕ್ಯಗಳಲ್ಲಿ ಅರ್ಥಮುಪಲಭ್ಯ ರಚಿತತ್ವವು (ಬುದ್ಧಿಪೂರ್ವಕತ್ವವು) ಇದ್ದರೂ ವೇದದಲ್ಲಿ ಅದಿಲ್ಲ. ಆದರೂ ವಾಕ್ಯತ್ವವು ಆಕಾಂಕ್ಷಾದಿಮತ್ತ್ವೇನೈವ ಉಪಪನ್ನವಾಗುತ್ತದೆ.

ಇದಕ್ಕೆ ಇನ್ನೊಂದು ನಿದರ್ಶನ—ಎಲ್ಲಾ ಲಿಪಿಗಳಲ್ಲೂ ಬುದ್ಧಿಪೂರ್ವಕತ್ವವು ಇರುತ್ತದೆ. ಆದರೆ, ಪಿಪೀಲಿಕಾ ಲಿಪಿಯಲ್ಲಿ ಬುದ್ಧಿಪೂರ್ವಕತ್ವವು ಇಲ್ಲ. ಆದರೂ ಅದರಲ್ಲಿ ಲಿಪಿತ್ವ ಇದೆ. ಅದು ರೇಖಾವಿಶೇಷವತ್ತ್ವರೂಪಧರ್ಮಾಂತರೇಣೈವ ಉಪಪನ್ನವಾಗುತ್ತದೆ. ಹೀಗೆ, ಅಲ್ಲಿ ಲಿಪಿತ್ವವು ಬುದ್ಧಿಪೂರ್ವಕತ್ವಂ ವಿನಾಪಿ ಧರ್ಮಾಂತರೇಣ ಹೇಗೆ ಉಪಪನ್ನವಾಗುವುದೋ ಅದರಂತೆ, ವೇದವಾಕ್ಯದಲ್ಲೂ ವಾಕ್ಯತ್ವವು ಉಕ್ತರೂಪವಾದ ಪೌರುಷೇಯತ್ವಂ ವಿನೈವ ಆಕಾಂಕ್ಷಾದಿಮತ್ತ್ವೇನೈವ ಉಪಪನ್ನವಾಗುತ್ತದೆ.

ಮತ್ತೊಂದು ನಿದರ್ಶನ—ಗುಣಜನ್ಯತ್ವವು ಪ್ರಮಾತ್ವಪ್ರಯೋಜಕ. ಆದರೆ ಸಾಕ್ಷಿಜ್ಞಾನ-ಈಶ್ವರಜ್ಞಾನಗಳು ಗುಣಜನ್ಯಗಳಲ್ಲ. ಆದರೂ ಪ್ರಮಾ ಆಗಿವೆ. ಅಲ್ಲಿ ಪ್ರಮಾತ್ವಪ್ರಯೋಜಕ 'ಯಾಥಾರ್ಥ್ಯ' (ಯಥಾವಸ್ಥಿತಾರ್ಥವಿಷಯಕತ್ವ). ಹೀಗೆ ಅಲ್ಲಿ ಗುಣಜನ್ಯತ್ವವು ಇಲ್ಲದೇ ಇದ್ದರೂ ಪ್ರಮಾತ್ವವು ಅನ್ಯಥೈವೋಪಪನ್ನವಾಗುತ್ತದೆ. ಅದರಂತೆ, ವೇದದಲ್ಲೂ ವಾಕ್ಯತ್ವವು ಅನ್ಯಥೈವೋಪಪನ್ನವಾಗುತ್ತದೆ.

ಪ್ರಯೋಜ್ಯಪ್ರಯೋಜಕಭಾವ ಇಲ್ಲದಿದ್ದರೂ ಸಾಹಚರ್ಯದರ್ಶನ ಮಾತ್ರದಿಂದ ವಾಕ್ಯತ್ವಹೇತುವಿನಿಂದ ಉಕ್ತಪೌರುಷೇಯತ್ವವನ್ನು ಸಾಧಿಸುವುದಾದಲ್ಲಿ ವಾಕ್ಯತ್ವ ಹೇತುವಿಗೆ ಜ್ಞಾನಕರಣಗಳಿಂದ (ಚಕ್ಷುರಾದಿಗಳಿಂದ) ಅರ್ಥಮುಪಲಭ್ಯರಚಿತತ್ವದೊಂದಿಗೂ ಲೌಕಿಕವಾಕ್ಯಗಳಲ್ಲಿ ಸಾಹಿತ್ಯವು ಕಂಡಿರುವುದರಿಂದ ವೇದದಲ್ಲೂ ತಾದೃಶಪೌರುಷೇಯತ್ವವು ಸಿದ್ಧವಾಗಬೇಕಾದೀತು. ಆದರೆ, ಈಶ್ವರನಿಗೆ ಜ್ಞಾನಕರಣಗಳೇ ಇಲ್ಲದಿರುವುದರಿಂದ ತಾದೃಶಪೌರುಷೇಯತ್ವವು ನೈಯಾಯಿಕರಿಗೂ ಸಮ್ಮತವಲ್ಲ.

## ನ್ಯಾಯದೀಪ

**विप्रतिपन्न इति ।** तथाच न सिद्धसाधनतादोष इति भावः । अबुद्धिपूर्वकत्वेऽपीत्यस्य वाक्यत्वस्योपपत्त्येत्यनेनान्वयः । तत्र दृष्टान्तत्रयोक्तिः—**रेखेत्यादि ।** स्वमतेनोक्तिः—**साक्षीति ।**

ಪುರುಷಪ್ರಣೀತತ್ವಪಕ್ಷದಲ್ಲಿ ಸಿದ್ಧಸಾಧನತಾ ಇದ್ದರೂ ಅರ್ಥಮುಪಲಭ್ಯ ರಚಿತತ್ವವು ವಿವಾದಾಸ್ಪದವಾದುದರಿಂದ ಸಿದ್ಧಸಾಧನತಾ ಇಲ್ಲ, ಎಂದು 'ವಿಪ್ರತಿಪನ್ನೇ' ಎಂಬ ಪದದಿಂದ ಸೂಚಿತವಾಗಿದೆ.

'ಅಬುದ್ಧಿಪೂರ್ವಕತ್ವೇऽಪಿ' ಎಂಬ ಶಬ್ದಕ್ಕೆ ವಾಕ್ಯದ ಕೊನೆಯಲ್ಲಿರುವ 'ವಾಕ್ಯತ್ವಸ್ಯ ಉಪಪನ್ನತಯಾ' ಎಂಬ ಶಬ್ದದೊಂದಿಗೆ ಅನ್ವಯಿಸಿಕೊಳ್ಳಬೇಕು.

ಮೂಲದಲ್ಲಿ ಸಾಕ್ಷಿಯನ್ನು ಉದಾಹರಿಸಿದ್ದು ಸ್ವಮತರೀತ್ಯಾ.

**अर्थानभिज्ञोच्चारिते आधुनिके वेदे, विसंवादिनि शुकादिवाक्ये च व्यभिचाराच्च । उक्तश्रुत्यादिबाध-प्रतिकूलतर्कपराहत्यादिसाधारणदोषाच्च ।।**

ವಾಕ್ಯತ್ವ ಹೇತುವಿಗೆ ವ್ಯಭಿಚಾರದೋಷವೂ ಇದೆ—ಅರ್ಥವನ್ನು ತಿಳಿಯದೆ ಇಂದಿನ ಕಾಲದ ವ್ಯಕ್ತಿಯು ಉಚ್ಚರಿಸಿದ ವೇದ ಈಶ್ವರೋಚ್ಚರಿತ ವೇದಸಜಾತೀಯವಾದರೂ ಅದೇ ವೇದವಲ್ಲ, ಅದರಲ್ಲಿ ಅರ್ಥಮುಪಲಭ್ಯರಚಿತತ್ವ ಇಲ್ಲ. ಆದರೆ ವಾಕ್ಯತ್ವ ಇದೆ.

ಅದರಂತೆ, ಗಿಳಿ ಹೇಳಿದ, ಅಪ್ರಾಮಾಣಿಕವಾದ ವಾಕ್ಯದಲ್ಲಿ ಅರ್ಥಮುಪಲಭ್ಯರಚಿತತ್ವ ಇಲ್ಲ. ಗಿಳಿ ಆ ವಾಕ್ಯವನ್ನು ಉಚ್ಚಸಿದ್ದರೂ ಅದಕ್ಕೆ ಆ ವಾಕ್ಯದ ಅರ್ಥಜ್ಞಾನ ಇಲ್ಲ. ಅಂತಹ ವಾಕ್ಯವೂ ಈಶ್ವರಯಥಾರ್ಥಜ್ಞಾನಪೂರ್ವಕವಾಗಿ ಅವನಿಂದ ರಚಿತವಾಗಿದೆ, ಎನ್ನುತ್ತಾರೆ ತಾರ್ಕಿಕರು. ಆದರೆ, ಪ್ರಕೃತ ವಾಕ್ಯ ಅಪ್ರಾಮಾಣಿಕವಾದ ಕಾರಣ ಅದರ ಅರ್ಥದ ಜ್ಞಾನ ಈಶ್ವರನಿಗೂ ಇಲ್ಲ. ಹೀಗಾಗಿ ಆ ವಾಕ್ಯದಲ್ಲಿ ಸರ್ವಥಾ ಸಾಧ್ಯ ಇಲ್ಲ, ವಾಕ್ಯತ್ವಹೇತು ಇದೆ. ವ್ಯಭಿಚಾರ.

ಪೌರುಷೇಯತ್ವಸಾಧಕಾನುಮಾನಗಳಿಗೆ ಅಪೌರುಷೇಯತ್ವಪ್ರತಿಪಾದಕವಾದ, ಹಿಂದೆ ಹೇಳಿರುವ ಶ್ರುತಿಯ ಬಾಧ ಇದೆ. ಅಪೌರುಷೇಯತ್ವಸಾಧಕವಾದ ಅನುಮಾನಕ್ಕೆ ಹೇಳಿರುವ ಅನುಕೂಲತರ್ಕಗಳೆಲ್ಲವೂ ಪೌರುಷೇಯತ್ವಸಾಧಕಾನುಮಾನಕ್ಕೆ ಪ್ರತಿಕೂಲತರ್ಕಗಳಾಗುತ್ತವೆ. ಅವುಗಳೂ ಪೌರುಷೇಯತ್ವಾನುಮಾನಗಳು ಬಾಧಕಗಳಾಗುತ್ತವೆ.

## ನ್ಯಾಯದೀಪ

**शुकादिवाक्येऽपीश्वररचितत्वेन साध्यसत्त्वनिरासाय विसंवादिनीति विशेषणोक्तिः ।**

**''तर्कपराहतं च वाक्यत्वानुमानं श्रुतिपुराणविरुद्धं च''ति तत्त्वनिर्णयटीकोक्तमाह—उक्तेति । एतच्च प्रतिकूलतर्कपदेनाप्य-**

**न्वेति। वेदापौरुषेयत्वानुमाने येऽनुकूलतर्का उक्तास्ते सर्वे पौरुषेयत्वे प्रतिकूलतर्का इत्यर्थः। आदिपदेनानुकूलतर्कराहित्यग्रहः। साधारणेति। पौरुषेयत्वानुमानमात्रसाधारणेत्यर्थः।**

ತತ್ತ್ವನಿರ್ಣಯಟೀಕಾದಲ್ಲಿ 'ತರ್ಕಪರಾಹತಂ ಚ ವಾಕ್ಯತ್ವಾನುಮಾನಂ ಶ್ರುತಿಪುರಾಣವಿರುದ್ಧಂ ಚ' ಎಂದಿರುವುದನ್ನು ಮೇಲಿನ ಮೂಲದಲ್ಲಿ ವಿವರಿಸಲಾಗಿದೆ.

ಸರ್ವಕರ್ತನಾದ ಈಶ್ವರನು ಶುಕಾದಿವಾಕ್ಯಕ್ಕೂ ಕರ್ತನಾಗಿದ್ದಾನೆ. ಆದ್ದರಿಂದ ಆ ವಾಕ್ಯದಲ್ಲಿ ಈಶ್ವರರಚಿತತ್ವವೇ ಇದೆ, ಈ ಶಂಕೆಯ ಪರಿಹಾರಕ್ಕಾಗಿ ಮೂಲದಲ್ಲಿ ಶುಕವಾಕ್ಯಕ್ಕೆ 'ವಿಸಂವಾದಿನಿ' ಎಂಬ ವಿಶೇಷಣವನ್ನು ಕೊಡಲಾಗಿದೆ.

'ಸಾಧಾರಣದೋಷ' ಎಂದರೆ ಪೌರುಷೇಯತ್ವಸಾಧಕಗಳಾದ ಎಲ್ಲಾ ಅನುಮಾನಗಳಿಗೂ ದೋಷ, ಎಂದರ್ಥ.

**अत्रोक्तं मणौ–'वेदः सजातीयोच्चारणानपेक्षोच्चरितजातीयो वाक्यत्वात् संमतवत्।' अत्र साध्ये सजातीयपदं शब्दमूलकशब्दे व्यभिचारपरिहारार्थम्। शब्दस्यार्थैक्यमात्रेण मूलत्वोपपत्त्योच्चारण-साजात्यस्यानपेक्षितत्वात्। जातीयपदं त्वाधुनिकवेदे बाधनिरासार्थम्। तत्रच न सिद्धसाधनम्। अपौरुषेयत्वपक्षे सर्वस्यापि वेदाध्ययनस्य गुर्वध्ययनपूर्वकत्वेन सजातीयोच्चारणसापेक्षत्वात्। न चाप्रयोजकता। उक्तसाध्ये वेदातिरिक्तवाक्यत्वापेक्षया लघुत्वेन वाक्यत्वस्यैव प्रयोजकत्वादिति।**

ಶಬ್ದಖಂಡ ಮಣಿಗ್ರಂಥದಲ್ಲಿ (ಪು.365) 'ವೇದಃ ಪೌರುಷೇಯಃ ವಾಕ್ಯತ್ವಾತ್' ಎಂಬ ಅನುಮಾನದಲ್ಲಿ ಪೌರುಷೇಯತ್ವಸಾಧ್ಯವನ್ನು ಹೀಗೆ ಪರಿಷ್ಕಾರ ಮಾಡಲಾಗಿದೆ— "ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತ–ಜಾತೀಯತ್ವಂ ಪೌರುಷೇಯತ್ವಂ" ಎಂದು. ಈಶ್ವರನು ನಮ್ಮಂತೆ ಗುರುಗಳಿಂದ ಕೇಳಿ ವೇದವನ್ನು ಉಚ್ಚರಿಸುವುದಿಲ್ಲ. ಯಾರಿಂದಲೂ ಕೇಳದೆ ಅವನೇ ಅದನ್ನು ರಚಿಸಿದ್ದಾನೆ. ಇಂದು ನಾವು ಉಚ್ಚರಿಸುವ ವೇದ ಅದೇ ವೇದವಲ್ಲದೇ ಹೋದರೂ ಅದಕ್ಕೆ ಸಜಾತೀಯವಾಗಿದೆ. ಆದ್ದರಿಂದ ಸರ್ವೋಚ್ಚರಿತವೇದದಲ್ಲೂ ಇಂತಹ ಪೌರುಷೇಯತ್ವವು ಇದೆ. ಅಪೌರುಷೇಯತ್ವಪಕ್ಷದಲ್ಲಿ ಈಶ್ವರನೂ ಹಿಂದಿದ್ದ ವೇದವನ್ನೇ ಸರ್ವದಾ ಉಚ್ಚರಿಸುವುದರಿಂದ ಇಂತಹಸಾಧ್ಯವು ಅಂಗೀಕಾರಾರ್ಹವಲ್ಲ. ಆದ್ದರಿಂದ ಸಿದ್ಧಸಾಧನತಾದೋಷವಿಲ್ಲ.

**ಕೃತ್ಯವಿಚಾರ**—ಸಾಧ್ಯದಲ್ಲಿ ಸಜಾತೀಯಪದವನ್ನು ಬಿಟ್ಟರೆ 'ಉಚ್ಚಾರಣಂ ಅನಪೇಕ್ಷ್ಯ ಉಚ್ಚರಿತತ್ವಂ' ಎಂದು ಸಾಧ್ಯವಾಗುತ್ತದೆ. ಆಗ ಶಬ್ದಮೂಲವಾಗಿರುವ ಶಬ್ದದಲ್ಲಿ ವ್ಯಭಿಚಾರ. ವೇದವನ್ನು ಮೂಲವನ್ನಾಗಿ ಇಟ್ಟುಕೊಂಡು ಮನುಸ್ಮೃತಿಯನ್ನು ರಚಿಸಲಾಗಿದೆ. ಆದ್ದರಿಂದ ಅದರಲ್ಲಿ ಸಜಾತೀಯ ಉಚ್ಚಾರಣಂ ಅಪೇಕ್ಷ್ಯ ಉಚ್ಚರಿತತ್ವವೇ ಬಂತು. ಪೌರುಷೇಯತ್ವ ಬರಲಿಲ್ಲ, ವಾಕ್ಯತ್ವ ಇದೆ. ವ್ಯಭಿಚಾರ ದೋಷ. ಅದರ ಪರಿಹಾರಕ್ಕಾಗಿ ಸಜಾತೀಯ ಪದಬೇಕು. ವೇದಕ್ಕೂ ಮನುಸ್ಮೃತಿಗೂ ಅರ್ಥಸಾಮ್ಯಪ್ರಯುಕ್ತವಾಗಿಯೇ ಸ್ಮೃತಿಗೆ ವೇದಮೂಲತ್ವ ಇದೆ. ಶಬ್ದಸಾಮ್ಯದ ಅಗತ್ಯವಿಲ್ಲ. ಅವೆರಡು ಗ್ರಂಥಗಳ ಆನುಪೂರ್ವೀ ಭಿನ್ನವಾದುದರಿಂದ ಸ್ಮೃತಿಸಜಾತೀಯವಾದ ಉಚ್ಚಾರಣೆ ವೇದೋಚ್ಚಾರಣೆ ಅಲ್ಲ. ಅದನ್ನು ಮನು ರಚಿಸಿದ್ದರಿಂದ ಮನುಸ್ಮೃತಿಯಲ್ಲಿ ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತತ್ವವು ಬರುತ್ತದೆ. ವ್ಯಭಿಚಾರವಿಲ್ಲ.

2. ಪಕ್ಷಧರಮಿಶ್ರರು ಸಾಧ್ಯದ ಜಾತೀಯಪದಕ್ಕೆ ಕೃತ್ಯವನ್ನು ಹೀಗೆ ಹೇಳಿದ್ದಾರೆ— ಶಿಷ್ಯನು ಉಚ್ಚಾರಣೆ ಮಾಡುತ್ತಿರುವ ಆಧುನಿಕವೇದವು ಸಜಾತೀಯವಾದ ಗುರೂಚ್ಚಾರಣಾಪೂರ್ವಕವೇ ಆಗಿದೆ. ತದನಪೇಕ್ಷೋಚ್ಚರಿತವಲ್ಲ. ಬಾಧ ಬಂತು. ಅದರ ಪರಿಹಾರಕ್ಕಾಗಿ ಜಾತೀಯ ಪದಬೇಕು. ಆಗ ಶಿಷ್ಯೋಚ್ಚರಿತವೇದವೂ ಸರ್ಗಾದ್ಯಕಾಲದಲ್ಲಿ ಈಶ್ವರನಿಂದ ಸ್ವತಂತ್ರವಾಗಿ ಉಚ್ಚರಿತವಾದ ವೇದದ ಸಜಾತೀಯವಾದುದರಿಂದ ಸಾಧ್ಯವು ಬಂದು ಬಾಧಪರಿಹಾರವಾಗುತ್ತದೆ.

ಇಂತಹ ಪೌರುಷೇಯತ್ವವನ್ನು ಸಾಧಿಸಿದಾಗ ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ. ಅಪೌರುಷೇಯತ್ವ ಪಕ್ಷದಲ್ಲಿ ಎಲ್ಲಾ ವೇದಗಳೂ ಅಂದರೆ ಈಶ್ವರೋಚ್ಚರಿತವೇದವೂ ಪೂರ್ವಕಾಲೀನ ತದುಚ್ಚಾರಣಸಾಪೇಕ್ಷವಾಗಿದೆ. ಅನಪೇಕ್ಷೋಚ್ಚರಿತಜಾತೀಯತ್ವವು ವೇದದಲ್ಲಿ ಇಲ್ಲ.

ಇಂತಹ ಸಾಧ್ಯಕ್ಕೆ ಅಂದರೆ ಪೌರುಷೇಯತ್ವಕ್ಕೆ ವೇದಾತಿರಿಕ್ತವಾಕ್ಯತ್ವವೇ ಪ್ರಯೋಜಕ, ಎಂದು ಹೇಳಬಹುದಾದರೂ ಅದು ಗೌರವವಾದ ಕಾರಣ, ವಾಕ್ಯತ್ವವೇ ಪ್ರಯೋಜಕ. ಆದ್ದರಿಂದ ಅಪ್ರಯೋಜಕತಾ ಶಂಕೆ ಇಲ್ಲ.

## ನ್ಯಾಯದೀಪ

**अत्रेति ।** वाक्यत्वहेतुदूषणविषये तत्परिहारार्थमन्यथानुमानमुक्तं शब्दखण्डे वेदपौरुषेयत्ववाद इत्यर्थः । वेदः पौरुषेयो वाक्यत्वादित्यत्र सजातीयोच्चारणानपेक्षोच्चरितजातीयत्वं पौरुषेयत्वमिति साध्यस्य निरुक्तत्वादेवं प्रयोग उक्तः । सजातीयपदं समानजातीयानुपूर्वीक-शब्दपरम् । सजातीयोच्चारणानपेक्षया=तदपेक्षां विनैवोच्चरितो यः

स्तज्जातीय इत्यर्थः । सर्गादावीश्वरोच्चरितत्वं पर्यवस्यतीति विवक्षितसिद्धिरिति भावः ।

अस्फुटत्वात् पदकृत्यं व्यनक्ति—**अत्रेति ।** पक्षधरायुक्तमाह—**बाधेति ।** तस्याध्यापकोच्चारणापेक्षयैवोच्चरितत्वाद् बाधः । जातीयपदे दत्ते तु तादृशादिकालीनजातीयत्वान्न बाध इति भावः ।

रुचिदत्तस्तु पठ्यमानभारतादौ सम्प्रदायमते हेतुनिश्चये साध्यसंदेहे संदिग्धानैकान्त्यमिति जातीयपदमित्यवोचत् ।

(ಉಚ್ಚರಿತ) 'ಜಾತೀಯ' ಎಂಬ ಪದಕ್ಕೆ ಪಕ್ಷಧರಮಿಶ್ರರು ಹೇಳಿರುವ ಬಾಧಪರಿಹಾರ ರೂಪವಾದ ಪ್ರಯೋಜನವನ್ನು ಮೂಲದಲ್ಲಿ ತೋರಿಸಲಾಗಿದೆ. ರುಚಿದತ್ತಮಿಶ್ರರು ಅದಕ್ಕೆ ಸಂದಿಗ್ಧಾನೈಕಾಂತ್ಯಪರಿಹಾರರೂಪಪ್ರಯೋಜನವನ್ನು ಹೇಳಿದ್ದಾರೆ. ನಾವು ಇಂದು ಹೇಳುತ್ತಿರುವ ಮಹಾಭಾರತವು ಸಜಾತೀಯ ಉಚ್ಚಾರಣೆಯನ್ನು ಅಪೇಕ್ಷಿಸದೆ ಉಚ್ಚರಿಸಲ್ಪಡುತ್ತಿದೆಯೋ ಏನೋ ಎಂಬ ಸಂದೇಹ ಬಂದಾಗ ಅದರಲ್ಲಿ ಹೇತುವು ನಿಶ್ಚಿತವಾದುದರಿಂದ ವ್ಯಭಿಚಾರ ಸಂದೇಹವು ಬರುತ್ತದೆ. ಜಾತೀಯ ಪದವನ್ನು ಕೊಟ್ಟಾಗ, ಸಜಾತೀಯೋಚ್ಚಾರಣಾನಪೇಕ್ಷ್ಯ ಉಚ್ಚಾರಣೆಯನ್ನು ವ್ಯಾಸರು ಮಾಡಿದ್ದಾರೆ, ಎನ್ನುವುದು ನಿಶ್ಚಿತವಾದುದರಿಂದ ತಜ್ಜಾತೀಯತ್ವವು ಆಧುನಿಕೋಚ್ಚರಿತ ವೇದದಲ್ಲೂ ಇರುವುದರಿಂದ ಸಂದೇಹವು ಪರಿಹಾರವಾಗುತ್ತದೆ.

**मैवम् । मीमांसकं प्रति सिद्धसाधनाभावेऽपि मां प्रति सर्गादावीश्वरेण स्वबुद्धिस्थपूर्वपूर्वकल्पक्रमेणोच्चारणेऽपि तस्योच्चारणान्तरानपेक्षत्वेन सिद्धसाधनात् । व्याप्य इव व्यापकेऽप्यवच्छेदकलाघवस्यादरणीयत्वेनोच्चरितत्वस्यैव व्यापकतया हेतोरुक्तसाध्यं प्रति गौरवेणाप्रयोजकत्वाच्च । आकाङ्क्षादिमत्त्वं तु त्वयाऽप्याहर्तव्यम् ।**

**स्वयंप्रतिभातानां वेदवाक्यानां सजातीयोच्चारणानपेक्षत्वेनांशे सिद्धसाधनाच्च ।।**

ಈ ರೀತಿಯ ಪೌರುಷೇಯತ್ವವನ್ನು ಸಾಧನೆ ಮಾಡಿದರೆ ಮೀಮಾಂಸಕರಿಗೆ ಸಿದ್ಧಸಾಧನತಾದೋಷ ಬರಲಿಕ್ಕಿಲ್ಲ. ಅವರು ಈಶ್ವರನನ್ನು ಅಂಗೀಕರಿಸಿಲ್ಲವಾದುದರಿಂದ ಅಧ್ಯಾಪಕರ

ಪರಂಪರೆಯಿಂದ ಹರಿದು ಬಂದ ವೇದದ ಉಚ್ಚಾರಣೆಯು ಸಜಾತೀಯೋಚ್ಚಾರಣ ಸಾಪೇಕ್ಷವಾಗಿಯೇ ಇರುತ್ತದೆ. ಆದರಿಂದಾಗಿ ಸಜಾತೀಯೋಚ್ಚಾರಣಾನಪೇಕ್ಷ್ಯ ಉಚ್ಚರಿತತ್ವವು ಅವರಿಗೆ ಅಸಮ್ಮತ. ಅದನ್ನು ತಾರ್ಕಿಕರು ಸಾಧಿಸಿದರೆ ಸಿದ್ಧಸಾಧನತಾದೋಷವನ್ನು ಅವರು ಹೇಳುವಂತಿಲ್ಲವಾದರೂ ವೇದಾಂತಿಗಳಾದ ನಾವು ಸರ್ಗಾದ್ಯಕಾಲದಲ್ಲಿ ಈಶ್ವರನು ವೇದವನ್ನು ಉಚ್ಚರಿಸುತ್ತಾನೆ, ಅವನು ಸ್ವತಂತ್ರ–ಸರ್ವಜ್ಞನಾದುದರಿಂದ ಯಾವ ಉಚ್ಚಾರಣೆಯ ಅಪೇಕ್ಷೆಯೂ ಇಲ್ಲದೆ ಹಿಂದಿನ ಕಲ್ಪದಂತೆ ಈ ಕಲ್ಪದಲ್ಲೂ ಹಿಂದಿದ್ದ ವೇದವನ್ನೇ ಉಚ್ಚರಿಸುತ್ತಾನೆ. ಹೀಗೆ ಸಜಾತೀಯೋಚ್ಚಾರಣಾನಪೇಕ್ಷೋಚ್ಚಾರಣ–ಜಾತೀಯತ್ವವು ಸಿದ್ಧವೇ ಆಗಿದೆ. ಸಿದ್ಧಸಾಧನತಾದೋಷ.

2. ವೇದಾತಿರಿಕ್ತವಾಕ್ಯತ್ವವು ಉಕ್ತಪೌರುಷೇಯತ್ವಕ್ಕೆ ಪ್ರಯೋಜಕ ಎನ್ನುವುದು ಗೌರವ, ವಾಕ್ಯತ್ವವೇ ಲಾಘವಾತ್ ಪ್ರಯೋಜಕ, ಎಂದಿದ್ದಾರೆ–ತಾರ್ಕಿಕರು. ವ್ಯಾಪ್ಯಾಂಶದಂತೆ ವ್ಯಾಪಕಾಂಶದಲ್ಲಿ ಗೌರವ–ಲಾಘವಚಿಂತನೆ ನಡೆಸಿದಾಗ–ವಾಕ್ಯತ್ವಹೇತುವಿಗೆ ಉಚ್ಚರಿತತ್ವವೇ ಲಾಘವಾತ್ ಪ್ರಯೋಜಕ, ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತತ್ವವು ಪ್ರಯೋಜಕವಲ್ಲ, ಎಂದೂ ನಿರ್ಧರಿಸಬಹುದು. ಆದ್ದರಿಂದ ಹೇತುವು ಉಕ್ತಸಾಧ್ಯಕ್ಕೆ ಅಪ್ರಯೋಜಕ.

ಹಾಗಾದರೆ, ವಾಕ್ಯಕ್ಕೆ ಉಚ್ಚರಿತತ್ವ ಮಾತ್ರವೇ ಸಾಕೇ? ಆಕಾಂಕ್ಷಾದಿಗಳೂ ಬೇಡವೆ? ಎಂದರೆ, ಆಕಾಂಕ್ಷಾದಿಗಳು ಬೇಕೆಂದು ಪೌರುಷೇಯತ್ವವಾದಿಗಳಿಗೂ ಒಪ್ಪಿರುತ್ತಾರೆ. ಆಕಾಂಕ್ಷಾದಿಮತ್ತಾದ ಪದಕದಂಬಕವೇ ವಾಕ್ಯ. ಆಕಾಂಕ್ಷಾದಿಗಳಿಲ್ಲದೇ ಹೋದರೆ, ವಾಕ್ಯವೇ ಆಗುವುದಿಲ್ಲ. ಆದ್ದರಿಂದ ಆಕಾಂಕ್ಷಾದಿಗಳು ಉಭಯಸಂಪ್ರತಿಪನ್ನ. ಆದ್ದರಿಂದ ಆ ವಿಷಯದಲ್ಲಿ ಗೌರವ ದೋಷವಾಗುವುದಿಲ್ಲ. ಉಚ್ಚರಿತತ್ವದ ಬಗ್ಗೆ ಮಾತ್ರ ವಿವಾದ. ಅದನ್ನು ಲಾಘವ–ಗೌರವಗಳ ಆಧಾರದಲ್ಲಿ ಪರಿಹರಿಸಿಕೊಳ್ಳಬಹುದು.

3. ಅಷ್ಟೇ ಅಲ್ಲ, ವಸಿಷ್ಠಾದಿ ವೇದದ್ರಷ್ಟ್ರುಗಳು ಧ್ಯಾನದಲ್ಲಿ ವೇದವನ್ನು ಕಂಡುಕೊಳ್ಳುತ್ತಾರೆ. ಆ ವೇದವಾಕ್ಯಗಳು ಗುರೂಪದೇಶದಿಂದ ಬಂದಿದ್ದಲ್ಲ. ಅದರಲ್ಲಿ ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತತ್ವ ಇದೆ, ಎಂದು ಸಿದ್ಧಾಂತಿಗಳಿಗೂ ಸಮ್ಮತವಾದುದರಿಂದ ಸಿದ್ಧಸಾಧನತಾದೋಷ.

## ನ್ಯಾಯದೀಪ

**मीमांसकं प्रतीति ।** तस्य निरीश्वरवादित्वादिति भावः ।

''पौरुषेयत्वानुमानानामप्रयोजकत्वात्'' इति सुधोक्तिमनुरुध्याप्रयोजकत्वं व्यनक्ति—**व्याप्य इवेति ।** यथा धूमादौ नीलधूमत्वादिकं न व्याप्यतावच्छेदकं, किंतु लाघवाद् धूमत्वादिकमित्युच्यते, तथा

**व्यापकेऽपि पीतवह्नित्वादिकं न व्यापकतावच्छेदकं, किंतु वह्नित्वादिकमेव । तद्वदिहापि वेदातिरिक्तवाक्यत्वापेक्षया वाक्यत्वं लघ्वितिवत् साध्ये वाक्यत्वनिरूपितव्यापकतावच्छेदकं न सजातीयोच्चारणानपेक्षोच्चरितजातीयत्वं । किंतु लाघवादुच्चरितत्वमेवेत्युक्तसाध्ये वाक्यत्वहेतुर्गौरवपराहतः सन्नप्रयोजको भवतीत्यर्थः ॥**

ಸುಧಾದಲ್ಲಿ 'ಪೌರುಷೇಯತ್ವಾನುಮಾನಗಳೆಲ್ಲವೂ ಅಪ್ರಯೋಜಕಗಳು' ಎಂದಿದೆ. ಇದಕ್ಕನುಗುಣವಾಗಿ ಮೂಲದಲ್ಲಿ ಅನುಮಾನಕ್ಕೆ ಅಪ್ರಯೋಜಕತ್ವವನ್ನು ಹೇಳಲಾಗಿದೆ.

'ವ್ಯಾಪ್ತೇಃ ಇವ' ಎಂಬ ಮೂಲದ ಅಭಿಪ್ರಾಯ ಹೀಗೆ—ವಹ್ನಿವ್ಯಾಪ್ಯವಾದ ಧೂಮದಲ್ಲಿ ಗೌರವಾತ್ ನೀಲಧೂಮತ್ವವು ವ್ಯಾಪ್ಯತಾವಚ್ಛೇದಕ, ಅಲ್ಲ. ಲಾಘವಾತ್ ಧೂಮತ್ವವೇ ಅವಚ್ಛೇದಕ. ಅದರಂತೆ, ವ್ಯಾಪಕತಾವಚ್ಛೇದಕವೂ ಪೀತವಹ್ನಿತ್ವವಲ್ಲ, ಗೌರವಾತ್. ವಹ್ನಿತ್ವವೇ ಅವಚ್ಛೇದಕ. ಇದೇರೀತಿ ಪ್ರಕೃತದಲ್ಲೂ ವ್ಯಾಪ್ಯತಾವಚ್ಛೇಕ ಲಾಘವಾತ್ ವಾಕ್ಯತ್ವ ಹೊರತು ವೇದೇತರವಾಕ್ಯತ್ವವಲ್ಲ ಎಂದು ನೀವೇ ಹೇಳಿದಂತೆ, ವಾಕ್ಯತ್ವನಿರೂಪಿತ–ವ್ಯಾಪಕತಾವಚ್ಛೇದಕವೂ ಲಾಘವಾತ್ ಉಚ್ಚರಿತತ್ವ ಮಾತ್ರ, ಸಜಾತೀಯೋಚ್ಚಾರಣಾನಪೇಕ್ಷ–ಉಚ್ಚರಿತ ಜಾತೀಯತ್ವ ಅಲ್ಲ. ಆದ್ದರಿಂದ ವಾಕ್ಯತ್ವಹೇತುವು ಉಕ್ತಸಾಧ್ಯಕ್ಕೆ ಅಪ್ರಯೋಜಕ.

## ನ್ಯಾಯದೀಪ

नन्वेवं वेदे आकाङ्क्षायोग्यताऽऽसत्त्यादिमत्त्वमपि न सिध्येत् । लाघवेनोच्चरितत्वमात्रेण वाक्यत्वस्योपपत्त्या गौरवेणाकाङ्क्षादिमत्त्वं प्रत्यप्रयोजकत्वादित्यत आह–**आकाङ्क्षादीति । त्वयाऽपि** पौरुषेयत्ववादिनापीत्यर्थः । वाक्यत्वस्याकाङ्क्षादिमच्छब्दत्वरूपतया तदभावे वाक्यत्वस्य स्वरूपोच्छित्तेरुभयसंमततया तत्र गौरवदोषाभावात् । इह च त्वदुक्तगुरुभूतसाध्येन विनाऽप्यस्तु वाक्यत्वमित्युक्तौ बाधकाभावादप्रयोजकत्वमेव वाक्यत्वस्येति भावः । **स्वयमिति ।** गुरुमुखोच्चारणापेक्षां विनैवेत्यर्थः ।

''जन्मान्तरे श्रुतास्तास्तु वासुदेवप्रसादतः ।
मुनीनां प्रतिभास्यन्ति भागेनैव न सर्वशः'' ॥

**इति स्मृत्या जन्मान्तरेऽधीतानामस्मिन्जन्मनि गुरुमुखोच्चारणापेक्षां विनैव कदाचित्कालविशेषे प्रतीतानां वेदवाक्यानामित्यर्थः ।।**

ವಾಕ್ಯತ್ವಕ್ಕೆ ಉಚ್ಚರಿತತ್ವವೇ ಪ್ರಯೋಜಕವಾದರೆ ವಾಕ್ಯದಲ್ಲಿ ಆಕಾಂಕ್ಷಾ-ಯೋಗ್ಯತಾ-ಆಸತ್ತ್ಯಾದಿಗಳೂ ಅನಗತ್ಯವಾದಾವು. ಲಾಘವಾತ್ ಉಚ್ಚರಿತತ್ವ ಮಾತ್ರದಿಂದಲೇ ವಾಕ್ಯತ್ವವು ಉಪಪನ್ನವಾಗುತ್ತದೆ, ಎಂಬ ಆಕ್ಷೇಪಕ್ಕೆ ''ಆಕಾಂಕ್ಷಾದಿಮತ್ತ್ವಂ ತು'' ಎಂಬ ಮೂಲದಲ್ಲಿ ಸಮಾಧಾನವಿದೆ. ಅದರ ಅಭಿಪ್ರಾಯ-ಆಕಾಂಕ್ಷಾದಿಮತ್ತ್ವವೇ ವಾಕ್ಯತ್ವ. ಆಕಾಂಕ್ಷಾದಿಗಳಿಲ್ಲದಿದ್ದರೆ ವಾಕ್ಯತ್ವಸ್ವರೂಪವೇ ನಿಷ್ಪನ್ನವಾಗುವುದಿಲ್ಲ. ಆದ್ದರಿಂದ ಆ ವಿಷಯದಲ್ಲಿ ಗೌರವ-ಲಾಘವ ವಿಚಾರಕ್ಕೆ ಆಸ್ಪದವಿಲ್ಲ.

ಸ್ವಯಂಪ್ರತಿಭಾತವೇದ ಎಂದರೆ ಗುರುಮುಖದಿಂದ ಅಧ್ಯಯನವಿಲ್ಲದೇ ದೃಷ್ಟವಾದ ವೇದ. ''ಜನ್ಮಾಂತರೇ'' ಎಂಬ ಪ್ರಮಾಣದಂತೆ ಜನ್ಮಾಂತರದಲ್ಲಿ ಅಧ್ಯಯನ ಮಾಡಿರುವ ವೇದಗಳು ಈ ಜನ್ಮದಲ್ಲಿ ಅಧ್ಯಯನವಿಲ್ಲದೆಯೇ, ಅದರ ಕೆಲವು ಭಾಗಗಳ ಸ್ಫುರಣವು ಋಷಿಗಳಿಗೆ ಆಗುತ್ತದೆ. ಇದೇ ಸ್ವಯಂಪ್ರತಿಭಾತವೇದ.

## ನ್ಯಾಯದೀಪ

**यदत्रोक्तं रुचिदत्तादिना तद्भिन्नत्वेन पक्षो विशेषणीय इति तन्न । वेदः पौरुषेयो न वेति कृत्स्नवेदविषयपौरुषेयत्वविमत्यनानुगुण्येनार्थान्तरात् ।।**

ರುಚಿದತ್ತಾದಿ ತಾರ್ಕಿಕರು, ಸ್ವಯಂಪ್ರತಿಭಾತವೇದದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ ತದ್ಭಿನ್ನವಾದ ವೇದವೇ ಪಕ್ಷ ಎಂದಿರುತ್ತಾರೆ. ಆದರೆ, ಅದು ಸರಿಯಲ್ಲ. ಸಮಗ್ರವೇದದಲ್ಲಿ ಪೌರುಷೇಯತ್ವಾಪೌರುಷೇಯತ್ವ ಚರ್ಚೆ ಇರುವಾಗ ವೇದೈಕದೇಶದಲ್ಲಿ ಪೌರುಷೇಯತ್ವವನ್ನು ಸಾಧಿಸಿದರೆ ಅರ್ಥಾಂತರತಾದೋಷ ಬರುತ್ತದೆ.

## ಅವತಾರಿಕೆ

**मण्युक्तप्रयोगान्तरं निराह—एतेनेति ।**

ಏತೇನ, ಎಂಬ ಮೂಲದಲ್ಲಿ ಮಣಿಕಾರ ಹೇಳಿರುವ ಇನ್ನೊಂದು ಅನುಮಾನವನ್ನು (ಪು.366 ರಬ್ಬ) ನಿರಾಕರಿಸಲಾಗಿದೆ.

**एतेन, वेदत्वं सजातीयोच्चारणानपेक्षोच्चरितवृत्ति, महाजनपरिग्राह्यतावच्छेदकत्वे सति वाक्यवृत्तित्वात् ।**

**स्वाधिकरणसमानानुपूर्वीकसकलवृत्तित्वाद्वा । भारतत्ववत् ।**

**अत्रच पक्षस्यैकत्वेन नांशे सिद्धसाधनम् । आद्ये हेतावेतद्वेदत्वाद्यौ व्यभिचारपरिहाराय महाजनेत्यादिसत्यन्तं विशेषणम् । एतद्वेदत्वं तु न तदवच्छेदकम् । लाघवेन धूमत्ववद्वेदत्वस्यैव तदवच्छेदकत्वात् । यागत्वादौ व्यभिचारवारणाय वाक्यवृत्तित्वादित्युक्तम् ।**

**द्वितीये सकलपदेनैवैतद्वेदत्वादौ व्यभिचारनिरासः। एतद्वेदत्वस्य स्वाधिकरणेनैतद्वेदेन समानानुपूर्वीके पूर्ववेदे वृत्त्यभावात् ।**

ಪಕ್ಷ—ವೇದತ್ವ.

ಸಾಧ್ಯ—ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತವೃತ್ತಿತ್ವ.

ಹೇತು 1—ಮಹಾಜನ–ಪರಿಗ್ರಾಹ್ಯತಾವಚ್ಛೇದಕತ್ವೇ ಸತಿ ವಾಕ್ಯವೃತ್ತಿತ್ವಾತ್.

ಹೇತು 2—ಸ್ವಾಧಿಕರಣ–ಸಮಾನಾನುಪೂರ್ವೀಕ–ಸಕಲವೃತ್ತಿತ್ವಾತ್.

ದೃಷ್ಟಾಂತ—ಭಾರತತ್ವಾತ್.

ಹಿಂದಿನ ಅನುಮಾನದಲ್ಲಿ ವೇದವು ಪಕ್ಷ, ಈ ಅನುಮಾನದಲ್ಲಿ ವೇದತ್ವವು ಪಕ್ಷ. ವೇದ ಉಚ್ಚಾರಣಭೇದೇನ ಅನೇಕ. ವೇದತತ್ವ ಒಂದೇ.

ಹಿಂದಿನ ಅನುಮಾನದಲ್ಲಿ 'ಉಚ್ಚರಿತಸಜಾತೀಯ' ಎಂದು ಸಾಧ್ಯನಿರ್ದೇಶ. ಈ ಅನುಮಾನದಲ್ಲಿ '...ಉಚ್ಚರಿತವೃತ್ತಿ' ಎಂದು ಸಾಧ್ಯ. ಆದ್ದರಿಂದ ಸಾಧ್ಯದಲ್ಲಿ ವಿಶೇಷವೇನೂ ಇಲ್ಲ.

ವೇದತ್ವವು ಪಕ್ಷವಾದ್ದರಿಂದಲೇ ಈ ಅನುಮಾನದಲ್ಲಿ ಸಿದ್ಧಸಾಧನತಾಕ್ಕೆ ಅವಕಾಶವಿಲ್ಲ. ಹಿಂದೆ ವೇದವಿಶೇಷವಾದ ಸ್ವಯಂಪ್ರತಿಭಾತವೇದದಲ್ಲಿ ಸಿದ್ಧಸಾಧನತಾವನ್ನು ಹೇಳಲಾಗಿತ್ತು. ಆದರೆ, ಅಂತಹ ವೇದವಿಶೇಷವು ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತವೆಂದು ಸಿದ್ಧವಾದರೂ ಈಶ್ವರೋಚ್ಚರಿತವೇದವು ಹೀಗಲ್ಲವಾದುದರಿಂದ ವೇದತ್ವವು ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತ–ವೃತ್ತಿಯಾಗುತ್ತದೆ. ಇದನ್ನು ನೈಯಾಯಿಕರು ಒಪ್ಪಿದರೂ ಸಿದ್ಧಾಂತದಲ್ಲಿ ಅದೂ ಕಲ್ಪಾಂತರಗತವೇದ ಸಜಾತೀಯೋಚ್ಚಾರಣಸಾಪೇಕ್ಷೋಚ್ಚರಿತವಾದುದರಿಂದ ಸಿದ್ಧಸಾಧನತಾಕ್ಕೆ ಆಸ್ಪದವಿಲ್ಲ.

ಹೇತುಮಾತ್ರ ಭಿನ್ನವಾದುದು. ವೇದವು ಮಹಾಜನ–ಪರಿಗ್ರಹೀತವಾದುದರಿಂದ ವೇದತ್ವವು ಮಹಾಜನಪರಿಗ್ರಹೀತತಾವಚ್ಛೇಕವಾಗುತ್ತದೆ. ಈ ವಿಶೇಷಣವನ್ನು ಬಿಟ್ಟು ವಾಕ್ಯವೃತ್ತಿತ್ವಾತ್ ಎಂದಿಷ್ಟೇ ಹೇತುಮಾಡಿದರೆ ಶಿಷ್ಯೋಚ್ಚರಿತವೇದನಿಷ್ಠವಾದ ಏತದ್‌ವೇದತ್ವದಲ್ಲಿ ವ್ಯಭಿಚಾರಬರುತ್ತದೆ. ಅದರಲ್ಲಿ ವಾಕ್ಯವೃತ್ತಿತ್ವ ಇದೆ. ಆದರೆ, ಗುರೂಚ್ಚಾರಣಾಪೇಕ್ಷೋಚ್ಚರಿತವೃತ್ತಿತ್ವ ಇರುವುದರಿಂದ ಸಾಧ್ಯ ಇಲ್ಲ. ಆದಕ್ಕಾಗಿ ವಿಶೇಷಣಾಂತ ಬೇಕು. ಆ ವಿಶೇಷಣ ಏತದ್ವೇದತ್ವದಲ್ಲಿ ಇಲ್ಲ. ಮಹಾಜನ ಪರಿಗ್ರಾಹ್ಯವಾದುದು ಸಕಲವೇದವೂ ಆಗಿರುವುದರಿಂದ ತದ್‌ಗ್ರಹೀತತಾವಚ್ಛೇದಕ ವೇದತ್ವವೇ ಆಗುವಾಗ ಏತದ್ವೇದತ್ವವು ಅವಚ್ಛೇದಕ ಎನ್ನುವುದು ಗೌರವ. ಉದಾಹರಣೆಗೆ– ವಹ್ನಿವ್ಯಾಪ್ಯತಾವಚ್ಛೇಕವಾದುದು ಧೂಮತ್ವ ಹೊರತು ಏತದ್ಧೂಮತ್ವವಲ್ಲ.

ಹೇತುವಿನಲ್ಲಿ ವಾಕ್ಯವೃತ್ತಿತ್ವವನ್ನು ಬಿಟ್ಟರೆ ಯಾಗತ್ವದಲ್ಲಿ ವ್ಯಭಿಚಾರ. ಯಾಗವೂ ಮಹಾಜನ ಪರಿಗ್ರಹೀತವಾಗಿದೆ. ಯಾಗತ್ವವು ಗ್ರಹೀತತಾವಚ್ಛೇದಕವಾಯಿತು. ಅದರಲ್ಲಿ "ಉಚ್ಚರಿತವೃತ್ತಿತ್ವ" ಸಾಧ್ಯ ಇಲ್ಲ.

ಎರಡನೆಯ ಹೇತುವಿನಲ್ಲಿ ಸ್ವ ಎಂದರೆ ವೇದತ್ವ. ಅದಕ್ಕೆ ಅಧಿಕರಣವಾದುದು ಏತದ್ ವೇದ. ಆದರಂತೆಯೇ ಆನುಪೂರ್ವೀ ಉಳ್ಳ ಚೈತ್ರಾದ್ಯುಚ್ಚರಿತ–ಸಕಲ ವೇದಗಳಲ್ಲೂ ವೇದತ್ವ ಇದೆ. ಇಲ್ಲಿ ಸಕಲವೃತ್ತಿತ್ವವನ್ನು ಹೇಳಿರುವುದರಿಂದ ಹಿಂದೆ ಹೇಳಿದಂತೆ "ಏತದ್ವೇದತ್ವವನ್ನು" ಪರಿಗ್ರಹಿಸಿ ವ್ಯಭಿಚಾರಕ್ಕೆ ಅವಕಾಶವಿಲ್ಲ. ಏತದ್ವೇದತ್ವವು ಏತದ್ವೇದಸದೃಶವಾದ ಆನುಪೂರ್ವೀ ಉಳ್ಳ ವೇದಾಂತರದಲ್ಲಿ ಇಲ್ಲ. ಆದ್ದರಿಂದ ಅದು ಸಕಲವೇದವೃತ್ತಿಯಲ್ಲ.

## ನ್ಯಾಯದೀಪ

**एतेनेति ।।** निरस्तमित्यन्वयः। अत्रापि साध्ये सजातीयपदं पूर्ववच्छब्दमूलकस्मृतित्वे व्यभिचारवारकं ध्येयम्। पठ्यमानवेदे वाधाप्रसक्तेर्न जातीयपदोक्तिः।

**महाजनेति ।** यद्यपि मणौ प्रमाणतावच्छेदक–वाक्यधर्मत्वादित्येव हेतुरुक्तः। तथापि प्रमाणतावच्छेदकत्वस्य प्रमाणमात्रवृत्तित्वरूपत्वेऽ-द्यतनवेदत्वे व्यभिचारात्। तदवच्छित्तिप्रत्ययजनकत्वे त्वसिद्धिः। मणिकृन्निरुक्तवेदत्वस्य गुरुत्वेनावच्छित्तिप्रत्ययाजनकत्वेन स्मृति-साधारणस्यान्यस्यैव वाच्यत्वादित्यतः पक्षधराद्युक्तविवक्षानुरोधेन महाजनेत्याद्युक्तम् ।।

ಮಣಿಗ್ರಂಥದಲ್ಲಿ ಈ ಅನುಮಾನದ ಹೇತು ಹೀಗಿದೆ— ಪ್ರಮಾಣತಾವಚ್ಛೇಕವಾಕ್ಯ ಧರ್ಮತ್ವಾತ್-ಎಂದು. (ಪು.366) ಆದರೆ, ಯಥಾಶ್ರುತವಾದ ಈ ಹೇತುವು ಸರಿಯಲ್ಲ. ಪ್ರಮಾಣತಾವಚ್ಛೇದಕವಾದ ವಾಕ್ಯವೃತ್ತಿಧರ್ಮ ಎಂದರೆ ವೇದತ್ವವು ಆಗುವಂತೆ ಏತದ್ವೇದತ್ವವೂ ಆಗುತ್ತದೆ. ಅದೂ ಪ್ರಮಾಣಮಾತ್ರವೃತ್ತಿಧರ್ಮವಾದುದರಿಂದ ಪ್ರಮಾಣತಾವಚ್ಛೇದಕವಾಕ್ಯ ಮಾತ್ರ ವೃತ್ತಿಧರ್ಮವಾಗಿದೆ. ಅದಕ್ಕಾಗಿ 'ಅವಚ್ಛೇದಕತ್ವಂ ತನ್ಮಾತ್ರವೃತ್ತಿತ್ವಂ' ಎಂದು ಹೇಳದೆ ಅವಚ್ಛಿತ್ತಿಪ್ರತ್ಯಯಜನಕತ್ವಂ ಎನ್ನಬೇಕು. ಇದು ವೇದತ್ವದಲ್ಲೂ ಬರುವುದಿಲ್ಲವಾದ ಕಾರಣ ಅಸಿದ್ಧಿ. ಮಣಿಕಾರ ವೇದತ್ವವನ್ನು ಹೀಗೆ ನಿರ್ವಚನ ಮಾಡಿದ್ದಾನೆ— "ಶಬ್ದತದುಪಜೀವಿ-ಪ್ರಮಾಣಾತಿರಿಕ್ತಪ್ರಮಾಣಜನ್ಯ-ಪ್ರಮಿತ್ಯವಿಷಯಾರ್ಥಕತ್ವೇ ಸತಿ ಶಬ್ದಜನ್ಯವಾಕ್ಯಾರ್ಥ-ಜ್ಞಾನಾಜನ್ಯ-ಪ್ರಮಾಣಶಬ್ದತ್ವಮ್" ಇದು ಗುರುಧರ್ಮವಾದ ಕಾರಣ ಅವಚ್ಛಿತ್ತಿ ಪ್ರಮಾಜನಕವೇ ಅಲ್ಲ. ಏಕೆಂದರೆ, ಅವಚ್ಛಿತ್ತಿ ಪ್ರಮಾ ಎಂದರೆ 'ಪ್ರಮಾಣ ವಾಕ್ಯ ಪ್ರಮಿತಿ'. ಸ್ಮೃತ್ಯಾದಿಗಳೂ ಅಂತಹ ಪ್ರಮಾಣವಾಕ್ಯವಾಗಿವೆ. ಅವುಗಳಲ್ಲಿ ಮಣಿಕಾರೋಕ್ತವಾದ ಈ ಧರ್ಮ ಇಲ್ಲ. ಹೀಗಾಗಿ ಅದು ಸ್ಮೃತಿಸಾಧಾರಣಧರ್ಮವಲ್ಲವಾದ ಕಾರಣ ಅವಚ್ಛಿತ್ತಿಪ್ರಮಾಜನಕವಲ್ಲ. ಈ ದೋಷವನ್ನು ಪರಿಗಣಿಸಿ ಪಕ್ಷಧರಮಿಶ್ರ ಮಣ್ಯುಕ್ತ ಹೇತುವನ್ನು ಮಹಾಜನಪರಿಗ್ರಾಹ್ಯತಾವಚ್ಛೇದಕೇತ್ಯಾದಿ ರೂಪವಾಗಿ ಪರಿಷ್ಕರಿಸಿದ್ದಾನೆ. ಅದನ್ನೇ ಮೂಲದಲ್ಲಿ ಹೇಳಲಾಗಿದೆ.[1]

## ನ್ಯಾಯದೀಪ

नरहर्युक्तविवक्षानुरोधेनाह—**स्वेति** । स्वस्य=वेदत्वस्य यदधिकरणम् सर्गादिकालीनो वाऽद्यतनैः पठ्यमानो वा वेदः, तत्समानानुपूर्वीकाः सर्वैः पाठ्यमाना वेदाः, तत्सकलवृत्तित्वादित्यर्थः । **भारतत्ववदिति** । तस्य तादृशाद्यभारतवृत्तित्वात् साध्यवत्वं, साधनवत्त्वं च व्यक्तमिति भावः । **अंश इति** । स्वयंप्रतिभातवेदांश इत्यर्थः । **एतद् त्वेति** । बुद्धिस्थं किञ्चिच्चैत्रादिना पठ्यमानवेदत्वम् एतद्वेदत्वपदेन गृह्यते । सत्यन्तेनोक्तदोषनिरासं व्यनक्ति-**एतद्वेदत्वन्त्विति** ।

ನರಹರಿಮಿಶ್ರರು ಹೇಳಿರುವ ಹೇತುವಿನ ಪರಿಷ್ಕೃತರೂಪ-ದ್ವಿತೀಯಹೇತು. ಅಲ್ಲಿ ಸ್ವ ಎಂದರೆ ವೇದತ್ವ. ಅದಕ್ಕೆ ಅಧಿಕರಣವಾದ ವೇದವೆಂದರೆ ಸೃಷ್ಟಿಯ ಆರಂಭದ ವೇದ ಅಥವಾ ಇಂದು

1. **ಪಕ್ಷಧರಮಿಶ್ರನ ವ್ಯಾಖ್ಯಾಸಹಿತ ಶಬ್ದಖಂಡಮಣಿ ಇನ್ನೂ ಮುದ್ರಣವಾಗಿಲ್ಲ. ಮಾಥುರೀ ವ್ಯಾಖ್ಯಾನ ಮುದ್ರಿತ ವಾಗಿದೆ. ಅದರಲ್ಲೂ ಈ ಹೇತುವನ್ನು "ಅಧ್ಯಯನವಿಧಿ ವಿಷಯತಾವಚ್ಛೇದಕತ್ವಂ" ಎಂದೇ ಪರಿಷ್ಕರಿಸಲಾಗಿದೆ.**

ಪಠಮಾನವಾದ ವೇದ. ತತ್ಸಮಾನಾನುಪೂರ್ವೀಕವೇದವೆಂದರೆ ಎಲ್ಲರೂ ಪಠಿಸುವ ವೇದ. (ವೇದತ್ವವು), ಅವೆಲ್ಲವುಗಳಲ್ಲೂ ಇರುವುದರಿಂದ, ಎಂದು ಹೇತುವಿಗೆ ಅರ್ಥ. ಭಾರತತ್ವರೂಪ ದೃಷ್ಟಾಂತದಲ್ಲೂ ಈ ಹೇತು–ಸಾಧ್ಯಗಳು ಇವೆ.

ಏತದ್ವೇದತ್ವ ಎಂದರೆ–ನಮ್ಮ ಬುದ್ಧಿಯಲ್ಲಿರುವ, ಚೈತ್ರಾದಿ ವ್ಯಕ್ತಿಗಳು ಉಚ್ಚರಿಸಿದ ಯಾವುದೋ ಒಂದು ವೇದಗತವಾದ ಧರ್ಮ.

**इति निरस्तम् । उक्तरीत्या वेदत्वस्य सजातीयोच्चारणानपेक्षेणेश्वरेण स्वयंप्रतिभातवेदैः वसिष्ठादिभिश्चोच्चरिते वृत्त्या सिद्धसाधनात् । वाक्यवृत्तित्वस्योच्चरितत्वेन, महाजनपरिग्राह्यतावच्छेदकत्वस्य च धर्मादिप्रमापकवृत्तित्वेनैवोपपत्त्योक्तं साध्यं प्रति गौरवेणाप्रयोजकत्वाच्च । द्वितीयहेतोरपि स्वाधिकरणे सर्वत्र तुल्यानुपूर्वीप्रयोजककण्ठताल्वादि-रूपतुल्यकारणेनैवोपपत्त्या गौरवेणोक्तसाध्यं प्रत्यप्रयोजकत्वात् ॥**

1. ಈ ಅನುಮಾನವೂ ಹಿಂದೆ ಹೇಳಿರುವ ದೋಷದಿಂದಲೇ ನಿರಾಕೃತವಾಗಿದೆ. ಹಿಂದೆ ಹೇಳಿದಂತೆ, ಈಶ್ವರನು ಸ್ವತಂತ್ರನಾದುದರಿಂದ ಹಿಂದಿನಕಲ್ಪದಲ್ಲಿದ್ದ ವೇದದ ಉಚ್ಚಾರಣೆಯ ಅವಲಂಬನೆ ಇಲ್ಲದೆಯೇ ಅದೇ ವೇದವನ್ನು ಈ ಕಲ್ಪದಲ್ಲೂ ಉಚ್ಚರಿಸುತ್ತಾನೆ. ಅಂತಹ ವೇದದಲ್ಲಿ ವೇದತ್ವ ಇದೆ, ಎಂದು ಅಪೌರುಷೇಯತ್ವವಾದಿಗಳಿಗೂ ಸಮ್ಮತವಾಗಿದೆ. ಅದರಂತೆ ಸ್ವಯಂಪ್ರತಿಭಾತ–ವೇದಭಾಗವೂ ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತವಾಗಿದೆ. ತದ್ವೃತ್ತಿಯಾಗಿದೆ ವೇದತ್ವ. ಆದ್ದರಿಂದ ಸಿದ್ಧಸಾಧನತಾದೋಷ.

2. ಅನುಮಾನವು ಅಪ್ರಯೋಜಕವೂ ಆಗಿದೆ. ಹೇತುಘಟಕವಾದ ಎರಡೂ ಅಂಶಗಳೂ ಸ್ವತಂತ್ರ ಪುರುಷೋಚ್ಚರಿತತ್ವ ಇಲ್ಲದೆಯೂ ಉಪಪನ್ನವಾಗುತ್ತವೆ. ವಾಕ್ಯವೃತ್ತಿತ್ವರೂಪವಾದ ವಿಶೇಷ್ಯಾಂಶವು ಉಚ್ಚರಿತತ್ವಮಾತ್ರದಿಂದಲೇ ಉಪಪನ್ನವಾಗುತ್ತದೆ. ಸ್ವತಂತ್ರೋಚ್ಚರಿತತ್ವದ ಅಗತ್ಯ ವಿಲ್ಲ. ವೇದವು ಧರ್ಮಾದಿ–ಅತೀಂದ್ರಿಯ–ವಸ್ತುಪ್ರಮಾಪಕವಾದುದರಿಂದಾಗಿಯೇ ಮಹಾಜನ ಪರಿಗೃಹೀತವಾಗಿದೆ. ಅದರಿಂದಾಗಿಯೇ ವೇದತ್ವವೂ ಮಹಾಜನಪರಿಗ್ರಾಹ್ಯತಾವಚ್ಛೇದಕವಾಗುತ್ತದೆ. ಸ್ವತಂತ್ರಪುರುಷೋಚ್ಚರಿತತ್ವದ ಅಗತ್ಯವಿಲ್ಲ. ಹೀಗೆ ಉಚ್ಚರಿತತ್ವ ಮತ್ತು ಧರ್ಮಾದಿ ಬೋಧಕತ್ವ ಈ ಎರಡು ಧರ್ಮಗಳೇ ಲಘುಧರ್ಮಗಳು, ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತತ್ವವು ಗುರುವಾದುದರಿಂದ ಅವು ಹೇತುವಿಗೆ ಪ್ರಯೋಜಕಗಳಲ್ಲ. ಹೀಗೆ, ಸಾಧ್ಯಂ ವಿನಾಪಿ ಹೇತುವು ಉಪಪನ್ನವಾಗುವುದರಿಂದ ಅನುಮಾನವು ಅಪ್ರಯೋಜಕ.

3. ಎರಡನೆಯ ಹೇತು—ಸ್ವಾಧಿಕರಣ-ಸಮಾನಾನುಪೂರ್ವೀಕ-ಸಕಲವೃತ್ತಿತ್ವಾತ್, ಎಂದು. ಅದಕ್ಕೂ ಉಕ್ತಸಾಧ್ಯವು ಗುರುರೂಪವಾದುದರಿಂದ ಪ್ರಯೋಜಕವಲ್ಲ. ಸಕಲವೇದಗಳಲ್ಲೂ (ಚೈತ್ರ-ಮೈತ್ರಾದ್ಯುಚ್ಚರಿತ ಎಲ್ಲಾ ವೇದಗಳಲ್ಲೂ) ಒಂದೇ ರೀತಿಯ ಅನುಪೂರ್ವಿ ಇರಲು ಕಾರಣ ಆ ವೇದಗಳ ಉಚ್ಚಾರಣೆಗೆ ಬೇಕಾಗಿರುವ ಕಂಠ-ತಾಲ್ವಾದಿ ವರ್ಣೋಚ್ಚಾರಣೆಗೆ ಬೇಕಾದ ಸ್ಥಾನಗಳು ಒಂದೇ ವಿಧವಾಗಿರುವುದು. ಹೊರತು ಉಕ್ತಸಾಧ್ಯವಲ್ಲ. ಹೀಗೆ ಈ ಅನುಮಾನವೂ ಅಪ್ರಯೋಜಕ.

## ನ್ಯಾಯದೀಪ

**धूमत्ववदिति ।** धूमत्वं यथा वह्निव्याप्यत्वावच्छेदकं नत्वेतद्धूमत्वं तथेत्यर्थः । **द्वितीय इति ।** हेतावित्यर्थः । व्यभिचारनिरासं व्यनक्ति —**एतद्वेदस्येति ।** **इतीति ।** मणावुक्तमेतेन निरस्तमित्यर्थः । एतेनेत्युक्तं व्यनक्ति—**उक्तरीत्येति ।** मां प्रतीत्यादिनोक्तरीत्येत्यर्थः । **स्वयंप्रतिभातवेदैरिति** बहुव्रीहिः ।

हेतौ विशेष्यविशेषणरूपांशद्वयस्याप्युक्तसाध्येन विनाऽन्यथोपपत्त्याऽप्रयोजकत्वमाह—**वाक्येत्यादिना ।** उच्चरितवृत्तित्वेनोपपत्त्येत्यन्वयः । गौरवेणेत्युपलक्षणम् । विपक्षे बाधकाभावेन चेत्यपि ध्येयम् । श्रुत्यादिबाधादिरूपप्रागुक्तसाधारणदोषोऽपि अत्रानुसन्धेयः । **तुल्यकारणेनेति ।** येन कारणेन वेदत्वाश्रयव्यक्तिषु सर्वत्र तुल्यानुपूर्वी भवति तादृशकारणेनैव हेतुरुपपन्नः । नत्वन्येन । तच्च कारणं कण्ठताल्वादिकं, नतु तलताडनादिरूपम् । तथाच सजातीयोच्चारणानपेक्षोच्चरितवृत्तित्वप्रयुक्तत्वाभावात् अप्रयोजकत्वं हेतोरित्यर्थः ॥

ಮಣ್ಯುಕ್ತವಾದ ಈ ಅನುಮಾನದ ಹೇತುವಿನಲ್ಲಿ ಎರಡು ಅಂಶಗಳಿವೆ. ಆ ಎರಡೂ ಅಂಶಗಳೂ ಸಾಧ್ಯವಿಲ್ಲದೆಯೂ ಕಾರಣಾಂತರದಿಂದಲೇ ಉಪಪನ್ನವಾಗುವುದರಿಂದ ಅನುಮಾನವು ಅಪ್ರಯೋಜಕ ಎನ್ನುವುದನ್ನು "ವಾಕ್ಯೇತ್ಯಾದಿ" ಮೂಲದಲ್ಲಿ ಹೇಳಲಾಗಿದೆ.

ಉಕ್ತಸಾಧ್ಯವು ಗುರುರೂಪವಾದ ಕಾರಣ ಪ್ರಯೋಜಕವಲ್ಲ, ಎಂದು ಮೂಲದಲ್ಲಿದೆ. ಅದು ಉಪಲಕ್ಷಣ. "ಹೇತುರಸ್ತು ಸಾಧ್ಯಂ ಮಾಸ್ತು" ಎಂದು ಶಂಕೆ ಮಾಡಿದಾಗ ಬಾಧಕವು

ಇಲ್ಲದಿರುವುದರಿಂದಲೂ ಅದು ಅಪ್ರಯೋಜಕವಾಗಿದೆ. ಈ ದೋಷಗಳಲ್ಲದೆ ಅಪೌರುಷೇಯತ್ವ ಬೋಧಕಶ್ರುತಿಬಾಧವೂ ಈ ಎಲ್ಲಾ ಅನುಮಾನಗಳಿಗೂ ಸಾಮಾನ್ಯದೋಷವಾಗಿದೆ.

ತುಲ್ಯಕಾರಣೇನ್ನೈವ ಎಂದರೆ ಯಾವ ಕಾರಣದಿಂದ ವೇದತ್ವಧರ್ಮಕ್ಕೆ ಆಶ್ರಯವಾದ ಸಮಸ್ತವೇದದಲ್ಲೂ ಒಂದೇ ವಿಧದ ಆನುಪೂರ್ವೀ ಇದೆಯೋ ಅದೇ ಕಾರಣದಿಂದಲೇ ವೇದತ್ವದಲ್ಲಿ ದ್ವಿತೀಯಹೇತುಸತ್ವವು ಉಪಪನ್ನವಾಗುವಾಗ ಉಕ್ತಸಾಧ್ಯದ ಅಗತ್ಯ ಹೇತುವಿಗೆ ಇಲ್ಲ. ಅಂತಹ ಕಾರಣ ಕಂಠತಾಲ್ವಾದಿ ವರ್ಣೋಚ್ಚಾರಣ–ಸ್ಥಾನಗಳೇ ಹೊರತು, ತಲತಾಡನವಲ್ಲ. (ನೆಲಕ್ಕೆ ಅಂಗೈಯನ್ನು ಬಡಿಯುವುದಲ್ಲ) ಹೀಗೆ ದ್ವಿತೀಯ ಹೇತುವೂ ಸಜಾತೀಯೋಚ್ಚಾರಣಾ-ನಪೇಕ್ಷೋಚ್ಚರಿತವ್ಯಕ್ತಿವೃತ್ತಿತ್ವ ಪ್ರಯುಕ್ತ (ಸಾಧ್ಯ)ವಲ್ಲ. ಆದ್ದರಿಂದ ಅಂತಹ ಸಾಧ್ಯಸಾಧನೆಗೆ ಅದು ಅಪ್ರಯೋಜಕ.

**ವಿವರಣೆ**—ವೇದದಲ್ಲಿ ಒಂದೇರೀತಿಯ ವರ್ಣಾನುಪೂರ್ವೀ ಇರಲು ಪ್ರತಿಕಲ್ಪದಲ್ಲೂ ಮೊದಲ ವರ್ಣಕ್ಕೂ ಎರಡನೆಯ ವರ್ಣಕ್ಕೂ ಉಚ್ಚಾರಣೆಯ ಸ್ಥಾನ ಒಂದೇ ಆಗಿರುವುದು ಕಾರಣ, ಹೊರತು ವೇದವನ್ನು ಉಚ್ಚರಿಸುವಾಗ ಮಾಡುವ 'ತಲತಾಡನವು' ಕಾರಣವಲ್ಲ ಹೇಗೋ ಹಾಗೆ 'ಸಜಾತೀಯೋಚ್ಚಾರಣ...' ಇತ್ಯಾದಿ ಸಾಧ್ಯವೂ ಕಾರಣವಲ್ಲ. ಆದ್ದರಿಂದ ಸಾಧ್ಯಕ್ಕೆ ಹೇತುವು ಪ್ರಯೋಜಕವಲ್ಲ.

## ಅನುಮಾನ–4

**एतेन, बुबोधयिषुपठितो वेदः स्वानपेक्षस्वसमानविषयकज्ञानपूर्वकः। बुबोधयिषुवाक्यत्वात् लौकिकवाक्यवत् ।**

ವೇದಪೌರುಷೇಯತ್ವವನ್ನು ಹೀಗೂ ಸಾಧಿಸಬಹುದು—

**ಪಕ್ಷ**— ಇನ್ನೊಬ್ಬರಿಗೆ ಉಪದೇಶದ ಇಚ್ಛೆಯಿಂದ ಪಠಿತವಾದ ವೇದ.

**ಸಾಧ್ಯ**— ತಾನು ಉಪದೇಶಿಸುವ ಆ ವೇದದ ಅಪೇಕ್ಷೆ ಇಲ್ಲದೆ, ಆ ವೇದಸಮಾನಾನು ಪೂರ್ವೀಕವಾದ (ಸ್ವರಚಿತ) ವೇದದ ಜ್ಞಾನಪೂರ್ವಕವಾಗಿರುತ್ತದೆ. (ವೇದ ರಚಿಸಿದ ವ್ಯಕ್ತಿಯು ತಾನು ರಚಿಸಲು ಉದ್ದೇಶಿಸಿದ ವೇದದ ಪದ–ವಾಕ್ಯಗಳನ್ನು ತಾನೇ ತಿಳಿದು ರಚಿಸಿರುತ್ತಾನೆ.)

**ಹೇತು**— ಮತ್ತೊಬ್ಬರಿಗೆ ಉಪದೇಶ ನೀಡುವ ಉದ್ದೇಶದ ವಾಕ್ಯವಾದುದರಿಂದ.

**ದೃಷ್ಟಾಂತ**—ಲೋಕದ ವ್ಯವಹಾರದಲ್ಲಿ ಪ್ರಯೋಗಿಸುವ ವಾಕ್ಯದಂತೆ.

ನಾವು ವ್ಯವಹಾರದಲ್ಲಿ ನಮ್ಮ ಅಭಿಪ್ರಾಯವನ್ನು ಮತ್ತೊಬ್ಬರಿಗೆ ತಿಳಿಸುವ ಉದ್ದೇಶದಿಂದ ವಾಕ್ಯವನ್ನು ಪ್ರಯೋಗಿಸುತ್ತೇವೆ. ಆ ವಾಕ್ಯದ ಅರ್ಥವು ನಮಗೆ ಪ್ರಮಾಣಾಂತರದಿಂದ

ಗೊತ್ತಿರುತ್ತದೆ. ಆದಕ್ಕೆ ಸರಿಯಾಗಿ ಪದ–ವಾಕ್ಯಗಳನ್ನು ನಾವೇ ರಚಿಸಿ ಮತ್ತೊಬ್ಬರಿಗೆ ಹೇಳುತ್ತೇವೆ. ಆದರೆ, ನಮ್ಮ ವಾಕ್ಯವನ್ನು ಕೇಳಿಸಿಕೊಂಡ ವ್ಯಕ್ತಿ ನಾವು ಹೇಳಿದ ಪದವಾಕ್ಯಗಳನ್ನೇ ಪ್ರಯೋಗಿಸುತ್ತಾನೆ. ಅದರಂತೆ, ಈಶ್ವರನೂ ಬ್ರಹ್ಮನಿಗೆ ವೇದದ ಉಪದೇಶ ನೀಡಬೇಕಾದರೆ ಈಶ್ವರನಿಗೂ ವೇದಾರ್ಥ ತಿಳಿದಿರಬೇಕು. ಆ ಅರ್ಥಜ್ಞಾನಕ್ಕೆ ಅನುಗುಣವಾದ ವಾಕ್ಯಗಳನ್ನು ತಾನೇ ರಚಿಸಿಕೊಂಡು ಆ ಜ್ಞಾನಪೂರ್ವಕವಾಗಿ ಅವನು ಬ್ರಹ್ಮನಿಗೆ ಉಪದೇಶಿಸುತ್ತಾನೆ. ಈಶ್ವರನಿಗಿರುವ ಪದ–ವಾಕ್ಯಜ್ಞಾನವು ಮತ್ತೊಬ್ಬರು ಹೇಳಿದ್ದನ್ನು ಕೇಳಿ ಬಂದಿದ್ದಲ್ಲ. ಅವನೇ ರಚಿಸಿದ ವಾಕ್ಯಗಳು ಅವು. ಹೀಗಿರಬೇಕಾದರೆ ಈಶ್ವರನು ವೇದಕರ್ತಾ ಎಂದೇ ಸಿದ್ಧವಾಗುತ್ತದೆ.

## ನ್ಯಾಯದೀಪ

**बुबोधयिष्विति ।** शिष्यान् बोधयितुमिच्छताऽध्यापकेन पठितो वेद इत्यर्थः । इदानीन्तनाज्ञपठितवेदे बाधवारणाय बुबोधयिषुपठितेत्युक्तिः । स्वेति सन्निहितो बुबोधयिषुपठितो वेद उच्यते । तदनपेक्षं तदजन्यमित्यर्थः । तत्समानविषयकं च यज्ज्ञानं तत्पूर्वक इत्यर्थः । तादृशं च ज्ञानमीश्वरनिष्ठमिति तज्जन्यत्वेन साध्यसिद्धिरिति भावः । अज्ञोच्चरितवाक्ये वाक्यत्वस्य व्यभिचारनिरासाय बुबोधयिष्विति हेतौ विशेषणम् ॥

ಬುಬೋಧಯಿಷುಪಠಿತವೇದ ಎಂದರೆ ಶಿಷ್ಯರಿಗೆ ತಿಳಿಸುವ ಇಚ್ಛೆಯಿಂದ ಅಧ್ಯಾಪಕರು ಪಠಿಸುವ ವೇದ, ಎಂದರ್ಥ. ಅಜ್ಞಾನಿಗಳಾದ ಆಧುನಿಕರು ಪಠಿಸುವ ವೇದವು ಸಮಾನವಿಷಯಕ ಜ್ಞಾನಪೂರ್ವಕವಾಗಿರುವುದಿಲ್ಲ. ಆದ್ದರಿಂದ ವೇದ ಎಂದಿಷ್ಟೇ ಪಕ್ಷಮಾಡಿದರೆ ಅಂತಹ ವೇದದಲ್ಲಿ ಬಾಧ ಬರುತ್ತದೆ. ಆದಕ್ಕಾಗಿ ಬುಬೋಧಯಿಷುಪಠಿತ, ಎಂದು ವೇದಕ್ಕೆ ವಿಶೇಷಣವನ್ನು ಕೊಡಲಾಗಿದೆ. ಶಿಷ್ಯರಿಗೆ ತಿಳಿಸುವುದಕ್ಕಾಗಿ ಪಠಿತವೇದ, ಎಂದರ್ಥ.[1]

ಸಾಧ್ಯದ ಅರ್ಥ—ಸ್ವ ಎಂದರೆ ಪಕ್ಷದಲ್ಲಿ ಸನ್ನಿಹಿತವಾದ ವೇದ. ಆ ವೇದದ ಅಪೇಕ್ಷೆ ಇಲ್ಲದೆ, ಅಂದರೆ ಆ ವೇದದಿಂದ ಜನ್ಯವಲ್ಲದ ಅದರ ಜ್ಞಾನ. ತತ್ಪೂರ್ವಕವಾಗಿದೆ ಬುಬೋಧಯಿಷು ಪಠಿತವೇದ. ಅಂತಹ ಜ್ಞಾನ ಈಶ್ವರನದು. ಅವನ ಜ್ಞಾನದಿಂದ ವೇದವು ಜನ್ಯವಾದುದರಿಂದ ವೇದಕ್ಕೆ ಪೌರುಷೇಯತ್ವವು ಸಿದ್ಧವಾಗುತ್ತದೆ.

1. **ಈ ವಾಕ್ಯದ ಅರ್ಥ ಸ್ಪಷ್ಟವಾಗುವುದಿಲ್ಲ. ಅಜ್ಞಾನಿಗಳು ವೇದವನ್ನು ಪಠಿಸುವಾಗ ಅರ್ಥಜ್ಞಾನವಿಲ್ಲದಿದ್ದರೂ ಶಬ್ದಜ್ಞಾನವಿದ್ದೇ ಇರುತ್ತದೆ. ಧ್ವನಿಮುದ್ರಣದಲ್ಲಿ ಮಾತ್ರ ಶಬ್ದಜ್ಞಾನವಿಲ್ಲದೆ ವೇದಪಠನ ಸಾಧ್ಯ.**

ಹೇತುವಿನಲ್ಲೂ ವಾಕ್ಯಕ್ಕೆ ''ಬುಬೋಧಯಿಷು'' ಎಂಬ ವಿಶೇಷಣ ಇದೆ. ಶಿಷ್ಯರಿಗೆ ಬೋಧಿಸುವ ಇಚ್ಛೆಯಿಂದ ಉಚ್ಚರಿತವಾಕ್ಯ ಎಂದರ್ಥ. ಈ ವಿಶೇಷಣವು ಇಲ್ಲದಿದ್ದರೆ ಅಜ್ಞಪಠಿತದಲ್ಲೂ ವಾಕ್ಯತ್ವವು ಇರುವುದರಿಂದ ವ್ಯಭಿಚಾರದೋಷ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ಆ ವಿಶೇಷಣ ಬೇಕು.

## ಅವತಾರಿಕೆ

**''अनुमानानामप्रयोजकत्वात्''इति सुधोक्तिमनुरुध्याह—स्वसमानेति ।**

''ಅನುಮಾನಾನಾಮ್ ಅಪ್ರಯೋಜಕತ್ವಾತ್'' ಎಂದು ಸುಧಾದಲ್ಲಿದೆ. ಅದಕ್ಕೆ ಅನುಗುಣವಾಗಿ ಪೌರುಷೇಯತ್ವಸಾಧಕವಾದ ಅನುಮಾನಕ್ಕೆ ದೋಷವನ್ನು ಹೇಳುತ್ತಾರೆ.

**इति निरस्तम् । स्वसमानविषयकज्ञानपूर्वकत्वमात्रेण बुबोधयिषुवाक्यत्वस्योपपन्नत्वेन गौरवेण स्वानपेक्षज्ञानं प्रत्यप्रयोजकत्वात् । अन्यथोक्तेनैव हेतुना स्वानपेक्षस्वसमानविषयकज्ञानकरणसापेक्षत्वमपि सिध्येत्। मन्मते ईश्वरज्ञानस्य वेदानपेक्षत्वेन सिद्धसाधनाच्च ।**

ಈ ಅನುಮಾನವೂ, ಹಿಂದಿನ ದೋಷಗಳು ಇರುವುದರಿಂದಾಗಿಯೇ ನಿರಸ್ತವಾಯಿತು. ವೇದವು ಬುಬೋಧಯಿಷು ಪಠಿತವಾಗಬೇಕಾದರೆ ಅವನಿಗೆ ಅದರ ಜ್ಞಾನ ಇದ್ದರೆ ಸಾಕು. ಆ ಜ್ಞಾನವು 'ಸ್ವಾನಪೇಕ್ಷ'ವಾಗಬೇಕು, ಎಂಬ ಅಗತ್ಯವಿಲ್ಲ. ಸ್ವಾನಪೇಕ್ಷ ಜ್ಞಾನಪೂರ್ವಕತ್ವಾಪೇಕ್ಷಯಾ, ಜ್ಞಾನಪೂರ್ವಕತ್ವವು ಲಘುವಾದ್ದರಿಂದ ಅದೇ ಹೇತುವಿಗೆ ಪ್ರಯೋಜಕ, ಹೊರತು, ಉಕ್ತಸಾಧ್ಯವಲ್ಲ. ಅದರೂ ಆ ಗುರುಧರ್ಮವೇ ಪ್ರಯೋಜಕವಾಗುವುದಾದಲ್ಲಿ ಲೌಕಿಕವಾಕ್ಯಗಳಲ್ಲಿ 'ಸ್ವಸಮಾನವಿಷಯಕಜ್ಞಾನಕರಣವಾದ ಶ್ರೋತ್ರಾದಿ ಇಂದ್ರಿಯಸಾಪೇಕ್ಷತ್ವವೂ ಕಂಡಿರುವುದರಿಂದ ವೇದದಲ್ಲೂ ಅದನ್ನು ಸಾಧನೆ ಮಾಡಿ ಈಶ್ವರನ ಜ್ಞಾನಕ್ಕೂ ಶ್ರೋತ್ರರೂಪ ಕರಣವು ಸಿದ್ಧವಾದೀತು.

ಅಷ್ಟೇ ಅಲ್ಲ, ಈಶನು ಮೊದಲೇ ಇದ್ದ ವೇದದ ಜ್ಞಾನಪೂರ್ವಕವಾಗಿಯೇ ಕಲ್ಪಾದಿಯಲ್ಲಿ ವೇದವನ್ನು ಪಠಿಸುತ್ತಾನೆ. ಅವನ ಜ್ಞಾನವು ನಿತ್ಯವಾದುದರಿಂದ ವೇದಾನಪೇಕ್ಷವೂ ಆಗಿದೆ. ತಾವತಾ ಈ ಸರ್ಗದಲ್ಲಿ ವೇದೋಪದೇಶಕ್ಕಿಂತ ಮೊದಲು ವೇದವೇ ಇರಲಿಲ್ಲ ಎಂದು ತಿಳಿಯಬೇಕಾಗಿಲ್ಲ. ವೇದ ಇದ್ದರೂ ಅದನ್ನು ಅವಲಂಬಿಸಿ ಬಂದಿರುವ ಜ್ಞಾನವು ಈಶ್ವರನಿಗೆ ಇಲ್ಲವಾದ ಕಾರಣದಿಂದಲೇ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಆದ್ದರಿಂದ ಸಿದ್ಧಸಾಧನತಾದೋಷ.

## ಅನುಮಾನ-5

### ಅವತಾರಿಕೆ

**मण्युक्तं प्रयोगान्तरं प्रत्याचष्टे—नापि वेद इति ।**

ಮಣಿಗ್ರಂಥದಲ್ಲಿ ಹೇಳಿರುವ ಇನ್ನೊಂದು ಅನುಮಾನವನ್ನು ಮುಂದೆ ನಿರಾಕರಿಸಲಾಗಿದೆ.

**नापि, वेदो वाक्यार्थगोचरयथार्थज्ञानजन्यः । प्रमाणशब्दत्वात् । भारतवदिति वाच्यम् । यथार्थज्ञानमात्रस्य हेतुत्वविवक्षायामर्थबुबोधयिषया पठिते आधुनिकवेदांशे सिद्धसाधनात् । तन्निरासाय शब्दाजन्यत्वेन ज्ञानस्य विशेषणे च शब्दमूलकशब्दे व्यभिचारात् ।।**

ವೇದವು ವೇದಗತವಾದ ವಾಕ್ಯಗಳ ಅರ್ಥವಿಷಯಕವಾದ ಯಥಾರ್ಥಜ್ಞಾನದಿಂದ ಜನ್ಯವಾಗಿದೆ. ಪ್ರಮಾಣಭೂತವಾದ ಶಬ್ದವಾದುದರಿಂದ, ಮಹಾಭಾರತದಂತೆ. ಹೀಗೆ ಮಣಿಯಲ್ಲಿ (ಪು.366) ಅನುಮಾನದಿಂದ ವೇದಕ್ಕೆ ಪುರುಷಕೃತತ್ವವನ್ನು ಸಾಧಿಸಲಾಗಿದೆ.

ಪ್ರಮಾಣವಾಗಿರುವ ಶಬ್ದಗಳೆಲ್ಲವೂ ಆ ಶಬ್ದಗಳ ಅರ್ಥದ ಯಥಾರ್ಥಜ್ಞಾನವಿರುವ ಒಬ್ಬ ವ್ಯಕ್ತಿಯಿಂದ ರಚಿತವಾಗಿರುತ್ತವೆ. ವಾಕ್ಯವೆಂದ ಮೇಲೆ ಅದರ ರಚನೆಯ ಹಿಂದೆ ಒಬ್ಬ ವ್ಯಕ್ತಿಯ ಜ್ಞಾನ ಇರಲೇಬೇಕು. ವೇದವೂ ಪ್ರಮಾಣಭೂತವಾದ ವಾಕ್ಯಸಮೂಹವಾದುದರಿಂದ ಒಬ್ಬ ವ್ಯಕ್ತಿಯ ಯಥಾರ್ಥಜ್ಞಾನವು ಅದಕ್ಕೆ ಕಾರಣವಾಗಿರಲೇಬೇಕು.

ಈ ಅನುಮಾನವೂ ಸರಿಯಲ್ಲ. ವೇದಕ್ಕೆ ಯಥಾರ್ಥಜ್ಞಾನವು ಕಾರಣ ಎಂದಿಷ್ಟೆ ಈ ಅನುಮಾನದಿಂದ ಸಾಧ್ಯವೆಂದಾದಲ್ಲಿ ಸಿದ್ಧಸಾಧನತಾ. ಅಧ್ಯಾಪಕರಿಗೆ ವೇದದ ಅರ್ಥವನ್ನು ಶಿಷ್ಯನಿಗೆ ಹೇಳುವ ಉದ್ದೇಶವಿದ್ದಾಗ ಅವರು ಪಠಿಸುವ ವೇದ ಯಥಾರ್ಥಜ್ಞಾನಪೂರ್ವಕವಾಗಿಯೇ ಇರುತ್ತದೆ. ತಾವತಾ ಆ ವೇದ ತತ್ಕೃತವಾಗಬೇಕಿಲ್ಲ. ಈ ಸಿದ್ಧಸಾಧನತಾಪರಿಹಾರಕ್ಕಾಗಿ ಯಥಾರ್ಥಜ್ಞಾನಕ್ಕೆ 'ಶಬ್ದಾಜನ್ಯ' ಎಂಬ ವಿಶೇಷಣವನ್ನು ಕೊಡಬೇಕು. ಅಧ್ಯಾಪಕರಿಗೆ ಇರುವ ಅರ್ಥಜ್ಞಾನವು ಅವರು ಪಠಿಸುವ ವೇದವಾಕ್ಯದಿಂದಲೇ ಜನ್ಯವಾಗಿದೆ. ಶಬ್ದಾಜನ್ಯಜ್ಞಾನ-ಪೂರ್ವಕವಾಗಿರಬೇಕಾದರೆ ಈಶ್ವರರಚಿತವೇ ಆಗಿರಬೇಕು. ಆದ್ದರಿಂದ ಸಿದ್ಧಸಾಧನತಾ ಪರಿಹಾರವಾಗುತ್ತದೆ. ಆದರೆ, ಶಬ್ದಮೂಲಕ ಶಬ್ದದಲ್ಲಿ ವ್ಯಭಿಚಾರ ಬರುತ್ತದೆ. ಮತ್ತೊಬ್ಬರು ಹೇಳಿದ್ದನ್ನು ಕೇಳಿ, ತಿಳಿದು ಅದನ್ನು ನಾವು ಇನ್ನೊಬ್ಬರಿಗೆ ಹೇಳಿದಾಗ ನಮ್ಮ ವಾಕ್ಯಕ್ಕೆ ಕಾರಣವಾದ ಯಥಾರ್ಥಜ್ಞಾನ ಶಬ್ದಜನ್ಯವೇ ಆಗಿದೆ. ಶಬ್ದಾಜನ್ಯವಾಗಿಲ್ಲ. ಅದರಲ್ಲಿ ಸಾಧ್ಯ ಬರುವುದಿಲ್ಲ. ಹೇತು ಇದೆ. ವ್ಯಭಿಚಾರ.

## ನ್ಯಾಯದೀಪ

**मणौ वेदा इति पक्षनिर्देशेऽपि तत्रैव पठ्यमानवेदस्य पक्षसमत्वोक्तेः यत्किञ्चिद्वेदपूर्वकत्वेऽपीष्टसिद्धेर्बहुवचनमविवेकमूलमिति सूचनाय वेद इत्येव पक्षनिर्देशः कृतः। अध्यापकानुपूर्व्यादिज्ञानजन्यत्वे-नार्थान्तरवारणाय साध्ये वाक्यार्थगोचरेत्युक्तिः। वाक्यार्थगोचर-ज्ञानजन्य इत्येवोक्तौ ईश्वरे भ्रमसिद्धावपि नेष्टसिद्धिरिति ताद्रूप्यसिद्धये यथार्थपदम्। भारतवदिति। प्रत्यक्षमूलाद्यभारतवदित्यर्थः। मात्रस्येति। शब्दाजन्यत्वविशेषणहीनस्येत्यर्थः। हेतुत्वेऽति। जनकत्वे-त्यर्थः॥**

**नन्वेतद्दोषनिरासायैव शब्दाजन्येति ज्ञानविशेषणमुक्तं मणावित्यत आह—तन्निरासायेति।**

ಮಣಿಗ್ರಂಥದಲ್ಲಿ (ಪು.366) 'ವೇದಾಃ' ಎಂದು ಬಹುವಚನಾಂತವಾಗಿ ಪಕ್ಷನಿರ್ದೇಶವನ್ನು ಮಾಡಲಾಗಿದೆ. ಇದಾನೀಂಪಠ್ಯಮಾನವೇದವು ಪಕ್ಷಸಮ ಎಂದೂ ಮಣಿಯಲ್ಲಿ ಹೇಳಲಾಗಿದೆ. (ಇದು ಈ ಭಾಗದ ಮಣಿಗ್ರಂಥದ ಅಭಿಪ್ರಾಯ ಮಾತ್ರ, ಕಂಠೋಕ್ತಿಯಲ್ಲ.) ಅಂದಮೇಲೆ ಯತ್ಕಿಂಚಿದ್ವೇದವನ್ನು ಪಕ್ಷಮಾಡಿ ಈ ಸಾಧ್ಯವನ್ನು ಸಾಧನೆಮಾಡಿದರೂ ಸಾಕು. ತಾರ್ಕಿಕರಿಗೆ ಇಷ್ಟಸಿದ್ಧಿಯಾಗುತ್ತದೆ. ಎಲ್ಲಾ ವೇದವನ್ನು ಪಕ್ಷಮಾಡಬೇಕಾಗಿಲ್ಲ. ಆದ್ದರಿಂದ 'ವೇದಾಃ' ಎಂದು ಬಹುವಚನಾಂತವಾಗಿ ಪಕ್ಷನಿರ್ದೇಶವನ್ನು ಮಾಡುವ ಅಗತ್ಯವಿಲ್ಲ. ಅದು ಅವಿವೇಕಮೂಲವಾದ ಪ್ರಯೋಗ, ಎಂದು ತಿಳಿಸಲು ಮೂಲದಲ್ಲಿ ಏಕವಚನಾಂತವಾಗಿಯೇ ಪಕ್ಷನಿರ್ದೇಶವನ್ನು ಮಾಡಲಾಗಿದೆ.

ಸಾಧ್ಯದಲ್ಲಿ 'ವಾಕ್ಯಾರ್ಥಗೋಚರ' ಎಂಬ ಅಂಶವನ್ನು ಬಿಟ್ಟು 'ಯಥಾರ್ಥಜ್ಞಾನಜನ್ಯಃ' ಎಂದಿಷ್ಟೇ ಸಾಧ್ಯವಾದರೆ ಅರ್ಥಾಂತರತಾ. ಅಧ್ಯಾಪಕರು ವರ್ಣ–ಪದಾದಿವಿಷಯಕ ಯಥಾರ್ಥ ಜ್ಞಾನಪೂರ್ವಕವಾಗಿಯೇ ವೇದವನ್ನು ಉಚ್ಚರಿಸುತ್ತಾರೆ. ಹೀಗೆ ಪೌರುಷೇಯತ್ವ ಇಲ್ಲದೆ ಪಕ್ಷದಲ್ಲಿ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಅದರ ಪರಿಹಾರಕ್ಕಾಗಿ 'ವಾಕ್ಯಾರ್ಥಗೋಚರ' ಎಂಬ ವಿಶೇಷಣಬೇಕು. ಅಧ್ಯಾಪಕರಿಗೆ ವಾಕ್ಯಗೋಚರ ಯಥಾರ್ಥಜ್ಞಾನವಿದೆ. ತದರ್ಥಗೋಚರ ಜ್ಞಾನವಿಲ್ಲ. ಅರ್ಥಾಂತರತಾದೋಷ ಪರಿಹಾರವಾಗುತ್ತದೆ. ಆದರೂ ಯಥಾರ್ಥಪದವನ್ನು ಬಿಟ್ಟರೆ

ಈಶ್ವರನಿಗೆ ವಾಕ್ಯಾರ್ಥಭ್ರಮೆಯನ್ನು ಅಂಗೀಕರಿಸಿಯೂ ಸಾಧ್ಯವನ್ನು ಪರ್ಯವಸಾನ ಮಾಡಬಹುದು. ಅದು ಪರರಿಗೆ ಅಭಿಮತವಲ್ಲ. ಆದಕ್ಕಾಗಿ, ಯಥಾರ್ಥಪದವನ್ನು ಸೇರಿಸಲಾಗಿದೆ.

'ಭಾರತವತ್' ಎಂದು ದೃಷ್ಟಾಂತ. ಪ್ರತ್ಯಕ್ಷಮೂಲವಾದ ವ್ಯಾಸೋಚ್ಚರಿತ ಆದ್ಯಭಾರತವು ಉದಾಹಣೆ. ನಾವು ಉಚ್ಚರಿಸುವ ಭಾರತಕ್ಕೆ ಅದೇ ಭಾರತದಿಂದ ನಮಗೆ ಬಂದಿರುವ ಅರ್ಥಜ್ಞಾನವು ಕಾರಣ. ಆದ್ದರಿಂದ ಅದು ಉದಾಹರಣೆ ಅಲ್ಲ.

## ಅವತಾರಿಕೆ

**''तादृशस्यापि द्विकर्तृकत्वादिति'' मण्युक्तेः भावमाशङ्क्याऽह— सोऽपीति ।**

ಮಣಿಗ್ರಂಥದಲ್ಲಿ ಹೀಗಿದೆ— ''ನಚ...ಭಾರತೇ ಮನ್ವಾದಿಸ್ಮೃತೌ ಚ ವ್ಯಭಿಚಾರಃ । ತೇಷಾಂ ದ್ವಿಕರ್ತೃಕತ್ವಾತ್।'' ಅದರ ಅರ್ಥ—ಮಹಾಭಾರತ ಮತ್ತು ಮನ್ವಾದಿಸ್ಮೃತಿಗಳನ್ನು ವೇದದಿಂದ ಅರ್ಥವನ್ನು ತಿಳಿದು ರಚಿಸಲಾಗಿದೆ. ಅವುಗಳಲ್ಲಿ ಶಬ್ದಜನ್ಯಯಥಾರ್ಥಜ್ಞಾನಜನ್ಯತ್ವವೇ ಇದೆ, ತದಜನ್ಯಯಥಾರ್ಥಜ್ಞಾನಜನ್ಯತ್ವವು ಇಲ್ಲ. ಸಾಧ್ಯ ಇಲ್ಲ, ಹೇತು ಇದೆ. ವ್ಯಭಿಚಾರ. ಇದು ಸರಿಯಲ್ಲ. ಮಹಾಭಾರತಾದಿಗಳಿಗೆ ಇಬ್ಬರು ಕರ್ತೃಗಳಿದ್ದಾರೆ. ಈಶ ಮತ್ತು ವ್ಯಾಸ. ಈಶ್ವರ ಸರ್ವಕರ್ತನಾದುದರಿಂದ ಮಹಾಭಾರತಕ್ಕೂ ಕರ್ತಾ. ಅವನ ಜ್ಞಾನ ಶಬ್ದಜನ್ಯ ಜ್ಞಾನವಲ್ಲ. ಹೀಗೆ ವೇದದಂತೆ ಮಹಾಭಾರತದಲ್ಲಿ ನೈಯಾಯಿಕರ ಮತದಂತೆ ಸಾಧ್ಯವು ಇದೆ. ವ್ಯಭಿಚಾರವಿಲ್ಲ.

ಈ ಗ್ರಂಥದ ಅಭಿಪ್ರಾಯ–ಮಹಾಭಾರತಾದಿ ವೇದಮೂಲವಾದ ಗ್ರಂಥಗಳೂ ವೇದದಂತೆ ಪಕ್ಷಸಮಗಳು. ಅವುಗಳಲ್ಲಿ ಈಶಕರ್ತೃಕತ್ವ ನೈಯಾಯಿಕರಿಗೆ ಸಮ್ಮತ, ಇತರರಿಗೆ ಅಸಮ್ಮತ, ಎಂದು. ಮಣಿಗ್ರಂಥದ ಈ ಅಭಿಪ್ರಾಯವನ್ನು 'ಸೋಽಪಿ' ಎಂದು ಮೂಲವಾಕ್ಯದಲ್ಲಿ ಪೂರ್ವಪಕ್ಷವನ್ನಾಗಿ ಮಾಡಲಾಗಿದೆ.

**सोऽपि पक्षतुल्य इति चेन्न । प्रामाण्यस्य स्वतस्त्वेन, परतस्त्वेऽपि यादृच्छिकसंवादिवाक्य इवावश्यक–योग्यतादिनोपपन्नत्वेन गौरवेणोक्तसाध्यं प्रत्यप्रयोजकत्वात् । अन्यथोक्तेनैव हेतुना वाक्यार्थगोचर-प्रमाकरणपूर्वकत्वमपि सिध्येत् ।।**

ಆಕ್ಷೇಪ—ಮಹಾಭಾರತಾದಿಗಳೂ ಪಕ್ಷತುಲ್ಯ. ಅವುಗಳಲ್ಲೂ ಈಶ್ವರಕೃತತ್ವವನ್ನು ಸಾಧನೆ ಮಾಡಲಾಗುತ್ತದೆ. ಪಕ್ಷತುಲ್ಯದಲ್ಲಿ ವ್ಯಭಿಚಾರವು ದೋಷವಲ್ಲ.

**ಸಮಾಧಾನ—**ಹೀಗೆ ವ್ಯಭಿಚಾರ ಪರಿಹಾರವಾದರೂ ಈ ಅನುಮಾನವು ಅಪ್ರಯೋಜಕವಾಗಿದೆ. ಪ್ರಾಮಾಣ್ಯಂ ಸ್ವತಃ. ಆದಕ್ಕೆ ವಾಕ್ಯಗತ ಯಥಾರ್ಥಜ್ಞಾನಮೂಲಕತ್ವವು ಹೇತುವಲ್ಲ. ಪ್ರಾಮಾಣ್ಯಂ ಪರತಃ, ಎಂದು ಒಪ್ಪಿಕೊಂಡರೂ ಯಾದೃಚ್ಛಿಕಸಂವಾದಿವಾಕ್ಯದಲ್ಲಿ ಆಪ್ತಿಮೂಲತ್ವರೂಪವಾದ ಪ್ರಾಮಾಣ್ಯಹೇತುವು ಇಲ್ಲದಿದ್ದರೂ 'ಯೋಗ್ಯತಾ' ರೂಪಧರ್ಮವು ಆ ವಾಕ್ಯದಲ್ಲಿ ಇರುವುದರಿಂದಲೇ ಪ್ರಮಾಣವಾಗುವಂತೆ ವೇದದಲ್ಲೂ ಅದೇ ಪ್ರಾಮಾಣ್ಯಹೇತುವೆಂದು ಹೇಳಬಹುದು. ವಾಕ್ಯಾರ್ಥಗೋಚರ-ಯಥಾರ್ಥಜ್ಞಾನ-ಹೇತುಕತ್ವರೂಪಸಾಧ್ಯವು ಗುರುರೂಪವಾದುದರಿಂದ ಅದು ಪ್ರಾಮಾಣ್ಯಹೇತುವಲ್ಲ. ಆದ್ದರಿಂದ ಹೇತುವು ಅಪ್ರಯೋಜಕ. ಆದರೂ, ಲೌಕಿಕವಾಕ್ಯದಲ್ಲಿ ಸಹಚಾರದರ್ಶನಮಾತ್ರದಿಂದ ಉಕ್ತಸಾಧ್ಯವನ್ನು ವೇದದಲ್ಲೂ ಸಾಧನೆ ಮಾಡುವುದಾದಲ್ಲಿ ಲೌಕಿಕವಾಕ್ಯದಂತೆ ವಾಕ್ಯಾರ್ಥವಿಷಯಕ-ಪ್ರಮಾಕರಣಪೂರ್ವಕತ್ವವನ್ನೂ ವೇದವಾಕ್ಯದಲ್ಲಿ ಸಾಧನೆ ಮಾಡಬೇಕಾದೀತು. ಅದೂ ಲೌಕಿಕವಾಕ್ಯಗಳಲ್ಲಿ ಇದೆ. ಇದರಿಂದ ಈಶ್ವರನಿಗೆ ಸಶರೀರತ್ವವೂ ಸಿದ್ಧವಾದೀತು.

## ನ್ಯಾಯದೀಪ

**प्राचीनमते पक्षसमेऽपि सन्दिग्धसाध्यवति हेतुनिश्चयेन व्यभिचारस्य दोषत्वेऽप्याधुनिकमते दोषत्वाभावस्येश्वरवादे मणावेव व्यक्तत्वादिति । प्रामाण्यस्येति ।** हेतौ विशेष्यस्य विशेषणस्य वोक्तरूपसाध्येन विनाऽनुपपत्त्या विशिष्टहेतुना साध्यसिद्धिर्वाच्या । तत्र विशेष्यं शब्दत्वं तावन्नानुपपन्नम् । शब्दाभासेऽपि तस्य सत्त्वात् । किन्तु विशेषणस्य प्रमाजनकत्वरूपप्रामाण्यस्यैवानुपपत्त्या साध्यसिद्धिर्वाच्या । तस्याप्यन्यथोपपत्त्याऽप्रयोजकत्वमित्यर्थः । स्वतस्त्वेनेत्यस्य ज्ञानजनकत्वशक्त्यैवेत्यर्थः । उपपन्नत्वेनेत्यन्वयः । **परतस्त्वेऽपीति ।** गुणप्रयुक्तत्वेऽपीत्यर्थः । योग्यतादीत्यादिपदेन योग्यताज्ञान- दोषाभावादिग्रहः । **अप्रयोजकत्वादिति ।** त्वदुक्तसाध्यं प्रतीत्यर्थः ।

ಪ್ರಾಚೀನಮತದಂತೆ ಪಕ್ಷತುಲ್ಯದಲ್ಲಿ ಸಾಧ್ಯವು ಸಂದಿಗ್ಧವಾದರೂ ಹೇತುವು ನಿಶ್ಚಿತವಾದುದರಿಂದ ವ್ಯಭಿಚಾರವು ದೋಷ. ಆದರೆ ನವೀನ ಮತದಲ್ಲಿ ಅದು ದೋಷವಲ್ಲ, ಎಂದು

ಈಶ್ವರವಾದದ ಮಣಿಗ್ರಂಥದಲ್ಲಿ ಇದೆ. ಆದ್ದರಿಂದ ಮಹಾಭಾರತವೂ ಪಕ್ಷತುಲ್ಯವಾದುದರಿಂದ ವ್ಯಭಿಚಾರವು ದೋಷವಲ್ಲ. ಅದಕ್ಕಾಗಿ ಮೂಲದಲ್ಲಿ ವ್ಯಭಿಚಾರವನ್ನು ಬಿಟ್ಟು ಬೇರೆ ದೋಷವನ್ನು ಹೇಳಲಾಗಿದೆ.

'ಪ್ರಾಮಾಣ್ಯಸ್ಯ' ಇತ್ಯಾದಿ ಮೂಲದ ಅಭಿಪ್ರಾಯ ಹೀಗೆ—ಈ ಅನುಮಾನದ ಹೇತು 'ಪ್ರಮಾಣ ಶಬ್ದತ್ವಾತ್' ಎಂದು. ಪ್ರಮಾಣತ್ವೇ ಸತಿ ಶಬ್ದತ್ವಾತ್, ಎಂದು ಅದರ ಅರ್ಥ. ಈ ಹೇತುವಿನ ವಿಶೇಷಣಾಂಶ ಅಥವಾ ವಿಶೇಷ್ಯಾಂಶವು ಪಕ್ಷದಲ್ಲಿ ಸಾಧ್ಯವು ಇಲ್ಲದೇ ಅನುಪಪನ್ನವಾಗುವುದಾದಲ್ಲಿ ಆ ಹೇತುವಿನಿಂದ ಸಾಧ್ಯವು ಸಿದ್ಧವಾಗುತ್ತದೆ. ಅವುಗಳಲ್ಲಿ ವಿಶೇಷ್ಯಾಂಶವಾದ ಶಬ್ದತ್ವವು ಸಾಧ್ಯಂ ವಿನಾ ಅನುಪಪನ್ನವಲ್ಲ, ಅದು ಪ್ರಮಾಣವಲ್ಲದ ಶಬ್ದಾಭಾಸದಲ್ಲೂ ಇದೆ. ಅದು ಇರಬೇಕಾದರೆ ವಾಕ್ಯವು ಯಥಾರ್ಥಜ್ಞಾನಪೂರ್ವಕವೇ ಆಗಬೇಕೆಂದಿಲ್ಲ. ಹೀಗೆ ವಿಶೇಷ್ಯಾಂಶವು ಅಪ್ರಯೋಜಕ. ಆದ್ದರಿಂದ ವಿಶೇಷಣವಾದ ಪ್ರಮಾಜನಕತ್ವರೂಪವಾದ ಪ್ರಾಮಾಣ್ಯವು ಸಾಧ್ಯಂ ವಿನಾ ಅನುಪಪನ್ನವಾದುದರಿಂದ ಪಕ್ಷದಲ್ಲಿ ಸಾಧ್ಯವು ಸಿದ್ಧವಾಗುತ್ತದೆ ಎನ್ನಬೇಕು. ಅದರೆ, ಅದೂ ಮೂಲದಲ್ಲಿ ಹೇಳಿರುವಂತೆ ಅನ್ಯಥೋಪಪನ್ನವಾದುದರಿಂದ ಉಕ್ತಾನುಮಾನವು ಅಪ್ರಯೋಜಕ.

ಮೂಲದಲ್ಲಿ 'ಪ್ರಾಮಾಣ್ಯಸ್ಯ ಸ್ವತಸ್ತ್ವೇನ' ಎಂದಿದೆ. ಇದು ಶಬ್ದರೂಪಕರಣಗತವಾದ ಪ್ರಾಮಾಣ್ಯದ ಸ್ವತಸ್ತ್ವ. ಅದು ಜ್ಞಾನಜನಕಶಕ್ತ್ಯೈವ ಪ್ರಮಾಜನಕತ್ವ ರೂಪವಾದುದು. ಸ್ವತಸ್ತ್ವೇ, ಎಂಬ ಶಬ್ದಕ್ಕೆ ಮುಂದಿರುವ 'ಉಪಪನ್ನತ್ವೇನ' ಎಂಬ ಶಬ್ದದೊಂದಿಗೆ ಅನ್ವಯ.

**एतेन, यथार्थज्ञानत्वस्य कारणतावच्छेदकत्वं विवक्ष्यत इति निरस्तम्। प्रामाण्यस्य स्वतस्त्वेन, परतस्त्वेऽपि नित्यत्वेनेश्वरज्ञानस्य प्रमात्ववद् वेदस्यापि नित्यत्वेन प्रमाणशब्दत्वोपपत्तेः ।।**

ಹಿಂದೆ(ಪು.105) ಆಧುನಿಕವೇದದಲ್ಲಿ ಸಿದ್ಧಸಾಧನತ್ವವನ್ನು ಹೇಳಲಾಗಿದೆ. ಅದರ ಪರಿಹಾರಕ್ಕಾಗಿ ವಾಕ್ಯಾರ್ಥವಿಷಯಕ-ಯಥಾರ್ಥಜ್ಞಾನತ್ವಾವಚ್ಛಿನ್ನಜನಕತಾ-ನಿರೂಪಿತಜನ್ಯತ್ವವು ಸಾಧ್ಯ ಎಂದು ವಿವಕ್ಷೆ ಮಾಡಬೇಕು. ಆಧುನಿಕ ವೇದಕ್ಕೆ ಮಾತ್ರ ಯಥಾರ್ಥಜ್ಞಾನವು ಕಾರಣವಾಗಿ ಮೂಲವೇದಕ್ಕೆ ಅದು ಕಾರಣವಲ್ಲವೆಂದಾದರೆ ಅತಿರಿಕ್ತವೃತ್ತಿಯಾದುದರಿಂದ ಯಥಾರ್ಥಜ್ಞಾನತ್ವವು ಕಾರಣತಾವಚ್ಛೇಕವಾಗಲಿಕ್ಕಿಲ್ಲ. ಆದ್ದರಿಂದ ಮೂಲವೇದಕ್ಕೂ ಈಶ್ವರಪ್ರಮಾಮೂಲಕತ್ವವು ಸಿದ್ಧವಾಗುತ್ತದೆ, ಸಿದ್ಧಸಾಧನತಾ ಇಲ್ಲ.

ಈ ಆಕ್ಷೇಪವೂ ನಿರಸ್ತವಾಯಿತು. ಉಕ್ತರೀತ್ಯಾ ಪ್ರಾಮಾಣ್ಯಂ ಸ್ವತಃ ಆದುದರಿಂದ ಶಬ್ದವು ಪ್ರಮಾಣವೆನಿಸಲು ವಾಕ್ಯಾರ್ಥವಿಷಯಕವಾದ ಯಥಾರ್ಥಜ್ಞಾನಜನ್ಯತ್ವದ ಅಗತ್ಯವಿಲ್ಲ. ಅಥವಾ, ಪ್ರಾಮಾಣ್ಯವು ಪರತಃ ಎಂದಾದರೂ ವೇದಕ್ಕೆ ಪ್ರಾಮಾಣ್ಯವು ವಾಕ್ಯಾರ್ಥವಿಷಯಕ

ಯಥಾರ್ಥಜ್ಞಾನಪೂರ್ವಕತ್ವ ಇರುವುದರಿಂದಲೇ ಬರಬೇಕಾಗಿಲ್ಲ. ಈಶಜ್ಞಾನವು ನಿತ್ಯವಾದುದರಿಂದ ಗುಣಜನ್ಯವಲ್ಲದಿದ್ದರೂ ಪ್ರಮಾವಾಗುವಂತೆ ವೇದವೂ ಆಪ್ತೋಕ್ತತ್ವರೂಪ-ಗುಣಜನ್ಯವಲ್ಲದಿದ್ದರೂ ನಿತ್ಯವಾದುದರಿಂದ ಪ್ರಮಾಜನಕವಾಗಬಹುದು. (ಪ್ರಮಾಣ ವಾಗಬಹುದು). ಆದ್ದರಿಂದ ಸಿದ್ಧಸಾಧನತಾ ಇಲ್ಲದಿದ್ದರೂ ಅಪ್ರಯೋಜಕತ್ವವು ಇದ್ದೇ ಇದೆ.

## ನ್ಯಾಯದೀಪ

**विवक्ष्यत इति । प्रागुक्तांशतःसिद्ध-साधनतानिरासायेति योज्यम् ।।**

ಹಿಂದೆ ಹೇಳಿರುವ ಅಂಶತಃ ಸಿದ್ಧಸಾಧನತಾ ಪರಿಹಾರಕ್ಕಾಗಿ ಯಥಾರ್ಥಜ್ಞಾನತ್ವವು ಕಾರಣತಾವಚ್ಛೇಕ, ಎಂದು ವಿವಕ್ಷೆ ಮಾಡಬೇಕು, ಎಂದರ್ಥ.

## ಅವತಾರಿಕೆ

**वेदनित्यत्वे मण्याद्युक्तं बाधकान्तरं निराह—एतेन वेदस्येति ।**

ವೇದವು ನಿತ್ಯವಾದಲ್ಲಿ ಚಿಂತಾಮಣಿಯೇ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಬಾಧಕಾಂತರಗಳನ್ನು ಮುಂದೆ ಪರಿಹರಿಸಲಾಗಿದೆ.

**एतेन, वेदस्य यथार्थज्ञानपूर्वकत्वाभावेऽन्धपरम्परा स्यादिति निरस्तम् । प्रत्यक्षवत्, गुणाजन्येश्वरज्ञानवच्च तदपूर्वकत्वेऽप्यन्धपरम्परा-भावोपपत्तेः ।।**

ಮಣಿಗ್ರಂಥದಲ್ಲಿ ವೇದವು ಅಪೌರುಷೇಯವಾದಲ್ಲಿ ಹೀಗೆ ಬಾಧಕವನ್ನು ಹೇಳಲಾಗಿದೆ—''ಮೂಲಭೂತ-ಪ್ರಮಾಣಾಂತರಾಭಾವಾತ್ ಅಂಧಪರಂಪರಾಪಾತಾತ್'' (ಪು.369) ವೇದಪರಂಪರೆಯು ಅನಾದಿಯಾದರೆ ಈಗಿನ ವೇದಪ್ರಾಮಾಣ್ಯಕ್ಕೆ ಹಿಂದಿರುವ ವೇದವು ಆಧಾರ, ಅದಕ್ಕೆ ಅದರ ಹಿಂದಿನ ವೇದ. ಹೀಗೆ ಪ್ರಮಾಣಾಂತರ ಸಂವಾದ ಇಲ್ಲದಿರುವುದರಿಂದ ವೇದದಲ್ಲಿ ನಂಬಿಕೆ ಅಂಧಪರಂಪರೆಯಾದೀತು. ಪೌರುಷೇಯವಾದಾಗ ವೇದವನ್ನು ರಚಿಸಿರುವ ಈಶ್ವರನ ಪ್ರತ್ಯಕ್ಷವೇ ಮೂಲವಾದುದರಿಂದ ಈ ದೋಷವಿಲ್ಲ, ಎಂದು.

ಇದು ಸರಿಯಲ್ಲ. ಪ್ರತ್ಯಕ್ಷದಲ್ಲೂ ಈ ದೋಷಸಮಾನ. ನಮಗೆ ಇಂದು ಬರುವ ಪ್ರತ್ಯಕ್ಷ ಪ್ರಮಾ. ಏಕೆಂದರೆ, ನಿನ್ನೆಯೂ ಇದೇ ಪ್ರತ್ಯಕ್ಷ ಬಂದಿತ್ತು. ಅದೂ ಪ್ರಮಾ. ಅದಕ್ಕಿಂತ ಮೊದಲೂ ಅದೇ ಪ್ರತ್ಯಕ್ಷ ಬಂದಿತ್ತು. ಹೀಗೆ ಪ್ರತ್ಯಕ್ಷಕ್ಕೆ ಪ್ರತ್ಯಕ್ಷವೇ ಸಂವಾದ. ಇದೂ ಅಂಧ ಪರಂಪರೆಯಾದೀತು.

ನಮ್ಮ ಪ್ರತ್ಯಕ್ಷವು ಗುಣಜನ್ಯವಾದುದರಿಂದ ಪ್ರಮಾ ಎನ್ನಬಹುದು. ಆದರೆ, ಈಶಪ್ರತ್ಯಕ್ಷವು ಗುಣಜನ್ಯವಲ್ಲ. ಆದರೂ, ಅದು ಪ್ರಮಾ. ಅದರಂತೆ ವೇದವೂ ವಾಕ್ಯಾರ್ಥವಿಷಯಕವಾದ ಯಥಾರ್ಥಜ್ಞಾನಪೂರ್ವಕವಲ್ಲದಿದ್ದರೂ (ದೋಷಾಜನ್ಯತ್ವ ಪ್ರಯುಕ್ತ) ಪ್ರಮಾಣವಾಗಬಹುದು.

## ನ್ಯಾಯದೀಪ

**अन्धपरम्परेति ।** तथाच वेदेऽनाश्वासः स्यादिति भावः ।

ವೇದವು ಅಂಧಪರಂಪರೆಯಾದಲ್ಲಿ ಅದರಲ್ಲಿ ನಂಬಿಕೆ ಬರಲಿಕ್ಕಿಲ್ಲ.

## ಅನುಮಾನ–6

**अत एव च वेदजन्या प्रमा करणगुणपूर्विका, जन्यप्रमात्वात् चाक्षुषप्रमावदिति निरस्तम् । अप्रयोजकत्वात् ।।**

ವೇದದಿಂದ ಹುಟ್ಟಿರುವ ಪ್ರಮಾವು ಜನ್ಯಯಥಾರ್ಥಜ್ಞಾನವಾದುದರಿಂದ ಅದಕ್ಕೊಂದು ಕಾರಣವಿರಬೇಕು, ಚಾಕ್ಷುಷಜ್ಞಾನದಂತೆ. ಈ ಅನುಮಾನವೂ ಸರಿಯಲ್ಲ.

ಹಿಂದೆ, ಪ್ರಾಮಾಣ್ಯಸ್ವತಸ್ತ್ವಪಕ್ಷದಲ್ಲಿ ಪ್ರಾಮಾಣ್ಯಕ್ಕೆ ಕಾರಣದ ಅಗತ್ಯವಿಲ್ಲದುದರಿಂದ, ಪರತಸ್ತ್ವಪಕ್ಷದಲ್ಲೂ ಈಶಪ್ರಮಾದಂತೆ ಕಾರಣವಿಶೇಷದ ಅಗತ್ಯವಿಲ್ಲವಾದುದರಿಂದ ಹೇತುವು ಸಾಧ್ಯಕ್ಕೆ ಅಪ್ರಯೋಜಕವಾಗಿದೆ, ಎಂದು ದೋಷವನ್ನು ಹೇಳಲಾಗಿದೆ.

## ನ್ಯಾಯದೀಪ

**अत एवेति ।** गुणाभावेऽपि प्रमात्वस्योपपन्नत्वादेवेत्यर्थः । तदेव व्यनक्ति— **अप्रयोजकत्वादिति ।।**

ಅತ ಏವ ಎಂದರೆ ಗುಣವು ಇಲ್ಲದೆಯೂ ಈಶಜ್ಞಾನದಂತೆ ವೇದಜನ್ಯಜ್ಞಾನವೂ ಪ್ರಮಾ ಆಗಬಹುದಾದ್ದರಿಂದ ಎಂದರ್ಥ.

## ಅವತಾರಿಕೆ

चिरन्तनानुमानान्तरमाशङ्क्य तत्ववनिर्णयटीकोक्तदोषेण निराह— **नापि वेदा इति ।**

ಪ್ರಾಚೀನ ನೈಯಾಯಿಕರು ವೇದಕ್ಕೆ ಪೌರುಷೇಯತ್ವವನ್ನು ಸಾಧಿಸಲು ಪ್ರಯೋಗಿಸಿದ ಅನುಮಾನವನ್ನು ತೋರಿಸಿ ತತ್ತ್ವನಿರ್ಣಯಟೀಕಾದಲ್ಲಿ ಹೇಳಿರುವ ದೋಷವನ್ನೇ ಹೇಳಿ ಮುಂದೆ ನಿರಾಕರಿಸಲಾಗಿದೆ.[1]

## ಅನುಮಾನ–7

**नापि, वेदाः सर्वज्ञप्रणीताः वेदत्वात्, व्यतिरेकेण लौकिकवाक्यवदिति वाच्यम् । अप्रसिद्धविशेषणत्वात् ।।**

ವೇದಗಳು ವೇದಗಳಾದುದರಿಂದ ಸರ್ವಜ್ಞಪುರುಷನಿಂದ ರಚಿಸಲ್ಪಟ್ಟಿವೆ. ಇದಕ್ಕೆ ವ್ಯತಿರೇಕ್ಯುದಾಹರಣೆ ಲೌಕಿಕವಾಕ್ಯಗಳು. ಈ ಅನುಮಾನವೂ ಯುಕ್ತವಲ್ಲ. ಯಾರಲ್ಲೂ ಸರ್ವಜ್ಞತ್ವವು ಸಿದ್ಧವಲ್ಲದುದರಿಂದ ಸರ್ವಜ್ಞಪ್ರಣೀತತ್ವವೂ ಅಪ್ರಸಿದ್ಧ. ಆದ್ದರಿಂದ ಅಪ್ರಸಿದ್ಧ ವಿಶೇಷಣತಾದೋಷ.

## ಅವತಾರಿಕೆ

**टीकोक्तमुपलक्षणमुपेत्य परोक्तमन्यदप्याशङ्क्य निराह—ननु तर्हीत्यादिना ।**

ತತ್ತ್ವನಿರ್ಣಯಟೀಕೆಯಲ್ಲಿ ಹೇಳಿರುವ ದೋಷವು ಉಪಲಕ್ಷಣ, ಎಂದು ಪರಿಗಣಿಸಿ ಪೌರುಷೇಯತ್ವವಾದಿಗಳ ಇನ್ನೂ ಕೆಲವು ಆಕ್ಷೇಪಗಳನ್ನು ಹೇಳಿ ಮುಂದೆ ನಿರಾಕರಿಸಲಾಗಿದೆ.

**ननु तर्ह्यसंसारिप्रणीता इति साध्यते । नचैवमप्रसिद्धविशेषणत्वम् । आत्मत्वम् असंसारिनिष्ठम् जातित्वात् घटत्ववदित्यनेनासंसार्यात्मसिद्धौ, विमतः कस्यचिद्वाक्यस्य वक्ता आत्मत्वात् अहमिवेत्यनेन सामान्यतोऽसंसारिप्रणीतत्वसिद्धेरिति चेन्न । उक्तरीत्या गौरवेण वेदस्वरूपतत्प्रामाण्ययोरसंसारिप्रणीतत्वं विनाप्युपपत्त्याऽप्रयोजकत्वात् ।।**

---

1. सर्वज्ञप्रणीताः वेदाः, वेदत्वात् । यत्पुनर्न सर्वज्ञप्रणीतं नासौ वेदः, यथेतरवाक्यम् । (कुसुमाञ्जलिः-पञ्चमस्तवकः— ಈಶ್ವರಸಾಧನೆಯ ಸಂದರ್ಭ)

ತತ್ತ್ವನಿರ್ಣಯದಲ್ಲಿ ಇದೇ ಅನುಮಾನವನ್ನು ಉಲ್ಲೇಖಿಸಿ ನಿರಾಕರಿಸಲಾಗಿದೆ—एतेन ''वेदाः सर्वज्ञप्रणीताः वेदत्वात्, व्यतिरेकेण लौकिकवाक्यवत्''इत्यपास्तम्। विपक्षे बाधकाभावेनाप्रयोजकत्वात् । ...प्रकारान्तरेण सर्वज्ञत्वसिद्धेः निरस्तत्वात् (ನಚ ಸ್ವಯಂಪ್ರತಿಭಾತವೇದ್ಯೈ:-ಇತ್ಯಾದಿ ಮೂಲವ್ಯಾಖ್ಯಾನ)

ಅಪ್ರಸಿದ್ಧವಿಶೇಷಣತಾದೋಷದ ಪರಿಹಾರಕ್ಕಾಗಿ ಸರ್ವಜ್ಞಪ್ರಣೀತತ್ವವನ್ನು ಬಿಟ್ಟು ಅಸಂಸಾರಿಪುರುಷ ಪ್ರಣೀತತ್ವವನ್ನು ಸಾಧ್ಯವನ್ನಾಗಿ ಮಾಡಬಹುದು. ಹೀಗೆ ಮಾಡಿದರೂ, ಅಸಂಸಾರಿ ಪುರುಷನು ಅಪ್ರಸಿದ್ಧನಾದುದರಿಂದ ತತ್‌ಪ್ರಣೀತತ್ವವೂ ಅಪ್ರಸಿದ್ಧ ಎನ್ನಬಾರದು. ಅಸಂಸಾರಿಪುರುಷನನ್ನೂ ಅನುಮಾನದಿಂದಲೇ ತಿಳಿಯಬಹುದು. ಆತ್ಮತ್ವವು ಜಾತಿಯಾದುದರಿಂದ ಉಳಿದೆಲ್ಲಾ ಜಾತಿಗಳಂತೆ ಅದೂ ಅಸಂಸಾರಿಪುರುಷನಿಷ್ಠವಾಗಿದೆ. ಈ ಅನುಮಾನದಿಂದ ಅಸಂಸಾರಿಪುರುಷನು ಸಿದ್ಧನಾಗುತ್ತಾನೆ. ಇದಾದಮೇಲೆ, ತತ್‌ಪ್ರಣೀತತ್ವವನ್ನು ಸಾಮಾನ್ಯತಃ (ವಾಕ್ಯವಿಶೇಷಾವೃತ್ತಿತ್ವೇನ) ಸಾಧಿಸಬಹುದು–ಇಂತಹ ಆತ್ಮನು ಯಾವುದೋ ಒಂದುವಾಕ್ಯವನ್ನು ರಚಿಸಿದ್ದಾನೆ, ನಮ್ಮಂತೆ ಅವನೂ ಒಬ್ಬ ಆತ್ಮನಾದುದರಿಂದ. ಹೀಗೆ, ಅನಿರ್ದಿಷ್ಟವಾಕ್ಯವಿಶೇಷದಲ್ಲಿ ಅಸಂಸಾರಿಪ್ರಣೀತತ್ವವನ್ನು ಸಾಧಿಸಿ ವೇದದಲ್ಲಿ ಅದನ್ನು ಸಾಧನೆಮಾಡಿದಾಗ ಅಪ್ರಸಿದ್ಧ ವಿಶೇಷಣತ್ವದೋಷವಿಲ್ಲ.

ಈ ವಾದವೂ ಸರಿಯಲ್ಲ. ಹಿಂದೆ ಹೇಳಿದಂತೆ ವೇದತ್ವವಾಗಲೀ ತದ್ಗತಪ್ರಾಮಾಣ್ಯವಾಗಲೀ ಅಸಂಸಾರಿಪುರುಷ–ಪ್ರಣೀತತ್ವರೂಪವಾದ ಗುರುಧರ್ಮವನ್ನು ಅಪೇಕ್ಷಿಪಡುವುದಿಲ್ಲ. ಪ್ರತ್ಯಕ್ಷದಂತೆ ಮತ್ತು ಈಶ್ವರಜ್ಞಾನದಂತೆ ಗುಣಜನ್ಯವಲ್ಲದಿದ್ದರೂ ವೇದಜನ್ಯಜ್ಞಾನವು ಪ್ರಮಾ ಆಗುತ್ತದೆ. ಅಂತಹ ಪ್ರಮಾಜನಕವಾದುದರಿಂದ ವೇದವು ಪ್ರಮಾಣಶಬ್ದವೂ ಆಗುತ್ತದೆ. ಆದ್ದರಿಂದ ಹಿಂದಿನ ಅನುಮಾನಗಳಂತೆ ಈ ಅನುಮಾನವೂ ಅಪ್ರಯೋಜಕ.

## ನ್ಯಾಯದೀಪ

**उक्तरीत्येति ।** प्रत्यक्षवद्गुणाजन्येश्वरज्ञानवच्चेत्यादिनोक्तरीत्योपपत्त्येत्यन्वयः ।

ಉಕ್ತರೀತ್ಯಾ ಎಂದರೆ ಹಿಂದೆ ಹೇಳಿರುವಂತೆ, ಪ್ರತ್ಯಕ್ಷ ಮತ್ತು ಈಶ್ವರಜ್ಞಾನಗಳು ಗುಣಜನ್ಯವಾಗದಿದ್ದರೂ ಪ್ರಮಾ ಆಗಿವೆ. ಅದರಂತೆ ವೇದಜನ್ಯಜ್ಞಾನವೂ ಆಪ್ತಪ್ರಣೀತ ವಾಕ್ಯಜನ್ಯವಾಗದಿದ್ದರೂ ಪ್ರಮಾ ಆಗಬಹುದು.

## ಅವತಾರಿಕೆ

उदयनोक्तं प्रयोगान्तरमाशङ्क्य निराह— **नापीति ।**

ಉದಯನಾಚಾರ್ಯರು ಹೇಳಿರುವ ಅನುಮಾನವನ್ನು ಅನುವಾದಿಸಿ ಮೂಲದಲ್ಲಿ ನಿರಾಕರಿಸಲಾಗಿದೆ.[1]

1. **ಉದಯನಾಚಾರ್ಯರ ಕೃತಿ ನ್ಯಾಯಕುಸುಮಾಂಜಲಿಯ ಪಂಚಮಸ್ತಬಕದಲ್ಲಿ ಈಶ್ವರಸಾಧಕಾನುಮಾನ ಹೀಗಿದೆ—** ''अस्मच्छब्दः स्वप्रयोक्तृवचनः, अस्मच्छब्दत्वात्, लोकवत्'' **ಇದರ ಅರ್ಥತಃ ಅನುವಾದ ಮೂಲದಲ್ಲಿ ಹೇಳಿರುವ ಅನುಮಾನ.**

**नापि, वैदिकमहंपदं स्वतन्त्रवक्तृपरं अहंपदत्वात् संमतवदित्यनेन पौरुषेयत्वसिद्धिरिति वाच्यम् । तथात्वे त्वन्मतेऽपि वेदे ''शरीरं मे विचर्षणम् । जिह्वा मे मधुमत्तमा'' इत्यादौ स्वतन्त्रवक्तुरीश्वरस्यैव, भारतादौ च**

**'किं नो राज्येन गोविन्द'**

**'शिष्यस्तेऽहं शाधि मां त्वां प्रपन्नम् ।'**

**इत्यादौ व्यासस्यैव, लोके च ''वाच्यस्त्वया मद्वचनात् स राजा'' इत्यादौ कालिदासादेरेवाहंशब्दार्थत्वापातात् ॥**

''ತತ್ ಬ್ರಹ್ಮಾವೇತ್ ಅಹಂ ಬ್ರಹ್ಮಾಸ್ಮೀತಿ'' 'ಅಹಮೇವ ಸ್ವಯಮಿದಂ ವದಾಮಿ' ಇತ್ಯಾದಿ ಶ್ರುತಿಯಲ್ಲಿರುವ, ಅಸ್ಮಚ್ಛಬ್ದಕ್ಕೆ ಆದೇಶವಾಗಿ ಬಂದಿರುವ 'ಅಹಂ' ಎಂಬ ಪದವು 'ಅಹಂ' ಪದವಾದುದರಿಂದ ಅದು ಅದನ್ನು ಉಚ್ಚರಿಸಿದ ಸ್ವತಂತ್ರ ವ್ಯಕ್ತಿವಾಚಕವಾಗಿದೆ. ಇದು ವೇದಕ್ಕೆ ಪೌರುಷೇಯತ್ವಸಾಧಕವಾದ ಅನುಮಾನ. ಇದರಿಂದ ಅಹಮಾದಿಪದಘಟಿತ ವಾಕ್ಯಗಳನ್ನು ಸ್ವತಂತ್ರವಾಗಿ ಉಚ್ಚರಿಸಿರುವ ವ್ಯಕ್ತಿಯೊಬ್ಬನು ಇದ್ದಾನೆಂದು ಸಿದ್ಧವಾಗುತ್ತದೆ. ಸ್ವತಂತ್ರವ್ಯಕ್ತಿ ಎಂದರೆ ಸಜಾತೀಯೋಚ್ಚಾರಣೆಯ ಅಪೇಕ್ಷೆ ಇಲ್ಲದೆ ಉಚ್ಚರಿಸಿದವನು. ಅಂದರೆ, ಅಂತಹ ವಾಕ್ಯಗಳನ್ನು ರಚಿಸಿದವನು, ಎಂದರ್ಥ. ಹೀಗೆ, ವೇದವೂ ಪೌರುಷೇಯವೆಂದು ಸಿದ್ಧವಾಗುತ್ತದೆ.

ಈ ಅನುಮಾನವೂ ಸರಿಯಲ್ಲ—ಹೀಗಾದರೆ ತೈತ್ತಿರೀಯೋಪನಿಷತ್ತಿನಲ್ಲಿ—''ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ'' ಎಂದಿದೆ. ''ನನ್ನ ದೇಹವು ಅನೇಕ ಸಂತತಿಯನ್ನು ಕೊಡಲಿ, ನನ್ನ ನಾಲಿಗೆ ವೇದೋಚ್ಚಾರಣ ಸಮರ್ಥವಾಗಲಿ'' ಎಂದರ್ಥ. ಈ ವಾಕ್ಯವನ್ನು ರಚಿಸಿದವನು ಈಶ್ವರನಾದುದರಿಂದ ಇಲ್ಲಿರುವ ಅಸ್ಮಚ್ಛಬ್ದದಿಂದ ವಾಚ್ಯನಾದವನು ಅವನೇ ಆದಾನು. ಅದು ನಮ್ಮ ಪ್ರಾರ್ಥನೆಯಾಗಲಿಕ್ಕಿಲ್ಲ. ಅದರಂತೆ, ಗೀತೆಯಲ್ಲಿ ಅರ್ಜುನ ಹೇಳಿದ ಮಾತು—

'ಕಿಂ ನೋ ರಾಜ್ಯೇನ ಗೋವಿಂದ'

'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್'

ಈ ಮಾತುಗಳಲ್ಲಿರುವ 'ನಃ' 'ಅಹಂ' 'ಮಾಂ' ಶಬ್ದಗಳಿಂದ ಅರ್ಜುನ ವಾಚ್ಯನಾಗಲಿಕ್ಕಿಲ್ಲ. ಅದನ್ನು ರಚಿಸಿರುವ ವ್ಯಾಸರೇ ವಾಚ್ಯರಾದಾರು. ಹೀಗೆಯೇ ಕಾಳಿದಾಸನು ರಘುವಂಶದಲ್ಲಿ ಹೇಳಿದ ಲೌಕಿಕವಾದ ವಾಕ್ಯ ಹೀಗಿದೆ—

''ವಾಚ್ಯಸ್ತ್ವಯಾ ಮದ್ವಚನಾತ್ ಸ ರಾಜಾ''

ಸೀತೆ ತನ್ನನ್ನು ಪರಿತ್ಯಜಿಸಿದ ರಾಮನಿಗೆ ಲಕ್ಷ್ಮಣನ ಮೂಲಕ ಹೇಳಿದ ಮಾತಿದು. ಇಲ್ಲೂ 'ಮದ್ವಚನಾತ್' ಎಂದರೆ 'ಕಾಳಿದಾಸನ ಮಾತಿನಂತೆ' ಎಂದರ್ಥವಾದೀತು. ವಸ್ತುತಃ 'ನನ್ನ (ಸೀತೆಯ) ಮಾತಿನಂತೆ' ಎಂದರ್ಥ. ಈ ವಿವಕ್ಷಿತಾರ್ಥ ಬರಲಿಕ್ಕಿಲ್ಲ.

## ನ್ಯಾಯದೀಪ

**''तद् ब्रह्मावेदहं ब्रह्माऽस्मीति'' ''अहमेव स्वयमिदं वदामि'' इत्यादौ श्रुताहमाद्यस्मदादेशपदमित्यर्थः ॥**

ತತ್ ಬ್ರಹ್ಮ=ಆ ಬ್ರಹ್ಮನು 'ಅಹಂ ಬ್ರಹ್ಮಾಸ್ಮಿ'=ನಾನೇ ಬ್ರಹ್ಮನಾಗಿದ್ದೇನೆ, ಇತಿ=ಹೀಗೆ ಅವೇತ್=ತಿಳಿಯಿತು. ಇದು ಬೃಹದಾರಣ್ಯಕ ವಾಕ್ಯ.

ಸ್ವಯಮ್ ಅಹಮೇವ=ನಾನೇ (ಲಕ್ಷ್ಮೀದೇವಿ) ಸಾಕ್ಷಾತ್ತಾಗಿ ಇದಂ=ಈ ಮಾತನ್ನು ವದಾಮಿ=ಹೇಳುತ್ತೇನೆ. ಅಂಭೃಣೀಸೂಕ್ತದಲ್ಲಿರುವ ಲಕ್ಷ್ಮೀದೇವಿಯ ಮಾತಿದು.

ಇಲ್ಲಿ 'ಅಸ್ಮತ್' ಎಂಬ ಶಬ್ದಕ್ಕೆ ಪಾಣಿನಿಯ ಸೂತ್ರದಂತೆ 'ಅಹಮ್' ಆದೇಶ ಬಂದಿದೆ.

## ನ್ಯಾಯದೀಪ

**''तथात्वे सङ्कल्पप्रार्थनादिवाक्यानामनर्थकत्वप्रसङ्गात्'' इति तत्वनिर्णयटीकां विवृण्वन्नेव हेतुमाह—तथात्व इति । तैत्तिरीयोपनिषदि श्रुते प्रार्थनावाक्ये, मे=मम शरीरं, विशिष्टाश्चर्षण्यः प्रजा यस्य तत्=विशिष्टप्रजायुक्तमस्तु । मे=मम जिह्वा मधुमत्तमा=अतिशयेन स्वादुमती भवत्विति प्रार्थनाकर्तृयजमानवाचित्वेन श्रुतास्मदादेशरूप–मेतिशब्दार्थत्वमीश्वरस्य स्यात् ।**

ತತ್ತ್ವನಿರ್ಣಯದಲ್ಲಿ ವೈದಿಕಾಹಮಾದಿಪದಗಳಿಂದ ಸ್ವತಂತ್ರೋಚ್ಚರಿತವ್ಯಕ್ತಿಯೇ ವಾಚ್ಯನಾದರೆ 'ವೈದಿಕ ಸಂಕಲ್ಪ ವಾಕ್ಯಗಳು, ಪ್ರಾರ್ಥನಾವಾಕ್ಯಗಳು ಅನರ್ಥಕಗಳಾದಾವು' ಎಂದಿದೆ. ('ನಿತ್ಯಾ ವೇದಾ ಸಮಸ್ತಾಶ್ಚ' ಎಂಬ ಪ್ರಮಾಣವಾಕ್ಯದ 'ಸಮಸ್ತಾಃ' ಎಂಬ ಪದಕ್ಕೆ ಕೃತ್ಯವನ್ನು ನಿರೂಪಿಸುವ ಸಂದರ್ಭ.) ಈ ವಾಕ್ಯವನ್ನೇ ವಿವರಿಸುತ್ತಾ ಅದಕ್ಕೆ ಕಾರಣವನ್ನು 'ತಥಾತ್ವೇ' ಎಂಬ ವಾಕ್ಯದಲ್ಲಿ ಹೇಳಲಾಗಿದೆ. ತೈತ್ತಿರೀಯೋಪನಿಷತ್ತಿನ ಪ್ರಾರ್ಥನಾವಾಕ್ಯಗಳಿವು. ಇಲ್ಲಿನ ಅಸ್ಮಚ್ಛಬ್ದಕ್ಕೆ

ಆದೇಶವಾಗಿ ಬಂದ ಮೇಶಬ್ದದಿಂದ ವಾಚ್ಯ ಈ ವಾಕ್ಯವನ್ನು ಪಠಿಸುವ ಯಜಮಾನ. ಆದರ ಸ್ವತಂತ್ರೋಚ್ಚಾರಯಿತೃ ಈಶ್ವರ. ಅವನೇ ಆ ಶಬ್ದವಾಚ್ಯನಾದಾನು.

## ನ್ಯಾಯದೀಪ

तथा—

"किं नो राज्येन गोविन्द किं भोगैर्जीवितेन वा ।"

इति विषादपरगीतावाक्ये, तथा—

"पृच्छामि त्वां धर्मसम्मूढचेताः ।
यच्छ्रेयः स्यान्निश्चितं ब्रूहि तन्मे शिष्यस्तेऽहं"

इति शिक्षाप्रार्थनापरे अर्जुनकर्तृकवाक्ये व्यासस्यैव 'न' इत्यहमिति च श्रुतास्मच्छब्दार्थत्वप्रसङ्गात् । तथा रघुवंशे च मद्वचनादिति सीता-प्रयुक्तास्मच्छब्दार्थत्वं कालिदासस्य स्यादित्यर्थः ।।

ಅದರಂತೆ, 'ಕಿಂ ನೋ ರಾಜ್ಯೇನ' ಎಂಬ ಅರ್ಜುನವಿಷಾದವನ್ನು ಹೇಳುವ ಗೀತಾವಾಕ್ಯದಲ್ಲಿ, 'ಪೃಚ್ಛಾಮಿ ತ್ವಾಂ' ಎಂಬ ಉಪದೇಶಪ್ರಾರ್ಥನೆ ಮಾಡುವ ಅರ್ಜುನನ ವಾಕ್ಯದಲ್ಲಿ 'ನಃ' 'ಅಹಂ' ಶಬ್ದಗಳಿಂದ ವ್ಯಾಸರೇ ವಾಚ್ಯರಾದಾರು. ಅದರಂತೆ, ರಘುವಂಶದಲ್ಲಿ ಸೀತೆಪ್ರಯೋಗಿಸಿದ 'ಅಸ್ಮತ್' ಶಬ್ದಕ್ಕೆ ಕಾಳಿದಾಸನೆಂದು ಅರ್ಥವಾದೀತು.

## ಅವತಾರಿಕೆ

"नहि वयं वेदे पुरुषाभिप्रायप्रवेश एव नास्तीति वदामः" इति टीकोक्तसमाधिं परमुखेनैव वाचयन्नाह—**ननु शरीरमित्यादिना ।**

"ನಹಿ ವಯಂ" ಎಂದು ತತ್ತ್ವನಿರ್ಣಯಟೀಕಾದಲ್ಲಿ 'ವೇದದಲ್ಲಿ ಪುರುಷಾಭಿಪ್ರಾಯ ಪ್ರವೇಶವೇ ಇಲ್ಲ, ಎಂದೇನೂ ನಾವು ಹೇಳುವುದಿಲ್ಲ' ಎಂದು ಪೂರ್ವಪಕ್ಷಕ್ಕೆ ಸಮಾಧಾನ ಹೇಳುವ ವಾಕ್ಯದ ಅಭಿಪ್ರಾಯವನ್ನು ಪೂರ್ವಪಕ್ಷಿಯ ಬಾಯಿಯಲ್ಲೇ ಹೇಳಿಸಿ ವೇದಪೌರುಷೇಯತ್ವಕ್ಕೆ ಹೇಳಿರುವ ಈ ಯುಕ್ತಿಯನ್ನು ನಿರಾಕರಿಸುತ್ತಾರೆ.

**ननु "शरीरं मे" इत्यादावीश्वरादेरेव स्वतन्त्रवक्तृत्वेऽपि मन्त्र-**

लिङ्गप्रकरणादिना यजमानाद्यभिप्रायानुप्रवेशाङ्गीकाराद् यजमाना-र्जुनसीतादिरेवाहंशब्दार्थ इति चेत् तर्हि वेदापौरुषेयत्वेऽपि ''शरीरं मे'' इत्यादिप्रार्थनादिमन्त्रेषु मन्त्रलिङ्गादिना यजमानेश्वराद्यभिप्रायानुप्रवेशस्य मयापि स्वीकृतत्वात् तत्र यजमान एवाहंशब्दार्थः ''मामुपास्व'' इत्यादौ त्वीश्वर इत्यस्तु ।

**किञ्च मन्मते ईश्वरस्यान्योच्चारणानपेक्षमेवोच्चारयितृत्वेन स्वतन्त्र-वक्तृत्वमप्यस्ति ॥**

'ಶರೀರಂ ಮೇ' ಇತ್ಯಾದಿ ಒಂದೆ ಹೇಳಿರುವ ವಾಕ್ಯಗಳ ಸ್ವತಂತ್ರೋಚ್ಚಾರಯಿತೃ ಈಶ್ವರನೇ ಆದರೂ ಶ್ರುತ್ಯರ್ಥನಿರ್ಣಾಯಕ 'ಮಂತ್ರಲಿಂಗ-ವಾಕ್ಯ-ಪ್ರಕರಣಾದಿ' ಲಿಂಗಗಳಿಂದ ಅದನ್ನು ಉಚ್ಚರಿಸುವ ಯಜಮಾನನ ಅಭಿಪ್ರಾಯವನ್ನು ಸೇರಿಸಿದಾಗ ಆ ವಾಕ್ಯಗಳಲ್ಲಿ ಕ್ರಮವಾಗಿ ಯಜಮಾನ, ಅರ್ಜುನ, ಸೀತೆ ಇವರು ಅಹಮಾದಿಶಬ್ದಗಳಿಂದ ವಾಚ್ಯರಾಗಬಹುದು ಎಂದು ಸಮಾಧಾನವನ್ನು ಹೇಳುವುದಾದರೆ ಇದೇ ಪರಿಹಾರವನ್ನು ವೇದಾಪೌರುಷೇಯತ್ವವಾದಿಗಳೂ ಹೇಳಬಹುದು. ಆದ್ದರಿಂದ, ಮಂತ್ರ-ಲಿಂಗಾದಿಗಳಿಂದ 'ಶರೀರಂ ಮೇ' ಎಂಬ ವಾಕ್ಯದಿಂದ ಯಜಮಾನ ವಾಚ್ಯ, ''ಮಾಮುಪಾಸ್ವ'' ಎಂಬ ವಾಕ್ಯದಿಂದ ಮಾತ್ರ ಈಶ್ವರವಾಚ್ಯ ಎಂದಾಗಲಿ.

ಅಲ್ಲದೆ, ವೇದವು ನಮ್ಮ ಮತದಲ್ಲಿ ಅನಾದಿಯಾದರೂ ಈಶ್ವರನು ಅನ್ಯರ ಉಚ್ಚಾರಣೆಯನ್ನು ಅಪೇಕ್ಷಿಸಿ ವೇದವನ್ನು ಉಚ್ಚರಿಸುವುದಿಲ್ಲವಾದ್ದರಿಂದ ಅವನು ಸ್ವತಂತ್ರೋಚ್ಚಾರಕನೂ ಆಗಿದ್ದಾನೆ. ಆದ್ದರಿಂದ 'ಮಾಮುಪಾಸ್ವ' ಮುಂತಾದ ವೈದಿಕ ಅಸ್ಮಚ್ಛಬ್ದದಿಂದ ಅವನೇ ವಾಚ್ಯನಾಗಬಹುದು.

## ನ್ಯಾಯದೀಪ

**मन्त्रलिङ्गेति।** मन्त्राणामर्थप्रतिपादनसामर्थ्यं हि मन्त्रलिङ्गमिति मीमांसकादिपरिभाषा । व्यक्तमेतल्लिङ्गप्रकरणादिस्वरूपमग्रे द्वितीय-परिच्छेदे । यस्मिन् मन्त्रे यदर्थप्रतिपादनसामर्थ्यं, प्रकरणस्थानादिकं वा विद्यते तदभिप्रायानुप्रवेशस्य तत्राङ्गीकारादित्यर्थः ।

तर्हि ''मामुपास्व'' इत्यादावनन्यपरे स्वतन्त्रवक्तृपरता स्यादित्यतः सिद्धसाधनत्वं चाह—**किञ्चेति** ।

ಮಂತ್ರಲಿಂಗ ಶಬ್ದಕ್ಕೆ ಮಂತ್ರಗಳಲ್ಲಿ ಇರುವ ಅರ್ಥಪ್ರಕಾಶನ ಶಕ್ತಿ, ಎಂದು ಅರ್ಥ. ಇದು ಮೀಮಾಂಸಕರ ಪರಿಭಾಷೆ.

ಎರಡನೆಯ ಪರಿಚ್ಛೇದದಲ್ಲಿ ಪ್ರಕರಣಾದಿಗಳ ಸ್ವರೂಪವನ್ನು ವಿವರಿಸುವಾಗ ಈ ವಿಷಯವು ಸ್ಪಷ್ಟವಾಗುವುದು. ಯಾವ ಮಂತ್ರದಲ್ಲಿ ಯಾವ ಅರ್ಥವನ್ನು ಪ್ರತಿಪಾದಿಸುವ ಸಾಮರ್ಥ್ಯ ಅಥವಾ 'ಸ್ಥಾನ-ಪ್ರಕರಣಾದಿಗಳು' ಇರುವವೋ ಆ ಮಂತ್ರಗಳಲ್ಲಿ ತದಭಿಪ್ರಾಯಪ್ರವೇಶವನ್ನು ಅಂಗೀಕಾರ ಮಾಡಲಾಗಿದೆ.

ಅಸ್ಮಚ್ಛಬ್ದವು ಕೆಲವು ಕಡೆ ಈಶ್ವರವಾಚಕವಾಗುವುದಾದಲ್ಲಿ 'ಮಾಮುಪಾಸ್ವ' ಎಂಬ ವಾಕ್ಯದಲ್ಲಿ 'ಮಾಂ' ಎಂಬ ಪದವು ಈಶ್ವರವಾಚಕವಾದುದರಿಂದ ಈಶ್ವರನೇ ಆ ವಾಕ್ಯದ ಸ್ವತಂತ್ರವಕ್ತೃವೆಂದಾಗಲಿ. (ಆ ವಾಕ್ಯವು ಈಶ್ವರಪ್ರಣೀತವಾಗಲಿ ಎಂಬ ಅಭಿಪ್ರಾಯದಲ್ಲಿ ಈ ಆಕ್ಷೇಪ) ಅದು ನಮಗೆ ಇಷ್ಟಾಪತ್ತಿ. ಅದರ ಸ್ವತಂತ್ರ ವಕ್ತಾ ಈಶ್ವರನಾದರೂ ಅವನು ಕರ್ತಾ ಅಲ್ಲ.

**एतेन वैदिकेन स्यामाभूमेत्याद्युत्तमपुरुषेण पौरुषेयत्वसिद्धिः । तदभिधेयायाः सङ्ख्यायाः स्वतन्त्रवक्त्रन्वयादिति निरस्तम् । तस्याः ''गृभ्णामि ते सौभगत्वाय हस्तम्'' इत्यादौ परतन्त्रवक्त्रन्वयस्यापि दर्शनात् । प्रत्युत त्वत्पक्ष एव ''वयं स्याम पतयो रयीणां'' ''भूयिष्ठां ते नम उक्तिं विधेम'' इत्यादौ बहुवचनादिकमयुक्तम् । स्वतन्त्रवक्तुरीश्वरस्यैकत्वात् ॥**

ವೇದದಲ್ಲೂ ಪುರುಷಾಭಿಪ್ರಾಯ ಪ್ರವೇಶವು ಇದೆಯಾದುದರಿಂದಲೇ ಇನ್ನೊಂದು ಆಕ್ಷೇಪಕ್ಕೂ ಸಮಾಧಾನ ಸಿಗುತ್ತದೆ—ವೇದದಲ್ಲಿ 'ವಯಂ ಸ್ಯಾಮ ಪತಯೋ ರಯೀಣಾಂ' ಎಂದೂ 'ಅಪಾಮ ಸೋಮಮ್ ಅಮೃತಾ ಅಭೂಮ' ಎಂದೂ 'ಸ್ಯಾಮ' 'ಅಭೂಮ' ಇತ್ಯಾದಿ ಉತ್ತಮಪುರುಷಪ್ರಯೋಗಗಳಿವೆ. ಇವುಗಳಿಂದ ವಾಚ್ಯವಾದ ಏಕತ್ವ-ಬಹುತ್ವಾದಿ ಸಂಖ್ಯೆಗಳಿಗೆ ಸ್ವತಂತ್ರಪುರುಷನಲ್ಲೇ ಅನ್ವಯ. ಆದ್ದರಿಂದ ವೇದವು ಸ್ವತಂತ್ರಪುರುಷಪ್ರಣೀತವಾಗಿದೆ.

ಈ ಆಕ್ಷೇಪವೂ ನಿರಸ್ತವಾಯಿತು. ಆ ಸಂಖ್ಯೆಗಳಿಗೆ ಪರತಂತ್ರವಕ್ತೃವಿನಲ್ಲೇ ಅನ್ವಯ. ಉದಾಹರಣೆಗೆ— 'ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮ್' ಎಂದು ವಿವಾಹಕಾಲದಲ್ಲಿ ವರನು ವಧುವಿಗೆ ಹೇಳುವ ವೈದಿಕ ಮಂತ್ರ. 'ಸೌಭಾಗ್ಯ ಸಿದ್ಧಿಗಾಗಿ ನಿನ್ನ ಪಾಣಿಯನ್ನು ಗ್ರಹಣ ಮಾಡುತ್ತೇನೆ' ಎಂದರ್ಥ. ಇಲ್ಲಿ 'ಗೃಭ್ಣಾಮಿ' ಎಂಬ ಉತ್ತಮ ಪುರುಷ ಹಾಗೂ ಏಕತ್ವ ಸಂಖ್ಯೆಯು ಪರತಂತ್ರವಕ್ತೃವಾದ ವರನಿಗೆ ಅನ್ವಯಿಸುತ್ತದೆ.

ಈ ಅನುಪಪತ್ತಿ ಅಪೌರುಷೇಯತ್ವವಾದಿಗಳಿಗೆ ಬಾಧಕವಲ್ಲ. ಪೌರುಷೇಯತ್ವವಾದಿಗಳಿಗೇ ಬಾಧಕವಾಗುತ್ತದೆ. ''ವಯಂ ಸ್ಯಾಮ ಪತಯೋ ರಯೀಣಾಮ್'' ಇಲ್ಲಿ ''ಸ್ಯಾಮ'' ಎಂದು ಬಹುವಚನವಿದೆ. ಅದು ಸ್ವತಂತ್ರವಕ್ತನಾದ ಈಶ್ವರನಲ್ಲಿ ಬಾಧಿತ. ''ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'' ಇಲ್ಲೂ 'ವಿಧೇಮ' ಎಂಬ ಬಹುವಚನ ಈಶ್ವರನಲ್ಲಿ ಬಾಧಿತವಾಗಿದೆ. ಆ ವಾಕ್ಯಗಳ ಸ್ವತಂತ್ರವಕ್ತೃವಾದ ಈಶ್ವರ ಏಕನಾಗಿದ್ದಾನೆ.

## ನ್ಯಾಯದೀಪ

**स्यामेति ।** ''वयं स्याम पतयो रयीणाम्, अपाम सोममममृता अभूम, अभूमानागसो वयम्'' इत्यादौ श्रुतोत्तमपुरुषस्य ''द्व्येकयोर्द्विवचनैकवचने'' ''बहुषु बहुवचनम्'' इत्युक्तवचनरूपतया सङ्ख्यावाचित्वात् तदभिधेयायाः सङ्ख्याया इत्युक्तम् । **तस्या इति ।** सङ्ख्याया इत्यर्थः । ''गृभ्णामि ते सौभगत्वाय हस्तं मया पत्या जरदष्टिर्यथा सः'' इति बह्वृचवाक्ये उद्वोढुपुरुषेण 'ते=तव हस्तं सौभाग्याय गृभ्णामि' ''हृग्रहोर्भश्छन्दसि'' इति भादेशः । गृह्णामीति कन्यां प्रत्युच्चार्यमाणे श्रुतोत्तमपुरुषोक्तसङ्ख्यायास्तद्वाक्यं प्रत्यस्वतन्त्रवक्त्रन्वयदर्शनादित्यर्थः । एकत्वादित्युपलक्षणम् । सर्वनम्यत्वात् प्रणामोक्तिश्च न युक्तेत्यपि ध्येयम् ।

''ವಯಂ ಸ್ಯಾಮ'' ಇತ್ಯಾದಿವಾಕ್ಯಗಳಲ್ಲಿ ಪಾಣಿನಿಸೂತ್ರೋಕ್ತವಾದ ದ್ವಿವಚನ, ಬಹುವಚನಗಳಿಂದ ಪ್ರತಿಪಾದ್ಯವಾದ ಬಹುತ್ವಾದಿ ಸಂಖ್ಯೆಗಳು, ಅನ್ವಯವಾಗಲಿಕ್ಕಿಲ್ಲ.

ಶ್ರುತಿವಾಕ್ಯದಲ್ಲಿ 'ಗೃಹ್ಣಾಮಿ' ಎಂಬ ಪ್ರಯೋಗದ ಬದಲಾಗಿ 'ಗೃಭ್ಣಾಮಿ' ಎಂದಿದೆ. ಅದು 'ಹೃ-ಗ್ರಹೋರ್ಭಶ್ಛಂದಸಿ' ಎಂಬ ಸೂತ್ರದಂತೆ 'ಭ' ಎಂಬ ಆದೇಶ ಬಂದಿರುವ ವೈದಿಕ ಪ್ರಯೋಗ. ಇಲ್ಲಿನ ಉತ್ತಮಪುರುಷದಿಂದ ವಾಚ್ಯವಾದ ಸಂಖ್ಯೆಯು ವರನಿಗೆ ಅನ್ವಯಿಸುತ್ತದೆ, ಈಶ್ವರನಿಗಲ್ಲ.

**एतेन, वैदिकेन युष्मच्छब्देन पौरुषेयत्वसिद्धिः । तस्य स्वतन्त्रवक्तृसंबोध्यवाचकत्वादिति निरस्तम् ।''त्वां प्रपन्नं'' ''बाच्यस्त्वया'' इत्यादौ परतन्त्रवक्तृसंवेद्येऽपि तत्प्रयोगात् ।।**

ವೇದದಲ್ಲಿ ಪುರುಷಾಭಿಪ್ರಾಯಪ್ರವೇಶಕ್ಕೆ ಅವಕಾಶವಿರುವುದರಿಂದಾಗಿಯೇ ಇನ್ನೊಂದು ಆಕ್ಷೇಪವೂ ಬಗೆಹರಿಯುತ್ತದೆ. ವೇದದಲ್ಲಿ 'ಯುಷ್ಮದ್' ಶಬ್ದದ ಪ್ರಯೋಗವಿದೆ. ಅದಕ್ಕೆ ವಾಕ್ಯವನ್ನು ಸ್ವತಂತ್ರವಾಗಿ ಪ್ರಯೋಗಿಸಿರುವ ವ್ಯಕ್ತಿಯಿಂದ ಸಂಬೋಧ್ಯನಾದವನು ಅರ್ಥ. ವೇದವು ಅಪೌರುಷೇಯವಾದರೆ ಅದಕ್ಕೆ ಈ ಅರ್ಥವನ್ನು ಹೇಳಲಾಗದು. ಆದ್ದರಿಂದ ವೇದವು ಪೌರುಷೇಯ, ಎಂದು.

ಇದೂ ಸರಿಯಲ್ಲ. 'ತ್ವಾಂ ಪ್ರಪನ್ನಮ್' ಎಂಬ ಗೀತಾವಾಕ್ಯದಲ್ಲಿ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ವಾಕ್ಯದಲ್ಲಿ 'ತ್ವಾಂ' ಎಂದರೆ ''ಶ್ರೀಕೃಷ್ಣನನ್ನು'' ಎಂದು ಅರ್ಥ. ಅರ್ಜುನ ಆ ವಾಕ್ಯದ ಸ್ವತಂತ್ರಪ್ರಯೋಕ್ತೃ ಅಲ್ಲ, ಆ ವಾಕ್ಯ ವ್ಯಾಸರದು. ಅರ್ಜುನ ಪರತಂತ್ರಪ್ರಯೋಕ್ತೃ. ಅವನಿಂದ ಸಂಬೋಧ್ಯನಾದ ಶ್ರೀಕೃಷ್ಣನೂ ಯುಷ್ಮದ್‌ಶಬ್ದದಿಂದ ವಾಚ್ಯನಾಗಿದ್ದಾನೆ. ಇದರಂತೆ 'ತ್ವಯಾ' ಎಂದು ತನ್ನ ಪರಿತ್ಯಾಗದ ಸಂದರ್ಭದಲ್ಲಿ ಸೀತೆಯಿಂದ ಸಂಬೋಧ್ಯನಾದ ಲಕ್ಷ್ಮಣನೂ ಯುಷ್ಮದ್‌ಶಬ್ದದಿಂದ ವಾಚ್ಯನಾಗಿದ್ದಾನೆ. ಆದ್ದರಿಂದ ಯುಷ್ಮದ್ ಶಬ್ದವಿದ್ದ ಮಾತ್ರಕ್ಕೆ ವೇದವು ಸ್ವತಂತ್ರಪುರುಷಕರ್ತೃಕ ಎಂದಾಗುವುದಿಲ್ಲ.

## ನ್ಯಾಯದೀಪ

**इत्यादाविति । पूर्वोक्तगीतारघुवंशवाक्यादौ व्यासकालिदासादेरेव स्वतन्त्रवक्तृतयाऽर्जुनसीतादेरेतादृश्वक्तृत्वात् तत्संबोध्येऽपि कृष्णादौ युष्मत्पदादेशप्रयोगदर्शनाद् व्यभिचार इत्यर्थः ।।**

'ತ್ವಾಂ ಪ್ರಪನ್ನಂ' ಎಂಬ ಗೀತಾವಾಕ್ಯದಲ್ಲಿ 'ವಾಚ್ಯಸ್ತ್ವಯಾ' ಎಂಬ ರಘುವಂಶ ವಾಕ್ಯದಲ್ಲಿ ವ್ಯಾಸ ಮತ್ತು ಕಾಳಿದಾಸರೇ ಸ್ವತಂತ್ರವಕ್ತೃಗಳು. ಅರ್ಜುನ ಮತ್ತು ಸೀತೆಯರು ಅಲ್ಲ, ಅವರು ಅಸ್ವತಂತ್ರವಕ್ತೃಗಳು. ಆದರೂ ಅವರಿಂದ ಸಂಬೋಧ್ಯರಾದ ಕೃಷ್ಣ ಮತ್ತು ಲಕ್ಷ್ಮಣರಿಗೆ ಯುಷ್ಮದ್‌ಶಬ್ದಕ್ಕೆ ಆದೇಶವಾಗಿ ಬಂದ 'ತ್ವಾಂ, ತ್ವಯಾ' ಈ ಶಬ್ದವಾಚ್ಯತ್ವವು ಕಂಡಿದೆ. ಆದ್ದರಿಂದ ಸ್ವತಂತ್ರವಕ್ತೃಗಳಿಂದ ಸಂಬೋಧ್ಯರೇ ಯುಷ್ಮದ್‌ಶಬ್ದದಿಂದ ವಾಚ್ಯರು ಎನ್ನುವುದಕ್ಕೆ ವ್ಯಭಿಚಾರ ಇದೆ.

**एतेनैव, वैदिकाभ्यां यत्तच्छब्दाभ्यां पौरुषेयत्वसिद्धिः । तयोर्यथाक्रमं स्वतन्त्रवक्तृनिष्ठबुद्धिविषये तादृशपरामर्शोपहिते च शक्तत्वादिति निरस्तम् । 'योऽस्मान् द्वेष्टि' 'स राजा' इत्यादौ चास्वतन्त्र-वक्तृबुद्धिविषयादावपि प्रयोगदर्शनात् । अन्यथा वैदिकानां किमहो-बत-धिगादिशब्दानामपि स्वतन्त्रवक्तृनिष्ठसंशय-सुख-दुःखोपहितार्थत्वाद्**

**वेदस्य नित्यसंशयाद्याधारकृतत्वमपि स्यात् । तत्र संशयादिकमाहार्यं चेदिहापि स्वातन्त्र्यमाहार्यमस्तु ॥**

**ಆಕ್ಷೇಪ**—ವೇದದಲ್ಲಿ ಯತ್-ತತ್ ಶಬ್ದಗಳಿರುವುದರಿಂಲೂ ವೇದವು ಪೌರುಷೇಯ. ಯತ್ ಶಬ್ದಕ್ಕೆ ಸ್ವತಂತ್ರಪುರುಷಬುದ್ಧಿವಿಶೇಷವಿಷಯವಾದುದು ವಾಚ್ಯ. ತತ್‌ಶಬ್ದಕ್ಕೆ ತಾದೃಶ ಪುರು ಬುದ್ಧಿವಿಶೇಷ-ವಿಷಯ ಪರಾಮರ್ಶ-ಉಪಹಿತದಲ್ಲಿ ಶಕ್ತಿ. ಉದಾಹರಣೆಗೆ—

'ಯಶ್ಛಂದಸಾಂ ಋಷಭೋ ವಿಶ್ವರೂಪಃ ।

ಸ ಮೇಂದ್ರೋ ಮೇಧಯಾ ಸ್ಪೃಣೋತು ॥

ಇಲ್ಲಿ ಆರಂಭದ ಯತ್(ಯಃ) ಶಬ್ದಕ್ಕೆ ಈ ವಾಕ್ಯವನ್ನು ರಚಿಸಿದ ಪುರುಷನ ಬುದ್ಧಿಗೆ ವಿಷಯರಾದ ವ್ಯಾಸರು, ಎಂದರ್ಥ. ಸಃ ಎಂದರೆ ತಾದೃಶಬುದ್ಧಿಗೆ ಪರಾಮರ್ಶವಿಷಯರಾದ ವ್ಯಾಸರೇ ಅರ್ಥ. ಎರಡೂ ಕಡೆ ಬುದ್ಧಿವಿಷಯತ್ವ ಮತ್ತು ಪರಾಮರ್ಶವಿಷಯತ್ವ ಉಪಲಕ್ಷಣ. ಅದರಲ್ಲಿ ಶಕ್ತಿ ಇಲ್ಲ. ಇಂತಹ ಶಬ್ದಗಳು ವೇದದಲ್ಲಿ ಇರುವುದರಿಂದ ಅದು ಸ್ವತಂತ್ರವ್ಯಕ್ತಿ ರಚಿತವಾಗಿರಬೇಕು.

ಈ ಆಕ್ಷೇಪವೂ ಪರಿಹಾರವಾದಂತೆ.

''ಅಪ್ರತಿಷ್ಠಃ ಸ ಭೂಯಾದ್ ಯೋಽಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ''

ವೇದದ ಈ ವಾಕ್ಯದಲ್ಲಿ ಈ ವಾಕ್ಯವನ್ನು ಪ್ರಯೋಗಿಸುವ ಯಜಮಾನನ ಬುದ್ಧಿ ವಿಷಯವಾದುದೂ ವಾಚ್ಯವಾಗಿದೆ. ಯಜಮಾನ ಅಸ್ವತಂತ್ರ. ಅದರಂತೆ,

ವಾಚ್ಯಸ್ತ್ವಯಾ ಮದ್ವಚನಾತ್ ಸ ರಾಜಾ ।

ಈ ರಘುವಂಶದಲ್ಲಿರುವ ಸಃ ಶಬ್ದಕ್ಕೆ ಕವಿಯ ಬುದ್ಧಿವಿಷಯವಾದುದು ಅರ್ಥವಲ್ಲ. ಸೀತೆಯ ಬುದ್ಧಿವಿಷಯನಾದ ಶ್ರೀರಾಮನು ಅರ್ಥ.

ಒಂದುವೇಳೆ ಯದಾದಿ ಶಬ್ದಗಳಿಗೆ ಸ್ವತಂತ್ರಪುರುಷಬುದ್ಧಿವಿಷಯವಾದುದು ಅರ್ಥವೆಂದು ಆಗ್ರಹ ಮಾಡಿದರೆ ವೇದಕರ್ತೃವಿಗೆ ಸಂಶಯಾದಿಗಳೂ ಇವೆ, ಎನ್ನಬೇಕಾದೀತು. ವ್ಯವಹಾರದಲ್ಲಿ 'ಕಿಂ' ಶಬ್ದಕ್ಕೆ ಸ್ವತಂತ್ರ ವಕ್ತೃನಿಷ್ಠ-ಸಂಶಯವಿಷಯ ಎಂದರ್ಥ. 'ಕಿಂಸ್ವಿದ್ ಹಿಮಸ್ಯಭೇಷಜಂ' ಎಂದು ವೇದದಲ್ಲಿ ಕಿಂಶಬ್ದವಿದೆ. ಅದನ್ನು ಪ್ರಯೋಗಿಸಿರುವ ವೇದಕರ್ತೃ ಈಶ್ವರನಿಗೆ ಸಂದೇಹ ವಿರಬೇಕಾದೀತು.

'ಬತಾಸಿ ಯಮೇನೈವ ತೇ ಮನೋಹೃದಯಂ ವಿದಾಮ'

ಈ ಶ್ರುತಿಯಲ್ಲಿ ಬತಶಬ್ದವಿದೆ. ವಕ್ತೃದುಃಖೋಽಪಹಿತವಾದುದು ಅದರಿಂದ ವಾಚ್ಯವಾದರೆ ವೇದವಕ್ತೃವಾದ ಈಶ್ವರನಿಗೆ ದುಃಖವಿರಬೇಕಾದೀತು. ತಥಾಚ ವೇದವು ಸಂದೇಹಾದಿಗಳಿರುವ

ವ್ಯಕ್ತಿಯಿಂದ ರಚಿತವೆಂದಾದೀತು. ಏವಂ ಚ, ವೇದವನ್ನು ರಚಿಸಿರುವ ಈಶ್ವರನಿಗೆ ನಿತ್ಯಜ್ಞಾನಾದಿಗಳು ಇರುವಂತೆ ನಿತ್ಯಸಂದೇಹಾದಿಗಳೂ ಇರಬೇಕಾದೀತು. ಅಲ್ಲಿ ಸಂದೇಹಾದಿಗಳು ವಾಸ್ತವವಲ್ಲ. ಆಹಾರ್ಯವಾದವು ಎಂದರೆ ವೇದದ ಅಹಮಾದಿಶಬ್ದಗಳನ್ನು ಉಚ್ಚರಿಸುವ ವ್ಯಕ್ತಿಗಳಲ್ಲೂ ಸ್ವಾತಂತ್ರ್ಯವು ಆಹಾರ್ಯವೆಂದೇ ಆಗಲಿ. ತತಶ್ಚ ವಸ್ತುತಃ ಸ್ವತಂತ್ರಪುರುಷಪೂರ್ವಕತ್ವ ಇಲ್ಲದಾಗಲಿ.

## ನ್ಯಾಯದೀಪ

**बैदिकाभ्यामिति।** ''यश्छन्दसामृषभो विश्वरूपः छन्दोभ्योध्यमृतात् सम्वभूव। स मेन्द्रो मेधया स्पृणोतु'' इत्यादौ श्रुताभ्यामित्यर्थः। **यथाक्रममिति।** स्वतन्त्रतवक्तृनिष्ठबुद्धिविषये यच्छब्दः, तादृशपरामर्शोपहिते विषये च तच्छब्द इत्यर्थः। पूर्ववदेव वेदे लोके च व्यभिचारमाह—**य इति।** ''अप्रतिष्ठः स भूयाद् योऽस्मान् द्वेष्टि यं च वयं द्विष्म'' इत्यत्र यो द्वेष्टि सः अप्रतिष्ठो भूयादिति ''वाच्यस्त्वया मद्वचनात् स राजा'' इति रघुवंशे च प्रयोगदर्शनादित्यर्थः ॥

''ಯಶ್ಛಂದಸಾಂ'' ಇತ್ಯಾದಿ ಉಪನಿಷದ್ವಾಕ್ಯದಲ್ಲಿ ಯತ್, ತತ್ ಶಬ್ದಗಳಿವೆ. ಸ್ವತಂತ್ರ ವಕ್ತೃಬುದ್ಧಿವಿಷಯದಲ್ಲಿ ಯಚ್ಛಬ್ದಕ್ಕೆ, ತಾದೃಶಬುದ್ಧಿವಿಷಯ ಪರಾಮರ್ಶೋಪಹಿತದಲ್ಲಿ ತತ್‌ಶಬ್ದಕ್ಕೆ ಶಕ್ತಿ. ಆದ್ದರಿಂದ ವೇದಕ್ಕೆ ಕರ್ತೃ ಇದ್ದಾನೆ. ಎಂದು ಪೂರ್ವಪಕ್ಷ.

''ಅಪ್ರತಿಷ್ಠಃ ಸ ಭೂಯಾತ್ ಯೋಽಸ್ಮಾನ್ ದ್ವೇಷ್ಟಿ''

ಈ ಶ್ರುತಿಯಲ್ಲಿ ಯತ್, ತತ್ ಶಬ್ದಗಳಿಗೆ ಅಸ್ವತಂತ್ರನಾದ ಯಜಮಾನಪುರುಷಬುದ್ಧಿ ವಿಷಯದಲ್ಲೂ ಶಕ್ತಿ ಇದೆ. ಆದ್ದರಿಂದ ವೇದವು ಸಕರ್ತೃಕವಾಗಬೇಕಿಲ್ಲ.

स्वोक्तगत्यन्तरपक्षे अनुकूलतर्कं परपक्षे वाधकं चाह—**अन्यथेति।** स्वतन्त्रवक्तृत्वादिकमेवाहमादिपदानामिति पक्षे इत्यर्थः। ''किंस्विद्धिमस्य भेषजं, को न आत्मा किं व्रह्म'' इत्यादौ च किंशव्दः, (इत्यादावहोशव्दः[1]) ''अहो वतासि यमेनैव ते मनोहृदयं विदाम''

---

1. ನ್ಯಾಯದೀಪದಲ್ಲಿ ಕಿಂಶಬ್ದಕ್ಕೆ ತದ್‌ಘಟಿತ ವಾಕ್ಯವನ್ನು ಉದಾಹರಿಸಿ ಮುಂದೆ ವಾಕ್ಯವನ್ನು ಉದಾಹರಿಸದೆಯೇ ''ಇತ್ಯಾದೌ ಅಹೋಶಬ್ದಃ'' ಎಂದಿದೆ. ಇಲ್ಲಿ ''ಅತ್ರ ಗ್ರಂಥಪಾತಃ ಪ್ರದರ್ಶಿತಃ–ಮು.'' ಎಂದು ಟಿಪ್ಪಣಿಯನ್ನು ಓ.ಆರ್.ಐ. ಪ್ರಕಾಶನದಲ್ಲಿ ಕೊಡಲಾಗಿದೆ. ಇಲ್ಲಿ ಮು ಎಂದರೆ ಮುಳುಬಾಗಿಲಿನಲ್ಲಿ ದೊರೆತ ಹಸ್ತಪ್ರತಿ, ಎಂದರ್ಥ.

**इत्यादौ अहोशब्दः, बतशब्दः, छन्दोगोपनिषदि सप्तमे ''आचार्यं वा ब्राह्मणं वा किञ्चिद् भृशमिव प्रत्याह धिक्त्वाऽस्त्वित्येनमाहुः''इत्यादौ च धिक्छब्दः श्रुतः। तत्र किंशब्देन संशयः, अहो इति सुखं, बत धिगिति दुखं प्रतीयत इतीश्वरो वेदकर्ता नित्यज्ञानादिमानिव नित्यसंशयादि-मानपि तादृशवाक्यकर्तृत्वेन स्यादित्यर्थः ।।**

'ಅನ್ಯಥಾ' ಎಂಬ ಮೂಲದಲ್ಲಿ ತಾವು ಹೇಳಿರುವ ಅಸ್ವತಂತ್ರಬುದ್ಧಿವಿಷಯವೇ ತದಾದಿ ಶಬ್ದಗಳಅರ್ಥ ಎಂಬ ಗತ್ಯಂತರಕ್ಕೆ ಅನುಕೂಲತರ್ಕವನ್ನು, ಪರೋಕ್ತಸ್ವತಂತ್ರಪುರುಷಬುದ್ಧಿವಿಷಯವೇ ತದಾದಿಶಬ್ದಗಳ ಅರ್ಥ, ಎನ್ನುವುದಕ್ಕೆ ಬಾಧಕವನ್ನೂ ಹೇಳಲಾಗಿದೆ.

## ನ್ಯಾಯದೀಪ

**आहार्यं चेदिति । एतेन ''न च जिज्ञासादयः सर्वज्ञे विप्रतिषिद्धा इति युक्तं, शिष्यबोधनायाहार्यत्वोपपत्तेः'' इति कुसुमाञ्जल्युक्तं निरस्तम् । सुखदुःखादेरवर्जनीयत्वात्। तस्याप्याहार्यारोपत्वे तद्बोधकवेदभागस्या-प्रामाण್यापत्तेरिति भावः ।।**

ಸಂಶಯಾದಿಗಳೂ ಈಶ್ವರನಿಗೆ ಇರಬೇಕಾದೀತು, ಎಂಬ ಆಕ್ಷೇಪವನ್ನು ಕುಸುಮಾಂಜಲಿಗ್ರಂಥದ ಪಂಚಮಸ್ತಬಕದಲ್ಲಿ ಉದಯನಾಚಾರ್ಯರು ಹೀಗೆ ಪರಿಹರಿಸಿದ್ದಾರೆ–

**न च जिज्ञासादयः सर्वज्ञे प्रतिषिद्धा इति युक्तम् ।**

**शिष्यप्रतिबोधनायनायाहार्यत्वेनाविरोधात् ।।**

''ಕಿಮಾದಿಶಬ್ದಗಳು ವೇದದಲ್ಲಿವೆ. ವಕ್ತೃಸಂದೇಹವಿಷಯ, ಎಂದು ಅದರ ಅರ್ಥ. ವೇದದ ವಕ್ತೃ ಈಶ್ವರ. ಅವನಿಗೂ ಸಂದೇಹವಿದೆಯೇ? ಅವನಲ್ಲಿ ವಾಸ್ತವ ಸಂದೇಹ ಇಲ್ಲದಿದ್ದರೂ ಶಿಷ್ಯಸಂದೇಹವನ್ನು ಸ್ವೇಚ್ಛೆಯಾ ತನ್ನಲ್ಲಿ ಆರೋಪಿಸಿ ಆ ಶಬ್ದಗಳನ್ನು ಈಶ್ವರ ಪ್ರಯೋಗಿಸುತ್ತಾನೆ.''

ಈ ಪರಿಹಾರವು ಸಮಂಜಸವಲ್ಲ. ಹೀಗಾದರೂ, ಬತಾದಿ ಶಬ್ದಗಳ ಪ್ರಯೋಗ ಸರಿಯಲ್ಲ. ವಾಸ್ತವ ಸುಖ–ದುಃಖಾದಿಗಳೇ ಅಂತಹ ಶಬ್ದಪ್ರಯೋಗಕ್ಕೆ ಕಾರಣ. ಆಹಾರ್ಯಾರೋಪಮಾಡಿ ವೇದವು ಅಂತಹ ಶಬ್ದಗಳನ್ನು ಪ್ರಯೋಗಿಸಿದರೆ ವೇದಕ್ಕೆ ಅಪ್ರಾಮಾಣ್ಯ ಬಂದೀತು.

**एतदप्युक्तं ''गौरवदोषेण'' इति ।**

ಇದನ್ನೂ ಆಚಾರ್ಯರು 'ಉಕ್ತಾ ಗೌರವದೋಷೇಣ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

## ನ್ಯಾಯದೀಪ

**गौरवेति ।** नित्यसंशयादिमत्त्वरूप'गौरवदोषेण पुंवाक्यं ज्ञापकं न तदि'त्यर्थः ।

ಗೌರವದೋಷ ಎಂದರೆ ಈಶ್ವರನಿಗೆ ನಿತ್ಯಸಂದೇಹ–ದುಃಖಾದಿಗಳನ್ನು ಅಂಗೀಕರಿಸುವುದು ಗೌರವ, ಎಂದರ್ಥ.

**एतेनैव काठकं कालापकम् इत्यादि समाख्ययेश्वरसिद्धिः । ईश्वरस्यैव कठादिकायपरिग्रहेण तत्तच्छाखानिर्मातृत्वात् । अध्ययनमात्रस्य साधरण्यात्, इति निरस्तम् । कठादिऋषिधृतत्वमात्रेण काठकादि-सञ्ज्ञोपपत्तेः ॥**

ಅಹಮಾದಿ ಶಬ್ದಗಳ ಪ್ರಯೋಗವು ಸ್ವತಂತ್ರಕರ್ತೃ ಇಲ್ಲದೆಯೂ ಉಪಪನ್ನವಾಗುತ್ತದೆ ಎಂದಿರುವುದರಿಂದ ಈ ದೋಷವೂ ಪರಿಹಾರವಾಗುತ್ತದೆ—ವೇದದ ಶಾಖೆಗಳಿಗೆ 'ಕಾಠಕ' 'ಕಾಲಾಪಕ' ಎಂಬ ಯೌಗಿಕವಾದ ಹೆಸರುಗಳಿವೆ. ಕಠನಿಂದ ಕೃತವಾದುದು ಕಾಠಕ. ಕಲಾಪ ಋಷಿಪ್ರಣೀತವಾದುದು ಕಾಲಾಪಕ. ಈ ಹೆಸರುಗಳಿಂದಾಗಿ ಈಶ್ವರ ಸಿದ್ಧಿಯಾಗುತ್ತದೆ. ಈಶ್ವರನೇ ಕಠಾದಿಋಷಿಗಳ ದೇಹವನ್ನು ಪರಿಗ್ರಹಿಸಿ ಆ ಶಾಖೆಗಳನ್ನು ರಚಿಸಿದ್ದಾನೆ. ಕಠನು ಅಧ್ಯಯನ ಮಾಡಿದುದರಿಂದ ಕಾಠಕ, ಎಂಬ ಸಂಜ್ಞೆಯನ್ನು ಸಮರ್ಥಿಸುವಂತಿಲ್ಲ. ಅಧ್ಯಯನವನ್ನು ಎಲ್ಲರೂ ಮಾಡುತ್ತಾರೆ. ಆದ್ದರಿಂದ ಕಠನಿಂದ ಕೃತ ಎಂದೇ ಅರ್ಥವನ್ನು ಮಾಡಬೇಕು. ಆದ್ದರಿಂದ ವೇದವು ಸಕರ್ತೃಕ.

ಈ ಆಕ್ಷೇಪವೂ ಸರಿಯಲ್ಲ, ಕಠಾದಿ ಋಷಿಗಳು ಜನ್ಮಾಂತರದಲ್ಲಿ ಅಧ್ಯಯನ ಮಾಡಿರುವ ವೇದಭಾಗಗಳ ಕೆಲವು ಅಂಶಗಳು ಅವರ ಬುದ್ಧಿಯಲ್ಲಿ ಪರಮಾತ್ಮನ ಅನುಗ್ರಹದಿಂದ ಧೃತವಾಗಿವೆ. ಸುಪ್ತಪ್ರಬುದ್ಧನ್ಯಾಯದಿಂದ ಈ ಜನ್ಮದಲ್ಲಿ ಅದು ಅವರ ಬುದ್ಧಿಯಲ್ಲಿ ಪ್ರತಿಭಾಸವಾಗುತ್ತದೆ. ಇದೇ ವೇದದರ್ಶನ. ಆದರಿಂದಾಗಿ ಅವರ ಹೆಸರು ಆ ಶಾಖೆಗಳಿಗೆ ಬಂದಿವೆ. ಹೀಗೆ ತದ್ರಚಿತತ್ವವನ್ನು ಹೇಳದೆಯೂ ಕಾಠಕಾದಿ ಸಂಜ್ಞೆಗಳನ್ನು ಅನ್ವರ್ಥಗೊಳಿಸಬಹುದು.

## ನ್ಯಾಯದೀಪ

**एतेनैवेति ।** अन्यथोपपन्नत्वकथनेनैवेत्यर्थः। **समाख्ययेति ।** 'यौगिकी

सञ्ज्ञा समाख्या' इति मीमांसकपरिभाषया कठेन कृतं काठकमित्यादियौगिकसंञ्ज्ञारूपसमाख्ययेत्यर्थः । तावता कथमीशकृतत्वमित्यत आह—**ईश्वरस्यैवेति ।** कठादिमुनिना अधीतत्वात् काठकमित्यस्त्वित्यत आह—**अध्ययनमात्रस्येति ।** अध्येत्रन्तरसाधारण्यादित्यर्थः । **कठादिऋषिधृतत्वेति ।** ''तज्जन्मन्यश्रुतानां सुप्तप्रतिबुद्धैरिव कठादिभिर्दृष्टत्वस्य तन्निबन्धनत्वोपपत्तेः''इति तत्वनिर्णयटीकोक्तदिशा कठादिमुनिभिर्जन्मान्तरेऽधीतशाखाविशेषस्य प्रतिभाबलेनेदानीं स्फुरितत्वेन तद्दृष्टत्वरूपतद्बुद्धिधृतत्वेनोपपत्तेरित्यर्थः ।।

ಸಮಾಖ್ಯಾ ಎಂದರೆ ಯೌಗಿಕನಾಮ. ಮೀಮಾಂಸಕರ ಪರಿಭಾಷೆಯಂತೆ 'ಕಠೇನ ಕೃತಮ್=ಕಾಠಕಂ' (ಕಠಮುನಿಯಿಂದ ಪ್ರಣೀತವಾದುದು.) ಹೀಗೆ ಕಾಠಕ ಮುಂತಾದ ಯೌಗಿಕನಾಮದಿಂದಾಗಿ ವೇದವು ಸಕರ್ತೃಕ. ಈ ಹೆಸರಿನಿಂದಾಗಿ ಕಠಮುನಿರಚಿತವೆಂದಾಗಬಹುದು, ಈಶ್ವರಪ್ರಣೀತವೆಂದು ಸಿದ್ಧವಾಗುವುದು ಹೇಗೆ? ಅದಕ್ಕುತ್ತರ—ಈಶ್ವರಸ್ಯೈವ, ಎಂಬ ವಾಕ್ಯ.

ಕಠಾದಿ ಮುನಿಗಳಿಂದ ಅಧೀತವಾದುದರಿಂದ ಕಾಠಕವೆಂದೇಕೆ ಹೇಳಬಾರದು? ಅದಕ್ಕೆ 'ಅಧ್ಯಯನಮಾತ್ರಸ್ಯ' ಎಂದು ಉತ್ತರ.

ಕಠಾದಿ ಋಷಿಗಳಿಂದ ಧೃತ ಎಂದರೆ ಹೀಗರ್ಥ— ಕಠಾದಿ ಋಷಿಗಳು ಆ ಶಾಖೆಯನ್ನು ಈ ಜನ್ಮದಲ್ಲಿ ಗುರುಮುಖದಿಂದ ಅಧ್ಯಯನ ಮಾಡಿರುವುದಿಲ್ಲ. ಮಲಗಿದವನು ಎದ್ದಾಗ ಮೊದಲಿದ್ದಲ್ಲಿ ಜ್ಞಾಪಕಕ್ಕೆ ಬರುವಂತೆ ಕಠಾದಿ ಋಷಿಗಳಿಗೂ ಜನ್ಮಾಂತರದಲ್ಲಿ ಅಧ್ಯಯನ ಮಾಡಿರುವ ಮಂತ್ರಗಳು ಅಂತರ್ದೃಷ್ಟಿಗೆ ಗೋಚರವಾಗುತ್ತವೆ. ತತ್ಪ್ರಯುಕ್ತವಾಗಿ ಕಾಠಕ ಎಂಬ ಹೆಸರು ಬಂದಿದೆ. ಹೀಗೆ ತತ್ತ್ವನಿರ್ಣಯದಲ್ಲಿದೆ. ಅದನ್ನೇ ಇಲ್ಲಿ 'ಕಠಾದಿ ಋಷಿಧೃತತ್ವೇನ' ಎಂದು ಹೇಳಲಾಗಿದೆ. ಈ ಜನ್ಮದಲ್ಲಿ ಸ್ಫುರಣೆಯಾಗುವುದೇ 'ಬುದ್ಧಿಧೃತತ್ವ'.

## ಅವತಾರಿಕೆ

यत्तु मणौ ''तत्प्रतीतीच्छयोच्चरितत्वं तात्पर्यम्'' इति तात्पर्यस्वरूपं निरूप्यान्ते ''लोके क्लृप्तत्वाद् वेदेऽपीदं तात्पर्यमिति पौरुषेयत्वम्'' इत्यादिनोक्तं तदाशङ्क्य निराह—**नापीति ।**

ಮಣಿಗ್ರಂಥದಲ್ಲಿ ಹೀಗಿದೆ— ''ಅರ್ಥವಿಶೇಷದ ಜ್ಞಾನಬರಲಿ ಎಂಬ ಇಚ್ಛೆಯಿಂದ ಪದಗಳ

ಉಚ್ಚಾರವೇ ತಾತ್ಪರ್ಯ." ಹೀಗೆ ತಾತ್ಪರ್ಯಸ್ವರೂಪವನ್ನು ತಿಳಿಸಿ (ಪು.329) ಕೊನೆಯಲ್ಲಿ (ಪು.339) 'ಲೋಕದಲ್ಲಿ ಈ ವಿಧದ ತಾತ್ಪರ್ಯಜ್ಞಾನವೇ ಶಾಬ್ದಬೋಧಕ್ಕೆ ಕಾರಣವೆಂದು ಕ್ಲೃಪ್ತವಾದುದರಿಂದ ವೇದದಲ್ಲೂ ಇದೇ ತಾತ್ಪರ್ಯಜ್ಞಾನವು ಕಾರಣ. ಆದ್ದರಿಂದ ವೇದವೂ ಪೌರುಷೇಯ' ಎಂದಿದೆ. ಈ ಆಶಂಕೆಯನ್ನು ಮಾಡಿಕೊಂಡು ಮೂಲದಲ್ಲಿ ನಿರಾಕರಿಸಲಾಗಿದೆ.

## ಅನುಮಾನ–8

**नापि, वेदस्तात्पर्यपूर्वकः, प्रमाणशब्दत्वात् भारतवत् । न चाप्रयोजकता । तात्पर्यज्ञानस्य शाब्दज्ञानानियामकत्वे हि नानार्थे श्लिष्टे च विनिगमकाभावेनार्थविशेषधीर्न स्यात् । यष्टीः प्रवेशयेत्यादावन्वयानुपपत्त्यभावेन लक्षणा च न स्यादित्युक्तानुकूलतर्कस्य सु द्भावात् । तात्पर्यस्य चार्थप्रत्यायनेच्छयोच्चारितत्वरूपत्वात् पौरुषेयत्वसिद्धिः । तस्माच्छ्रुतिकुमार्यास्तात्पर्यरूपो गर्भ एव पुंयोगे लिङ्गमिति वाच्यम् ।**

ಈ ಅನುಮಾನದಿಂದ ವೇದಕ್ಕೆ ಪೌರುಷೇಯತ್ವವನ್ನು ಸಾಧಿಸಬಹುದು—ವೇದವು ಪ್ರಮಾಣಶಬ್ದವಾದುದರಿಂದ ವಕ್ತೃತಾತ್ಪರ್ಯಜ್ಞಾನವು ಅದರಿಂದ ಬರುವ ಶಾಬ್ದಬೋಧಕ್ಕೆ ಕಾರಣವಾಗಿದೆ. ಮಹಾಭಾರತದಂತೆ.

ಈ ಅನುಮಾನವನ್ನು ಅಪ್ರಯೋಜಕ ಎಂದು ತಿರಸ್ಕರಿಸುವಂತಿಲ್ಲ. ಶಾಬ್ದಬೋಧಕ್ಕೆ ವಕ್ತೃತಾತ್ಪರ್ಯಜ್ಞಾನವು ಕಾರಣ. ಅದನ್ನು ಕಾರಣವೆಂದು ಹೇಳದಿದ್ದಲ್ಲಿ 'ಅಕ್ಷಮಾನಯ' ಎಂಬ ವಾಕ್ಯದಿಂದ ವಿವಕ್ಷಿತಬೋಧವು ಬರಲಿಕ್ಕಿಲ್ಲ. ಅಕ್ಷ ಶಬ್ದಕ್ಕೆ ಕಣ್ಣು ಮತ್ತು ದಾಳ ಎಂದು ಎರಡು ಅರ್ಥಗಳಿವೆ. ಇವೆರಡರಲ್ಲಿ ಸಂದರ್ಭದಿಂದ ವಕ್ತೃವಿನ ಅಭಿಪ್ರಾಯವನ್ನು ತಿಳಿದು ಒಂದು ಬೋಧಬರುತ್ತದೆ. ಅದರಂತೆ, ಶ್ಲೇಷಾರ್ಥಕ ವಾಕ್ಯದಲ್ಲಿ ಪ್ರಕೃತಾರ್ಥದ ಜ್ಞಾನ ಬರಲಿಕ್ಕಿಲ್ಲ. ಉದಾಹರಣೆಗೆ—'ರಾಜಾ ಕುವಲಯೋಲ್ಲಾಸೀ' ಇಲ್ಲಿ ರಾಜಶಬ್ದಕ್ಕೆ ದೇಶವಾಳುವ ದೊರೆ, ಚಂದ್ರ ಎಂದು ಎರಡು ಅರ್ಥವಿದೆ. ಪ್ರಕೃತವಾದ ದೊರೆಯ ಬೋಧಬರಬೇಕಾದರೆ ವಕ್ತೃತಾತ್ಪರ್ಯ ಜ್ಞಾನವು ಕಾರಣ. ಅಷ್ಟೇ ಅಲ್ಲದೆ 'ಯಷ್ಟೀಃ ಪ್ರವೇಶಯ' ಎಂಬ ವಾಕ್ಯದಲ್ಲಿ ಯಷ್ಟಿಪದಕ್ಕೆ 'ಯಷ್ಟಿಧರರು' ಎಂಬ ಅರ್ಥದಲ್ಲಿ ಲಕ್ಷಣಾ ಮಾಡಲಾಗುತ್ತದೆ. ಲಕ್ಷಣಾಕ್ಕೆ ಅನ್ವಯಾನುಪಪತ್ತಿಮಾತ್ರ ಕಾರಣವಾದಲ್ಲಿ ಇಲ್ಲಿ ಲಕ್ಷಣಾ ಮಾಡಲು ಅವಕಾಶವಿಲ್ಲ. ಆದಕ್ಕಾಗಿ ತಾತ್ಪರ್ಯಾನುಪಪತ್ತಿಯೂ ಕಾರಣವೆನ್ನಬೇಕು. ಪ್ರಕೃತ ವಾಕ್ಯಪ್ರಯೋಗ ಮಾಡುವವನಿಗೆ ಭೋಜನದಲ್ಲಿ ತಾತ್ಪರ್ಯ ವಾದುದರಿಂದ ಅದಕ್ಕೆ ಅನುಗುಣವಾಗಿ ಯಷ್ಟಿಧರರಲ್ಲಿ ಲಕ್ಷಣಾ ಮಾಡುವುದು ಉಚಿತವಾಗುತ್ತದೆ. ಈ ಕಾರಣದಿಂದಲೂ ತಾತ್ಪರ್ಯಜ್ಞಾನಕ್ಕೆ ಶಾಬ್ದಬೋಧಹೇತುತ್ವವು ಯುಕ್ತವಾಗಿದೆ.

ತಾತ್ಪರ್ಯ ಎಂದರೆ ಅರ್ಥವಿಶೇಷಪ್ರತೀತಿಯ ಇಚ್ಛೆಯಿಂದ ವಾಕ್ಯದ ಉಚ್ಚಾರಣೆ. ವೇದದಿಂದಲೂ ಶಾಬ್ದಬೋಧಬರಬೇಕಾದರೆ ಇಂತಹ ತಾತ್ಪರ್ಯಜ್ಞಾನವು ಕಾರಣ. ಹಾಗಿದ್ದರೆ ವೇದವಾಕ್ಯಗಳನ್ನೂ ಅರ್ಥವಿಶೇಷಜ್ಞಾನ ಬರಲಿ ಎಂಬ ಇಚ್ಛೆಯಿಂದ ಉಚ್ಚರಿಸಿರುವ ವ್ಯಕ್ತಿಯೊಬ್ಬ ಇರಲೇಬೇಕು. ಅವನೇ ವೇದಕರ್ತಾ ಈಶ್ವರ. ಹೀಗೆ ವೇದಕ್ಕೆ ಪೌರುಷೇಯತ್ವವು ಸಿದ್ಧವಾಗುತ್ತದೆ. ಇದನ್ನು ಆಲಂಕಾರಿಕವಾಗಿ ಮೂಲದಲ್ಲಿ ನಿರೂಪಿಸಲಾಗಿದೆ—ಶ್ರುತಿ ಎಂಬ ಕುಮಾರಿಯು ತಾತ್ಪರ್ಯ ಎಂಬ ಗರ್ಭವನ್ನು ಧರಿಸಿರಬೇಕಾದರೆ 'ಪುಂಯೋಗ=ಪುರುಷಸಂಪರ್ಕ' ಆಗಿರಲೇ ಬೇಕು. ಶ್ರುತಿಯಿಂದ ಶಾಬ್ದಬೋಧವು ಬರಬೇಕಾದರೆ ವಕ್ತೃತಾತ್ಪರ್ಯಜ್ಞಾನವು ಕಾರಣ. ಇದರಿಂದ ಶ್ರುತಿಗೂ ಒಬ್ಬ ಸ್ವತಂತ್ರವಕ್ತಾ(ಕರ್ತಾ) ಇದ್ದಾನೆ, ಎಂದು ಅನುಮಾನ ಮಾಡಬಹುದು ಎಂದರ್ಥ.

## ನ್ಯಾಯದೀಪ

**तात्पर्यपूर्वक इति ।** अर्थप्रतीतीच्छया केनचिदुच्चरित इत्यर्थः । यद्वा अर्थप्रतीतीच्छयोच्चरितत्वरूपतात्पर्यज्ञानपूर्वक एवार्थप्रत्यायक इति साध्यार्थः । प्रमादादिदोषपूर्वकशब्दाभासे व्यभिचारनिरासाय प्रमाणेति हेतुविशेषणम् । अर्थप्रमितिजनकशब्दत्वादित्यर्थः ।।

ತಾತ್ಪರ್ಯಪೂರ್ವಕ ಎಂದರೆ ಅರ್ಥಜ್ಞಾನವು ಬರಲಿ ಎಂಬ ಇಚ್ಛೆಯಿಂದ ಒಬ್ಬ ವ್ಯಕ್ತಿಯು ವೇದವನ್ನು ಉಚ್ಚರಿಸಿದ್ದಾನೆ, ಎಂದರ್ಥ. ಅಥವಾ, ಶ್ರೋತೃವಿಗೆ ಶಾಬ್ದಬೋಧ ಬರಬೇಕಾದರೆ ತಾತ್ಪರ್ಯಜ್ಞಾನವು ಕಾರಣ. ಆದ್ದರಿಂದ, ತಾತ್ಪರ್ಯಪೂರ್ವಕ ಎಂದರೆ ವೇದವು ಅರ್ಥ ಪ್ರತೀತೀಚ್ಛಯಾ ಉಚ್ಚರಿತವಾಗಿದೆ, ಎಂಬ ತಾತ್ಪರ್ಯಜ್ಞಾನ ಇದ್ದವನಿಗೆ ಮಾತ್ರ ಶಾಬ್ದಬೋಧಜನಕ, ಎಂದರ್ಥ.

ಹೇತು ಪ್ರಮಾಣಶಬ್ದತ್ವಾತ್, ಎಂದು. ಅಲ್ಲಿ ಪ್ರಮಾಣ ಎಂಬ ವಿಶೇಷಣವನ್ನು ಬಿಟ್ಟರೆ ಪ್ರಮಾದಾದಿ ದೋಷಪೂರ್ವಕವಾಗಿ ಉಚ್ಚರಿತವಾದ ಅಪ್ರಾಮಾಣಿಕಶಬ್ದದಲ್ಲಿ ಶಬ್ದತ್ವ ಇರುವುದರಿಂದ ವ್ಯಭಿಚಾರ ಬರುತ್ತದೆ. ಅದರ ಪರಿಹಾರಕ್ಕಾಗಿ ಪ್ರಮಾಣ ಎಂಬ ವಿಶೇಷಣವನ್ನು ಕೊಡಲಾಗಿದೆ. (ಘಟದ ತಾತ್ಪರ್ಯದಿಂದ ಪಟಶಬ್ದವನ್ನು ಪ್ರಮಾದಾತ್ ಉಚ್ಚರಿಸಿದಾಗ ಆ ವಾಕ್ಯದಲ್ಲಿ ಪಟಬೋಧತಾತ್ಪರ್ಯವಕ್ತೃವಿಗೆ ಇಲ್ಲ. ಆದ್ದರಿಂದ ಸಾಧ್ಯ ಇಲ್ಲ.) ಪ್ರಮಾಣಶಬ್ದ ಎಂದರೆ ಅರ್ಥವಿಷಯಕ ಪ್ರಮಾಜನಕ ಎಂದರ್ಥ.

## ನ್ಯಾಯದೀಪ

मण्यायुक्तमेवानुकूलतर्कं निष्कृष्याह—**तात्पर्यज्ञानस्येति ।** नानार्थ

**इति** । अक्षमानयेत्यादौ । **श्लिष्ट इति** । 'राजा कुवलयोल्लासी'त्यादौ पार्थिव-चन्द्ररूपार्थद्वयश्लेषयुक्त इत्यर्थः । **अन्वयेति** । गङ्गायां घोष इत्यादौ प्रवाहग्रामयोराधाराधेयभावरूपान्वयानुपपत्त्या गङ्गापदस्य तीरे लक्षणाऽऽश्रीयते । यष्टीः प्रवेशयेत्यादौ तु यष्टीनां गृहप्रवेशान्वय-सम्भवेन लक्षणाबीजान्वयानुपपत्त्यभावात् यष्टिपदस्य यष्टिमत्सु लक्षणा न स्यात् । तात्पर्यज्ञानस्य हेतुत्वे तु यष्टिमत्प्रवेशतात्पर्या-नुपपत्तिरूपलक्षणाबीजसम्भवाल्लक्षणा स्यादेवेति भावः ।।

'ರಾಜಾ ಕುವಲಯೋಲ್ಲಾಸೀ' ಎಂಬುದಕ್ಕೆ ಪ್ರಾಕರಣಿಕಾರ್ಥ- ಕು-ವಲಯ=ದುಷ್ಟರ ಗುಂಪು, ಅದಕ್ಕೆ ಉಲ್ಲಾಸೀ=ಪ್ರೋತ್ಸಾಹ ನೀಡುವ ರಾಜಾ, ಎಂದು. ಅಪ್ರಾಕರಣಿಕಾರ್ಥ- ನೈದಿಲೆಗಳನ್ನು ಅರಳಿಸುವ ಉಡುರಾಜ.

'ಅನ್ವಯಾನುಪಪತ್ತ್ಯಭಾವೇನ' ಎಂಬುದರ ಅಭಿಪ್ರಾಯ ಹೀಗೆ—'ಗಂಗಾಯಾಂ ಘೋಷಃ' ಎಂಬ ವಾಕ್ಯದಲ್ಲಿ ಗಂಗಾಪದದ ಶಕ್ಯಾರ್ಥಕ್ಕೆ ಘೋಷಾನ್ವಯಾನುಪಪತ್ತ್ಯಾ ತೀರದಲ್ಲಿ ಲಕ್ಷಣಾ ಮಾಡಲಾಗುತ್ತದೆ. ಆದರೆ, 'ಯಷ್ಟೀಃ ಪ್ರವೇಶಯ' ಎಂಬ ವಾಕ್ಯದಲ್ಲಿ ಯಷ್ಟಿಶಬ್ದಾರ್ಥವಾದ ಕೋಲಿಗೆ ಪ್ರವೇಶಾನ್ವಯಾನುಪಪತ್ತಿ ಇಲ್ಲ. ಆದರೂ, ಭೋಜನಕ್ಕಾಗಿ ಯಷ್ಟಿಧರರ ಪ್ರವೇಶವು ವಕ್ತೃತಾತ್ಪರ್ಯವಾದುದರಿಂದ ತಾತ್ಪರ್ಯಾನುಪಪತ್ತ್ಯಾ ಲಕ್ಷಣಾ ಮಾಡಬಹುದು. ಹೀಗೆ ಶಾಬ್ದ ಬೋಧಕ್ಕೆ ತಾತ್ಪರ್ಯಜ್ಞಾನವು ಕಾರಣ ಎಂದು ಮಣಿಗ್ರಂಥದಲ್ಲಿ ನಾನಾರೀತಿಯಿಂದ ಸಮರ್ಥಿಸಲಾಗಿದೆ. (ಮಣಿಯ ತಾತ್ಪರ್ಯವಾದದಲ್ಲಿ 'ತಾತ್ಪರ್ಯಾಧೀನಂ ಶಬ್ದಪ್ರಾಮಾಣ್ಯಮ್' ಎಂದು ಆರಂಭಿಸಿ ತಾತ್ಪರ್ಯಜ್ಞಾನಕ್ಕೆ ಶಾಬ್ದಬೋಧ ಹೇತುತ್ವವನ್ನು ಸಮರ್ಥಿಸಲಾಗಿದೆ-ಪು.319)

## ನ್ಯಾಯದೀಪ

तावता कथं पौरुषेयत्वमित्यत आह—**तात्पर्यस्य चेति** । **श्रुतीति** । श्रुतिरूपकुमार्यास्तात्पर्यरूपो गर्भ इत्यर्थः । यथा कुमार्यां गर्भेण चिह्नेन पुंयोगोऽस्ति तस्या इति ज्ञायते तथा श्रुतेरपि तात्पर्यरूपलिङ्गेन पुरुषकृतत्वरूपपुंयोगो ज्ञायत इत्यर्थः ।।

'ಶ್ರುತಿಕುಮಾರ್ಯಾಃ' ಎಂಬ ವಾಕ್ಯದ ತಾತ್ಪರ್ಯ-ಶ್ರುತಿ ಎಂಬ ಕುಮಾರಿಯ ತಾತ್ಪರ್ಯ ಎಂಬ ಗರ್ಭವು ಪುರುಷಸಂಸರ್ಗಕ್ಕೆ ಜ್ಞಾಪಕ. ಹೇಗೆ ಕುಮಾರಿಯು ಗರ್ಭವತಿಯಾದಾಗ ಅವಳಿಗೆ

ಪುರುಷಸಂಪರ್ಕವಾಗಿದೆ, ಎಂದು ತಿಳಿಯುವುದೋ ಹಾಗೆ, ಶ್ರುತಿಗೂ ವಕ್ತೃತಾತ್ಪರ್ಯರೂಪವಾದ ಲಿಂಗದಿಂದ ಪುರುಷಪ್ರಣೀತತ್ವ ರೂಪವಾದ ಪುಂಯೋಗವು ತಿಳಿಯುತ್ತದೆ, ಎಂದು.

## ಅವತಾರಿಕೆ

**अस्त्वेवं वेदस्य तात्पर्यपूर्वकत्वं तावता न पौरुषेयत्वसिद्धिरिति भावेनाह—तत्प्रमितिशेषत्वेति ।**

ವೇದವು ತಾತ್ಪರ್ಯಪೂರ್ವಕವಾದರೂ ಅಷ್ಟುಮಾತ್ರದಿಂದ ಅದಕ್ಕೆ ಪೌರುಷೇಯತ್ವವು ಸಿದ್ಧವಾಗುವುದಿಲ್ಲ, ಎಂದು ಮುಂದೆ ನಿರಾಕರಿಸಲಾಗಿದೆ.

**तत्प्रमितिशेषत्वरूपस्य तात्पर्यस्येच्छाघटितत्वाभावात् । तद्घटितत्वेऽपि मन्मते सजातीयोच्चारणानपेक्षस्येश्वरस्यार्थप्रत्यायनेच्छयोच्चारणेऽपि सर्वदाऽप्येकप्रकारानुपूर्विकत्वरूपापौरुषेयत्वाहानेश्च । अन्यथा त्वन्मतेऽप्याधुनिकेनार्थज्ञानवताध्यापकेन तदिच्छयोच्चरितस्य वेदस्याधुनिककृतत्वं स्यात् । यादृच्छिकसंवादिशुकादिवाक्ये इच्छारूपतात्पर्याभावेऽपि शाब्द-प्रमादर्शनेन हेतोरप्रयोजकत्वाच्च ।।**

ಹಿಂದೆ ಹೇಳಿದ ರೀತಿಯಿಂದಲೂ ವೇದಕ್ಕೆ ಪೌರುಷೇಯತ್ವ ಸಿದ್ಧಿಯಾಗುವುದಿಲ್ಲ. ತಾತ್ಪರ್ಯವು ಪುರುಷೇಚ್ಛಾಗರ್ಭವಲ್ಲ. 'ತತ್‌ಪ್ರಮಿತಿಶೇಷತ್ವಂ' ಇದೇ ತಾತ್ಪರ್ಯ. ಶೇಷ ಎಂದರೆ ಉದ್ದೇಶ. ತತ್‌ಪ್ರಮಿತ್ಯುದ್ದೇಶತ್ವವೇ ತಾತ್ಪರ್ಯ. ಇದು ಇಚ್ಛಾಘಟಿತವಲ್ಲವಾದ ಕಾರಣ ಇಚ್ಛಾಶ್ರಯತಯಾ ಕರ್ತೃಪುರುಷನ ಅನುಮಾನ ಯುಕ್ತವಲ್ಲ.

ಅಥವಾ, ತದರ್ಥಬೋಧೇಚ್ಛಯಾ ಉಚ್ಚರಿತತ್ವರೂಪವಾದ ಇಚ್ಛಾಘಟಿತ ತಾತ್ಪರ್ಯವನ್ನೇ ಒಪ್ಪಿಕೊಂಡರೂ ವೇದಾಪೌರುಷೇಯತ್ವಕ್ಕೆ ಹಾನಿ ಏನೂ ಇಲ್ಲ. ಈಶ್ವರನು ಅರ್ಥಪ್ರತ್ಯಾಯನೇಚ್ಛಯಾ ವೇದವನ್ನು ಉಚ್ಚರಿಸಿದರೂ ಅವನು ಇದೇ ಮೊದಲಾಗಿ ವೇದವನ್ನು ಉಚ್ಚರಿಸುವುದಿಲ್ಲ. ಅನಾದಿಕಾಲದಿಂದಲೂ ಅರ್ಥಪ್ರತ್ಯಾಯನೇಚ್ಛಯಾ ವೇದವನ್ನು ಉಚ್ಚರಿಸುತ್ತಲೇ ಬಂದಿದ್ದಾನೆ. ಆದರೂ ಅವನ ಯಾವ ಉಚ್ಚಾರಣೆಯೂ ಪೂರ್ವೋಚ್ಚಾರಣಾಸಾಪೇಕ್ಷವಲ್ಲ. ಇದರಿಂದ ಸರ್ವದಾ ಏಕವಿಧಾನುಪೂರ್ವಿಕತ್ವರೂಪವಾದ ಅಪೌರುಷೇಯತ್ವಕ್ಕೆ ಹಾನಿಯಾಗುವುದಿಲ್ಲ. ಒಂದುವೇಳೆ ಪೂರ್ವದಲ್ಲಿದ್ದ ವೇದವನ್ನೇ ತದರ್ಥಪ್ರತ್ಯಾಯನೇಚ್ಛಯಾ ಈಶ್ವರನು ಉಚ್ಚರಿಸಿದ ಮಾತ್ರದಿಂದ ಈಶ್ವರಕೃತತ್ವವು ಬರುವುದಾದಲ್ಲಿ ಆಧುನಿಕ ಅಧ್ಯಾಪಕನೊಬ್ಬ

ಅರ್ಥಜ್ಞಾನವಿದ್ದು ಅದನ್ನು ಶಿಷ್ಯನಿಗೆ ತಿಳಿಸುವ ಉದ್ದೇಶದಿಂದ ವೇದವನ್ನು ಉಚ್ಚರಿಸಿದರೆ ವೇದವು ಆಧುನಿಕಕೃತವೆಂದೂ ಹೇಳಬೇಕಾದೀತು.

ಅಷ್ಟೇ ಅಲ್ಲ, ಈ ಹೇತುವು ಅಪ್ರಯೋಜಕವೂ ಆಗಿದೆ–ಶುಕೋಚ್ಚರಿತವಾದ ವಾಕ್ಯವು ಯದೃಚ್ಛಯಾ ಅರ್ಥಸಂವಾದಿಯಾದಾಗ ಪ್ರಮಾಣವಾಕ್ಯತ್ವರೂಪಹೇತು ಆ ವಾಕ್ಯದಲ್ಲಿ ಬರುತ್ತದೆ. ಆದರೆ, ಅದು ಅರ್ಥಜ್ಞಾನೇಚ್ಛಯಾ ಶುಕದಿಂದ ಉಚ್ಚರಿತವಲ್ಲ. ಹೀಗೆ ಇಲ್ಲಿ ಸಾಧ್ಯವಿಲ್ಲದೆಯೂ ಹೇತು ಇರುವುದರಿಂದ ಅದು ಸಾಧ್ಯಕ್ಕೆ ಪ್ರಯೋಜಕವಲ್ಲ.

## ನ್ಯಾಯದೀಪ

''शेषः परार्थत्वात्'' इति जैमिन्युक्तादिशा तत्प्रमित्येकोद्देश्यकत्वं तच्छेषत्वं, तदेव तत्तात्पर्यमित्यर्थः। **अन्यथेति**। तत्प्रत्यायनेच्छयोच्चरितत्वमात्रेण तत्कृतत्व इत्यर्थः। पराभिमतेच्छाघटिततात्पर्यरूपसाध्ये प्रमाणशब्दत्वहेतोरप्रयोजकत्वं चाह—**यादृच्छिकेति**।

''ಶೇಷಃ ಪರಾರ್ಥತ್ವಾತ್'' ಎಂದು ಜೈಮಿನಿಸೂತ್ರ. ಈ ಸೂತ್ರದಂತೆ ''ತತ್‌ಪ್ರಮಿತಿ ಮಾತ್ರ ಉದ್ದೇಶ್ಯಕತ್ವವೇ'' ತತ್‌ಪ್ರಮಿತಿಶೇಷತ್ವ. ಇದೇ ಶಾಬ್ದಬೋಧಕ್ಕೆ ಕಾರಣವಾದ ತಾತ್ಪರ್ಯ, ಎಂದು 'ತತ್‌ಪ್ರಮಿತಿ' ಇತ್ಯಾದಿ ಮೂಲದ ಅರ್ಥ.

**नच तत्रापीश्वरेच्छा कल्प्या। अबाधितार्थत्वेन तत्कल्पनस्य शाब्दबोधानन्तरभावित्वेन तत्राहेतुत्वात्। ईश्वराभावं निश्चितवतोऽपि मीमांसकस्य शुकादिवाक्येन शाब्दप्रमादर्शनाच्च। नानार्थादावपि मन्मते नेच्छारूपं तात्पर्यं नियामकम्। किन्तु तत्प्रमितिशेषत्वरूपम्। त्वन्मतेऽप्यावश्यकं प्रकरणादिकमेवार्थविशेषज्ञापकमस्तु। ज्ञापके च धूमालोकादाविवाननुगमो न दोषाय।**

**यद्वा, त्वन्मते काशीमरण-श्रवणादिजन्यतत्त्वज्ञानेष्विव प्रकरणादिजन्यशाब्दबोधेष्वपि वैजात्यं कल्प्यताम् ।।**

ಶುಕೋಚ್ಚರಿತವಾಕ್ಯದ ಅರ್ಥಜ್ಞಾನದಲ್ಲಿ ಶುಕಕ್ಕೆ ತಾತ್ಪರ್ಯವಿಲ್ಲದಿದ್ದರೂ ಈಶ್ವರನಿಗೆ ತಾತ್ಪರ್ಯವಿದೆ. ಕಾರ್ಯಸಾಮಾನ್ಯಕ್ಕೆ ಈಶ್ವರನ ಇಚ್ಛೆಯು ಕಾರಣವಾಗಿದೆ, ಎನ್ನುವುದು ಸರಿಯಲ್ಲ.

ಶಾಬ್ದಬೋಧಕ್ಕೆ ತಾತ್ಪರ್ಯಜ್ಞಾನವು ಕಾರಣ. ತತ್‌ಪ್ರತೀತೀಚ್ಛಯಾ ಈಶ್ವರೋಚ್ಚರಿತತ್ವಜ್ಞಾನ ಬರುವುದು ಶುಕೋಚ್ಚರಿತವಾದ ವಾಕ್ಯವನ್ನು ಕೇಳಿ, ಆದರಿಂದ ಶಾಬ್ದಬೋಧ ಬಂದು, ಪ್ರವೃತ್ತಿ ಮಾಡಿ, ಆ ವಾಕ್ಯದ ಅರ್ಥವು ಅಬಾಧಿತ ಎಂದು ತಿಳಿದಮೇಲೆ. ಹೀಗೆ ಶಾಬ್ದಬೋಧಾನಂತರದಲ್ಲಿ ಬರುವ ಉಕ್ತತಾತ್ಪರ್ಯಜ್ಞಾನವು ಶಾಬ್ದಬೋಧಕ್ಕೆ ಕಾರಣವಾಗುವುದು ಹೇಗೆ?

2. ಮೀಮಾಂಸಕರಿಗೆ ಈಶ್ವರನೇ ಇಲ್ಲ, ಎಂಬ ನಿಶ್ಚಯವಿದೆ. ಅಂತಹವರಿಗೂ ಉಕ್ತಶುಕ ವಾಕ್ಯದಿಂದ ಶಾಬ್ದಬೋಧವು ಬರುತ್ತದೆ. ಅಂದಮೇಲೆ ಈಶ್ವರೋಚ್ಚರಿತತ್ವರೂಪತಾತ್ಪರ್ಯಜ್ಞಾನವು ಶುಕವಾಕ್ಯದಿಂದ ಬರುವ ಬೋಧಕ್ಕೆ ಕಾರಣವಲ್ಲ.

3. ಮಣಿಕಾರ ನಾನಾರ್ಥಕವಾಕ್ಯದಲ್ಲಿ ಪ್ರಾಕರಣಿಕಾರ್ಥಬೋಧಬರಲು ತಾತ್ಪರ್ಯಜ್ಞಾನವು ಕಾರಣ ಎಂದು ಸಮರ್ಥಿಸಿದ್ದಾನೆ. ನಮ್ಮ ಮತದಂತೆ ಅಲ್ಲೂ ಇಚ್ಛಾಘಟಿತ–ತಾತ್ಪರ್ಯಜ್ಞಾನವು ಕಾರಣವಲ್ಲ. 'ತತ್‌ಪ್ರಮಿತಿಶೇಷತ್ವ' ರೂಪವಾದ ತಾತ್ಪರ್ಯವೇ ಅಲ್ಲಿ ವಿವಕ್ಷಿತ. ಪ್ರಮಿತಿ ಶೇಷತ್ವ ಎಂದರೆ ಪ್ರಮಿತ್ಯುದ್ದೇಶ್ಯತ್ವ. ಇಂತಹ ತಾತ್ಪರ್ಯಜ್ಞಾನವು ಶಾಬ್ದಬೋಧಕ್ಕೆ ಕಾರಣ. ಅನೇಕಾರ್ಥಸ್ಥಳದಲ್ಲಿ ಹಾಗೂ 'ಯಷ್ಟೀಃ ಪ್ರವೇಶಯ' ಎಂಬಲ್ಲಿ ಪ್ರಕರಣಾದಿಗಳಿಂದ ವಾಕ್ಯಜನ್ಯಪ್ರಮಿತಿ ವಿಶೇಷದ ಉದ್ದೇಶವು ತಿಳಿಯುತ್ತದೆ. ತದರ್ಥಪ್ರತೀತೀಚ್ಛಯಾ ಉಚ್ಚರಿತತ್ವವು ತಾತ್ಪರ್ಯ, ಎಂದು ಹೇಳುವ ನೈಯಾಯಿಕರೂ ಅನೇಕಾರ್ಥಕ ವಾಕ್ಯಕ್ಕೆ ಯಾವ ಪ್ರಮಿತಿಯ ಇಚ್ಛೆ ವಕ್ತೃವಿಗೆ ಇದೆ, ಎಂದು ನಿರ್ಧರಿಸಬೇಕಾದರೆ ಪ್ರಕರಣಾದಿಗಳ ಜ್ಞಾನವು ಬೇಕೇ ಬೇಕು.ಅಂದಮೇಲೆ, ವಕ್ತೃತಾತ್ಪರ್ಯ ಗ್ರಾಹಕವಾದ ಪ್ರಕರಣಾದಿಗಳೇ ಶಬ್ದಗಳ ವಿವಕ್ಷಿತವಾದ ಅರ್ಥವಿಶೇಷಕ್ಕೇ ನೇರವಾಗಿ ಜ್ಞಾಪಕವಾಗಬಹುದು. ಪ್ರಕರಣಾದಿಗಳು ಅನೇಕಗಳಾದರೂ ಜ್ಞಾಪಕಾನನುಗಮವು ದೋಷವಲ್ಲ, ವಹ್ನಿಗೆ ಧೂಮವೂ ಜ್ಞಾಪಕ, ಆಲೋಕವೂ ಜ್ಞಾಪಕವಾಗಿದೆ. ಹೀಗೆ, ಪ್ರಕರಣಾದಿಗಳೇ ಅರ್ಥವಿಶೇಷಕ್ಕೆ ಜ್ಞಾಪಕಗಳು ಎಂದು ಹೇಳಬಹುದು.[1]

ಅಥವಾ ಹೀಗೂ ಅನನುಗಮವನ್ನು ಪರಿಹರಿಸಬಹುದು—ಪ್ರಕರಣ ಜ್ಞಾನದಿಂದ ಜನ್ಯವಾದ ಶಾಬ್ದಬೋಧದಲ್ಲಿ ತೃಣಜನ್ಯವಾದ ವಹ್ನಿಯಲ್ಲಿರುವಂತೆ ಒಂದು ವಿಲಕ್ಷಣ ಜಾತಿ ಇದೆ,

1. 'ಯದ್ಯಪಿ ಪ್ರತಿಪಾದಕತ್ವಮೇವ ತಾತ್ಪರ್ಯಂ' 'ಅಪೌರುಷೇಯವೇದಾನುಗತಂ ತಾತ್ಪರ್ಯಂ ತತ್‌ಪ್ರಮಿತಿಶೇಷತ್ವರೂಪ–ತತ್‌ಪ್ರತಿಪಾದಕತ್ವಾತಿರಿಕ್ತಂ ನಾಸ್ತಿ'' ಇದು ತರ್ಕತಾಂಡವದ ಲಕ್ಷಣಾದಿ ಹೇತೂಕ್ತಿಪ್ರಕರಣದಲ್ಲಿರುವ ವಾಕ್ಯ. ಶಬ್ದದಲ್ಲಿರುವ ಅರ್ಥಪ್ರತಿಪಾದಕತ್ವವೇ ತಾತ್ಪರ್ಯ. ಅನೇಕಾರ್ಥಕ ವಾಕ್ಯದಲ್ಲಿ ಅರ್ಥವಿಶೇಷಪ್ರತಿಪಾದತ್ವವು ಪ್ರಕರಣಾದಿಗಳಿಂದಲೆ ತಿಳಿಯುತ್ತದೆ.

ತಾತ್ಪರ್ಯ ಶಬ್ದದ ವ್ಯುತ್ಪತ್ತಿಯನ್ನು ನ್ಯಾಯದೀಪದ ಲಕ್ಷಣಾಹೇತೂಕ್ತಿಪ್ರಕರಣದಲ್ಲಿ ಹೀಗೆ ತಿಳಿಸಲಾಗಿದೆ— ತತ್ ಪರಂ=ಪ್ರಧಾನಪ್ರತಿಪಾದ್ಯಂ ಯಸ್ಯ, ತಸ್ಯಭಾವಃ=ತಾತ್ಪರ್ಯಂ. 'ಯಷ್ಟೀಃ ಪ್ರವೇಶಯ' ಎಂಬಲ್ಲೂ ಪ್ರಕರಣಾದಿವಶಾತ್ ಭೋಜನಾರ್ಥಪ್ರವೇಶವೇ ಪ್ರವೇಶಪದದ ಅರ್ಥ. ತಾದೃಶಪ್ರವೇಶಾನ್ವಯ ಯಷ್ಟಿಪದದ ಮುಖ್ಯಾರ್ಥದಲ್ಲಿ ಅನುಪಪನ್ನವಾದುದರಿಂದ ಯಷ್ಟಿಪದಕ್ಕೆ ಯಷ್ಟಿಧರರಲ್ಲಿ ಲಕ್ಷಣಾ. ಹೀಗೆ, ಪ್ರಕರಣಾದಿಗಳು ಶಾಬ್ದಬೋಧಕ್ಕೆ ಸಾಕ್ಷಾತ್ತಾಗಿ ಕಾರಣವಾಗುತ್ತವೆ. ತಾತ್ಪರ್ಯವನ್ನು ತಿಳಿಸಿಕೊಡುವ ಮೂಲಕವಲ್ಲ.

ಲಿಂಗಜ್ಞಾನಜನ್ಯವಾದ ಶಾಬ್ದಬೋಧದಲ್ಲಿ ಮತ್ತೊಂದು ಜಾತಿ ಇದೆ. ಹೀಗೆ, ತಾದೃಶ ಜಾತಿವಿಶೇಷಾವಚ್ಛಿನ್ನ ಶಾಬ್ದಬೋಧಗಳಿಗೆ ಕ್ರಮವಾಗಿ ಪ್ರಕರಣಾದಿಗಳು ಅನುಗತ ಕಾರಣಗಳು. ಹೀಗೆಯೇ ತಾರ್ಕಿಕರೂ ಕೆಲವೆಡೆ ಅಂಗೀಕರಿಸಿದ್ದಾರೆ— ಮೋಕ್ಷಹೇತುತತ್ತ್ವಜ್ಞಾನವು ಕಾಶೀಮರಣದಿಂದಲೂ ಬರುತ್ತದೆ, ಶ್ರವಣಾದಿಗಳಿಂದಲೂ ಬರುತ್ತದೆ. ಆದರೆ, ಆ ಎರಡೂ ತತ್ತ್ವಜ್ಞಾನಗಳಲ್ಲಿ ಪರಸ್ಪರ ವಿಲಕ್ಷಣಜಾತಿಗಳಿವೆ. ಆದ್ದರಿಂದ ಅನನುಗಮ ಇಲ್ಲ. ಇದು ನೈಯಾಯಿಕ ಸಿದ್ಧಾಂತ.

## ನ್ಯಾಯದೀಪ

**अबाधितेति ।** 'शुकादिवाक्यं तदर्थप्रत्यायनेच्छयेश्वरेणोच्चरितं अबाधितार्थत्वात्'इत्यबाधितार्थत्वेन हेतुना तदिच्छयेश्वरोच्चरितत्व-कल्पनस्येत्यर्थः । तत्र=शाब्दबोधे । ईश्वरोच्चरितत्वरूपतात्पर्यज्ञानस्या-हेतुत्वादित्यर्थः ॥

ಶುಕವಾಕ್ಯದಲ್ಲಿ ಶಾಬ್ದಬೋಧಕ್ಕೆ ಕಾರಣವಾದ ಈಶ್ವರೇಚ್ಛೆಯನ್ನು ಹೀಗೆ ಅನುಮಾನ ಮಾಡಿ ತಿಳಿಯಬೇಕು–ಆ ವಾಕ್ಯವು ಅಬಾಧಿತಾರ್ಥಕವಾದ ಕಾರಣ ತದರ್ಥಪ್ರತ್ಯಾಯನೇಚ್ಛಯಾ ಈಶ್ವರನಿಂದ ಉಚ್ಚರಿತವಾಗಿದೆ, ಎಂದು. ಈ ಅನುಮಾನದ ಹೇತು ಸಿದ್ಧವಾಗುವುದು ಶಾಬ್ದಬೋಧ ಬಂದಮೇಲೆ. ಅಂತಹ ಹೇತುವಿನಿಂದ ಅನುಮಿತವಾದ ತಾತ್ಪರ್ಯವು ಆ ಶಾಬ್ದಬೋಧಕ್ಕೆ ಕಾರಣವಾಗಲು ಸಾಧ್ಯವಿಲ್ಲ.

## ನ್ಯಾಯದೀಪ

अप्रयोजकत्वं प्रकारान्तरेण व्यनक्ति—**ईश्वराभावमिति ।** यत्तु तात्पर्यज्ञानस्य शाब्दज्ञाननियामकत्वमुक्तं तत् तथैव । परन्तु न त्वदभिमततात्पर्यज्ञानं नियामकं किन्त्वन्यदेवेति भावेनाह— **नानार्थेति । तत्प्रमितीति ।** तात्पर्यं ज्ञातं सदिति शेषः । एतेन, यष्टीः प्रवेशयेत्यादौ लक्षणा न स्यादिति दोषोऽपि नेति भावः । **आवश्यकमिति ।** तत्प्रत्यायनेच्छयोच्चरितत्वस्यापि प्रकरणादिनैव ज्ञातव्यत्वेन तात्पर्यज्ञानहेतुतयाऽप्यावश्यकमित्यर्थः ॥

ಮಣಿಗ್ರಂಥದಲ್ಲಿ ಅನೇಕಾರ್ಥಕಸ್ಥಳದಲ್ಲಿ ಏಕಾರ್ಥಬೋಧ ಬರಲು ತಾತ್ಪರ್ಯಜ್ಞಾನವು ನಿಯಾಮಕ ಎಂದು ಸಾಧಿಸಲಾಗಿದೆ. ಅದು ನಮಗೂ ಸಮ್ಮತ. ಆದರೆ, ಆ ತಾತ್ಪರ್ಯ ನೈಯಾಯಿಕಾಭಿಮತವಾದುದು ಅಲ್ಲ, ಬೇರೆಯೇ ರೀತಿಯ ತಾತ್ಪರ್ಯಜ್ಞಾನ ಎಂದು 'ನಾನಾರ್ಥಾದೌ' ಎಂಬ ಮೂಲದಲ್ಲಿ ಹೇಳಲಾಗಿದೆ. ತತ್‌ಪ್ರಮಿತಿಶೇಷತ್ವರೂಪತಾತ್ಪರ್ಯದ ಜ್ಞಾನವೇ ಶಾಬ್ದಬೋಧ ಹೇತು. ಇಂತಹ ತಾತ್ಪರ್ಯಾನುಪಪತ್ತಿಗಾಗಿಯೇ 'ಯಷ್ಟೀಃ ಪ್ರವೇಶಯ' ಎಂಬ ವಾಕ್ಯದಲ್ಲಿ ಯಷ್ಟಿಪದಕ್ಕೆ ಯಷ್ಟಿಧರರಲ್ಲಿ ಲಕ್ಷಣಾ ಮಾಡಲಾಗುತ್ತದೆ.

## ನ್ಯಾಯದೀಪ

**नन्वेवं कचिल्लिङ्गं, कचित् प्रकरणं, कचित् समाख्येत्यननुगमः। अतोऽनुगतं प्रकरणादिजन्यं तात्पर्यज्ञानमेव हेतुरित्यत आह—ज्ञापके चेति ॥**

**ननूक्तस्थले वह्निव्याप्यज्ञानत्वेन धूमालोकादिज्ञानानामनुगमो वा धूमादिज्ञापकजन्यानुमितौ वैजात्येन वास्तु। अन्यथा व्यतिरेक-व्यभिचारेणानुमितिहेतुतैव न स्यादित्यत आह—यद्वेति। काशी-मरणेन श्रवणादिना च जन्येषु तत्वज्ञानेष्वित्यर्थः ॥**

ಪ್ರಕರಣಾದಿಗಳೇ ಅರ್ಥವಿಶೇಷಕ್ಕೆ ಜ್ಞಾಪಕ ಎನ್ನುವುದು ಸರಿಯಲ್ಲ. ಪ್ರಕರಣ, ಲಿಂಗ, ಸಮಾಖ್ಯಾ ಹೀಗೆ ತಾತ್ಪರ್ಯಜ್ಞಾಪಕಗಳು ಅನೇಕ ಇವೆ. ಅವುಗಳ ಜ್ಞಾನವು ಶಾಬ್ದಬೋಧಕ್ಕೆ ಕಾರಣವೆಂದರೆ ಅನನುಗಮದೋಷ. ಅವುಗಳಿಂದ ಜ್ಞಾಪ್ಯವಾದ ತಾತ್ಪರ್ಯಜ್ಞಾನ ಒಂದಕ್ಕೇ ಕಾರಣತ್ವವನ್ನು ಹೇಳಿದರೆ ಅನುಗತ ಕಾರಣಲಾಭವಾಗುತ್ತದೆ, ಈ ಆಕ್ಷೇಪಕ್ಕೆ—ಜ್ಞಾಪಕೇ ಎಂಬ ಮೂಲವಾಕ್ಯವು ಸಮಾಧಾನ ಹೇಳುತ್ತದೆ.

ಆಲೋಕ–ಧೂಮಗಳು ಅನನುಗತಗಳಾದರೂ ಅವುಗಳ ಜ್ಞಾನಗಳಲ್ಲಿ ವಹ್ನಿವ್ಯಾಪ್ಯ ವಿಷಯಕಜ್ಞಾನತ್ವ ಎಂಬ ಅನುಗತವಾದ ಒಂದು ಧರ್ಮವಿದೆ. ತಾದೃಶಜ್ಞಾನತ್ವಾವಚ್ಛಿನ್ನವು ಹೇತುವಾಗುವುದರಿಂದ ಕಾರಣಾನುಗಮ ಸಿದ್ಧವಾಗುತ್ತದೆ. ಅಥವಾ, ಧೂಮಜ್ಞಾನ ಜನ್ಯವಾದ ಅನುಮಿತಿಯಲ್ಲಿ ಒಂದು ಜಾತಿವಿಶೇಷವನ್ನು ಅಂಗೀಕರಿಸಬೇಕು. ಅದು ಆಲೋಕಜ್ಞಾನಜನ್ಯವಾದ ಅನುಮಿತಿಯಲ್ಲಿ ಇಲ್ಲ. ಹೀಗೆ ಹೇಳಿ ಅನನುಗಮನಿಮಿತ್ತಬರುವ ವ್ಯಭಿಚಾರವನ್ನು ಪರಿಹರಿಸಬೇಕು. ಈ ರೀತಿ ಅಂಗೀಕರಿಸದ ಹೊರತು, ವ್ಯತಿರೇಕವ್ಯಭಿಚಾರಪ್ರಯುಕ್ತ ಧೂಮಾದಿಜ್ಞಾನಗಳಿಗೆ ಅನುಮಿತಿಹೇತುತ್ವವೇ ಸಿದ್ಧವಾಗಲಿಕ್ಕಿಲ್ಲ. ಹೀಗೆ ಹಿಂದಿನ ಕಲ್ಪದ ಮೇಲೆ ಆಕ್ಷೇಪ ಬಂದರೆ ಅದಕ್ಕೆ

'ಯದ್ವಾ' ಎಂದು ಸ್ಥಳಾಂತರದಲ್ಲಿ ದೋಷವನ್ನು ಹೇಳಲಾಗಿದೆ. ಪ್ರಕೃತದಲ್ಲೂ ಶಾಬ್ದಬೋಧದಲ್ಲಿ ವೈಜಾತ್ಯವನ್ನು ಅಂಗೀಕರಿಸಬೇಕು, ಎಂದು ಪರಿಹಾರ.

## ಅವತಾರಿಕೆ

**उदयनाद्युक्तमन्यदपि निराह—एतेनेति ।**

ಉದಯನಾಚಾರ್ಯರು ಕುಸುಮಾಂಜಲಿಯಲ್ಲಿ ಹೇಳಿರುವ ಪೌರುಷೇಯತ್ವ ಸಾಧಕವಾದ ಅನುಮಾನವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**ವಿವರಣೆ—**यदुद्देशेन यः शब्दः प्रवृत्तः सः तत्परः । तथैव लोके व्युत्पत्तेः । तथाहि–प्रशंसावाक्यम् उपादानमुद्दिश्य लोके प्रयुज्यते । तत् उपादानपरम् । निन्दावाक्यं हानमुद्दिश्य प्रयुज्यते । तत् हानपरम् । एवमन्यत्रापि स्वयम् ऊहनीयम् । तस्मात् लोकानुसारेण वेदेप्येवं स्वीकरणीयम् । अन्यथा अर्थवादानां सर्वथैव आनर्थक्यप्रसङ्गात् । ...तथाच प्रयोगः—वैदिकानि प्रशंसावाक्यानि उपादानाभिप्राय-पूर्वकाणि प्रशंसावाक्यत्वात् । 'परिणतिसुरसमाम्रफलम्' इत्यादिलोकवाक्यवत् । (कुसुमांजलिः– पं.स्तव.)

## ಅನುಮಾನ-8

**एतेन, वैदिकानि निन्दावाक्यानि हानाभिप्रायपूर्वकाणि, निन्दा-वाक्यत्वात् लौकिकनिन्दावाक्यवत् । एवं स्तुतिवाक्यमपि पक्षीकृत्य प्रयोक्तव्यमिति निरस्तम् । अपौरुषेयत्वेऽपि मन्मते ईश्वराभि-प्रायपूर्वकत्वस्य, मीमांसकमतेऽप्यनादौ संसारेऽर्थाभिज्ञाध्यापकाभि-प्रायपूर्वकत्वस्य सत्त्वेन सिद्धसाधनात् । स्वतन्त्रेति विशेषणे च गौरवात् । शुकादिवाक्यवदभिप्रायपूर्वकत्वाभावेऽपि गुणदोषबोधकत्वेनैव निन्दादिवाक्यतोपपत्तेश्च ।।**

ವೇದದಲ್ಲಿ 'ರಜತವು ಅಗ್ನಿಯ ಅಶ್ರುಸಂಭೂತವಾದುದು' ಎನ್ನುವ ನಿಂದಾ ವಾಕ್ಯಗಳಿವೆ. ಇಂತಹ ವಾಕ್ಯಗಳಿಗೆ 'ರಜತವು ಹೇಯ' ಎಂಬ ಅಭಿಪ್ರಾಯವಿದೆ. ''ಪರಿಣತಿವಿರಸಂ ಪನಸಫಲಂ' ಎಂಬ ಲೌಕಿಕನಿಂದಾವಾಕ್ಯದಂತೆ. ಅದರಂತೆ ''ವಾಯುದೇವ ಶೀಘ್ರಫಲವನ್ನು ನೀಡುತ್ತಾನೆ' ಎಂಬ ಪ್ರಶಂಸಾವಾಕ್ಯವಿದೆ. ಈ ವಾಕ್ಯವನ್ನು ವಾಯುದೇವತಾಕಯಾಗದ ಪ್ರಶಂಸಾಭಿಪ್ರಾಯದಿಂದ

ಪ್ರಯೋಗಿಸಲಾಗಿದೆ. ''ಪರಿಣತಿಸುರಸಮ್ ಆಮ್ರಫಲಮ್' ಎಂಬ ವಾಕ್ಯದಂತೆ. ಈ ಅನುಮಾನಗಳಿಂದ ನಿಂದೆ–ಪ್ರಶಂಸೆಯ ಅಭಿಪ್ರಾಯ ಇರುವ ವ್ಯಕ್ತಿಯ ರಚನೆ ವೇದಗಳು, ಎಂದು ಸಿದ್ಧವಾಗುತ್ತದೆ.

ಹೀಗೆ ಉದಯನಾಚಾರ್ಯರು ವೇದಪೌರುಷೇಯತ್ವವನ್ನು ಸಾಧಿಸಿದ್ದಾರೆ. ಆದರೆ, ಇದರಿಂದೇನೂ ವೇದಕ್ಕೆ ಪುರುಷಕೃತತ್ವಸಿದ್ಧವಾಗುವುದಿಲ್ಲ. ವೇದವು ಅಪೌರುಷೇಯವಾದರೂ ಅದು ಈಶ್ವರಾಭಿಪ್ರಾಯಪೂರ್ವಕವಾಗಿದೆ. ಅನಾದಿಕಾಲದಿಂದ ಇರುವ ವೇದವಾಕ್ಯವನ್ನು ತನ್ನ ಅಭಿಪ್ರಾಯದೊಂದಿಗೆ ಈಶ್ವರನು ಉಪದೇಶಿಸುತ್ತಾನೆ, ಎಂದು ಈಶ್ವರನನ್ನು ಒಪ್ಪಿರುವ ನಾವು ಹೇಳುತ್ತೇವೆ. ನಿರೀಶ್ವರವಾದಿಗಳಾದ ಮೀಮಾಂಸಕರೂ ಅರ್ಥಾಭಿಜ್ಞರಾದ ಅಧ್ಯಾಪಕರ ಅಭಿಪ್ರಾಯಪೂರ್ವಕವಾಗಿವೆ ವೇದವಾಕ್ಯಗಳು, ಎನ್ನುತ್ತಾರೆ. ಆದಕ್ಕಾಗಿ ಕರ್ತೃವಿನ ಅಪೇಕ್ಷೆ ಇಲ್ಲ. ಈ ಸಿದ್ಧಸಾಧನತಾ ಪರಿಹಾರಕ್ಕಾಗಿ 'ಸ್ವತಂತ್ರವಕ್ತೃಪುರುಷಾಭಿಪ್ರಾಯಪೂರ್ವಕಾಃ' ಎಂದು ಸಾಧನೆ ಮಾಡಿದರೆ ಗೌರವ. ಅನುಮಾನವು ಅಪ್ರಯೋಜಕವೂ ಆಗುತ್ತದೆ. ಏಕೆಂದರೆ, ನಿಂದಾವಾಕ್ಯತ್ವಕ್ಕೆ ದೋಷಬೋಧಕತ್ವವು ಪ್ರಯೋಜಕ. ಸ್ತುತಿವಾಕ್ಯತ್ವಕ್ಕೆ ಗುಣಬೋಧಕತ್ವವು ಪ್ರಯೋಜಕ. ಹೀಗೆಂದು ಶುಕವಾಕ್ಯದಲ್ಲಿ ಸಿದ್ಧವಾಗಿದೆ. ಆ ವಾಕ್ಯದಲ್ಲಿ ನೈಯಾಯಿಕರು ಹೇಳುವ ನಿಂದಾಭಿಪ್ರಾಯ ಪೂರ್ವಕತ್ವಾದಿಗಳು ಶುಕಕ್ಕೆ ಇಲ್ಲ. ಆದ್ದರಿಂದ ಅದು ಪ್ರಯೋಜಕವಲ್ಲ. ಹೀಗೆ ಪರೋಕ್ತ ಹೇತು ಅಪ್ರಯೋಜಕ.

## ನ್ಯಾಯದೀಪ

''यदश्रु अशीयत तद् रजतं हिरण्यमभवत्। तस्माद् रजतं हिरण्यमदक्षिण्यमश्रुजं हि। यो बर्हिर्ददाति पुरास्य संवत्सराद् गृहे रुदन्तीति'' ''यदभिघारयेद् रुद्रायास्ये पशून्निदध्यात्'' इत्यादीनि निन्दावाक्यानीत्यर्थः। **स्तुतीति**। ''वायुर्वै क्षेपिष्ठा देवता वायुमेव स्वेन भागेनोपधावति'' इत्यादि वाक्यमुपादेयाभिप्रायपूर्वकं स्तुतिवाक्यत्वात् लौकिकस्तुतिवाक्यवदितिप्रयोक्तव्यमित्यर्थः।

तत्वनिर्णयटीकोक्तमेव समाधिमाह—**अपौरुषेयत्वेऽपीति**। अप्रयोजकत्वं हेतोराह–**शुकादीति**। तत्रापीश्वराभिप्रायकल्पनायां पूर्वोक्तदोषो ज्ञेय इति भावः।

'ದೇವಾಸುರಯುದ್ಧದ ಸಂದರ್ಭಲ್ಲಿ ದೇವತೆಗಳು ತಮ್ಮ ಸಂಪತ್ತನ್ನು ರಕ್ಷಣೆಗಾಗಿ ಅಗ್ನಿಯ ಬಳಿ ಕೊಟ್ಟರು. ಅಗ್ನಿ ಅದನ್ನು ಅಪಹರಿಸಿ ಬಿಟ್ಟ. ದೇವತೆಗಳು ಕೇಳಿದಾಗ ಅಳಲು ಆರಂಭಿಸಿದ. ಅತ್ತ ಅವನ ಕಣ್ಣೀರಿನಿಂದ ರಜತ ಮತ್ತು ಸ್ವರ್ಣ ಹುಟ್ಟಿದವು. ಅಶ್ರುಸಂಭೂತವಾದುದರಿಂದ ಇವೆರಡನ್ನೂ ದಕ್ಷಿಣೆಯನ್ನಾಗಿ ಕೊಡಬಾರದು. ಯಾಗದಲ್ಲಿ ಯಾರು ಇವನ್ನು ದಕ್ಷಿಣೆಯನ್ನಾಗಿ ನೀಡುವರೋ ಅವರ ಮನೆಯಲ್ಲಿ ಸಂವತ್ಸರದ ಒಳಗಾಗಿಯೇ ರೋದನವಿರುತ್ತದೆ.'

'ಆಜ್ಯಕ್ಕೆ ಅಭಿಘಾರಮಾಡಿದರೆ ರುದ್ರನ ಬಾಯಿಯಲ್ಲಿ ಪಶುಗಳನ್ನು ಹಾಕಿದಂತೆ'. ಇದು ನಿಂದಾ ವಾಕ್ಯಗಳ ಅರ್ಥ. ಚಾತುರ್ಮಾಸ್ಯಪ್ರಕರಣದ ತ್ರ್ಯಂಬಕೇಷ್ಟಿಯಲ್ಲಿ ಈ ನಿಂದಾರ್ಥವಾದನ್ನು ಕಡೆಗಣಿಸಿ ಪುರೋಡಾಶಕ್ಕೆ ಪ್ರೋಕ್ಷಣೆ ಮಾಡಬೇಕು, ಎಂದು ಅಭಿಪ್ರಾಯ. 'ವಾಯುವು ಬೇಗನೇ ಫಲನೀಡುವ ದೇವತೆ. ಹೀಗಾಗಿ ವಾಯುದೇವತಾಕಯಾಗಪ್ರಶಸ್ತ' ಹೀಗೆ ಇದು ಸ್ತುತಿಪರವಾಕ್ಯ.

ಉದಯನಾಚಾರ್ಯರ ಈ ಅನುಮಾನಗಳಿಗೆ ತತ್ತ್ವನಿರ್ಣಯದಲ್ಲಿ ಹೇಳಿರುವ ಪರಿಹಾರವನ್ನೇ ತರ್ಕತಾಂಡವ ಮೂಲದಲ್ಲಿ ಹೇಳಲಾಗಿದೆ.[1]

**एतदप्युक्तं ''गौरवदोषेण'' इति । तस्मात् पौरुषेयत्वे नानुमानं मानम् ।।**

ಈ ಅನುಮಾನಗಳಿಗೆ ದೋಷವನ್ನೂ ''ಕಲ್ಪ್ಯ ಗೌರವದೋಷೇಣ'' ಎಂಬ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿದ್ದಾರೆ.

ಹೀಗೆ, ವೇದಪೌರುಷೇಯತ್ವಕ್ಕೆ ಅನುಮಾನಗಳು ಪ್ರಮಾಣಗಳಾಗುವುದಿಲ್ಲ.

## ಪೌರುಷೇಯತ್ವದಲ್ಲಿ ಶ್ರುತಿಪ್ರಮಾಣ ನಿರಾಸ

**नापि ''छन्दांसि जज्ञिरे'' इत्यादिश्रुत्यादिकम् तस्य—**

**''तदुत्पत्तिवचश्चैव भवेद् व्यक्तिमपेक्ष्य तु ।''**

**''अवान्तराभिमानानां देवानां वा व्यपेक्षया ।।**

**नानित्यत्वात् कुतस्तेषामनित्यत्वं स्थिरात्मनाम्''।**

---

1. ತತ್ತ್ವನಿರ್ಣಯದಲ್ಲಿ 'ನಿತ್ಯಾವೇದಾ ಸಮಸ್ತಾಶ್ಚ' ಎಂಬ ಮೂಲಪ್ರಮಾಣವಾಕ್ಯದ 'ಸಮಸ್ತಾಶ್ಚ' ಎಂಬ ಪದಕ್ಕೆ ಸಾರ್ಥಕ್ಯವನ್ನು ತಿಳಿಸುವ ಟೀಕಾದಲ್ಲಿ ಇದೇ ಆಕ್ಷೇಪವನ್ನು ಮಾಡಿ ಹೀಗೆ ಉತ್ತರಿಸಲಾಗಿದೆ— न हि वयं वेदे पुरुषाभिप्रायप्रवेश एव नास्तीति वदामः । तथात्वे संकल्प–प्रार्थनादिवाक्यानाम् अनर्थकत्वप्रसङ्गात्, इति भावः ।

**इत्यादिस्मृत्यैवाभिव्यक्तिपरत्वेन, सम्प्रदायप्रवर्तकपरत्वेन च व्याख्यातत्वात् । तेनेश्वराधीनोत्पत्तिकत्वस्यैवोक्त्या मानान्तरेणार्थमुपलभ्य रचितत्वरूपस्य प्रणीतत्वस्यासिद्धेश्च । नह्युक्तरीत्या क्रमविशेषघटितो वेद इदानीमप्यस्मदाद्यधीनोत्पत्तिक इति वयमपि वेदप्रणेतारः ॥**

'ಛಂದಾಂಸಿ ಜಜ್ಞಿರೇ' ಎಂಬ ಶ್ರುತಿಯಾಗಲೀ 'ಪ್ರತಿಮನ್ವಂತರಂ ಚೈಷಾ ಶ್ರುತಿರನ್ಯಾ ವಿಧೀಯತೇ' ಎಂಬ ಸ್ಮೃತಿಯಾಗಲೀ ವೇದಪೌರುಷೇಯತ್ವಕ್ಕೆ ಪ್ರಮಾಣವಲ್ಲ. ಈ ಉತ್ಪತ್ತಿವಾಕ್ಯಗಳಿಗೆ ಅರ್ಥಾಂತರಪರತ್ವವನ್ನು ಪುರಾಣಗಳಲ್ಲೇ ಹೇಳಲಾಗಿದೆ— ''ವೇದಗಳ ಉತ್ಪತ್ತಿವಚನಗಳು ಅವುಗಳ ಆದಿಕಾಲೀನ ಅಭಿವ್ಯಕ್ತಿಯನ್ನು ಹೇಳುತ್ತವೆ.''

ಬ್ರಹ್ಮಾಂಡಪುರಾಣದಲ್ಲಿ ಇನ್ನೊಂದು ವಿಧದಿಂದ ಸಾವಕಾಶತ್ವವನ್ನು ಹೇಳಲಾಗಿದೆ— ''ವೇದಗಳ ಉತ್ಪತ್ತಿ ವಚನಗಳು ಅವುಗಳ ಅವಾಂತರಾಭಿಮಾನಿಗಳಾದ ಬ್ರಹ್ಮಾದಿದೇವತೆಗಳ ದೇಹಜನ್ಮಾಪೇಕ್ಷಯಾ ಸಾವಕಾಶಗಳು. ಹೊರತು, ವೇದಗಳ ಅನಿತ್ಯತ್ವಪ್ರಯುಕ್ತವಾಗಿ ಅಲ್ಲ. ನಿಯತಾನುಪೂರ್ವೀಕಗಳಾದ ಅವುಗಳಿಗೆ ಅನಿತ್ವ ಹೇಗೆ ಬರಬೇಕು?''

'ಅಗ್ನೇಃ ಋಗ್ವೇದೋಽಜಾಯತ, ವಾಯೋರ್ಯಜುರ್ವೇದಃ' ಇತ್ಯಾದಿ ಉತ್ಪತ್ತಿ ವಾಕ್ಯಗಳನ್ನು ಸಂಪ್ರದಾಯಪ್ರವರ್ತಕತ್ವೇನ ಕೂಡಿಸಬೇಕು. ಬಹುಕಾಲದಿಂದ ಅಧ್ಯಯನವಿಲ್ಲದ ವೇದಭಾಗಗಳನ್ನು ಶಿಷ್ಯ–ಪ್ರಶಿಷ್ಯಪರಂಪರೆಯಲ್ಲಿ ಪ್ರಸಿದ್ಧಿಗೊಳಿಸುವುದೇ ಸಂಪ್ರದಾಯ. ಅದನ್ನು ಅಗ್ನ್ಯಾದಿಗಳು ಮಾಡಿದ್ದಾರೆ, ಎಂದರ್ಥ.

2. ಅಷ್ಟೇ ಅಲ್ಲ, 'ಛಂದಾಸಿ ಜಜ್ಞಿರೇ' ಎಂಬ ಶ್ರುತಿಯಿಂದ ವೇದಗಳು ಈಶ್ವರನಿಂದ ಹುಟ್ಟಿವೆ ಎಂದಷ್ಟೇ ಸಿದ್ಧವಾಗುತ್ತದೆ. ಹೊರತು, ಪ್ರತ್ಯಕ್ಷಾದಿ ಇತರ ಪ್ರಮಾಣಗಳಿಂದ ವಿಷಯವನ್ನು ತಿಳಿದು ವೇದವನ್ನು ಈಶ್ವರನು ರಚಿಸಿದ್ದಾನೆ, ಎಂಬ ಈಶ್ವರ ಪ್ರಣೀತತ್ವವು ಸಿದ್ಧವಾಗವುದಿಲ್ಲ. ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದಗಳು. ಕ್ರಮವು ಬೌದ್ಧ. ಈಶ್ವರೋಚ್ಚರಿತವಾದ ವರ್ಣಗಳ ಕ್ರಮ ಈಶಬುದ್ಧಿಕೃತ. ಆದರಿಂದಾಗಿ ಆ ವೇದ ಈಶ್ವರನಿಂದ ಹುಟ್ಟಿದೆ. ಅಷ್ಟುಮಾತ್ರದಿಂದ ವೇದವು ಈಶ್ವರ ಪ್ರಣೀತವಾಗುವುದಿಲ್ಲ. ಹಾಗಿದ್ದಲ್ಲಿ ನಾವು ಉಚ್ಚರಿಸಿದ ವೇದವು(ಕ್ರಮವು) ನಮ್ಮಿಂದ ಹುಟ್ಟಿರುವುದರಿಂದ ನಾವೂ ವೇದಪ್ರಣೇತೃಗಳಾಗಬೇಕಾದೀತು.

## ನ್ಯಾಯದೀಪ

**श्रुत्यादिकमित्यादिपदेन ''प्रतिमन्वन्तरम्'' इति प्रागुक्तस्मृतिग्रहः । तस्येति ।** श्रुत्यादेरित्यर्थः । स्मृत्यैव व्याख्यातत्वादित्यन्वयः ।

'ದೇವಾಸುರಯುದ್ಧದ ಸಂದರ್ಭದಲ್ಲಿ ದೇವತೆಗಳು ತಮ್ಮ ಸಂಪತ್ತನ್ನು ರಕ್ಷಣೆಗಾಗಿ ಅಗ್ನಿಯ ಬಳಿ ಕೊಟ್ಟರು. ಅಗ್ನಿ ಅದನ್ನು ಅಪಹರಿಸಿ ಬಿಟ್ಟ. ದೇವತೆಗಳು ಕೇಳಿದಾಗ ಅಳಲು ಆರಂಭಿಸಿದ. ಅತ್ತ ಅವನ ಕಣ್ಣೀರಿನಿಂದ ರಜತ ಮತ್ತು ಸ್ವರ್ಣ ಹುಟ್ಟಿದವು. ಅಶ್ರುಸಂಭೂತವಾದುದರಿಂದ ಇವೆರಡನ್ನೂ ದಕ್ಷಿಣೆಯನ್ನಾಗಿ ಕೊಡಬಾರದು. ಯಾಗದಲ್ಲಿ ಯಾರು ಇವನ್ನು ದಕ್ಷಿಣೆಯನ್ನಾಗಿ ನೀಡುವರೋ ಅವರ ಮನೆಯಲ್ಲಿ ಸಂವತ್ಸರದ ಒಳಗಾಗಿಯೇ ರೋದನವಿರುತ್ತದೆ.'

'ಆಜ್ಯಕ್ಕೆ ಅಭಿಘಾರಮಾಡಿದರೆ ರುದ್ರನ ಬಾಯಿಯಲ್ಲಿ ಪಶುಗಳನ್ನು ಹಾಕಿದಂತೆ'. ಇದು ನಿಂದಾ ವಾಕ್ಯಗಳ ಅರ್ಥ. ಚಾತುರ್ಮಾಸ್ಯಪ್ರಕರಣದ ತ್ರ್ಯಂಬಕೇಷ್ಟಿಯಲ್ಲಿ ಈ ನಿಂದಾರ್ಥವಾದನ್ನು ಕಡೆಗಣಿಸಿ ಪುರೋಡಾಶಕ್ಕೆ ಪ್ರೋಕ್ಷಣೆ ಮಾಡಬೇಕು, ಎಂದು ಅಭಿಪ್ರಾಯ. 'ವಾಯುವು ಬೇಗನೇ ಫಲನೀಡುವ ದೇವತೆ. ಹೀಗಾಗಿ ವಾಯುದೇವತಾಕಯಾಗಪ್ರಶಸ್ತ' ಹೀಗೆ ಇದು ಸ್ತುತಿಪರವಾಕ್ಯ.

ಉದಯನಾಚಾರ್ಯರ ಈ ಅನುಮಾನಗಳಿಗೆ ತತ್ತ್ವನಿರ್ಣಯದಲ್ಲಿ ಹೇಳಿರುವ ಪರಿಹಾರವನ್ನೇ ತರ್ಕತಾಂಡವ ಮೂಲದಲ್ಲಿ ಹೇಳಲಾಗಿದೆ.[1]

**एतदप्युक्तं ''गौरवदोषेण'' इति । तस्मात् पौरुषेयत्वे नानुमानं मानम् ।।**

ಈ ಅನುಮಾನಗಳಿಗೆ ದೋಷವನ್ನೂ ''ಕಲ್ಪ್ಯಂ ಗೌರವದೋಷೇಣ'' ಎಂಬ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿದ್ದಾರೆ.

ಹೀಗೆ, ವೇದಪೌರುಷೇಯತ್ವಕ್ಕೆ ಅನುಮಾನಗಳು ಪ್ರಮಾಣಗಳಾಗುವುದಿಲ್ಲ.

## ಪೌರುಷೇಯತ್ವದಲ್ಲಿ ಶ್ರುತಿಪ್ರಮಾಣ ನಿರಾಸ

**नापि ''छन्दांसि जज्ञिरे'' इत्यादिश्रुत्यादिकम् तस्य—**

**''तदुत्पत्तिवचश्चैव भवेद् व्यक्तिमपेक्ष्य तु ।''**

**''अवान्तराभिमानानां देवानां वा व्यपेक्षया ।।**

**नानित्यत्वात् कुतस्तेषामनित्यत्वं स्थिरात्मनाम्''।**

1. ತತ್ತ್ವನಿರ್ಣಯದಲ್ಲಿ 'ನಿತ್ಯಾವೇದಾ ಸಮಸ್ತಾಶ್ಚ' ಎಂಬ ಮೂಲಪ್ರಮಾಣವಾಕ್ಯದ 'ಸಮಸ್ತಾಶ್ಚ' ಎಂಬ ಪದಕ್ಕೆ ಸಾರ್ಥಕ್ಯವನ್ನು ತಿಳಿಸುವ ಟೀಕಾದಲ್ಲಿ ಇದೇ ಆಕ್ಷೇಪವನ್ನು ಮಾಡಿ ಹೀಗೆ ಉತ್ತರಿಸಲಾಗಿದೆ— न हि वयं वेदे पुरुषाभिप्रायप्रवेश एव नास्तीति वदामः । तथात्वे संकल्प–प्रार्थनादिवाक्यानाम् अनर्थकत्वप्रसङ्गात्, इति भावः ।

**इत्यादिस्मृत्यैवाभिव्यक्तिपरत्वेन, सम्प्रदायप्रवर्तकपरत्वेन च व्याख्यातत्वात् । तेनेश्वराधीनोत्पत्तिकत्वस्यैवोक्त्या मानान्तरेणार्थमुपलभ्य रचितत्वरूपस्य प्रणीतत्वस्यासिद्धेश्च । नह्युक्तरीत्या क्रमविशेषघटितो वेद इदानीमप्यस्मदाद्यधीनोत्पत्तिक इति वयमपि वेदप्रणेतारः ।।**

'ಛಂದಾಂಸಿ ಜಜ್ಞಿರೇ' ಎಂಬ ಶ್ರುತಿಯಾಗಲೀ 'ಪ್ರತಿಮನ್ವಂತರಂ ಚೈಷಾ ಶ್ರುತಿರನ್ಯಾ ವಿಧೀಯತೇ' ಎಂಬ ಸ್ಮೃತಿಯಾಗಲೀ ವೇದಪೌರುಷೇಯತ್ವಕ್ಕೆ ಪ್ರಮಾಣವಲ್ಲ. ಈ ಉತ್ಪತ್ತಿವಾಕ್ಯಗಳಿಗೆ ಅರ್ಥಾಂತರಪರತ್ವವನ್ನು ಪುರಾಣಗಳಲ್ಲೇ ಹೇಳಲಾಗಿದೆ— ''ವೇದಗಳ ಉತ್ಪತ್ತಿವಚನಗಳು ಅವುಗಳ ಆದಿಕಾಲೀನ ಅಭಿವ್ಯಕ್ತಿಯನ್ನು ಹೇಳುತ್ತವೆ.''

ಬ್ರಹ್ಮಾಂಡಪುರಾಣದಲ್ಲಿ ಇನ್ನೊಂದು ವಿಧದಿಂದ ಸಾವಕಾಶತ್ವವನ್ನು ಹೇಳಲಾಗಿದೆ— ''ವೇದಗಳ ಉತ್ಪತ್ತಿ ವಚನಗಳು ಅವುಗಳ ಅವಾಂತರಾಭಿಮಾನಿಗಳಾದ ಬ್ರಹ್ಮಾದಿದೇವತೆಗಳ ದೇಹಜನ್ಮಾಪೇಕ್ಷಯಾ ಸಾವಕಾಶಗಳು. ಹೊರತು, ವೇದಗಳ ಅನಿತ್ಯತ್ವಪ್ರಯುಕ್ತವಾಗಿ ಅಲ್ಲ. ನಿಯತಾನುಪೂರ್ವೀಕಗಳಾದ ಅವುಗಳಿಗೆ ಅನಿತ್ಯ ಹೇಗೆ ಬರಬೇಕು?''

'ಅಗ್ನೇಃ ಋಗ್ವೇದೋಽಜಾಯತ, ವಾಯೋರ್ಯಜುರ್ವೇದಃ' ಇತ್ಯಾದಿ ಉತ್ಪತ್ತಿ ವಾಕ್ಯಗಳನ್ನು ಸಂಪ್ರದಾಯಪ್ರವರ್ತಕತ್ವೇನ ಕೂಡಿಸಬೇಕು. ಬಹುಕಾಲದಿಂದ ಅಧ್ಯಯನವಿಲ್ಲದ ವೇದಭಾಗಗಳನ್ನು ಶಿಷ್ಯ-ಪ್ರಶಿಷ್ಯಪರಂಪರೆಯಲ್ಲಿ ಪ್ರಸಿದ್ಧಿಗೊಳಿಸುವುದೇ ಸಂಪ್ರದಾಯ. ಅದನ್ನು ಅಗ್ನ್ಯಾದಿಗಳು ಮಾಡಿದ್ದಾರೆ, ಎಂದರ್ಥ.

2. ಅಷ್ಟೇ ಅಲ್ಲ. 'ಛಂದಾಸಿ ಜಜ್ಞಿರೇ' ಎಂಬ ಶ್ರುತಿಯಿಂದ ವೇದಗಳು ಈಶ್ವರನಿಂದ ಹುಟ್ಟಿವೆ ಎಂದಷ್ಟೇ ಸಿದ್ಧವಾಗುತ್ತದೆ. ಹೊರತು, ಪ್ರತ್ಯಕ್ಷಾದಿ ಇತರ ಪ್ರಮಾಣಗಳಿಂದ ವಿಷಯವನ್ನು ತಿಳಿದು ವೇದವನ್ನು ಈಶ್ವರನು ರಚಿಸಿದ್ದಾನೆ, ಎಂಬ ಈಶ್ವರ ಪ್ರಣೀತತ್ವವು ಸಿದ್ಧವಾಗವುದಿಲ್ಲ. ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದಗಳು. ಕ್ರಮವು ಬೌದ್ಧ. ಈಶ್ವರೋಚ್ಚರಿತವಾದ ವರ್ಣಗಳ ಕ್ರಮ ಈಶಬುದ್ಧಿಕೃತ. ಆದರಿಂದಾಗಿ ಆ ವೇದ ಈಶ್ವರನಿಂದ ಹುಟ್ಟಿದೆ. ಅಷ್ಟುಮಾತ್ರದಿಂದ ವೇದವು ಈಶ್ವರ ಪ್ರಣೀತವಾಗುವುದಿಲ್ಲ. ಹಾಗಿದ್ದಲ್ಲಿ ನಾವು ಉಚ್ಚರಿಸಿದ ವೇದವು(ಕ್ರಮವು) ನಮ್ಮಿಂದ ಹುಟ್ಟಿರುವುದರಿಂದ ನಾವೂ ವೇದಪ್ರಣೇತೃಗಳಾಗಬೇಕಾದೀತು.

## ನ್ಯಾಯದೀಪ

श्रुत्यादिकमित्यादिपदेन ''प्रतिमन्वन्तरम्'' इति प्रागुक्तस्मृतिग्रहः । **तस्येति ।** श्रुत्यादेरित्यर्थः । स्मृत्यैव व्याख्यातत्वादित्यन्वयः ।

**तदुत्पत्तीति ।** श्रुत्युत्पत्तिवचश्चेत्यर्थः । तुर्विशेषार्थः । आदिकालीनां व्यक्तिं त्विति । तेन प्रत्यहमुपाध्यायैर्व्यज्यमानत्वादुत्पत्तिव्यवहारप्रसङ्ग इति निरस्तम् । अत एवावान्तराभिमानानामित्यस्मात् पूर्वार्ध एव—

''वेदानां सृष्टिवाक्यानि भवेयुर्व्यक्त्यपेक्षया'' ।

इति गत्युक्तिसद्भावेऽपि तदनुदाहृत्य स्थलान्तरस्थमेव तदुत्पत्तीत्यर्धमुदाहृतम् । **देवानां वेति ।** देहजन्मापेक्षयेत्यर्थः । मुख्याभिमानिश्रियस्तन्नेत्यतोऽवान्तराभिमानानामिति । अमुख्याभिमानवतामित्यर्थः । **तेषामिति ।** वेदानामित्यर्थः । **स्मृत्यैवेति ।** तत्वनिर्णयोक्तब्रह्माण्ड-पुराणवचनेनैवेत्यर्थः ।।

ಮೂಲದಲ್ಲಿ ಆದಿಪದದಿಂದ ''ಪ್ರತಿಮನ್ವಂತರಂ'' ಎಂಬ, ವೇದಕ್ಕೆ ಉತ್ಪತ್ತಿಯನ್ನು ಹೇಳುವ ಸ್ಮೃತಿಯು ವಿವಕ್ಷಿತವಾಗಿದೆ. ''ಭವೇತ್‌ವ್ಯಕ್ತಿಮಪೇಕ್ಷ್ಯತು'' ಎಂಬಲ್ಲಿರುವ ತು ಶಬ್ದವು ''ವ್ಯಕ್ತಿವಿಶೇಷವೇ ಉತ್ಪತ್ತಿಪದದ ಅರ್ಥ, ವ್ಯಕ್ತಿಸಾಮಾನ್ಯವಲ್ಲ'' ಎಂದು ತಿಳಿಸುತ್ತದೆ. ವ್ಯಕ್ತಿವಿಶೇಷವೆಂದರೆ ಸೃಷ್ಟಿಯ ಪ್ರಾರಂಭದಲ್ಲಿ ಭಗವಂತನಿಂದಾದ ವ್ಯಕ್ತಿ. ಅದೇ ಉತ್ಪತ್ತಿ ವ್ಯವಹಾರಕ್ಕೆ ಹೇತು. ಇದರಿಂದ ಪ್ರತಿದಿನವೂ ಅಧ್ಯಾಪಕರ ಉಚ್ಚಾರಣೆಯಿಂದ ವರ್ಣರಾಶಿಯ ಅಭಿವ್ಯಕ್ತಿಯಾಗುತ್ತಿರುವುದರಿಂದ ಉತ್ಪತ್ತಿವ್ಯವಹಾರ ಬರುವುದಿಲ್ಲ. ಹೀಗೆ, ಈ ಸ್ಮೃತಿಯಲ್ಲಿ 'ತು' ಎಂಬ ವಿಶೇಷಾರ್ಥಕಪದವು ಇರುವುದರಿಂದಲೇ 'ಅವಾಂತರಾಭಿಮಾನಾನಾಂ' ಇತ್ಯಾದಿ ಮೂಲೋದಾಹೃತವಾದ ಬ್ರಹ್ಮಾಂಡಪುರಾಣದ ಆರಂಭದಲ್ಲಿರುವ,

ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುರ್ವ್ಯಕ್ತ್ಯಪೇಕ್ಷಯಾ ।

ಎಂಬ ವಾಕ್ಯವನ್ನು ಬಿಟ್ಟು ಪುರಾಣಾಂತರದಲ್ಲಿರುವ ಈ ವಾಕ್ಯವನ್ನು ಮೂಲದಲ್ಲಿ ಉದಾಹರಿಸಲಾಗಿದೆ. ಬ್ರಹ್ಮಾಂಡಪುರಾಣದ ವಾಕ್ಯದಲ್ಲಿ 'ತು' ಶಬ್ದವಿಲ್ಲ.

ಲಕ್ಷ್ಮೀದೇವಿಯೂ ಶ್ರುತಿತತಿಗಭಿಮಾನಿನಿ. ಅವಳಿಗೆ ದೇಹೋತ್ಪತ್ತಿ ಇಲ್ಲ. ಅದಕ್ಕಾಗಿ ಬ್ರಹ್ಮಾಂಡಪುರಾಣದ ವಾಕ್ಯದಲ್ಲಿ 'ಅವಾಂತರಾಭಿಮಾನಾನಾಂ' ಎಂದು ಹೇಳಲಾಗಿದೆ.

## ನ್ಯಾಯದೀಪ

''अग्नेरृग्वेदो वायोर्यजुर्वेदः'' इत्यादिवाक्यगत्युक्तिपरतयाऽपि

तदुत्पत्तिवचश्चेत्यर्धस्यार्थमुपेत्याह—**सम्प्रदायेति** । चिरकालविरतस्य वेदस्य शिष्यप्रशिष्येषु प्रख्यापनं हि सम्प्रदायः । तत्कारित्वेन चेत्यर्थः । श्रुत्यादेरन्यथासिद्धिं चाह—**तेनेति** । श्रुत्यादिनेत्यर्थः । अस्तु तावतैव प्रणीतत्वमित्यत आह—**नह्युक्तरीत्येति** । क्रमविशेषविशिष्टानां वर्णानामित्यादिनोक्तरीत्येत्यर्थः ॥

ಮೊದಲು "ಛಂದಾಂಸಿ ಜಜ್ಞಿರೇ" ಎಂಬ ಉತ್ಪತ್ತಿವಾಕ್ಯಕ್ಕೆ ಪುರಾಣೋಕ್ತ ಅರ್ಥಾಂತರವನ್ನು ಹೇಳಿ "ಸಂಪ್ರದಾಯಪ್ರವರ್ತಕತ್ವೇನ" ಎಂಬ ಮೂಲದಲ್ಲಿ 'ಅಗ್ನೇಃ ಋಗ್ವೇದಃ' ಇತ್ಯಾದಿ ಉತ್ಪತ್ತಿ ವಾಕ್ಯಗಳಿಗೆ ಅರ್ಥಾಂತರವನ್ನು ಹೇಳುವಂತೆ ಪುರಾಣವಾಕ್ಯಗಳಿಗೆ ಅರ್ಥವನ್ನು ಮಾಡಲಾಗಿದೆ.

छन्दांसीत्यादिश्रुत्यादेः क्रमोत्पत्तिपरत्वेनान्यथासिद्धिरयुक्तेति भावेन शङ्कते—**नन्विति** ।

'ಛಂದಾಂಸಿ ಜಜ್ಞಿರೇ' ಎಂಬ ಉತ್ಪತ್ತಿಶ್ರುತಿಯು ವೇದದ ಕ್ರಮೋತ್ಪತ್ತಿಯನ್ನಷ್ಟೇ ಹೇಳುತ್ತದೆ. ವೇದಕ್ಕೆ ಸಕರ್ತೃಕತ್ವವನ್ನು ಹೇಳುವುದಿಲ್ಲ. ಆದ್ದರಿಂದ ಅದು ವೇದಪೌರುಷೇಯತ್ವಮ್ ಅನ್ಯಥಾಪಿ ಉಪಪನ್ನವಾಗುತ್ತದೆ ಎನ್ನಲಾಗಿದೆ. ಆದರೆ ಇದು ಸರಿಯಲ್ಲ, ಎಂದು ಮುಂದಿನ ಮೂಲದ ಶಂಕೆ.

**ननु यथा वेदानादित्वश्रुतिर्न वेदस्वरूपानादित्वपरा । बाधात् । किंत्वानुपूर्व्यनन्यथात्वपरा । तन्मात्रेणैव शब्देऽनुत्पत्तिव्यवहारात् । तथा तदुत्पत्तिश्रुतिरपि तदन्यथात्वपरेति चेन्मैवम् । "तत्क्रमेणैव" इत्यादिस्मृत्याऽनुत्पत्तिश्रुतेः क्रमानन्यथात्वपरत्वे स्थिते उत्पत्तिश्रुतेस्तदविरोधाय क्रमोत्पत्तिपरत्वस्यैवोचितत्वात् । अन्यथा "ऋग्वेद एवाग्नेरजायत, यजुर्वेदो वायोः, सामवेद आदित्यात्" इति श्रुत्याऽसर्वज्ञस्याग्न्यादेरपि वेदप्रणेतृत्वं स्यात् । नचैकस्मिन् वाक्येऽनेकेषां स्वतन्त्रप्रणेतृत्वं युक्तम् । युक्तं तु सम्प्रदायप्रवर्तकत्वम् ॥**

ಅಪೌರುಷೇಯತ್ವವಾದಿಗಳು, ವೇದಾನಾದಿತ್ವ ಶ್ರುತಿಯು ವೇದಸ್ವರೂಪಕ್ಕೆ ಅನಾದಿತ್ವವನ್ನು ಹೇಳುತ್ತಿಲ್ಲ. ಕ್ರಮವು ಸಾದಿಯಾದುದರಿಂದ ವೇದಕ್ಕೆ ಅನಾದಿತ್ವವು ಬಾಧಿತವಾಗಿದೆ. ಆದ್ದರಿಂದ ಅನಾದಿತ್ವಶ್ರುತಿ ಅನುಪೂರ್ವಿಯಲ್ಲಿ ವ್ಯತ್ಯಾಸವಿಲ್ಲ ಎಂದಿಷ್ಟೇ ಹೇಳುತ್ತದೆ, ಎನ್ನುತ್ತಾರೆ.

**तदुत्पत्तीति ।** श्रुत्युत्पत्तिवचश्चेत्यर्थः । तुर्विशेषार्थः । आदिकालीनां व्यक्तिं त्विति । तेन प्रत्यहमुपाध्यायैर्व्यज्यमानत्वादुत्पत्तिव्यवहारप्रसङ्ग इति निरस्तम् । अत एवावान्तराभिमानानामित्यस्मात् पूर्वार्ध एव—

''वेदानां सृष्टिवाक्यानि भवेयुर्व्यक्त्यपेक्षया'' ।

इति गत्युक्तिसद्भावेऽपि तदनुदाहृत्य स्थलान्तरस्थमेव तदुत्पत्तीत्यर्धमुदाहृतम् । **देवानां वेति ।** देहजन्मापेक्षयेत्यर्थः । मुख्याभिमानिश्रियस्तन्नेत्यतोऽवान्तराभिमानानामिति । अमुख्याभिमानवतामित्यर्थः । **तेषामिति ।** वेदानामित्यर्थः । **स्मृत्यैवेति ।** तत्वनिर्णयोक्तब्रह्माण्ड-पुराणवचनेनैवेत्यर्थः ।।

ಮೂಲದಲ್ಲಿ ಆದಿಪದದಿಂದ ''ಪ್ರತಿಮನ್ವಂತರಂ'' ಎಂಬ, ವೇದಕ್ಕೆ ಉತ್ಪತ್ತಿಯನ್ನು ಹೇಳುವ ಸ್ಮೃತಿಯು ವಿವಕ್ಷಿತವಾಗಿದೆ. ''ಭವೇತ್‌ವ್ಯಕ್ತಿಮಪೇಕ್ಷ್ಯ ತು'' ಎಂಬಲ್ಲಿರುವ ತು ಶಬ್ದವು ''ವ್ಯಕ್ತಿವಿಶೇಷವೇ ಉತ್ಪತ್ತಿಪದದ ಅರ್ಥ, ವ್ಯಕ್ತಿಸಾಮಾನ್ಯವಲ್ಲ'' ಎಂದು ತಿಳಿಸುತ್ತದೆ. ವ್ಯಕ್ತಿವಿಶೇಷವೆಂದರೆ ಸೃಷ್ಟಿಯ ಪ್ರಾರಂಭದಲ್ಲಿ ಭಗವಂತನಿಂದಾದ ವ್ಯಕ್ತಿ. ಅದೇ ಉತ್ಪತ್ತಿ ವ್ಯವಹಾರಕ್ಕೆ ಹೇತು. ಇದರಿಂದ ಪ್ರತಿದಿನವೂ ಅಧ್ಯಾಪಕರ ಉಚ್ಚಾರಣೆಯಿಂದ ವರ್ಣರಾಶಿಯ ಅಭಿವ್ಯಕ್ತಿಯಾಗುತ್ತಿರುವುದರಿಂದ ಉತ್ಪತ್ತಿವ್ಯವಹಾರ ಬರುವುದಿಲ್ಲ. ಹೀಗೆ, ಈ ಸ್ಮೃತಿಯಲ್ಲಿ 'ತು' ಎಂಬ ವಿಶೇಷಾರ್ಥಕಪದವು ಇರುವುದರಿಂದಲೇ 'ಅವಾಂತರಾಭಿಮಾನಾನಾಂ' ಇತ್ಯಾದಿ ಮೂಲೋದಾಹೃತವಾದ ಬ್ರಹ್ಮಾಂಡಪುರಾಣದ ಆರಂಭದಲ್ಲಿರುವ,

ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುರ್ವ್ಯಕ್ತ್ಯಪೇಕ್ಷಯಾ ।

ಎಂಬ ವಾಕ್ಯವನ್ನು ಬಿಟ್ಟು ಪುರಾಣಾಂತರದಲ್ಲಿರುವ ಈ ವಾಕ್ಯವನ್ನು ಮೂಲದಲ್ಲಿ ಉದಾಹರಿಸಲಾಗಿದೆ. ಬ್ರಹ್ಮಾಂಡಪುರಾಣದ ವಾಕ್ಯದಲ್ಲಿ 'ತು' ಶಬ್ದವಿಲ್ಲ.

ಲಕ್ಷ್ಮೀದೇವಿಯೂ ಶ್ರುತಿತತಿಗಭಿಮಾನಿನಿ. ಅವಳಿಗೆ ದೇಹೋತ್ಪತ್ತಿ ಇಲ್ಲ. ಅದಕ್ಕಾಗಿ ಬ್ರಹ್ಮಾಂಡಪುರಾಣದ ವಾಕ್ಯದಲ್ಲಿ 'ಅವಾಂತರಾಭಿಮಾನಾನಾಂ' ಎಂದು ಹೇಳಲಾಗಿದೆ.

## ನ್ಯಾಯದೀಪ

''अग्नेरृग्वेदो वायोर्यजुर्वेदः'' इत्यादिवाक्यगत्युक्तिपरतयाऽपि

तदुत्पत्तिवचश्चेत्यर्धस्यार्थमुपेत्याह—**सम्प्रदायेति** । चिरकालविरतस्य वेदस्य शिष्यप्रशिष्येषु प्रख्यापनं हि सम्प्रदायः । तत्कारित्वेन चेत्यर्थः । श्रुत्यादेरन्यथासिद्धिं चाह—**तेनेति** । श्रुत्यादिनेत्यर्थः । अस्तु तावतैव प्रणीतत्वमित्यत आह—**नह्युक्तरीत्येति** । क्रमविशेषविशिष्टानां वर्णानामित्यादिनोक्तरीत्येत्यर्थः ॥

ಮೊದಲು "ಛಂದಾಂಸಿ ಜಜ್ಞಿರೇ" ಎಂಬ ಉತ್ಪತ್ತಿವಾಕ್ಯಕ್ಕೆ ಪುರಾಣೋಕ್ತ ಅರ್ಥಾಂತರವನ್ನು ಹೇಳಿ "ಸಂಪ್ರದಾಯಪ್ರವರ್ತಕತ್ವೇನ" ಎಂಬ ಮೂಲದಲ್ಲಿ 'ಅಗ್ನೇಃ ಋಗ್ವೇದಃ' ಇತ್ಯಾದಿ ಉತ್ಪತ್ತಿ ವಾಕ್ಯಗಳಿಗೆ ಅರ್ಥಾಂತರವನ್ನು ಹೇಳುವಂತೆ ಪುರಾಣವಾಕ್ಯಗಳಿಗೆ ಅರ್ಥವನ್ನು ಮಾಡಲಾಗಿದೆ.

छन्दांसीत्यादिश्रुत्यादेः क्रमोत्पत्तिपरत्वेनान्यथासिद्धिरयुक्तेति भावेन शङ्कते—**नन्विति** ।

'ಛಂದಾಂಸಿ ಜಜ್ಞಿರೇ' ಎಂಬ ಉತ್ಪತ್ತಿಶ್ರುತಿಯು ವೇದದ ಕ್ರಮೋತ್ಪತ್ತಿಯನ್ನಷ್ಟೇ ಹೇಳುತ್ತದೆ. ವೇದಕ್ಕೆ ಸಕರ್ತೃಕತ್ವವನ್ನು ಹೇಳುವುದಿಲ್ಲ. ಆದ್ದರಿಂದ ಅದು ವೇದಪೌರುಷೇಯತ್ವಮ್ ಅನ್ಯಥಾಪಿ ಉಪಪನ್ನವಾಗುತ್ತದೆ ಎನ್ನಲಾಗಿದೆ. ಆದರೆ ಇದು ಸರಿಯಲ್ಲ, ಎಂದು ಮುಂದಿನ ಮೂಲದ ಶಂಕೆ.

**ननु यथा वेदानादित्वश्रुतिर्न वेदस्वरूपानादित्वपरा । बाधात् । किंत्वानुपूर्व्यनन्यथात्वपरा । तन्मात्रेणैव शब्देऽनुत्पत्तिव्यवहारात् । तथा तदुत्पत्तिश्रुतिरपि तदन्यथात्वपरेति चेन्मैवम् । "तत्क्रमेणैव" इत्यादिस्मृत्याऽनुत्पत्तिश्रुतेः क्रमानन्यथात्वपरत्वे स्थिते उत्पत्तिश्रुतेस्तदविरोधाय क्रमोत्पत्तिपरत्वस्यैवोचितत्वात् । अन्यथा "ऋग्वेद एवाग्नेरजायत, यजुर्वेदो वायोः, सामवेद आदित्यात्" इति श्रुत्याऽसर्वज्ञस्याग्न्यादेरपि वेदप्रणेतृत्वं स्यात् । नचैकस्मिन् वाक्येऽनेकेषां स्वतन्त्रप्रणेतृत्वं युक्तम् । युक्तं तु सम्प्रदायप्रवर्तकत्वम् ॥**

ಅಪೌರುಷೇಯತ್ವಾದಿಗಳು, ವೇದಾನಾದಿತ್ವ ಶ್ರುತಿಯು ವೇದಸ್ವರೂಪಕ್ಕೆ ಅನಾದಿತ್ವವನ್ನು ಹೇಳುತ್ತಿಲ್ಲ. ಕ್ರಮವು ಸಾದಿಯಾದುದರಿಂದ ವೇದಕ್ಕೆ ಅನಾದಿತ್ವವು ಬಾಧಿತವಾಗಿದೆ. ಆದ್ದರಿಂದ ಅನಾದಿತ್ವಶ್ರುತಿ ಅನುಪೂರ್ವಿಯಲ್ಲಿ ವ್ಯತ್ಯಾಸವಿಲ್ಲ ಎಂದಿಷ್ಟೇ ಹೇಳುತ್ತದೆ, ಎನ್ನುತ್ತಾರೆ.

ಅನಾದಿತ್ವಶ್ರುತಿಗೆ ಈ ಅರ್ಥ ಹೇಗೋ ಹಾಗೆಯೇ ತದುತ್ಪತ್ತಿಶ್ರುತಿಯೂ ಇದಕ್ಕೆ ವಿರುದ್ಧವಾಗಿ ಆನುಪೂರ್ವಿಯಲ್ಲಿ ವ್ಯತ್ಯಾಸವಾಗತ್ತದೆ ಎನ್ನುತ್ತದೆ, ಎಂದೇಕೆ ಹೇಳಬಾರದು?

ಈ ಆಕ್ಷೇಪವು ಸರಿಯಲ್ಲ. ''ತತ್ಕ್ರಮೇಣೈವ ತ್ರೈವರ್ಣ್ಯೈಃ'' ಎಂಬ ಸ್ಮೃತಿಯು ಕ್ರಮದಲ್ಲಿ ವ್ಯತ್ಯಾಸವಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿರುವುದರಿಂದ ವೇದೋತ್ಪತ್ತಿಶ್ರುತಿಗೆ 'ಕ್ರಮವು ವ್ಯತ್ಯಾಸವಾಗುತ್ತದೆ' ಎಂಬ ಸ್ಮೃತಿವಿರುದ್ಧಾರ್ಥವನ್ನು ಹೇಳಲಾಗದು. ಸ್ಮೃತಿಗೆ ಅನುಸಾರವಾಗಿ ಆ ಶ್ರುತಿಗೆ ವೇದಕ್ರಮಕ್ಕೆ ಉತ್ಪತ್ತಿ ಇದೆ. ಎಂಬ ಅರ್ಥವನ್ನೇ ಹೇಳುವುದು ಉಚಿತವಾಗುತ್ತದೆ. ಹಾಗೆ ಅರ್ಥಮಾಡದೆ ಕ್ರಮಾನ್ಯಥಾತ್ವವನ್ನು ಶ್ರುತ್ಯರ್ಥವನ್ನಾಗಿ ಹೇಳಿದರೆ—ಋಗ್ವೇದ ಏವಾಗ್ನೇ-ರಜಾಯತ' ಇತ್ಯಾದಿ ಶ್ರುತಿಗಳಿಗೂ ಅದೇ ರೀತಿಯ ಅರ್ಥವನ್ನು ಹೇಳಬೇಕಾಗುತ್ತದೆ. ಅಂದರೆ, ಈಶ್ವರನಿಂದ ವೇದವು ಹೇಗೆ ಅನ್ಯಥಾ ಆನುಪೂರ್ವೀವಿಶಿಷ್ಟವಾಗಿ ರಚಿತವಾಗಿದೆಯೋ ಅದರಂತೆ ಋಗಾದಿವೇದಗಳು ಅಗ್ನ್ಯಾದಿ ಅಸರ್ವಜ್ಞದೇವತೆಗಳಿಂದಲೂ ರಚಿತವಾಗಿವೆ, ಎಂದು ಅರ್ಥಮಾಡಬೇಕಾದೀತು. ಆದರೆ, ಈ ಅರ್ಥವು ಸರಿಯಲ್ಲ. ಏಕೆಂದರೆ, ಒಂದೇ ವಾಕ್ಯಕ್ಕೆ ಅನೇಕರು ಸ್ವತಂತ್ರಕರ್ತೃಗಳಾಗಿರಲು ಸಾಧ್ಯವಿಲ್ಲ. ಆದರೆ, ಒಂದೇ ವಾಕ್ಯಕ್ಕೆ ಅನೇಕರು ಸಂಪ್ರದಾಯ ಪ್ರವರ್ತಕರಾಗಲು ಸಾಧ್ಯವಿದೆ. ಈಶ್ವರ ಪ್ರಲಯಕಾಲದಲ್ಲಿ ಲೋಕವಿಚ್ಛಿನ್ನವಾದ ವೇದಸಂಪ್ರದಾಯದ ಮೊದಲ ಪ್ರವರ್ತಕ. ಅಗ್ನ್ಯಾದಿಗಳು ಮಧ್ಯದಲ್ಲಿ ವಿಚ್ಛಿನ್ನವಾದ ಸಂಪ್ರದಾಯಕ್ಕೆ ಪ್ರವರ್ತಕರು. ಹೀಗೆ ಹೇಳುವುದರಲ್ಲಿ ವಿರೋಧವೇನಿಲ್ಲ.

## ನ್ಯಾಯದೀಪ

**श्रुतिरिति ।** ''अनादिनित्या सा तच'' इत्यादिपूर्वोक्तश्रुतिरित्यर्थः । **बाधादिति ।** क्रमस्य कृतकत्वादिति भावः । **अन्यथात्वेति ॥**

''वेदास्ते नित्यविन्नत्वाच्छ्रुतयश्चाखिलैः श्रुतेः ।
आम्नायोऽनन्यथापाठादीशबुद्धिस्थिताः सदा'' ॥

इति महावाराहस्मृतेरिति भावः । **स्मृत्येति ।** प्रागुक्तयेत्यर्थः । **अन्यथेति ।** क्रमोत्पत्तिपरत्वमनुपेत्य तदन्यथात्वपरत्वोक्तावित्यर्थः । अस्त्वित्यत आह—**नचेति ।**

'ಆನುಪೂರ್ವೀ-ಅನನ್ಯಥಾತ್ವಪರಾ' ಇದಕ್ಕೆ ಪ್ರಮಾಣ-'ವೇದಾಸ್ತೇ' ಇತ್ಯಾದಿ ಮಹಾವಾರಾಹಸ್ಮೃತಿ. ಅದರ ಉತ್ತರಾರ್ಧದಲ್ಲಿ 'ಆಮ್ನಾಯೋಽನನ್ಯಥಾಪಾಠಾತ್'ಎಂದಿದೆ. ಅದರ ಅರ್ಥ-ವೇದಾನುಪೂರ್ವಿಯಲ್ಲಿ ಬದಲಾವಣೆ ಇಲ್ಲ, ಎಂದು.

ಮೂಲದಲ್ಲಿ 'ಅನ್ಯಥಾ' ಎಂದರೆ ವೇದೋತ್ಪತ್ತಿಸ್ಮೃತಿಗೆ ಕ್ರಮೋತ್ಪತ್ತಿ ಎಂದು ಅರ್ಥ ಮಾಡದೆ 'ಕ್ರಮವ್ಯತ್ಯಾಸರೂಪವಾದ ಉತ್ಪತ್ತಿ' ಎಂದು ಅರ್ಥ ಹೇಳಿದರೆ ಎಂದರ್ಥ.

**एतदप्युक्तं ''गौरवदोषेण'' इति ।।**

ಒಂದೇ ವಾಕ್ಯಕ್ಕೆ ಅನೇಕ ಸ್ವತಂತ್ರಕರ್ತೃಗಳು ಇರುವುದು ಸರಿಯಲ್ಲ (ಏತತ್) ಎಂಬುದನ್ನು ಆಚಾರ್ಯರು 'ಗೌರವದೋಷೇಣ' ಎಂಬ ಮಾತಿನಿಂದ ಹೇಳಿದ್ದಾರೆ.

## ನ್ಯಾಯದೀಪ

**एतदपीति ।** एकस्मिन् वाक्ये अनेकेषां स्वतन्त्रप्रणेतृत्वं न युक्तमित्येतदित्यर्थः । **गौरवेति ।** अनेकस्वतन्त्रप्रणेतृकत्वकल्पनाख्य-गौरवदोषेणेत्यर्थः ।।

ಆಚಾರ್ಯರು ಹೇಳಿರುವ ಗೌರವದೋಷೇಣ, ಎಂಬ ಪದಕ್ಕೆ 'ಒಂದೇ ವಾಕ್ಯಕ್ಕೆ ಅನೇಕ-ಸ್ವತಂತ್ರಪುರುಷರು ಕರ್ತೃಗಳು ಎಂದು ಕಲ್ಪಿಸುವುದು ಗೌರವದೋಷ' ಎಂದು ಅರ್ಥ.

## ಅವತಾರಿಕೆ

सम्प्रदायप्रवर्तकत्वस्य वेदहेतुत्वव्यवहारे व्यभिचारमाशङ्क्य निराह—**यद्यपीत्यादिना ।**

'ಈಶ್ವರನು ವೇದಹೇತು' ಎಂಬ ವ್ಯವಹಾರಕ್ಕೆ ವೇದಸಂಪ್ರದಾಯಪ್ರವರ್ತಕತ್ವವೇ ಕಾರಣ ಹೊರತು ವೇದಕರ್ತೃತ್ವವಲ್ಲ, ಎಂದು ಹಿಂದೆ ಹೇಳಲಾಗಿದೆ. ಇದಕ್ಕೆ ವ್ಯಭಿಚಾರವನ್ನು ಆಶಂಕೆ ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**यद्यपि ऋष्यादयोऽपि केषुचित् पुरुषेष्वचिरविरतस्य वेदैकदेशस्य सम्प्रदायप्रवर्तकाः । तथापि नेश्वरवत् सर्वपुरुषेष्वपि प्रलये चिरतरविरतस्य कृत्स्नस्य वेदस्य प्रवर्तका इति न तेषु वेदहेतुत्वव्यवहारः । ईश्वरोऽपि ह्यस्मन्मते—**

**''यो ब्रह्माणं विदधाति पूर्वं यो वेदांश्च प्रहिणोति तस्मै'' ।।**

**इत्यादिश्रुत्या वेदसम्प्रदायप्रवर्तकत्वान्महोपाध्याय एव । तस्माद् वेदानां पौरुषेयत्वरूपं सादित्वमयुक्तम् ।।**

ಯದ್ಯಪಿ ವಸಿಷ್ಠಾದಿ ಋಷಿಗಳೂ ಕೆಲವು ಜನಾಂಗಗಳಲ್ಲಿ ಅಲ್ಪಕಾಲಪರ್ಯಂತ ಮರೆಯಾದ ವೇದದ ಕೆಲವು ಭಾಗಗಳ ಸಂಪ್ರದಾಯಪ್ರವರ್ತಕರಾಗಿದ್ದಾರೆ. ಆದರೂ, ಅವರನ್ನು ಈಶನಂತೆ ವೇದಕರ್ತೃಗಳೆಂದು ಹೇಳಲಾಗುವುದಿಲ್ಲ. ಏಕೆಂದರೆ, ಅವರು ಈಶ್ವರನಂತೆ, ಸರ್ವಪುರುಷರಲ್ಲೂ ಪ್ರಲಯದಲ್ಲಿ ದೀರ್ಘಕಾಲಪರ್ಯಂತವಾಗಿ ವಿಚ್ಛಿನ್ನವಾದ ಸಮಗ್ರವೇದಕ್ಕೆ ಪ್ರವರ್ತಕರಲ್ಲ. ಆದರಿಂದಾಗಿ ಅವರಲ್ಲಿ 'ವೇದಕರ್ತರು' ಎಂಬ ವ್ಯವಹಾರವಿಲ್ಲ. ಈಶ್ವರನಲ್ಲಿ ಮಾತ್ರವೇ ಆ ವ್ಯವಹಾರ. ನಮ್ಮ ಸಿದ್ಧಾಂತದಲ್ಲಿ ಈಶ್ವರನೂ ವೇದಸಂಪ್ರದಾಯ ಪ್ರವರ್ತಕನಾದುದರಿಂದ ಮಹಾಉಪಾಧ್ಯಾಯನೇ ಆಗಿದ್ದಾನೆ. 'ಯೋ ಬ್ರಹ್ಮಾಣಮ್' ಇತ್ಯಾದಿ ಶ್ರುತಿಯೇ ಅದಕ್ಕೆ ಆಧಾರ.

ಹೀಗೆ, ಪ್ರಮಾಣಗಳು ಇಲ್ಲವಾದ ಕಾರಣ ವೇದಗಳಿಗೆ ಪೌರುಷೇಯತ್ವರೂಪವಾದ ಸಾದಿತ್ವವು ಯುಕ್ತವಲ್ಲ.

## ನ್ಯಾಯದೀಪ

**छन्दांसि जज्ञिरे तस्मादित्यादेः सम्प्रदायप्रवर्तकत्वेन गत्युक्तिरयुक्ता । हेतोरसिद्धेरित्यत आह—ईश्वरोऽपि हीति । पौरुषेयत्वेति । स्वतन्त्रपुरुषप्रणीतत्वरूपमित्यर्थः ।।**

'ಛಂದಾಂಸಿ ಜಜ್ಞಿರೇ' ಎಂದರೆ, ಈಶ್ವರನು ವೇದಸಂಪ್ರದಾಯಪ್ರವರ್ತಕ ಎಂದು ಅಭಿಪ್ರಾಯ. ಹೀಗೆ ಉತ್ಪತ್ತಿವಾಕ್ಯಕ್ಕೆ ಸಾವಕಾಶತ್ವವನ್ನು ಹೇಳುವುದು ಸರಿಯಲ್ಲ. ಈಶ್ವರನು ಸಂಪ್ರದಾಯಪ್ರವರ್ತಕನಾದ ಒಬ್ಬ ಅಧ್ಯಾಪಕ, ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಹೀಗೆ ಆಕ್ಷೇಪ ಬಂದಾಗ ಅದಕ್ಕೆ ಸಮಾಧಾನ–ಈಶ್ವರೋಽಪಿ, ಎಂಬ ಮೂಲ.

### ಅವತಾರಿಕೆ

यत्तु-

''प्रमायाः परतन्त्रत्वात् सर्गप्रलयसम्भवात्'' ।।

इत्यादिना कुसुमाञ्जलौ प्रलये वेदानामुत्सन्नत्वमुक्तम् । तदप्ययुक्तमित्याह—**अनित्यत्वं त्विति ।**

ಕುಸುಮಾಂಜಲಿ ಗ್ರಂಥದ ದ್ವಿತೀಯಸ್ತಬಕದ ಆರಂಭದಲ್ಲಿ ಈ ಶ್ಲೋಕವಿದೆ. 'ಕರ್ಮವಿಶೇಷವು ಫಲವಿಶೇಷಸಾಧನ' ಎಂದು ಸಿದ್ಧವಾಗಬೇಕಾದರೆ ಸರ್ವಜ್ಞನಾದ ಈಶ್ವರ ಇರಬೇಕು, ಎಂದು ಉದಯನಾಚಾರ್ಯರ ಸಿದ್ಧಾಂತ. ಅದರ ಮೇಲೆ ಬರುವ ಆಕ್ಷೇಪ–ಅಪೌರುಷೇಯವಾದ ವೇದದಿಂದ ಅದನ್ನು ಸಿದ್ಧಮಾಡಬಹುದು, ಎಂದು. ಅದಕ್ಕೆ ಸಮಾಧಾನ–'ಪ್ರಮಾಯಾಃ ಪರತಂತ್ರತ್ವಾತ್' ಎಂದು. ''ಪ್ರಾಮಾಣ್ಯವು ಉತ್ಪತ್ತೌ ಜ್ಞಪ್ತೌ ಚ ಪರತಃ।'' ವೇದವು ಅಪೌರುಷೇಯವಾದರೆ ಅದರಲ್ಲಿ ಪ್ರಾಮಾಣ್ಯವು ಇರಲು ಸಾಧ್ಯವಿಲ್ಲ. ಅಪೌರುಷೇಯತ್ವಪ್ರಯುಕ್ತ ನಿರ್ದೋಷವಾದುದರಿಂದ ವೇದವು ಪ್ರಮಾಣವಾದರೂ ತಜ್ಜನ್ಯಜ್ಞಾನದಲ್ಲಿ ಪ್ರಾಮಾಣ್ಯವನ್ನು ತಿಳಿಯಲಾಗದು.

ವೇದವು ನಿತ್ಯವಾದುದರಿಂದ ಗುಣಾಪೇಕ್ಷೆ ಪ್ರಾಮಾಣ್ಯಕ್ಕೆ ಇಲ್ಲ (ನಿತ್ಯತ್ವಾದ್ವೇದಾನಾಂ ಅನಪೇಕ್ಷತ್ವಮ್) ಎನ್ನುವುದು ಸರಿಯಲ್ಲ. 'ನಹಿ ವರ್ಣಾ ಏವ ತಾವನ್ನಿತ್ಯಾಃ' ವರ್ಣಗಳೇ ಅನಿತ್ಯಗಳು. ತತ್ಸಮೂಹರೂಪವಾದ ವೇದವು ಸುತರಾಂ ಅನಿತ್ಯ'. 'ಪರತಂತ್ರಪುರುಷಪರಂಪರಾಧೀನತಯಾ ಪ್ರವಾಹಾವಿಚ್ಛೇದಮೇವ ನಿತ್ಯತಾಂ ಬ್ರೂಮಃ ಇತಿ ಚೇತ್, ಏತದಪಿ ನಾಸ್ತಿ ಸರ್ಗಪ್ರಲಯ ಸಂಭವಾತ್'–ವೇದಗಳು ಅನಿತ್ಯಗಳಾದರೂ ಅದರ ಪ್ರವಾಹಕ್ಕೆ ವಿಚ್ಛೇದವಿಲ್ಲವಾದ ಕಾರಣ ಪ್ರವಾಹತಃ ನಿತ್ಯತ್ವವನ್ನು ಅಂಗೀಕರಿಸಿ ಪ್ರಾಮಾಣ್ಯವನ್ನು ನಿರ್ಧರಿಸಬಹುದು ಎಂದರೆ ಅದೂ ಸಾಧ್ಯವಲ್ಲ. ಪ್ರಲಯಕಾಲದಲ್ಲಿ ಪ್ರವಾಹಕ್ಕೂ ವಿಚ್ಛೇದವಾಗುತ್ತದೆ. ಆದ್ದರಿಂದ ವೇದಗಳಿಂದ ಧರ್ಮಾದಿನಿಶ್ಚಯವಾಗದು.''

ಇದು ಕುಸುಮಾಂಜಲಿಯಲ್ಲಿ ನಿರೂಪಿಸಿರುವ ವಿಷಯ. ಇಲ್ಲಿ, ಪ್ರಲಯಕಾಲದಲ್ಲಿ ವೇದಪ್ರವಾಹಕ್ಕೆ ವಿಚ್ಛೇದವಿದೆ, ಎಂದಿರುವುದನ್ನು ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

**अनित्यत्वं त्वत्यन्तायुक्तम् । तथाहि । क्रमविशेषविशिष्टा वर्णा एव वेदाः । क्रमश्च बुद्धिनिमित्तक एव । नतु स्वत इत्युक्तम् । ततश्च सर्वेषां सर्वथा वर्णविषयविवक्षितक्रमोपाधिभूतबुध्युपरम एव वेदे विनाशो वक्तव्यः । नतु घटादीनामिवापरः । नचेश्वरस्य तथाविधबुध्युपरमो युज्यते । तस्य सर्वदा सर्वज्ञत्वात् । पुराणादीनामप्यन्यथारचनमेवानित्यत्वमिति ।**

ವೇದವು ಪ್ರಲಯಕಾಲದಲ್ಲಿ ಇಲ್ಲದಾಗುವುದರಿಂದ ಅನಿತ್ಯ ಎನ್ನುವುದು ತೀರಾ ಅಸಂಬದ್ಧ. ಏಕೆಂದರೆ–ಕ್ರಮವಿಶೇಷವಿಶಿಷ್ಟವಾದ ವರ್ಣಗಳೇ ವೇದಗಳು. ವರ್ಣಗಳ ಕ್ರಮ ಬುದ್ಧಿನಿಮಿತ್ತಕವಾದದು. ಅದು ಸ್ವಾಭಾವಿಕವಲ್ಲ ಎಂದು ಹಿಂದೆಯೇ (ಪು.47) ಹೇಳಲಾಗಿದೆ.

ಹೀಗಿರುವುದರಿಂದ ಎಲ್ಲರಿಗೂ ಎಲ್ಲವಿಧದಿಂದಲೂ ವರ್ಣವಿಷಯಕವಾದ, ವಿವಕ್ಷಿತವರ್ಣಕ್ರಮಕ್ಕೆ ಉಪಾಧಿಯಾದ ಬುದ್ಧಿಯು ಉಪರತವಾದಾಗ ಕ್ರಮನಾಶಪ್ರಯುಕ್ತವಾಗಿ ವೇದನಾಶವನ್ನು ಹೇಳಬೇಕು. ಈ ರೀತಿಯ ವಿನಾಶವಲ್ಲದೆ ಘಟಕ್ಕೆ ನಾಶವಾದಂತೆ ಸ್ವರೂಪಧ್ವಂಸರೂಪವಾದ ನಾಶವು ವೇದಕ್ಕಿಲ್ಲ. ಆದರೆ ನಮ್ಮೆಲ್ಲರ ಬುದ್ಧಿಯು ನಾಶವಾದರೂ ಈಶ್ವರನ ಬುದ್ಧಿಗೆ ಎಂದೂ ನಾಶವಿಲ್ಲ. ಅವನು ಸರ್ವದಾ ಸರ್ವಜ್ಞನಾಗಿಯೇ ಇರುತ್ತಾನೆ. ಅವನ ಬುದ್ಧಿ-ಉಪಾಧಿಕವಾದ ಕ್ರಮವು ಪ್ರಲಯಕಾಲದಲ್ಲೂ ಇರುವುದರಿಂದ ತಾದೃಶಕ್ರಮವಿಶಿಷ್ಟವೇದದ ಪ್ರವಾಹಕ್ಕೆ ವಿಚ್ಛೇದವೇ ಇಲ್ಲ.

ಈ ದೃಷ್ಟಿಯಿಂದ ನೋಡಿದಾಗ ಪುರಾಣಗಳೂ ಪ್ರವಾಹತಃ ನಿತ್ಯಗಳೇ ಆಗುತ್ತವೆ. ಅವುಗಳ ವರ್ಣಗಳನ್ನೂ ಅದೇ ಕ್ರಮದಿಂದ ಸರ್ವಜ್ಞನಾದ ಈಶ್ವರನ ಬುದ್ಧಿಯು ಸದಾ ವಿಷಯೀಕರಿಸುತ್ತದೆ. ಆದರೂ ಪ್ರತಿಯೊಂದು ಸೃಷ್ಟಿಕಾಲದಲ್ಲೂ ಅವುಗಳ ವರ್ಣ-ಪದಾದಿಕ್ರಮಗಳನ್ನು ವ್ಯತ್ಯಾಸಮಾಡಿ ಈಶ್ವರ ಉಚ್ಚಾರ ಮಾಡುತ್ತಾನೆ. ಹಿಂದಿನ ಕಲ್ಪದ ವರ್ಣಪದಕ್ರಮ ವಿಶಿಷ್ಟವಾದ ಪುರಾಣವು ಈ ಕಲ್ಪದಲ್ಲಿ ಜನರಿಗೆ ಸಿಗುವುದಿಲ್ಲ. ಇದೇ ಪುರಾಣಗಳಿಗೆ ಅನಿತ್ಯತ್ವ. ಅವುಗಳಿಗೂ ಸ್ವರೂಪಧ್ವಂಸರೂಪವಾದ ನಾಶವು ಇಲ್ಲ. ಇದನ್ನು ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ—

ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇಽನ್ಯಥೈವ ತು ।
ಕ್ರಿಯಂತೇಽತಸ್ತ್ವನಿತ್ಯಾನಿ, ತದರ್ಥಾಃ ಪೂರ್ವಸರ್ಗವತ್ ॥

## ನ್ಯಾಯದೀಪ

**वेदानामित्यनुषङ्गः ।** क्रमस्योक्तदिशा कथञ्चित्पुरुषाधीनजन्मवत्त्वेन कृतकत्वसम्भवेऽप्यानुपूर्व्युच्छेदस्तु न युक्त एवेति तुशब्दार्थः । **इत्युक्तमिति ।** अपौरुषेयत्वानुमानवादे उक्तमित्यर्थः । **अपर इति ।** स्वरूपध्वंसलक्षण इत्यर्थः ।

तर्हि पुराणानामपि नित्यत्वं स्यात् । ईश्वरबुद्धिनिमित्तकत्वस्य कदाप्यनाशादित्यतोऽस्त्येवैवंरूपं नित्यत्वम्; किन्तु क्रमव्यत्यासोऽपि तत्रेत्यनित्यत्वमिति भावेन तत्वनिर्णयोक्तमेवाह—**पुराणादीनामिति ॥**

"पुराणानि तदर्थानि सर्गेसर्गेऽन्यथैव तु ।
क्रियन्तेऽतस्त्वनित्यानि तदर्थाः पूर्वसर्गवत्" ॥

इति ब्रह्माण्डपुराणोक्तेरिति भावः ॥

'ಅನಿತ್ಯಂ ತು' ಎಂಬಲ್ಲಿರುವ ತು ಶಬ್ದವು ವೇದಾನಿತ್ಯತ್ವದಲ್ಲಿರುವ ವಿಶೇಷವನ್ನು ಹೇಳುತ್ತದೆ. ವೇದದ ಕ್ರಮವು ಹಿಂದೆ ಹೇಳಿದಂತೆ ಪುರುಷಬುದ್ಧಿಕ್ರಮನಿಮಿತ್ತದಿಂದ ಜನ್ಯವಾದರೂ ವೇದದ ಆನುಪೂರ್ವಿಗೆ ಎಂದೂ ವಿಚ್ಛೇದ ಇಲ್ಲ. ಇದೇ ವಿಶೇಷ.

ಈಶಬುದ್ಧಿಯು ನಿತ್ಯವಾದುದರಿಂದ ತದುಪಾಧಿಕಕ್ರಮವೂ ಸದಾ ಇರುವುದರಿಂದ ವೇದವು ನಿತ್ಯವಾಗುವುದಾದರೆ ಪುರಾಣಗಳಿಗೂ ಇಂತಹ ನಿತ್ಯತ್ವವು ಇರಬೇಕಾದೀತು. ಈಶಬುದ್ಧಿನಿಮಿತ್ತಕವಾದ ಅವುಗಳ ವರ್ಣಾದಿಕ್ರಮಗಳಿಗೂ ನಾಶವಿಲ್ಲದುದರಿಂದ, ಎಂದರೆ ಹೌದು, ಎಂದೇ ಉತ್ತರ. ಇಂತಹ ನಿತ್ಯತ್ವವು ಪುರಾಣಗಳಿಗೂ ಇದೆ. ಆದರೆ ಅವುಗಳ ವರ್ಣಾದಿಕ್ರಮಗಳಲ್ಲಿ ವ್ಯತ್ಯಾಸವೂ ಇದೆ. ಆದ್ದರಿಂದ ಅವುಗಳು ಅನಿತ್ಯಗಳು. ಈ ವಿಷಯವನ್ನು ತತ್ವನಿರ್ಣಯದಲ್ಲಿ, ಪುರಾಣಾದೀನಾಮಪಿ ಅನ್ಯಥಾಶಬ್ದರಚನಮೇವಾನಿತ್ಯತ್ವಮ್–ಎಂದು ಹೇಳಲಾಗಿದೆ. ಅದನ್ನೇ ಇಲ್ಲಿ ಹೇಳಲಾಗಿದೆ.

## ನ್ಯಾಯದೀಪ

**नन्वेवं वेदपुराणयोरीश्वरबुद्धिनिमित्तकत्वेन नित्यत्वे पुराणानामप्यन्यथारचनं निष्फलमिति चेन्न ''भगवत्प्रवृत्तेः सवर्त्र स्वप्रयोजनहीनत्वस्य 'न प्रयोजनवत्त्वात्' इति सूत्रकृतैवोक्तेः। परप्रयोजनानामतिसूक्ष्माणाम् उत्प्रेक्षितुमशक्यत्वात्'' इति तत्वनिर्णयटीकासुधयोरेव व्यक्तत्वात् ॥**

ಪುರಾಣಗಳ ಕ್ರಮವೂ ವೇದಕ್ರಮದಂತೆ ಈಶ್ವರ ಬುದ್ಧಿಯಲ್ಲಿ ಸದಾ ಇರುವುದಾದರೆ ಸೃಷ್ಟಿಯ ಆರಂಭದಲ್ಲಿ ಪುರಾಣಗಳ ಶಬ್ದರಚನಾಕ್ರಮವನ್ನು ಬದಲಾಯಿಸುವುದು ನಿಷ್ಫಲವಲ್ಲವೇ? ಇದಕ್ಕೆ ಸುಧಾ ಮತ್ತು ತತ್ತ್ವನಿರ್ಣಯಟೀಕಾದಲ್ಲಿ ಒಂದೇ ವಿಧದ ಉತ್ತರವನ್ನು ಕೊಡಲಾಗಿದೆ—''ನಿಷ್ಫಲ' ಎಂದರೆ ಯಾರಿಗೆ? ರಚನೆ ಮಾಡುವ ಈಶ್ವರನಿಗೋ, ನಮಗೋ? ಈಶ್ವರನಿಗಾದರೆ ಇಷ್ಟಾಪತ್ತಿ. ಅವನ ಎಲ್ಲಾ ಪ್ರವೃತ್ತಿಗಳಿಗೂ ಸ್ವಪ್ರಯೋಜನವು ಇಲ್ಲ, ಎಂದು 'ನ ಪ್ರಯೋಜನವತ್ವಾತ್' ಎಂಬ ಸೂತ್ರದಲ್ಲಿ ಸೂತ್ರಕಾರರೇ ಹೇಳಿದ್ದಾರೆ. ಇನ್ನು ಪರಪ್ರಯೋಜನವು ಅವನ ಬುದ್ಧಿಯಲ್ಲಿದೆ. ಅದು ಅತಿಸೂಕ್ಷ್ಮವಾದ ಕಾರಣ ನಮ್ಮ ಬುದ್ಧಿಗೆ ನಿಲುಕುವುದಿಲ್ಲ. ನಾವು ಅದನ್ನು ಊಹೆ ಮಾಡಲು ಅಶಕ್ತರು.''

## ಅವತಾರಿಕೆ

**नन्वेवमपि ''विधिर्नियोगः प्रेरणेत्यनर्थान्तरम्। स च**

**प्रेरकपुरुषधर्मः । अतो वैदिकानां विध्युद्देशानां लौकिकवत् स्वतन्त्रवक्तृकत्वमेवोचितम् । यस्तु पौरुषेयत्वं नोपैति तं प्रति विधिरेव गर्भ इव श्रुतिकुमार्याः पुंयोगप्रमाणम्'' इति विधिवादे मणिकृदुक्तेः । ''आप्ताभिप्रायो विध्यर्थः'' इत्युदयनोक्तेश्च,**

**''नित्या वेदाः समस्ताश्च''**

**इति स्मृत्युक्त्या निरस्तत्वेऽपि विशिष्य न निरस्तमित्याशङ्कामनूद्य निरासस्थलमाह—विधीति । विधिवेदस्येति ।** विधिभागरूपवेदस्येत्यर्थः । **विधिवाद इति ।** द्वितीयपरिच्छेदे ।।

ವೇದಾಪೌರುಷೇಯತ್ವದ ಬಗ್ಗೆ ಮಣಿಗ್ರಂಥದಲ್ಲಿ ಹೀಗೊಂದು ಆಕ್ಷೇಪವನ್ನು ಮಾಡಲಾಗಿದೆ—ವಿಧಿ, ನಿಯೋಗ, ಪ್ರೇರಣೆ ಇವೆಲ್ಲ ಒಂದೇ ಅರ್ಥದ ವಿಭಿನ್ನ ಶಬ್ದಗಳು. 'ಪ್ರೇರಣೆ'ಯು ಪುರುಷಗತವಾದ ಧರ್ಮ. ವೇದದಲ್ಲಿ ''ಯಜೇತ'' ಮುಂತಾದ ವಿಧಿಬೋಧಕ ಶಬ್ದಗಳಿವೆ. ಪ್ರೇರಣಾ ಬೋಧಕವಾದ ಅಂತಹ ಶಬ್ದಗಳನ್ನು ಪ್ರೇರಕ ಪುರುಷನೊಬ್ಬನು ರಚಿಸಿರಬೇಕು. ಲೌಕಿಕ ವಿಧಿವಾಕ್ಯಗಳಲ್ಲಿ ಹೀಗೆ ದೃಷ್ಟವಾಗಿದೆ. ಹೀಗೆ, ಪೌರುಷೇಯತ್ವವನ್ನು ಒಪ್ಪದವರಿಗೆ ವೇದದ ವಿಧಿಗಳೇ 'ಗರ್ಭದಂತೆ' ಶ್ರುತಿಕುಮಾರಿಗೆ ಪುರುಷಸಂಗವಿದೆ, ಎನ್ನುವುದಕ್ಕೆ ಪ್ರಮಾಣ. ಈ ಆಕ್ಷೇಪ ಮಣಿಗ್ರಂಥದ ವಿಧಿವಾದದಲ್ಲಿ ಇದೆ. (ಇದೇ ವಾಕ್ಯವು ಕುಸುಮಾಂಜಲಿಯಲ್ಲೂ ಇದೆ– **मा भूदन्यत्। विधिरेव तावत् गर्भ इव पुंयोगे प्रमाणं श्रुतिकुमार्याः ।** ತರ್ಕತಾಂಡವದಲ್ಲೂ ಈ ನಿರೂಪಣೆ ಬಂದಿದೆ. (ಪು.126) ಉದಯನಾಚಾರ್ಯರೂ ''ಆಪ್ತಾಭಿಪ್ರಾಯೋ ವಿಧ್ಯರ್ಥಃ'' ಎಂದಿದ್ದಾರೆ. (ಕುಸುಮಾಂಜಲಿಯಲ್ಲಿ ಹೀಗಿದೆ– **''विधिर्वक्तुरभिप्रायः''** –ಪಂಚಮಸ್ತ–ಈಶ್ವರಾನುಮಾನ)

ಈ ಪೂರ್ವಪಕ್ಷವನ್ನು 'ನಿತ್ಯಾ ವೇದಾಃ ಸಮಸ್ತಾಶ್ಚ'' ಎಂಬ ಸ್ಮೃತಿಯನ್ನು ಉದಾಹರಿಸುವ ಮೂಲಕ 'ಸಮಸ್ತಾಃ' ಎಂಬ ಪದದಿಂದ ಸಾಮಾನ್ಯವಾಗಿ ನಿರಾಕರಿಸಲಾಗಿದೆಯಾದರೂ ಇದನ್ನೇ ವಿಶಿಷ್ಯ ನಿರಾಕರಿಸಲಾಗಿಲ್ಲ. ಅದಕ್ಕಾಗಿ ಪುನಃ ಆಶಂಕೆಯನ್ನು ಅನುವಾದ ಮಾಡಿ ಅದನ್ನು ನಿರಾಕರಿಸಿರುವ ಸಂದರ್ಭವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**विधिप्रत्ययस्य लोकवद् वेदेप्याप्ताभिप्रायवाचकत्वात्, वैदिकविधिप्रत्ययेनैव विधिवेदस्य पौरुषेयत्वमिति तु विधिवादे निरसिष्यते ।।**

ವಿಧಿಪ್ರತ್ಯಯಗಳು (ಲಿಙ್, ಲೋಟ್, ತವ್ಯತ್ ಪ್ರತ್ಯಯಗಳು) ಲೌಕಿಕವಾಕ್ಯಗಳಂತೆ ವೈದಿಕ ವಾಕ್ಯಗಳಲ್ಲೂ 'ಆಪ್ತನ ಅಭಿಪ್ರಾಯ'ವನ್ನು ಹೇಳುತ್ತವೆ. ಅಂತಹ ಪ್ರತ್ಯಯಗಳು ವೇದದಲ್ಲಿ ಇದ್ದಮೇಲೆ ವೇದವೂ ಆಪ್ತಪ್ರಣೀತವಾಗಿರಬೇಕು. ಹೀಗೆ ಪೌರುಷೇಯತ್ವಸಾಧಕವಾದವನ್ನು ಈ ಗ್ರಂಥದ ಮುಂದಿನ ವಿಧಿವಾದದಲ್ಲಿ ನಿರಾಕರಿಸಲಾಗುತ್ತದೆ.

**ವಿವರಣೆ**—ಆಪ್ತಾಭಿಪ್ರಾಯಸ್ಯ ಲಿಙರ್ಥತ್ವೇ ಬಾಧಕಮ್, ಎಂಬ ತರ್ಕತಾಂಡವದ ಪ್ರಕರಣದಲ್ಲಿ ಮೂರು ದೋಷಗಳನ್ನು ತೋರಿಸಿ ಆಪ್ತಾಭಿಪ್ರಾಯವು ಲಿಙರ್ಥವಲ್ಲ, ಎಂದು ನಿರಾಕರಿಸಲಾಗಿದೆ.

1. ಮೊದಲ ದೋಷ–ಅಭಿಪ್ರಾಯ ಎಂದರೆ ಇಚ್ಛೆ. ಈಶ್ವರನ ಇಚ್ಛೆ ಇಲ್ಲದೆ ಯಾವುದೂ ನಡೆಯುವುದಿಲ್ಲ. ವಿಷಭಕ್ಷಣವೂ ಅವನ ಇಚ್ಛೆಯಿದ್ದೇ ನಡೆಯುತ್ತದೆ, ನಿಷಿದ್ಧಾಚರಣೆಯೂ ನಡೆಯುತ್ತದೆ. ಆದ್ದರಿಂದ ಅವುಗಳೂ ವಿಧೇಯವಾಗಬೇಕಾದೀತು.

2. ಬಾಲಕನ ಸ್ತನ್ಯಪಾನವು ಮತ್ತೊಬ್ಬರು ಹೇಳಿ ನಡೆಯುವುದಲ್ಲ. ಆದ್ದರಿಂದ ಆ ಪ್ರವೃತ್ತಿಗೆ ಆಪ್ತಾಭಿಪ್ರಾಯಜ್ಞಾನವು ಪ್ರವರ್ತಕವಲ್ಲ. ಇಷ್ಟಸಾಧನತಾಜ್ಞಾನವೇ ಪ್ರವರ್ತಕ. ಇದರಿಂದಾಗಿ ವ್ಯವಹಾರದಿಂದ ಬಾಲಕನಿಗೆ ಶಕ್ತಿಗ್ರಹವಾದಾಗ ತನ್ನ ಅನುಭವಕ್ಕೆ ಅನುಸಾರವಾಗಿ ಲಿಙಾದಿಗಳಿಗೆ ಇಷ್ಟಸಾಧನತ್ವವೇ ಅರ್ಥವೆಂದು ತಿಳಿಯುತ್ತಾನೆ.

3. ಲಿಙ್‌ಪ್ರತ್ಯಯದಿಂದ ಆಪ್ತಾಭಿಪ್ರಾಯ ತಿಳಿದರೂ (ಇದು ನನ್ನ ಕರ್ತವ್ಯವೆಂದು ಆಪ್ತನ ಅಭಿಪ್ರಾಯವಿದೆ, ಎಂದು ತಿಳಿದರೂ) ಪ್ರವೃತ್ತಿಯಾಗಬೇಕಾದರೆ ಪ್ರವರ್ತಕನಿಗೆ ಇಚ್ಛೆ ಇರಬೇಕು. ಇಚ್ಛೆಗೆ ಇಷ್ಟಸಾಧನತಾಜ್ಞಾನವು ಕಾರಣ. ಅಂದಮೇಲೆ ಅವಶ್ಯಕವಾದ ಇಷ್ಟಸಾಧನತ್ವವೇ ವಿಧಿ ಪ್ರತ್ಯಯಾರ್ಥ ಎಂದು ಹೇಳುವುದೇ ಉಚಿತ.

**ಇಲ್ಲಿಗೆ ಈ ಪ್ರಕರಣವು ಮುಗಿಯಿತು.**

# ಪ್ರಕರಣದ ಸಾರಾಂಶ

ನೈಯಾಯಿಕರು ವೇದಕ್ಕೆ ಪೌರುಷೇಯತ್ವವನ್ನು ಅನುಮಾನಗಳಿಂದ ಸಾಧಿಸುತ್ತಾರೆ. ಅಂತಹ ನೈಯಾಯಿಕರಲ್ಲಿ ಇಬ್ಬರು ಪ್ರಮುಖರು–ಒಬ್ಬರು ಉದಯನಾಚಾರ್ಯರು. ಅವರು ಪ್ರಾಚೀನ ನೈಯಾಯಿಕರ ಗುಂಪಿಗೆ ಸೇರಿದವರು. (ಶಕಾಬ್ದ 906) ನ್ಯಾಯಕುಸುಮಾಂಜಲಿ ಅವರು ಬರೆದ ಗ್ರಂಥ. ಅದರ ಕೊನೆಯ ಸ್ತಬಕದಲ್ಲಿ ಈಶ್ವರಸಾಧಕಾನುಮಾನಗಳನ್ನು ಹೇಳುವಾಗ ವೇದ ಪೌರುಷೇಯತ್ವವನ್ನೂ ಸಾಧನೆ ಮಾಡಿದ್ದಾರೆ. ವೇದಕರ್ತೃತ್ವೇನ ಈಶ್ವರ ಸಿದ್ಧಿ ಅವರ ಉದ್ದೇಶ.

ಇನ್ನೊಬ್ಬ ನೈಯಾಯಿಕ ಮೂರ್ಧನ್ಯರು ಗಂಗೇಶೋಪಾಧ್ಯಾಯರು. ಅವರು ನವೀನ ತರ್ಕದ ಪ್ರವರ್ತಕರು. ಅವರ ಕೃತಿ ತತ್ತ್ವಚಿಂತಾಮಣಿ. ಆ ಗ್ರಂಥದ ಶಬ್ದಖಂಡದಲ್ಲಿ ಅನೇಕ ಅನುಮಾನಗಳಿಂದ ವೇದಪೌರುಷೇಯತ್ವವನ್ನು ಸಾಧಿಸಲಾಗಿದೆ. ಹೀಗೆ, ಪ್ರಾಚೀನ–ನವೀನ ನೈಯಾಯಿಕರು ಹೇಳಿರುವ ವೇದಪೌರುಷೇಯತ್ವ–ಸಾಧಕವಾದ ಅನುಮಾನಗಳನ್ನು ಈ ಪ್ರಕರಣದಲ್ಲಿ ನಿರಾಕರಿಸಲಾಗಿದೆ. ಇದಲ್ಲದೆ, ಮಣಿಗ್ರಂಥದ ವ್ಯಾಖ್ಯಾನಗಳಲ್ಲಿ ನರಹರಿಮಿಶ್ರ, ರುಚಿದತ್ತಮಿಶ್ರರು ಪರಿಷ್ಕರಿಸಿರುವ ಅನುಮಾನಗಳ ವಿಮರ್ಶೆಯನ್ನೂ ಮಾಡಲಾಗಿದೆ. ಒಟ್ಟು ಪ್ರಧಾನವಾಗಿ 12 ಅನುಮಾನಗಳನ್ನು ಈ ಪ್ರಕರಣದಲ್ಲಿ ನಿರಾಕರಿಸಲಾಗಿದೆ. ಅವುಗಳಲ್ಲಿ 7 ಅನುಮಾನಗಳು ಉದಯನೋಕ್ತಗಳು. ನಾಲ್ಕು ಅನುಮಾನಗಳು ಮಣಿಕಾರೋಕ್ತಗಳು. ಒಂದು ಅನುಮಾನ ಅನುಲ್ಲಿಖಿತಕರ್ತೃಕ. ಇನ್ನೊಂದು ಅನುಮಾನ ಮಣ್ಯುಕ್ತ ಪಕ್ಷವನ್ನೇ ಪರಿಗ್ರಹಿಸಿ ಸಾಧ್ಯವನ್ನು ಬದಲಿಸಿರುವ ನರಹರಿಮಿಶ್ರರ ಅನುಮಾನ. ಈ ಎಲ್ಲ ವಿವರಗಳನ್ನು ನೀಡಿದವರು ರಾಯರು. ಇದು ರಾಯರು ರಚಿಸಿರುವ ನ್ಯಾಯದೀಪದ ವೈಶಿಷ್ಟ್ಯ. ಪ್ರಾಯಃ ಕೈಬರಹದಲ್ಲಿದ್ದ ನ್ಯಾಯಪುಸ್ತಕಗಳನ್ನು ವ್ಯಾಖ್ಯಾನಸಹಿತ ಅಧ್ಯಯನ ಮಾಡಿ ಅಧ್ಯಯನಶೀಲರಿಗೆ ನೀಡಿದ ಮಾಹಿತಿಗಳಿವು. ಕೆಲವು ಪ್ರಮುಖ ಅನುಮಾನಗಳ ನಿರಾಕರಣೆಯ ಸಾರವನ್ನು ಕೊಡಲಾಗಿದೆ.

**ಅನುಮಾನ 1**—ಕುಸುಮಾಂಜಲಿ ಗ್ರಂಥದ ಪಂಚಮಸ್ತಬಕದಲ್ಲಿ ಉದಯನಾಚಾರ್ಯರು ಹೇಳಿರುವ ಪೌರುಷೇಯತ್ವಸಾಧಕವಾದ ಅನುಮಾನವನ್ನು ಮೊದಲು ಉಲ್ಲೇಖಿಸಿ ವಿಮರ್ಶೆ ಮಾಡಲಾಗಿದೆ. ''ಪದಾತ್ ಪ್ರತ್ಯಯತಃ ಶ್ರುತೇಃ'' ಎಂಬ ಕಾರಿಕೆಯಂತೆ ಶ್ರುತಿಯೂ ಈಶ್ವರನನ್ನು ಸಾಧನೆ ಮಾಡುವ ಒಂದು ಹೇತು. ಅದನ್ನು ಹೀಗೆ ಪ್ರಯೋಗಿಸಲಾಗಿದೆ— 'ವೇದಃ ಪೌರುಷೇಯಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ಎಂದು. ಟೀಕಾಚಾರ್ಯರು ಈ ಅನುಮಾನವನ್ನು ತತ್ತ್ವನಿರ್ಣಯ ಟೀಕಾದಲ್ಲಿ ''ತಸ್ಯ ಅಕರ್ತೃಕತ್ವಪ್ರಸಿದ್ಧ್ಯಭಾವಾತ್'' ಎಂದು ಅಪ್ರಯೋಜಕತ್ವದೋಷವನ್ನು ಹೇಳಿ ನಿರಾಕರಿಸಿದ್ದಾರೆ. ಲೌಕಿಕವಾಕ್ಯವು ಅಕರ್ತೃಕ ಎಂದು ಪ್ರಸಿದ್ಧಿ ಇಲ್ಲದಿರುವುದರಿಂದ ಸಕರ್ತೃಕವಾದರೂ ವೇದವು ಅಕರ್ತೃಕ ಎಂದು ಪ್ರಸಿದ್ಧವಾದುದರಿಂದ ಅದು ಸಕರ್ತೃಕವಲ್ಲ ಎಂದು ಟೀಕಾಕೃತ್ಪಾದರ ಅಭಿಪ್ರಾಯ.

ಶ್ರೀಮದ್ವ್ಯಾಸತೀರ್ಥರು ಇನ್ನೊಂದು ರೀತಿಯಲ್ಲಿ ಅಪ್ರಯೋಜಕತ್ವವನ್ನು ಹೇಳಿದ್ದಾರೆ—ವಾಕ್ಯವೆನಿಸಬೇಕಾದರೆ ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಈ ಮೂರು ಗುಣಗಳುಳ್ಳ ಪದಗಳ ಜೋಡಣೆ ಇರಬೇಕು. ಅನಾಕಾಂಕ್ಷಿತವಾದ 'ಗೌರಶ್ವಃ ಪುರುಷೋ ಹಸ್ತೀ' ಇತ್ಯಾದಿ ಪದಸಮೂಹವು ವಾಕ್ಯವಾಗುವುದಿಲ್ಲ. ಅಥವಾ, 'ವಹ್ನಿನಾ ಸಿಂಚತಿ' ಎಂಬುದೂ ವಾಕ್ಯವಲ್ಲ. ''ದೇವದತ್ತಃ ಪಚತಿ'' ಇದು ವಾಕ್ಯವಾಗುತ್ತದೆ. ಹೀಗೆ, ವಾಕ್ಯತ್ವಕ್ಕೆ ಪ್ರಯೋಜಕವಾದುದು ಆಕಾಂಕ್ಷಾದಿಗಳೇ ಹೊರತು ಸಕರ್ತೃಕತ್ವವಲ್ಲ. ವ್ಯವಹಾರದಲ್ಲಿರುವ ಎಲ್ಲಾ ವಾಕ್ಯಗಳೂ ಸಕರ್ತೃಕಗಳೇ ಆಗಿದ್ದರೂ ಸಾಹಚರ್ಯಮಾತ್ರೇಣ ಅವೆರಡಕ್ಕೆ ಪ್ರಯೋಜ್ಯಪ್ರಯೋಜಕಭಾವ ಸಿದ್ಧವಾಗುವುದಿಲ್ಲ. ಆದ್ದರಿಂದ ಉಕ್ತಾನುಮಾನ ಅಪ್ರಯೋಜಕ.

**ಅನುಮಾನ–2.** ಇದು ಮಣಿಕಾರ ಪ್ರಯೋಗಿಸಿರುವ ಪೌರುಷೇಯತ್ವಸಾಧಕವಾದ ಅನುಮಾನ–ವೇದಃ ಸಜಾತೀಯೋಚ್ಚಾರಣಮನಪೇಕ್ಷ್ಯೋಚ್ಚರಿತಜಾತೀಯಃ, ವಾಕ್ಯತ್ವಾತ್. ಈ ಅನುಮಾನದ ಸಾಧ್ಯವು ಪುರುಷನಿರ್ಮಿತತ್ವದ ವಿವರಣೆಯನ್ನು ಕೊಡುವ ಮೂಲಕ ವೇದಕ್ಕೆ ಪುರುಷಕೃತತ್ವವನ್ನು ಸಾಧಿಸಿದೆ. ವೇದವ್ಯಾಸರು ರಚಿಸಿರುವ ಮಹಾಭಾರತವನ್ನು ನಾವು ಓದುತ್ತೇವೆ. ಗುರುಗಳು ಹೇಳಿಕೊಟ್ಟಂತೆ ಅವುಗಳನ್ನು ನಾವು ಉಚ್ಚರಿಸುತ್ತೇವೆ. ಆದರೆ, ಅದನ್ನು ರಚಿಸಿರುವ ವ್ಯಾಸರು ತಾವೇ ಮೊದಲಾಗಿ ಅದನ್ನು ಉಚ್ಚಾರಣೆ ಮಾಡುತ್ತಾರೆ. ಮತ್ತೊಬ್ಬರ ಉಚ್ಚಾರಣೆಯ ಅನುಕರಣೆ ಅವರದಲ್ಲ. ಹೀಗೆ ಗ್ರಂಥ ರಚಿಸುವ ವ್ಯಕ್ತಿಯು ಆ ಗ್ರಂಥದ ಉಚ್ಚಾರಣೆಯನ್ನು ಸ್ವತಂತ್ರವಾಗಿ ಮಾಡುತ್ತಾನೆ. ಇಷ್ಟೇ ಹೇಳಿದರೆ ವೇದಕ್ಕೆ ಪೌರುಷೇಯತ್ವವು ಸಿದ್ಧವಾಗುವುದಿಲ್ಲ. ವೇದವ್ಯಾಸರು ಉಚ್ಚರಿಸಿದ ಮಹಾಭಾರತವೇ ಬೇರೆ ನಾವು ಇಂದು ಓದುತ್ತಿರುವ ಮಹಾಭಾರತವೇ ಬೇರೆ. ಕ್ರಮಬದ್ಧ ಶಬ್ದರಾಶಿಯೇ ವೇದ, ಮಹಾಭಾರತಾದಿ ಗ್ರಂಥಗಳು. ನೈಯಾಯಿಕಮತದಂತೆ ಶಬ್ದಗಳು ಅನಿತ್ಯಗಳು. ಮೀಮಾಂಸಕರು ಮತ್ತು ದ್ವೈತಸಿದ್ಧಾಂತದಂತೆ ವರ್ಣಗಳು ನಿತ್ಯಗಳಾದರೂ ಅವುಗಳ ಕ್ರಮ ಬುದ್ಧಿಕೃತವಾದುದರಿಂದ ಅನಿತ್ಯ. ಹೀಗಾಗಿ ಕ್ರಮವಿಶಿಷ್ಟವಾದ ಗ್ರಂಥವೂ ಅನಿತ್ಯ. ಅಲ್ಲಿಗೆ ವೇದವ್ಯಾಸರು ರಚಿಸಿದ ಮಹಾಭಾರತ ಕೂಡಲೇ ನಾಶವಾಗಿದೆ. ಇಂದು ನಾವು ಓದುವ ಭಾರತ ಅದೇ ಭಾರತವಲ್ಲ. ಈ ಭಾರತವನ್ನು ವ್ಯಾಸರು ಉಚ್ಚಾರಮಾಡಿಯೇ ಇಲ್ಲ. ನಾವು ಉಚ್ಚರಿಸುವ ಭಾರತ ನಮ್ಮದೇ ಉಚ್ಚಾರಣೆಯಿಂದ ಜನ್ಯವಾಗಿದೆ. ನಮ್ಮ ಉಚ್ಚಾರ ಗುರುಗಳ ಉಚ್ಚಾರ ಸಾಪೇಕ್ಷವಾದರೂ ಸಜಾತೀಯೋಚ್ಚಾರಣೆಯನ್ನು ಅಪೇಕ್ಷಿಸದೆ ವ್ಯಾಸರು ಉಚ್ಚರಿಸಿದ ಭಾರತ ಇದಲ್ಲ. ಆದ್ದರಿಂದ ಆಧುನಿಕಭಾರತದಲ್ಲಿ ಇಂತಹ ವ್ಯಾಸಕೃತತ್ವ ಬರುವುದಿಲ್ಲ. ಅದಕ್ಕಾಗಿ ''ಉಚ್ಚರಿತ'' ಎಂದಿಷ್ಟೇ ಹೇಳದೆ ಉಚ್ಚರಿತ ಜಾತೀಯ, ಎಂದು ಸಾಧಿಸಲಾಗಿದೆ. ಆಧುನಿಕ ಭಾರತವೂ ವ್ಯಾಸೋಚ್ಚರಿತ ಜಾತೀಯವಾಗಿದೆ. ಆದ್ದರಿಂದ ವ್ಯಾಸಕೃತವಾಗಿದೆ. ಇದರಂತೆ ಮೂಲವೇದವೂ ಈಶ್ವರಕೃತವಾಗಿದೆ. ಆಧುನಿಕವೇದ ತಜ್ಜಾತೀಯವಾಗಿದೆ. ಹೀಗೆ ಅತಿಬುದ್ಧಿವಂತಿಗೆಯಿಂದ ಈ ಅನುಮಾನವನ್ನು ಪ್ರಯೋಗಿಸಲಾಗಿದೆ.

ಇಷ್ಟೇ ಚತುರತೆಯಿಂದ ಇದನ್ನು ತರ್ಕತಾಂಡವದಲ್ಲಿ ನಿರಾಕರಿಸಲಾಗಿದೆ. ವೇದವು ಈಶ್ವರ ರಚಿತವಲ್ಲವೆಂದು ಹೇಳಿಯೂ ಈ ಸಾಧ್ಯವನ್ನು ವೇದದಲ್ಲಿ ಸಮನ್ವಯಮಾಡಬಹುದು. ಈಶ್ವರನು ಅನಾದಿಕಾಲದಿಂದ ವೇದವನ್ನು ಉಚ್ಚರಿಸುತ್ತಲೇ ಬಂದಿದ್ದರೂ ಈ ಕಾಲದ ಅವನ ವೇದೋಚ್ಚಾರಣೆ ಅವನದೇ ಆಗಿರುವ ಪೂರ್ವೋಚ್ಚಾರಣೆ ಅಥವಾ ಮತ್ತೊಬ್ಬರ ಉಚ್ಚಾರಣೆಯ ಸಾಪೇಕ್ಷವಲ್ಲ. ಪ್ರತಿಕಲ್ಪದಲ್ಲೂ ತನ್ನ ಉಚ್ಚಾರಣೆಯನ್ನೂ ಅಪೇಕ್ಷಿಸದೆ ಸ್ವತಂತ್ರವಾಗಿ ವೇದೋಚ್ಚಾರಣೆಯನ್ನು ಅವನು ಮಾಡುತ್ತಾನೆ. ಹೀಗೆ ವೇದಾಪೌರುಷೇಯತ್ವವನ್ನು ಅಂಗೀಕರಿಸುವವರಿಗೂ ಈ ಸಾಧ್ಯವು ಸಮ್ಮತವಾಗಿದೆ. ಅನುಮಾನಕ್ಕೆ ಸಿದ್ಧಸಾಧನತಾದೋಷ.

2. ಅಷ್ಟೇ ಅಲ್ಲ, ಅನುಮಾನವು ಅಪ್ರಯೋಜಕವೂ ಆಗಿದೆ. ವಾಕ್ಯವು ವಾಕ್ಯವೆನಿಸಬೇಕಾದರೆ ಅದು ಯಾರಿಂದಲಾದರೂ ಉಚ್ಚರಿತ ಅಥವಾ ಉಚ್ಚಾರಣಾ ಯೋಗ್ಯವಾಗಿದ್ದರೆ ಸಾಕು. ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತ ಏಕಾಗಬೇಕು?

ಇದೇ ಅನುಮಾನದ ರೂಪಾಂತರ ಮುಂದಿನ ಅನುಮಾನ. ಅದರಲ್ಲಿ ವೇದತ್ವವು ಪಕ್ಷ, ಸಜಾತೀಯೋಚ್ಚಾರಣಾನಪೇಕ್ಷೋಚ್ಚರಿತವೃತ್ತಿತ್ವಸಾಧ್ಯ. ಮಹಾಜನಪರಿಗ್ರಾಹ್ಯತಾವಚ್ಛೇದಕತ್ವೇ ಸತಿ ವಾಕ್ಯವೃತ್ತಿತ್ವಾತ್, ಎಂದು ಹೇತು.

**ರಾಯರು ತೋರಿದ ದಾರಿ**

ಈ ಹೇತು ಮಣಿಕಾರ ಪ್ರಯೋಗಿಸಿರುವ ಹೇತುವಲ್ಲ. ಮಣಿಕಾರನ ಹೇತು— 'ಪ್ರಮಾಣತಾವಚ್ಛೇದಕ-ವಾಕ್ಯಧರ್ಮತ್ವಾತ್' ಎಂದು. ಈ ಹೇತುವನ್ನು ಹೇಳದೆ ಇನ್ನಾವುದೋ ಹೇತುವನ್ನು ಹೇಳಿ ವ್ಯಾಸತೀರ್ಥರು 'ಇದು ಮಣಿಗ್ರಂಥದಲ್ಲಿ ಹೇಳಿದ ಅನುಮಾನ' ಎಂದಿದ್ದಾರೆ. ಇಲ್ಲಿ ನ್ಯಾಯದೀಪದ ಸಹಾಯವಿಲ್ಲದಿದ್ದರೆ ವ್ಯಾಸತೀರ್ಥರು ಅಸದನುವಾದಮಾಡಿದ್ದಾರೆಂಬ ಭ್ರಮೆಗೆ ನಾವು ಶರಣಾಗಬೇಕಿತ್ತು. ರಾಯರು, ಮಣ್ಯುಕ್ತಾನುಮಾನದಲ್ಲಿ 'ಪಕ್ಷಧರಮಿಶ್ರ' ಪರಿಷ್ಕರಿಸಿದ ಹೇತುವನ್ನು ತರ್ಕತಾಂಡವದಲ್ಲಿ ಉಲ್ಲೇಖಿಸಲಾಗಿದೆ, ಎಂಬ ವಿವರಣೆಯನ್ನು ಕೊಟ್ಟಿದ್ದಾರೆ. ಪಕ್ಷಧರನ ಮಣಿವ್ಯಾಖ್ಯಾನ ಈ ಭಾಗಕ್ಕೆ ಇದುವರೆಗೆ ಅಮುದ್ರಿತವಾಗಿದೆ. ಆದ್ದರಿಂದ ರಾಯರ ನ್ಯಾಯದೀಪವೇ ಇಲ್ಲಿ ದಾರಿದೀಪ.

**ಅನುಮಾನ-9.** ಉದಯನಾಚಾರ್ಯರು ವೇದವು ಪುರುಷಕೃತ ಎಂದು ಸಾಧಿಸಲು ವೇದದಲ್ಲೇ ಪ್ರಯೋಗಿಸಲಾದ 'ಅಹಂ' 'ತ್ವಂ' ಮುಂತಾದ ಶಬ್ದಗಳು ಹಾಗೂ ಸ್ತುತಿ-ನಿಂದಾಪರ ವಾದ ಅರ್ಥವಾದವಾಕ್ಯಗಳು ಇವುಗಳನ್ನು ಉಲ್ಲೇಖಿಸಿದ್ದಾರೆ. 'ಅಹಂ' ಎಂದರೆ ನಾನು. ನಾನು ಎಂದರೆ ಅಹಂ ಶಬ್ದವನ್ನು ಸ್ವತಂತ್ರವಾಗಿ ಪ್ರಯೋಗಿಸುವ ವ್ಯಕ್ತಿ. 'ರಾಮಃ ಅಹಂ ಚೋರಃ ಇತಿ ವದತಿ' ಎಂಬ ವಾಕ್ಯವನ್ನು ಕೃಷ್ಣನು ಹೇಳಿದರೆ 'ಅಹಂ' ಎಂದರೆ ಕೃಷ್ಣನಲ್ಲ, ರಾಮನೆ. ಇಂತಹ ವಿಶಿಷ್ಟ ಶಬ್ದಗಳು ವೇದದಲ್ಲಿ ಇರುವುದರಿಂದ ವೇದವು ಪೌರುಷೇಯ ಎಂದು ಉದಯನಾಚಾರ್ಯರ ವಾದ.

ಆದರೆ, ಹೀಗೆ ಹೇಳಿದರೆ, ವೇದಗತ ಪ್ರಾರ್ಥನಾಮಂತ್ರಗಳೆಲ್ಲ ವ್ಯರ್ಥವಾದಾವು. 'ಋತಂ

ಮೇ ಗೋಪಾಯ–ಕೇಳಿರುವ ವಿಷಯ ನನ್ನ ಧಾರಣೆಯಲ್ಲೇ ಉಳಿಯುವಂತೆ ಮಾಡು' ಎಂದು ವೇದವ್ಯಾಸರಲ್ಲಿ ಭಕ್ತ ಮಾಡುವ ಪ್ರಾರ್ಥನೆಯ ಮಂತ್ರ ಇದು. ಇದು ವೇದಮಂತ್ರವಾದುದರಿಂದ ಇದನ್ನು ರಚಿಸಿದವನು ಈಶ್ವರ. ಅವನೇ 'ಮೇ' ಎಂಬ ಅಸ್ಮಚ್ಛಬ್ದದಿಂದ ವಾಚ್ಯನಾದರೆ ಅದು ನಮ್ಮ ಪ್ರಾರ್ಥನೆ ಹೇಗಾದೀತು? ಆದ್ದರಿಂದ, ವೈದಿಕ ಮಂತ್ರಗಳನ್ನು ಯಾರು ಹೇಳುವರೋ ಅವರೇ ಅಹಮಾದಿಪದಗಳಿಂದ ವಾಚ್ಯರು. ''ಮಾಮುಪಾಸ್ವ' ಎಂಬ ವಾಕ್ಯದಲ್ಲಿ ಮಾತ್ರ 'ಮಾಂ' ಎಂದರೆ ಈಶ್ವರ. 'ಅಹಂ ರುದ್ರೇಭಿಃ' ಎಂಬ ಅಂಭೃಣೀ ಸೂಕ್ತದಲ್ಲಿ 'ಅಹಂ' ಎಂದರೆ ಲಕ್ಷ್ಮೀದೇವಿ. ಹೀಗೆ ವೇದವು ಅಪೌರುಷೇಯವಾದರೂ ಅದರಲ್ಲಿ ಅವರವರ ಅಭಿಪ್ರಾಯವನ್ನು ಸೇರಿಸಿ ಉಚ್ಚರಿಸಲಾಗುತ್ತದೆ. ಸಂದರ್ಭವನ್ನು ನೋಡಿಕೊಂಡು ಅದನ್ನು ತಿಳಿದುಕೊಳ್ಳಬೇಕು.

**ವೇದಾಪೌರುಷೇಯತ್ವವೆಂದರೆ**—ವೇದವು ಅಪೌರುಷೇಯವೆಂದರೆ 'ಅನಾದಿನಿತ್ಯ' ಎಂಬ ಅರ್ಥವನ್ನು ತರ್ಕತಾಂಡವದಲ್ಲಿ ಮಾಡಲಾಗಿಲ್ಲ. ವೈದಿಕ ವರ್ಣ–ಪದಾದಿಕ್ರಮಗಳು ಬೌದ್ಧಿಕವಾದುದರಿಂದ ಕೃತಕಗಳು, ಅನಿತ್ಯಗಳು. ಕೇವಲ ನಮ್ಮಿಂದ ಪಠಿತವಾದ ವೇದದಲ್ಲಿ ಮಾತ್ರವಲ್ಲದೆ ಈಶ್ವರ ಬುದ್ಧಿಸ್ಥವಾದ ವೇದದಲ್ಲೂ ಕ್ರಮ ಅನಿತ್ಯವೆಂದೇ ಇಲ್ಲಿ ಹೇಳಲಾಗಿದೆ— ''ತತ್ ಕ್ರಮೇಣೈವ'' ಇತ್ಯಾದಿ ಸ್ಮೃತ್ಯಾ ಅನುತ್ಪತ್ತಿಶ್ರುತೇಃ ಕ್ರಮಾನನ್ಯಥಾತ್ವಪರತ್ವೇ ಸ್ಥಿತೇ ಉತ್ಪತ್ತಿಶ್ರುತೇಃ('ಛಂದಾಂಸಿ ಜಜ್ಞಿರೇ') ತದವಿರೋಧಾಯ ಕ್ರಮೋತ್ಪತ್ತಿಪರತ್ವಸ್ಯೈವ ಉಚಿತತ್ವಾತ್ ॥'' (ಪು.139) 'ಛಂದಾಂಸಿ ಜಜ್ಞಿರೇ ತಸ್ಮಾತ್' ಎಂಬ ಶ್ರುತಿಯಲ್ಲಿ 'ಈಶ್ವರನಿಂದ ವೇದ ಹುಟ್ಟಿದೆ' ಎಂದು ಹೇಳಲಾಗಿದೆ. ಇಲ್ಲಿ ವೈದಿಕ ಕ್ರಮಕ್ಕೆ ಈಶ್ವರನು ಕಾರಣನಾದುದರಿಂದ ಕ್ರಮವಿಶಿಷ್ಟವಾದ ವರ್ಣರೂಪವಾದ ವೇದವು ಈಶ್ವರನಿಂದ ರಚಿಸಲ್ಪಟ್ಟಿದೆ, ಎಂಬ ಅರ್ಥವನ್ನು ಆ ಶ್ರುತಿಗೆ ಹೇಳಲಾಗಿದೆ.

ಪ್ರಕರಣದ ಕೊನೆಯಲ್ಲಿ 'ಅನಿತ್ಯತ್ವಂ ತು ಅತ್ಯಂತಾಯುಕ್ತಮ್' ಎಂಬ ವಾಕ್ಯವಿದೆ. ಇದರಿಂದ, ವೇದವು ಅನಿತ್ಯವಲ್ಲ ಎಂದು ಇಲ್ಲಿ ಹೇಳಲಾಗಿದೆ, ಎಂಬ ಅಭಿಪ್ರಾಯಕ್ಕೆ ಅವಕಾಶವಿದೆ. ಆದರೆ, ಈ ವಾಕ್ಯವು ಉದಯನಾಚಾರ್ಯರ ಅಭಿಪ್ರಾಯ ನಿರಾಸಕ್ಕಾಗಿ ಇದೆ. ಉದಯನಾಚಾರ್ಯರು ಪ್ರಲಯಕಾಲದಲ್ಲಿ ವೇದವು 'ಉತ್ಸನ್ನ'ವಾಗುವುದರಿಂದ ಅದು ಪ್ರವಾಹತಃ ನಿತ್ಯವೂ ಅಲ್ಲ, ಎಂದು ಕುಸುಮಾಂಜಲಿಯಲ್ಲಿ ಹೇಳಿದ್ದಾರೆ. ಅದರ ನಿರಾಸವನ್ನು ತರ್ಕತಾಂಡವದ ಈ ವಾಕ್ಯವು ಮಾಡುತ್ತಲಿದೆ. ರಾಯರು ಹಾಗೆಯೇ ಅವತರಣಿಕೆಯನ್ನು ನೀಡಿದ್ದಾರೆ— 'ಕುಸುಮಾಂಜಲೌ ಪ್ರಲಯೇ ವೇದಾನಾಮ್ ಉತ್ಸನ್ನತ್ವಮುಕ್ತಮ್ । ತದಯುಕ್ತಮಿತ್ಯಾಹ– ಅನಿತ್ಯತ್ವಮಿತಿ ॥'

ಆದ್ದರಿಂದಲೇ ಪರಿಹಾರಗ್ರಂಥ ಹೀಗಿದೆ— ''ನ ಚೇಶ್ವರಸ್ಯ ತಥಾವಿಧ-ಬುದ್ಧ್ಯುಪರಮಃ ಯುಜ್ಯತೇ । ತಸ್ಯ ಸರ್ವದಾ ಸರ್ವಜ್ಞತ್ವಾತ್''(ಪು.143) ಎಂದು.

ಹೀಗೆ ವೇದವು ಈಶ್ವರ ಕೃತವಾದರೂ ಈಶ್ವರ ಪ್ರಣೀತವಲ್ಲ. ತತ್‌ಪ್ರಣೀತವೆಂದರೆ 'ತೇನ

ಮಾನಾಂತರೇಣ ಅರ್ಥಮುಪಲಭ್ಯ ರಚಿತ'. ಇಂತಹ ರಚಿತತ್ವವು ವೇದದಲ್ಲಿ ಇಲ್ಲ. ತೇನ ಈಶ್ವರಾಧೀನೋತ್ಪತ್ತಿಕತ್ವಸ್ಯೈವೋಕ್ತ್ಯಾ ಮಾನಾಂತರೇಣಾರ್ಥಮುಪಲಭ್ಯ ರಚಿತತ್ವರೂಪಸ್ಯ ಪ್ರಣೀತತ್ವಸ್ಯಾಸಿದ್ಧೇಶ್ಚ। (ಪು.137). ಕ್ರಮವು ಈಶ್ವರಬುದ್ಧಿ ನಿಮಿತ್ತಕವಾದ ಮಾತ್ರಕ್ಕೆ ವೇದವು ಈಶ್ವರ ಪ್ರಣೀತವಾಗುವುದಾದಲ್ಲಿ ಅಸ್ಮದಾದಿಪಠಿತ ವೇದವು ಅಸ್ಮತ್‌ಪ್ರಣೀತವಾಗಬೇಕಾದೀತು, ಎಂದೂ ಇಲ್ಲಿ ಆಪಾದಿಸಲಾಗಿದೆ. (ಪು.137)

ಇದರಂತೆ 'ಸಜಾತೀಯೋಚ್ಚಾರಣಮನಪೇಕ್ಷ್ಯೋಚ್ಚರಿತತ್ವವೂ' ವೇದದಲ್ಲಿ ಇದೆ. ಸ್ವತಂತ್ರನಾದ ಈಶ್ವರ ತನ್ನದೇ ಉಚ್ಚಾರಣೆಯನ್ನೂ ಅಪೇಕ್ಷಿಸುವುದಿಲ್ಲವಾದಕಾರಣ ತಾದೃಶ ಉಚ್ಚರಿತತ್ವವೇ ವೇದದಲ್ಲಿ ಇದೆ. (ಪು.93) ಆದ್ದರಿಂದ ತಥಾ–ಉಚ್ಚರಿತತ್ವಾಭಾವವೂ ಅಪೌರುಷೇಯತ್ವವಲ್ಲ. 'ಸರ್ವದಾಪಿ ಏಕಪ್ರಕಾರಾನುಪೂರ್ವೀಕತ್ವವೇ' ಅಪೌರುಷೇಯತ್ವ. 'ಮನ್ಮತೇ ಸಜಾತೀಯೋ–ಚ್ಚಾರಣಾನಪೇಕ್ಷಸ್ಯ ಈಶ್ವರಸ್ಯ ಅರ್ಥಪ್ರತ್ಯಾಯನೇಚ್ಛಯಾ ಉಚ್ಚರಣೇಽಪಿ ಸರ್ವದಾಪಿ ಏಕಪ್ರಕಾರಾನುಪೂರ್ವಿಕತ್ವ–ರೂಪಾಪೌರುಷೇಯತ್ವಾಹಾನೇಶ್ಚ' (ತರ್ಕತಾಂಡವ. ಪು.129)

ಇದನ್ನು ಪರಮತ ನಿರಾಸ ಸಂದರ್ಭದಲ್ಲಿ ಬಂದಿರುವ ಅಭ್ಯುಪಗಮವಾದ, ಎನ್ನುವಂತೆಯೂ ಇಲ್ಲ. ಇದಕ್ಕಿಂತ ಹಿಂದಿನ ಪ್ರಕರಣದಲ್ಲೂ 'ನಿಯತಾನುಪೂರ್ವೀಕತ್ವರೂಪ–ಅಪೌರಷೇಯತ್ವಸಿದ್ಧಿಃ'' (ಪು.249) ಎಂದೇ ಇದೆ. ಅಲ್ಲದೆ, ಆ ಪ್ರಕರಣದಲ್ಲಿ ಮೂರು ವಿಧವಾದ ಅಪೌರುಷೇಯತ್ವವನ್ನು ಮೂರು ಅನುಮಾನಗಳಿಂದ ಸಾಧಿಸಲಾಗಿದೆ—

1. ಕಾಲಭೇದೇನಾನಿಯತಾನುಪೂರ್ವೀಕತ್ವಾಭಾವ. (ಪು.91)

2. ಸ್ವಪ್ರತಿಪಾದ್ಯಗೋಚರ ಜ್ಞಾನತ್ವಾವಚ್ಛಿನ್ನಕಾರಣತಾ ನಿರೂಪಿತಕಾರ್ಯತಾನಾಶ್ರಯತ್ವ. (ಪು.88)

3. ಸ್ವಪ್ರತಿಪಾದ್ಯಗೋಚರ–ಯಥಾರ್ಥಜ್ಞಾನತ್ವಾವಚ್ಛಿನ್ನ ಕಾರಣತಾ ನಿರೂಪಿತ ಕಾರ್ಯತಾ–ನಾಶ್ರಯತ್ವ. (ಪು.105)

ಈ ಮೂರೂ ವಿಧದ ಅಪೌರುಷೇಯತ್ವಗಳೂ ಅನಾದಿ ನಿತ್ಯತ್ವರೂಪಗಳಲ್ಲ. ಇದಲ್ಲದೆ, 'ವೇದಸ್ಯಾನಾದಿತ್ವರೂಪಮ್ ಅಪೌರುಷೇಯತ್ವಂ ಬಾಧಿತಂ, ಸಿದ್ಧಾಂತವಿರುದ್ಧಂ ಚ' (246) ಎಂದು ಸ್ಪಷ್ಟವಾಗಿ ಕೂಟಸ್ಥ–ನಿತ್ಯತ್ವರೂಪವಾದ ಅಪೌರುಷೇಯತ್ವವು ಸಿದ್ಧಾಂತವಿರುದ್ಧವೆನ್ನಲಾಗಿದೆ.

ಆದ್ದರಿಂದ ಶ್ರೀಮದ್ವ್ಯಾಸರಾಜರು ಸ್ವರೂಪತಃ ಆದ್ಯಂತ–ಶೂನ್ಯತ್ವರೂಪವಾದ ಅಪೌರುಷೇಯತ್ವವನ್ನು ಇಲ್ಲಿ ಹೇಳಿಲ್ಲ, ಅಷ್ಟೇ ಅಲ್ಲ, ಅದನ್ನು ನಿರಾಕರಿಸಿದ್ದಾರೆ. ಕಾಲಬೇದೇನ ಅನಿಯತಾನುಪೂರ್ವಿಕತ್ವಾ ಭಾವವೇ ಸಿದ್ಧಾಂತಾಭಿಮತವಾದ ಅಪೌರುಷೇಯತ್ವ ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

■

श्रीमद्व्यासराज विरचिते तर्कताण्डवे

# ईश्वरवादः

## ಅವತಾರಿಕೆ

शास्त्रयोनित्वादिति ब्रह्मसूत्राभिमतम् ईश्वरस्यानानुमानिकत्वं साधयितुमाह—**यदुक्तमिति ।**

"ಶಾಸ್ತ್ರಯೋನಿತ್ವಾತ್' (1-1-3) ಎಂಬ ಸೂತ್ರದಲ್ಲಿ ಬ್ರಹ್ಮನು ಶಾಸ್ತ್ರೈಕಸಮಧಿಗಮ್ಯ, ಅನುಮಾನದಿಂದ ಅವನನ್ನು ತಿಳಿಯಲಾಗದು, ಎಂದು ಹೇಳಲಾಗಿದೆ. ಅಲ್ಲಿ ಹೇಳಲಾಗಿರುವ ಅನಾನುಮಾನಿಕತ್ವವನ್ನು ಈ ಪ್ರಕರಣದಲ್ಲಿ ಸಾಧಿಸಲಾಗಿದೆ.

**ननु यदुक्तमीश्वरस्य सार्वज्ञ्यादिकमप्रामाणिकमेव बहु कल्प्यमिति तन्न । तस्य धर्मिग्राहक–मानसिद्धत्वात् ।।**

ವೇದಾಪೌರುಷೇಯತ್ವಪ್ರಕರಣದಲ್ಲಿ ವೇದಕ್ಕೆ ಈಶ್ವರಪ್ರಣೀತತ್ವವನ್ನು ಅಂಗೀಕರಿಸಿದರೆ ಅವನಿಗೆ ಅಪ್ರಾಮಾಣಿಕಗಳಾದ ಸರ್ವಜ್ಞತ್ವಾದಿ ಅನೇಕ ಧರ್ಮಗಳನ್ನು ಕಲ್ಪಿಸಬೇಕಾಗುತ್ತದೆ, ಎಂದು ಹೇಳಲಾಗಿದೆ. ಹಾಗೇನೂ ಇಲ್ಲ. ಸರ್ವಜ್ಞತ್ವಾದಿಧರ್ಮಗಳು ಈಶ್ವರಸಾಧಕವಾದ ಪ್ರಮಾಣಗಳಿಂದಲೇ ಸಿದ್ಧವಾಗುತ್ತವೆ. ಈಶ್ವರ ಸಿದ್ಧವಾಗುವಾಗಲೇ ಅಂತಹ ಧರ್ಮಗಳಿಂದ ವಿಶಿಷ್ಟನಾಗಿಯೇ ಸಿದ್ಧನಾಗುತ್ತಾನೆ.

## ನ್ಯಾಯದೀಪ

**उक्तमिति ।।** वेदापौरुषेयत्वानुमानोक्तिप्रस्ताव इत्यर्थः । **तस्येति ।** सार्वज्ञ्यादेरीश्वररूपधर्मिग्राहकमानेन सिद्धेरित्यर्थः । तेन सार्वज्ञ्यमात्र-सिद्धावपि तेनैव विप्रलम्भाद्यभावसिद्धेरग्रे व्यक्तत्वादेवमुक्तिरिति ज्ञेयम् ।

ಈಶ್ವರಸಾಧಕಾನುಮಾನದಿಂದ ಸರ್ವಜ್ಞತ್ವಮಾತ್ರ ಸಿದ್ಧವಾಗುತ್ತದೆ. ಆದರಿಂದಾಗಿ

ವಿಪ್ರಲಂಭಾದ್ಯಭಾವಾದಿಗಳೂ ಸಿದ್ಧವಾಗುವುದರಿಂದ ಮೂಲದಲ್ಲಿ ಅವುಗಳನ್ನೂ ಆದಿಪದದಿಂದ ಸಂಗ್ರಹಿಸಿ 'ತಸ್ಯ...ಸಿದ್ಧತ್ವಾತ್' ಎಂದು ಹೇಳಲಾಗಿದೆ.

## ಅವತಾರಿಕೆ

तत्र कुसुमाञ्जलौ पञ्चमे परिच्छेदे—

''कार्यायोजनधृत्यादेः पदात् प्रत्ययतः श्रुतेः ।
वाक्यात् सङ्ख्याविशेषाच्च साध्यो विश्वकृदव्ययः'' ।।

इतीश्वरे धर्मिण्यनेकमानान्युक्तानि । तत्र कार्यत्वरूपं मानमेकं मणौ प्रपञ्चितम् । तत्तावदनुवदति—**अदृष्टेति** ।

ಕುಸುಮಾಂಜಲಿ ಗ್ರಂಥದ ಪಂಚಮಸ್ತಬಕದಲ್ಲಿ ಈಶ್ವರಸಾಧಕಗಳಾದ ಹೇತುಗಳನ್ನು ಹೀಗೆ ಸಂಗ್ರಹಿಸಲಾಗಿದೆ—(1)ಕಾರ್ಯತ್ವ (2)ಸರ್ಗಾದ್ಯಕಾಲೀನ ಪರಮಾಣುಕ್ರಿಯಾ (3) ಭಾರವಾದ ಗ್ರಹ–ನಕ್ಷತ್ರಾದಿಗಳ ಪತನಾಭಾವ (4) ಪದ್ಯತೇ ಅನೇನೇತಿ ಪದಂ–ಗಮ್ಯತೇ ವ್ಯವಹಾರಾಂಗಂ ಅರ್ಥಃ ಅನೇನೇತಿ=ವೃದ್ಧವ್ಯವಹಾರ. (5)ಪ್ರತ್ಯಯ=ಸಮಾಶ್ವಾಸ ವಿಷಯವಾದ ಪ್ರಾಮಾಣ್ಯ. (6) ವೇದ (7)ವೇದವಾಕ್ಯ. (ಮೊದಲನೆಯದು ವೇದಪಕ್ಷಕ ವ್ಯತಿರೇಕ್ಯನುಮಾನ, ಎರಡನೆಯದು ಅನ್ವಯಾನುಮಾನ) (8) ಸರ್ಗಾದ್ಯಕಾಲೀನ ಪರಮಾಣುಗತ ಸಂಖ್ಯಾವಿಶೇಷ.

ಇವುಗಳಲ್ಲಿ ಕಾರ್ಯತ್ವರೂಪವಾದ ಒಂದು ಹೇತುವನ್ನು ಮಣಿಗ್ರಂಥದಲ್ಲಿ ಸಮರ್ಥಿಸಲಾಗಿದೆ. ಅದನ್ನು ಮೂಲದಲ್ಲಿ ಅನುವಾದ ಮಾಡಲಾಗಿದೆ.

**तथाहि । अदृष्टाद्वारक–स्वोपादानगोचर–जन्यकृतिजन्यभिन्नानि समवेतानि जन्यानि, समवेतपदस्थाने भावपदं वा प्रयोज्यम् । स्वजन्यादृष्टप्रागभाव–व्याप्यप्रागभावप्रतियोगिभिन्नो–पादानगोचरापरोक्ष-ज्ञान–चिकीर्षाकृतिमज्जन्यानि वा । स्वजनकादृष्टोत्तरोपादाना-परोक्षज्ञान–चिकीर्षाकृतिमज्जन्यानि वा । अपरोक्षज्ञानचिकीर्षाप्रयत्न-विषयीभवदुपादानानि वा । समवेतत्वे सति प्रागभावप्रतियोगित्वात् भावकार्यत्वाद्वा । घटवत् ।।**

**ಪಕ್ಷದ ಅರ್ಥತಃ ಅನುವಾದ–** ಸ್ವ ಎಂದರೆ ಪ್ರಕೃತ ವಿವಕ್ಷಿತಕಾರ್ಯ. ಉದಾಹರಣೆಗೆ ಘಟ. ಅದಕ್ಕೆ ಉಪಾದಾನವಾದುದು ಕಪಾಲ. ತದ್ವಿಷಯಕವಾದುದು ಕುಲಾಲಕೃತಿ. ಅದು ಜನ್ಯಕೃತಿ.

ಆದರಿಂದ, ಅದೃಷ್ಟವನ್ನು ಅದ್ವಾರೀಕೃತ್ಯ ಸಾಕ್ಷಾತ್ತಾಗಿ ಜನ್ಯವಾದುದು ಘಟ. ತದ್ಭಿನ್ನವಾದ, ಸಮವೇತವಾದ ಜನ್ಯವೆಂದರೆ ಅಂಕುರ–ಭೂ–ಭೂಧರಾದಿಗಳು. ಅವುಗಳು ಜನ್ಯವಾದ ಜೀವೀಯ ಕೃತಿಗಳಿಂದ ಸಾಕ್ಷಾತ್ ಜನ್ಯಗಳಲ್ಲ. ಅದರಂತೆ, ಅವುಗಳು ಸ್ವಾವಯವದಲ್ಲಿ ಸಮವೇತವೂ ಆಗಿವೆ, ಜನ್ಯವೂ ಆಗಿವೆ. ಸಮವೇತಪದವನ್ನು ಧ್ವಂಸರೂಪವಾದ ಅಭಾವವನ್ನು ಪಕ್ಷದಿಂದ ಪ್ರತ್ಯೇಕ ಗೊಳಿಸುವುದಕ್ಕಾಗಿ ಕೊಡಲಾಗಿದೆ. ಸಮವೇತ ಪದದ ಬದಲು ಭಾವಪದವನ್ನು ಕೊಟ್ಟಾಗಲೂ ಈ ಉದ್ದೇಶ ಸಿದ್ಧವಾಗುತ್ತದೆ. ಆದ್ದರಿಂದ ಭಾವ ಅಥವಾ ಸಮವೇತಪದವನ್ನು ಪಕ್ಷದಲ್ಲಿ ಸೇರಿಸಬೇಕು.

**ಸಾಧ್ಯದ ಅರ್ಥವಿವರಣೆ**–ಕರ್ತೃಜನ್ಯತ್ವವು ಫಲಿತಸಾಧ್ಯ. ಕರ್ತೃ ಎಂದರೆ ಉಪಾದಾನ ವಿಷಯಕ–ಅಪರೋಕ್ಷಜ್ಞಾನ–ಚಿಕೀರ್ಷಾ(ಕಾರ್ಯವನ್ನು ಮಾಡುವ ಇಚ್ಛೆ) ಮತ್ತು ಪ್ರಯತ್ನ ಈ ಮೂರು ಗುಣಗಳಿರುವವನು. ಭೂ–ಭೂಧರಾದಿಗಳ ಉಪಾದಾನವನ್ನು ತಿಳಿದವನು ಈಶ್ವರ. ಆದ್ದರಿಂದ ತತ್ಕರ್ತೃತ್ವೇನ ಈಶ್ವರ ಸಿದ್ಧನಾಗುತ್ತಾನೆ, ಎಂದು ಈ ಅನುಮಾನದ ಉದ್ದೇಶ.

ಆದರೆ, ಈ ಪ್ರಪಂಚವನ್ನು ಅನುಭವಿಸುವವರು ಸಾವಿರಾರು ಚೇತನರು. ಅವರ ಅದೃಷ್ಟವೂ ಈ ಪ್ರಪಂಚದ ಸೃಷ್ಟಿಗೆ ಕಾರಣ. ಆ ಅದೃಷ್ಟ ಹುಟ್ಟುವುದು ಯಾಗಾದಿ ಸತ್ಕರ್ಮಗಳಿಂದ. ಅದನ್ನು ಜೀವನು ಮಾಡಬೇಕಾದರೆ ಹವಿರಾದಿ ವಿಷಯಕ–ಜ್ಞಾನ–ಚಿಕೀರ್ಷಾ–ಕೃತಿಗಳು ಜೀವನಿಗೆ ಇರಬೇಕು. (ಆ ಹವಿರಾದಿಗಳೂ ಸ್ವಗತರೂಪಾದಿಗಳಿಗೆ ಉಪಾದಾನಗಳಾಗಿವೆ.) ಆದರಿಂದ ಯಾಗ, ಯಾಗದಿಂದ ಅದೃಷ್ಟ, ಅದೃಷ್ಟದಿಂದ ಈ ಕಾರ್ಯಪ್ರಪಂಚ. ಹೀಗೆ ಪರಂಪರಯಾ ಜೀವನೂ ಈ ಪ್ರಪಂಚಕ್ಕೆ ಕರ್ತೃವಾಗಿದ್ದಾನೆ. ಆದ್ದರಿಂದ ಸಕರ್ತೃಕತ್ವವನ್ನು ಮಾತ್ರ ಸಾಧನೆ ಮಾಡಿದರೆ ಸಿದ್ಧಸಾಧನತಾ. ಅದರ ಪರಿಹಾರಕ್ಕಾಗಿ ಜ್ಞಾನ–ಚಿಕೀರ್ಷಾ–ಕೃತಿಗಳಲ್ಲಿ ಭಿನ್ನಾಂತ ವಿಶೇಷಣವನ್ನು ಕೊಡಬೇಕು. ಅದರ ಫಲಿತಾರ್ಥ–ಯಾಗಾದಿಕಾರಣವಾದ ಜ್ಞಾನ–ಚಿಕೀರ್ಷಾ–ಕೃತಿಗಳಿಗಿಂತ ಭಿನ್ನಗಳಾದ ಜ್ಞಾನ–ಚಿಕೀರ್ಷಾ–ಕೃತಿಗಳಿಂದ ಈ ಕಾರ್ಯಪ್ರಪಂಚವು ಹುಟ್ಟಿದೆ ಎಂದು.

ಆ ಫಲಿತಾರ್ಥದ ಲಾಭ ಹೀಗೆ– ಸ್ವ ಎಂದರೆ ಹವಿರಾದಿ ವಿಷಯಕ ಜ್ಞಾನಾದಿಗಳು. ತಜ್ಜನ್ಯವಾದುದು ಯಾಗದ ಮೂಲಕ ಅದೃಷ್ಟ. ಅದರ ಪ್ರಾಗಭಾವ ವ್ಯಾಪ್ಯವಾದ ಪ್ರಾಗಭಾವ ಎಂದರೆ ಅದಕ್ಕೆ ಯಾಗದ್ವಾರಾ ಕಾರಣವಾದ ಉಪಾದಾನಗೋಚರಜ್ಞಾನಾದಿಗಳ ಪ್ರಾಗಭಾವ. ಏಕೆಂದರೆ, ಅದೃಷ್ಟವು ಕಾರ್ಯ, ಯಾಗ–ವಿಷಯಕಜ್ಞಾನಾದಿಗಳು ಕಾರಣ. ಕಾರಣಪ್ರಾಗಭಾವವು ಕಾರ್ಯಪ್ರಾಗಭಾವಕ್ಕೆ ವ್ಯಾಪ್ಯ. ದಂಡಪ್ರಾಗಭಾವ ಇದ್ದಲ್ಲಿ ಘಟಪ್ರಾಗಭಾವ ಇರಲೇಬೇಕು. ಆದ್ದರಿಂದ ಯಾಗವಿಷಯಕ–ಅಪರೋಕ್ಷಜ್ಞಾನಾದಿಗಳ ಪ್ರಾಗಭಾವವು ಯಾಗಜನ್ಯವಾದ ಅದೃಷ್ಟದ ಪ್ರಾಗಭಾವಕ್ಕೆ ವ್ಯಾಪ್ಯವಾಗಿದೆ. ಅಂತಹ ಪ್ರಾಗಭಾವಕ್ಕೆ ಪ್ರತಿಯೋಗಿಗಳು ಜೀವರ ಜ್ಞಾನಾದಿಗಳು. ತದ್ಭಿನ್ನಜ್ಞಾನಾದಿಗಳು ಕಾರ್ಯಪ್ರಪಂಚದ ಉಪಾದಾನ ವಿಷಯಕವಾದ ಜ್ಞಾನಾದಿಗಳು. ತಾದೃಶಜ್ಞಾನಾದ್ಯಾಶ್ರಯನಾದ ವ್ಯಕ್ತಿಯಿಂದ ಜನ್ಯವಾಗಿದೆ, ಈ ಕಾರ್ಯಪ್ರಪಂಚ, ಎಂದು ಸಾಧ್ಯದ ಅಭಿಪ್ರಾಯ. ಅಂತಹನು ಈಶ್ವರನೇ ಆಗಬೇಕು, ಜೀವರಲ್ಲ. ಹೀಗೆ ಈಶ್ವರ ಸಿದ್ಧಿಯಾಗುತ್ತದೆ.

**2. ಎರಡನೆಯ ಸಾಧ್ಯದ ಅರ್ಥ**—(ಈ ಸಾಧ್ಯದ ಉಲ್ಲೇಖ ತರ್ಕತಾಂಡವದ ಮುದ್ರಿತಪುಸ್ತಕಗಳಲ್ಲಿ ಬಿಟ್ಟುಹೋಗಿದೆ. ನ್ಯಾಯದೀಪದಲ್ಲಿ ಅದರ ಸಮನ್ವಯ ಇದೆ. ತರ್ಕತಾಂಡವದಲ್ಲೂ ಮುಂದೆ "ಅಪರೋಕ್ಷಜ್ಞಾನ-ಚಿಕೀರ್ಷಾ..." ಇತ್ಯಾದಿ ಸಾಧ್ಯವನ್ನು ತೃತೀಯಸಾಧ್ಯ ಎಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಮುದ್ರಣದೋಷದಿಂದ ಅದು ಬಿಟ್ಟುಹೋಗಿದೆ. )

"ಸ್ವಜನಕಾದೃಷ್ಟೋತ್ತರೋಪಾದಾನಾಪರೋಕ್ಷಜ್ಞಾನ-ಚಿಕೀರ್ಷಾ-ಕೃತಿಮಜ್ಜನ್ಯಾನಿ" ಎಂದು ಸಾಧ್ಯ. ಸ್ವ ಎಂದರೆ ಕಾರ್ಯವಸ್ತುಗಳು. ತಜ್ಜನಕವಾದುದು ಜೀವಾದೃಷ್ಟ. ತದುತ್ತರಕ್ಷಣ ವೃತ್ತಿಯಾದುದು ಪ್ರಪಂಚೋಪಾದಾನಗೋಚರವಾದ ಜ್ಞಾನಾದಿಗಳು. ತದ್ವಾನ್ ಈಶ್ವರ. ಅವನಿಂದ ಜನ್ಯ ಎಂದರ್ಥ. ಈ ಪಕ್ಷದಲ್ಲಿ ಅದೃಷ್ಟದ್ವಾರಕವಾದ ಜೀವಕೃತಿಯನ್ನು ಅದೃಷ್ಟೋತ್ತರತ್ವ ವಿಶೇಷಣದಿಂದ ವ್ಯಾವೃತ್ತಿಗೊಳಿಸಲಾಗಿದೆ. ಜೀವನ ಕೃತಿಯು ಅದೃಷ್ಟಪೂರ್ವವೃತ್ತಿಯಾಗಿದೆ, ಉತ್ತರ ವೃತ್ತಿಯಲ್ಲ.

**3. ಮೂರನೆಯ ಸಾಧ್ಯದ ಅರ್ಥ**—ಅಪರೋಕ್ಷಜ್ಞಾನ-ಚಿಕೀರ್ಷಾ-ಕೃತಿಗಳಿಗೆ ವಿಷಯವಾದ ಉಪಾದಾನವುಳ್ಳದ್ದು ಕಾರ್ಯಪ್ರಪಂಚ, ಎಂದು. ಕಾರ್ಯಪ್ರಪಂಚದ ಉಪಾದಾನಗಳು ಅದರ ಕರ್ತೃವಿನ ಜ್ಞಾನೇಚ್ಛಾದಿಗಳಿಗೆ ವಿಷಯವಾಗಿವೆ, ಎಂದರ್ಥ. ಅಂತಹ ಉಪಾದಾನಗಳಿಂದ ಈ ಪ್ರಪಂಚವು ಜನ್ಯವಾಗಿದೆ. ಹೀಗೆ ಸಾಧನೆ ಮಾಡುವುದರಿಂದ ಉಪಾದಾನವಿಷಯಕ ಜ್ಞಾನಾದಿಗಳಿಗೆ ಆಶ್ರಯನಾಗಿ ಈಶ್ವರ ಸಿದ್ಧನಾಗುತ್ತಾನೆ.

**ಹೇತುವಿನ ಅರ್ಥ**—ಈ ಕಾರ್ಯಪ್ರಪಂಚವು ತನ್ನ ಅವಯವದಲ್ಲಿ ಸಮವೇತವಾಗಿದೆ ಹಾಗೂ ಪ್ರಾಗಭಾವ ಪ್ರತಿಯೋಗಿಯಾಗಿದೆ. ಈ ಹೇತುವಿನ ಮೊದಲ ಅಂಶ (ವಿಶೇಷಣಾಂಶ) ಸಮವೇತತ್ವೇ ಸತಿ, ಎಂದು. ಅಭಾವ ವ್ಯಾವೃತ್ತಿಗಾಗಿ ಆ ವಿಶೇಷಣ. ಭಾವತ್ವೇ ಸತಿ ಎಂದರೂ ಅಭಾವವ್ಯಾವೃತ್ತಿಯಾಗುತ್ತದೆ. ವಿಶೇಷ್ಯಾಂಶದ ಅರ್ಥ—ಕಾರ್ಯ ಎಂದು. ಪ್ರಾಗಭಾವಕ್ಕೆ ಪ್ರತಿಯೋಗಿಯಾದುದು ಕಾರ್ಯ. ಇವೆರಡನ್ನೂ ಸೇರಿಸಿದರೆ "ಭಾವಕಾರ್ಯತ್ವಾತ್" ಎಂದಾಗುತ್ತದೆ. ಇದೂ ಹೇತುವಾಗಬಹುದು.

**ದೃಷ್ಟಾಂತ**–ಘಟ. ಅದರಲ್ಲಿ ಭಾವಕಾರ್ಯತ್ವ ಇದೆ. ಅದು ಕುಲಾಲನ ಅಪರೋಕ್ಷ ಜ್ಞಾನಾದಿಗಳಿಂದ ಜನ್ಯವೂ ಆಗಿದೆ.

**अत्र जन्यानीत्यन्तं पक्षः। स्वजन्येत्यादीनि त्रीणि साध्यानीति विवेकः। पक्षे स्वपदं जन्येति निर्दिष्टवस्तुपरम्। अदृष्टाद्वारिका या स्वोपादानगोचरा साक्षादेव स्वोपादानगोचरा या जन्या कृतिः तज्जन्यानि घटादीनि तद्भिन्नानि, समवेतानि=समवायवृत्त्या स्थितानि पृथिव्यादीनीत्यर्थः ॥**

ಮೂಲದಲ್ಲಿ ಅನೂದಿತವಾದ ಅನುಮಾನದಲ್ಲಿ 'ಜನ್ಯಾನಿ' ಎಂಬಲ್ಲಿವರೆಗೆ ಪಕ್ಷನಿರ್ದೇಶ. ''ಸ್ವಜನ್ಯೇತ್ಯಾದಿ'' ಮೂರು ಸಾಧ್ಯಗಳು.

**ಪಕ್ಷ**—ಪಕ್ಷಘಟಕವಾದ ಸ್ವಪದಕ್ಕೆ ಪಕ್ಷಸ್ವರೂಪದಲ್ಲೇ ಇರುವ 'ಜನ್ಯಾನಿ' ಎಂಬ ಪದದಿಂದ ಯಾವುದು ಉದ್ದಿಷ್ಟವಾಗಿದೆಯೋ ಆ ವಸ್ತುವು ಅರ್ಥ. ಅದೃಷ್ಟ-ಅದ್ವಾರಕವಾದ ಅರ್ಥಾತ್ ಸಾಕ್ಷಾತ್ತಾಗಿ ಉಪಾದಾನವಿಷಯಕವಾದ ಜನ್ಯಕೃತಿ ಎಂದರೆ ಕಪಾಲ-ವಿಷಯಕವಾದ ಕುಲಾಲನ ಕೃತಿ. ತಜ್ಜನ್ಯವಾದುದು ಘಟಾದಿಗಳು. ತದ್ಭಿನ್ನವಾದ ಸಮವೇತಗಳು=ಸಮವಾಯ ಸಂಬಂಧದಿಂದ ಸ್ವಾವಯವಗಳಲ್ಲಿ ಇರುವ ವಸ್ತುಗಳು ಎಂದರೆ ಪೃಥಿವ್ಯಾದಿ ನಾಲ್ಕುಭೂತವಸ್ತುಗಳು. ಇದು ಪಕ್ಷದ ವಿವರಣೆ.

अत्र मणौ ''अदृष्टाद्वारकोपादानगोचरजन्यकृत्यजन्यानि'' इत्युक्तावपि यथाश्रुतोपादानपदस्य यत्किञ्चिदुपादानपरत्वे रूपाद्युपादानमृदङ्ग-गोचरास्मदादिकृतिजन्यानां शब्दादीनां पक्षतानापत्तेः, क्षित्याद्युपादा-नपरत्वे तद्गोचरजन्यकृत्यप्रसिद्ध्या तदजन्यत्वाप्रसिद्धेः, तदीयव्याख्या सूक्तपरिष्कारपूर्वकोऽयं स्वेत्यनुवादः । तथा जन्यकृत्यजन्यत्वं हि जन्यकृतिजन्यान्यत्वमिति मणावेवोत्तरत्रोक्तेर्जन्यकृतिजन्यभिन्नेत्य-प्यनुवाद इत्यदोषः ।।

**भावेति ।** समवेतानि जन्यानीत्यत्र भावकार्याणीति वा प्रयोज्य-मित्यर्थः ।

ಈ ಸಂದರ್ಭದ ಮಣಿಗ್ರಂಥದಲ್ಲಿ ಈ ಅನುಮಾನದ ಪಕ್ಷವನ್ನು 'ಅದೃಷ್ಟಾದ್ವಾರಕ-ಉಪಾದಾನ-ಗೋಚರ-ಜನ್ಯಕೃತ್ಯಜನ್ಯಾನಿ ಸಮವೇತಾನಿ ಜನ್ಯಾನಿ' ಎಂದು ನಿರ್ದೇಶ ಮಾಡಲಾಗಿದೆ. ಅದರಲ್ಲಿ ಸ್ವಪದವಿಲ್ಲ, 'ಜನ್ಯಭಿನ್ನ' ಎಂಬ ವಿವರಣೆಯೂ ಇಲ್ಲ. ಆದರೆ, ಹೀಗೆ ಪಕ್ಷನಿರ್ದೇಶಮಾಡಿದರೆ ಬಾಧಕವನ್ನು ವ್ಯಾಖ್ಯಾನಗಳಲ್ಲಿ ತೋರಿಸಲಾಗಿದೆ—[1] ಇಲ್ಲಿ ಉಪಾದಾನಪದಕ್ಕೆ ಯಾವುದೋ ಒಂದಕ್ಕೆ ಉಪಾದಾನ ಎಂದು ವಿವಕ್ಷೆ ಮಾಡಿದರೆ ನಮ್ಮ ಯತ್ನ

१. अत्रोपादानपदं स्वोपादानपरं । तद्गोचरकृतिजन्यं घटादिप्रसिद्धम् । तदन्यत्वं पक्षतावच्छेदकम् । अत उपादानपदं न स्वोपादानपरम् अप्रसिद्धेः । न सामान्यपरं, स्वोपादान शङ्खादिगोचरजन्यकृतिजन्यत्वेन शब्दादौ अव्याप्तिः- इत्यादिदूषणम् अलग्नकं भवति । (अलोकव्याख्या- ಅನುಮಾನಖಂ-15)

ಪ್ರಯೋಜ್ಯವಾದ ಶಬ್ದಾದಿಗಳು ಪಕ್ಷದಲ್ಲಿ ಸೇರಲಿಕ್ಕಿಲ್ಲ. ಮೃದಂಗವಾದಕನ ಯತ್ನದಿಂದ ಶಬ್ದೋತ್ಪತ್ತಿಯಾಗುತ್ತದೆ. ಮೃದಂಗವೂ ಸ್ವಗತರೂಪಾದಿಗಳಿಗೆ ಉಪಾದಾನವಾಗಿದೆ. ಇದರಿಂದ ಮೃದಂಗ ಬಾರಿಸುವವನ ಕೃತಿಯೂ ಉಪಾದಾನ ಗೋಚರವಾಗಿದೆ. ತಾದೃಶಜನ್ಯಕೃತಿಜನ್ಯ ವಾಯಿತು ಶಬ್ದ, ಅಜನ್ಯವಾಗಿಲ್ಲ. ಅದಕ್ಕಾಗಿ, ಪಕ್ಷವಾದ ಕ್ಷಿತ್ಯಾದಿಗಳನ್ನು ವಿಶಿಷ್ಯಗ್ರಹಿಸಿ ಕ್ಷಿತ್ಯಾದ್ಯುಪಾದಾನವಿಷಯಕಜನ್ಯಕೃತಿ, ಎಂದು ಹೇಳಿದಾಗ ಶಬ್ದಾದಿಗಳೂ ಪಕ್ಷದಲ್ಲಿ ಸೇರಬಹುದು. ಕ್ಷಿತ್ಯಾದ್ಯಂತರ್ಗತವಾದ ಶಬ್ದಕ್ಕೆ ಉಪಾದಾನ ಆಕಾಶ. ತದ್ವಿಷಯಕಕೃತಿ ಮೃದಂಗವಾದಕನಲ್ಲಿ ಇಲ್ಲ.

ಆದರೆ, ಕ್ಷಿತ್ಯಾದ್ಯುಪಾದಾನಗೋಚರವಾದ ಜನ್ಯಕೃತಿಯೇ ಅಪ್ರಸಿದ್ಧ. ಕ್ಷಿತ್ಯಾದಿಗಳನ್ನು ಜೀವರು ಯಾರೂ ನಿರ್ಮಾಣಮಾಡಿಲ್ಲವಾದ್ದರಿಂದ ಅಂತಹ ಕೃತಿಯೇ ಇಲ್ಲ. ಅದು ಅಪ್ರಸಿದ್ಧವಾದ ಕಾರಣ ತದ್‌ಘಟಿತ–ಕೃತ್ಯಜನ್ಯತ್ವವೂ ಅಪ್ರಸಿದ್ಧ. ಈ ದೋಷಪರಿಹಾರಕ್ಕಾಗಿ ವ್ಯಾಖ್ಯಾನಕಾರರು "ಸ್ವಪದಘಟಿತವಾಗಿ" ಸಾಧ್ಯವನ್ನು ಪರಿಷ್ಕಾರಮಾಡಿದ್ದಾರೆ. ಆಗ ಸ್ವಪದದಿಂದ ಸಮಭಿವ್ಯಾಹೃತವಾದ ಘಟಾದಿಗಳನ್ನು ಪರಿಗ್ರಹಿಸಿ ತದುಪಾದಾನಗೋಚರವಾದ ಕುಲಾಲನ ಜನ್ಯ ಕೃತಿಯು ಪ್ರಸಿದ್ಧವಾದುದರಿಂದ ತದಜನ್ಯತ್ವವು ಕ್ಷಿತ್ಯಾದಿಗಳಲ್ಲಿ ಬರುತ್ತದೆ.

ಪಕ್ಷಘಟಕವಾದ 'ಅಜನ್ಯಾನಿ' ಎಂಬ ಪದಕ್ಕೆ 'ಜನ್ಯಭಿನ್ನಾನಿ' ಎಂಬ ಭೇದಪರವಾದ ವಿವರಣೆಯನ್ನು ಮಣಿಕಾರನೇ ಕೊಟ್ಟಿದ್ದಾನೆ–"ಜನ್ಯಕೃತ್ಯಜನ್ಯತ್ವಂ ಹಿ ಜನ್ಯಕೃತಿಜನ್ಯಾನ್ಯತ್ವಮ್" ಎಂದು. ಅದನ್ನೇ ಇಲ್ಲಿ "ಜನ್ಯಭಿನ್ನಾನಿ" ಎಂದು ಅನುವಾದ ಮಾಡಲಾಗಿದೆ.

ಪಕ್ಷದಲ್ಲಿ "ಸಮವೇತಾನಿ ಜನ್ಯಾನಿ" ಎನ್ನುವ ಬದಲು 'ಭಾವಕಾರ್ಯಾಣಿ' ಎಂದಾದರೂ ಪ್ರಯೋಗಿಸಬಹುದು. ಸಮವೇತಪದದ ಪ್ರಯೋಜನ ಭಾವಪದದಿಂದಲೂ ಜನ್ಯಪದದ ಪ್ರಯೋಜನ ಕಾರ್ಯಪದದಿಂದಲೂ ಆಗುತ್ತದೆ.

## ನ್ಯಾಯದೀಪ

**अदृष्टप्रागभावव्याप्यप्रागभावप्रतियोगीति साध्यांशस्य परिष्कारपूर्वकमनुवादः । स्वजन्येत्यादि ।** स्वपदेनोपादानगोचरज्ञानादिकमुच्यते । स्वजन्यं यददृष्टं तत्प्रागभावव्याप्यो यः प्रागभावः अदृष्टकारणीभूतज्ञानादिप्रागभावः । तत्प्रतियोगि च यत्किञ्चिदुपादानभूतहविरादिगोचरज्ञानादि, तद्भिन्नाः । स्वजन्यादृष्टजनकभिन्ना इति फलितार्थः । या उपादानगोचरापरोक्षज्ञानचिकीर्षाकृतयः तद्वता जन्यानीत्यर्थः । अत्रापरोक्षज्ञानपदं परोक्षान्यज्ञानार्थकं, नत्वपरोक्षत्वजात्याक्रान्तज्ञानपरमित्यग्रे व्यक्तम् ।।

ಮಣಿಗ್ರಂಥದಲ್ಲಿ "ಅದೃಷ್ಟಪ್ರಾಗಭಾವವ್ಯಾಪ್ಯ-ಪ್ರಾಗಭಾವಾವಚ್ಛಿನ್ನ..." ಇತ್ಯಾದಿಯಾಗಿ ಸಾಧ್ಯವನ್ನು ಹೇಳಲಾಗಿದೆ. ಆದರೆ, ಇಲ್ಲಿ ಅದೃಷ್ಟಕ್ಕೆ ಸ್ವಜನ್ಯತ್ವ ವಿಶೇಷಣವನ್ನು ಕೊಟ್ಟು ಪರಿಷ್ಕರಿಸಲಾಗಿದೆ.[1] ಸ್ವಪದದಿಂದ ಯತ್ಕಿಂಚಿದುಪಾದಾನ-ವಿಷಯಕ-ಜ್ಞಾನ-ಚಿಕೀರ್ಷಾಕೃತಿಗಳು ಗ್ರಾಹ್ಯವಾಗಿವೆ. ತಜ್ಜನ್ಯವಾದುದು ಅದೃಷ್ಟ. ಆ 'ಅದೃಷ್ಟಪ್ರಾಗಭಾವಕ್ಕೆ ವ್ಯಾಪ್ಯವಾದ ಪ್ರಾಗಭಾವ ಎಂದರೆ ವಿಶ್ವಕಾರಣವಾದ ಭೋಜಕ ಅದೃಷ್ಟಕ್ಕೆ ಕಾರಣವಾದ ಯಾಗೀಯ ಹವಿರಾದಿಗೋಚರಜ್ಞಾನಾದಿಗಳ ಪ್ರಾಗಭಾವ. ಅದಕ್ಕೆ ಪ್ರತಿಯೋಗಿಜ್ಞಾನಾದಿಗಳು. ಆ ಜ್ಞಾನಾದಿಗಳಿಗೆ ವಿಷಯ ಯಾಗದ ಹವಿಸ್ಸು. ಅದು ಸ್ವಗತರೂಪಾದಿಗಳಿಗೆ ಉಪಾದಾನವಾಗಿದೆ. ಹೀಗೆ, ಆ ಜ್ಞಾನಾದಿಗಳೂ ಯತ್ಕಿಂಚಿದುಪಾದಾನಗೋಚರವಾಗಿವೆಯಾದ್ದರಿಂದ ಪ್ರಾರಂಭದ ಸ್ವಪದದಿಂದ ಗ್ರಾಹ್ಯವಾಗಿವೆ. ತದ್ಭಿನ್ನವಾದುದು ವಿಶ್ವದ ಉಪಾದಾನಗೋಚರವಾದ ಜ್ಞಾನಾದಿಗಳು. ಇದರ ಒಟ್ಟು ಫಲಿತಾರ್ಥ, ಯಾಗಜನ್ಯಭೋಜಕಾದೃಷ್ಟಜನಕವಾದ ಹವಿರಾದಿವಿಷಯಕಜ್ಞಾನಾದಿ ಭಿನ್ನವಾಗಿರಬೇಕು, ವಿಶ್ವಕಾರಣವಾದ ಜ್ಞಾನಾದಿಗಳು ಎಂದರ್ಥ. ಅಂತಹ ಜ್ಞಾನ-ಚಿಕೀರ್ಷಾ-ಕೃತಿಮತ್ತಾದ ವ್ಯಕ್ತಿಯಿಂದ ಜನ್ಯವಾಗಿವೆ, ಕ್ಷಿತ್ಯಾದಿಗಳು, ಎಂದು ಸಾಧ್ಯದ ಅರ್ಥ.

ಸಾಧ್ಯಘಟಕವಾದ ಅಪರೋಕ್ಷಜ್ಞಾನಪದಕ್ಕೆ ಅಪರೋಕ್ಷತ್ವ ಜಾತ್ಯಾಕ್ರಾಂತವಾದ ಜ್ಞಾನ ಎಂದು ಅರ್ಥವಲ್ಲ. ಅಂತಹ ಜಾತಿಯನ್ನು ಮೀಮಾಂಸಕರು ಅಂಗೀಕರಿಸಿಲ್ಲ. ಕಿಂತು, ಪರೋಕ್ಷಾನ್ಯಜ್ಞಾನ ಎಂದರ್ಥ. ಇದು ಮುಂದೆ ಮೂಲದಲ್ಲೇ (ಪು.167) ಸ್ಪಷ್ಟವಾಗಿದೆ.[2]

---

1. अत्र अदृष्टपदं स्वजनकादृष्टपरम् । व्याप्तिश्च कालिकी । यदा तादृशकृतिप्रागभावः तदा तादृशादृष्टप्रागभावः इति व्याप्तौ तददृष्टजनककृत्यादिप्रागभाव एव तथा निर्वहतीति तदन्या कृतिद्वयी-अदृष्टा । जनिका, ईश्वरकृतिश्च (आलोकव्या.१७)

ಅದೃಷ್ಟಪ್ರಾಗಭಾವ ಎಂಬಲ್ಲಿ ಅದೃಷ್ಟಪದದಿಂದ ಕಾರ್ಯಜನಕವಾದ ಭೋಜಕಾದೃಷ್ಟವು ವಿವಕ್ಷಿತ. ತಾದೃಶ ಅದೃಷ್ಟಪ್ರಾಗಭಾವದ ಕಾಲಿಕವ್ಯಾಪ್ತಿಯನ್ನು ಪರಿಗಣಿಸಿದಾಗ ಯದಾ ಕಾರ್ಯಜನಕ ಕೃತಿಪ್ರಾಗಭಾವಃ ತದಾ ಸ್ವಜನಕಾ (ಕಾರ್ಯಜನಕ) ದೃಷ್ಟಾಭಾವಃ। ಈ ರೀತಿ ವ್ಯಾಪ್ತಿಯನ್ನು ವಿವಕ್ಷೆ ಮಾಡಿದಾಗ ಕಾರ್ಯಹೇತುವಾದ ಅದೃಷ್ಟಕ್ಕೆ ಜನಕವಾದ ಹವಿರಾದಿಗೋಚರ ಕೃತ್ಯಾದಿಗಳ ಪ್ರಾಗಭಾವವೇ ಲಭ್ಯವಾಗುತ್ತದೆ. ತಾದೃಶಪ್ರಾಗಭಾವಕ್ಕೆ ಅಪ್ರತಿಯೋಗಿಯಾದ ಕೃತಿ ಎರಡು— (1) ಅದೃಷ್ಟಾಜನಕವಾದ ಕುಲಾಲನ ಕೃತಿ ಮತ್ತು ಪ್ರಾಗಭಾವಕ್ಕೆ ಪ್ರತಿಯೋಗಿಯಾಗದ ಈಶ್ವರಕೃತಿ. ಕುಲಾಲಕೃತಿಯು ಸಂಗೃಹೀತವಾದುದರಿಂದ ದೃಷ್ಟಾಂತವಾದ ಘಟದಲ್ಲಿ ಸಾಧ್ಯಸಮನ್ವಯ. ಈಶಕೃತಿ ಸಂಗ್ರಹವಾಗುವುದರಿಂದ ಪಕ್ಷದಲ್ಲಿ ಸಾಧ್ಯಸಮನ್ವಯ. ಅದೃಷ್ಟಜನಕವಾದ ಯಾಗೀಯ ಹವಿರಾದಿ ಗೋಚರಕೃತಿಯು ಸರ್ವಥಾ ಸಂಗ್ರಹವಾಗುವುದಿಲ್ಲವಾದುದರಿಂದ ಸಿದ್ಧಸಾಧನತಾ ಇಲ್ಲ. ತರ್ಕತಾಂಡವದಲ್ಲಿ ಹವಿರಾದಿಗೋಚರ ಜ್ಞಾನಾದಿ ಜನ್ಯತ್ವವನ್ನು ಅದೃಷ್ಟದಲ್ಲಿ ವಿಶೇಷಣವನ್ನಾಗಿ ಕೊಡಲಾಗಿದೆ. ಆಲೋಕದಲ್ಲಿ ಕಾರ್ಯಪ್ರಪಂಚಜನಕತ್ವವನ್ನು ಅದೃಷ್ಟದಲ್ಲಿ ಕೊಡಲಾಗಿದೆ. ಒಟ್ಟಿನಲ್ಲಿ ಯತ್ಕಿಂಚಿತ್ ಉದಾಸೀನಾದೃಷ್ಟವನ್ನು ವಾರಣೆ ಮಾಡಲಾಗಿದೆ.

2 यद्यत्यत्र प्रत्यक्षेत्युचितम् । न त्वपरोक्षेति (परोक्षभिन्नेति)। घट इति वक्तव्ये अनघटः इत्यप्रयोगात्। तथापि प्रत्यक्षत्वस्य इन्द्रियजन्यत्वपरत्वे बाधः। (ईश्वप्रत्यक्षस्य

## ನ್ಯಾಯದೀಪ

**स्वजनकेति ।** स्वस्य=कार्यस्य जनकं यददृष्टं तत उत्तराः= पक्षधरोक्तदिशाऽदृष्टाधिकरणक्षणोत्तरक्षणवर्तिन्यः नतु तदुत्तरक्षणोत्पत्तिमत्यः। तेन न बाधः शङ्क्यः। तादृश्य उपादानगोचरपरोक्षान्यज्ञानचिकीर्षाकृतयः तद्वता जन्यानीत्यर्थः। ईश्वरज्ञानादेर्नित्यतया क्षित्यादिकार्यजनकादृष्टोत्तरत्वात्, कुलालज्ञानादेरपि घटादिजनकादृष्टोत्तरत्वादिति न दृष्टान्तासिद्धिः।

अपरोक्षेति बहुव्रीहिः। परोक्षान्यज्ञानचिकीर्षा–प्रयत्नविषयोपादान–समवेतानीत्यर्थः। च्व्यर्थ-लडर्थौ तु न विवक्षितौ ज्ञेयौ। **घटवदिति।** स्वपदस्य समभिव्याहृतपरत्वात् तत्र साध्यहेतुसत्त्वं व्यक्तमिति भावः ।।

ಎರಡನೆಯ ಸಾಧ್ಯದ ಸಮನ್ವಯ–ಸ್ವಜನಕಾದೃಷ್ಟೋತ್ತರೋಪಾದಾನ– ಗೋಚರಾಪರೋಕ್ಷ ಜ್ಞಾನ–ಚಿಕೀರ್ಷಾ–ಕೃತಿಮಜ್ಜನ್ಯಾನಿ, ಇದು ದ್ವಿತೀಯ ಸಾಧ್ಯಸ್ವರೂಪ. ಇದರ ಸಮನ್ವಯ—ಸ್ವಸ್ಯ= ಘಟಾದಿಕಾರ್ಯಕ್ಕೆ ಜನಕವಾದ ಯಾವ ಅದೃಷ್ಟವಿದೆಯೋ ಅದರ ಅನಂತರ ಇರುವ ಅಪರೋಕ್ಷಜ್ಞಾನಾದಿಗಳು. 'ಉತ್ತರ' ಎಂಬುದರ ಅರ್ಥವನ್ನು ಪಕ್ಷಧರ ಮಿಶ್ರರು ಹೀಗೆ ಹೇಳಿದ್ದಾರೆ— ಅದೃಷ್ಟಾಧಿಕರಣಕ್ಷಣೋತ್ತರಕ್ಷಣದಲ್ಲಿರುವ, ಎಂದು. ಘಟಕ್ಕೆ ಕಾರಣವಾದ ಅದೃಷ್ಟವು ಮೊದಲು ಇರುತ್ತದೆ. ಅನಂತರ ಕಪಾಲವಿಷಯಕವಾದ ಅಪರೋಕ್ಷಜ್ಞಾನಾದಿಗಳು ಕುಲಾಲನಿಗೆ ಬರುತ್ತದೆ, ಎಂದರ್ಥ. ಅದೃಷ್ಟೋತ್ತರಕ್ಷಣದಲ್ಲಿ ಉಪಾದಾನಗೋಚರವಾದ ಜ್ಞಾನ ಉತ್ಪತ್ತಿಯಾಗಬೇಕು ಎಂದು ಉತ್ತರಪದಕ್ಕೆ ಅರ್ಥಮಾಡಬಾರದು. ಹಾಗೆ ಮಾಡಿದರೆ ಬಾಧದೋಷ

---

नित्यत्वात्) साक्षात्वजातिपरत्वे परम्प्रत्यसिद्धिः । इति उभयसिद्धापरोक्षेत्युक्तम् । तदर्थश्च अलिङ्गादिकरणकत्वम् । तच्चोभयसाधारणमेवेत्यवधेयम् ।(आलोकव्या. पु.१८)

ಇಲ್ಲಿ ಅಪರೋಕ್ಷಪದಕ್ಕೆ ಅಪರೋಕ್ಷತ್ವಜಾತಿವಿಶಿಷ್ಟ, ಎಂಬ ಅರ್ಥವನ್ನು ನಿರಾಕರಿಸಿ ಪರೋಕ್ಷಭಿನ್ನ ಎಂಬ ಅರ್ಥವನ್ನು ಮಾಡಲಾಗಿದೆ.

१. स्वजनकादृष्टाधिकरणक्षणोत्तरक्षणवृत्तिः कुलालज्ञानादिः ।
ईश्वरज्ञानादेश्च नित्यत्वेन सकलक्षणवृत्तित्वादिति भावः ।। (आलोकः पु.१७)

ಬರುತ್ತದೆ. ವಿಶ್ವೋಪಾದಾನ-ವಿಷಯಕವಾದ ಈಶ್ವರನ ಜ್ಞಾನಾದಿಗಳು ನಿತ್ಯವಾದುದರಿಂದ ಅವುಗಳಿಗೆ ಉತ್ಪತ್ತಿ ಇಲ್ಲ.

ಅಂತಹ, ಜಗದುಪಾದಾನವಿಷಯಕವಾದ ಅಪರೋಕ್ಷಜ್ಞಾನ-ಚಿಕೀರ್ಷಾ-ಕೃತಿಗಳುಳ್ಳವನಿಂದ ಕಾರ್ಯಪ್ರಪಂಚವು ಜನ್ಯವಾಗಿದೆ, ಎಂದು ಸಾಧ್ಯದ ಸಮನ್ವಯ. ಈಶ್ವರನ ಜ್ಞಾನಾದಿಗಳು ನಿತ್ಯವಾದುದರಿಂದ ಅವುಗಳು ಕ್ಷಿತ್ಯಾದಿಕಾರ್ಯಗಳಿಗೆ ಜನಕವಾದ ಜೀವಗತಾದೃಷ್ಟಕ್ಕಿಂತ ಉತ್ತರ ಕಾಲೀನವಾಗಿರುತ್ತವೆ. ಹೀಗೆ ಪಕ್ಷದಲ್ಲಿ ಸಾಧ್ಯಸಮನ್ವಯ. ಕುಲಾಲನ ಜ್ಞಾನಾದಿಗಳೂ ಘಟಾದಿ ಜನಕವಾದ ಭೋಜಕಾದೃಷ್ಟೋತ್ತರ ಕಾಲೀನವಾಗಿವೆ. ಹೀಗೆ, ದೃಷ್ಟಾಂತದಲ್ಲಿ ಸಾಧ್ಯಸಮನ್ವಯ.

**3. ಮೂರನೆಯ ಸಾಧ್ಯದ ಸಮನ್ವಯ**—'ಅಪರೋಕ್ಷಜ್ಞಾನ-ಚಿಕೀರ್ಷಾ-ಪ್ರಯತ್ನಾ ವಿಷಯೀಭವಂತಿ ಉಪಾದಾನಾನಿ ಯೇ ಷಾಂ ತಾನಿ' ಎಂದು ಬಹುವ್ರೀಹಿಸಮಾಸವನ್ನು ಮಾಡಬೇಕು. ಕಾರ್ಯಗಳು ತಾದೃಶೋಪಾದಾನವುಳ್ಳವುಗಳು ಎಂದರೆ ತಾದೃಶೋಪಾದಾನ ಸಮವೇತಗಳು ಎಂದರ್ಥ.

'ವಿಷಯೀಭವತ್' ಎಂಬಲ್ಲಿ ಚ್ವಿಪ್ರತ್ಯಯ ಬಂದಿದೆ. 'ಅವಿಷಯಾಣಿ ವಿಷಯಾಣಿ ಭವಂತಿ ಇತಿ-ವಿಷಯೀಭವಂತಿ, ಎಂದು ವೃತ್ತಿವಿವರಣೆ. ಇಲ್ಲಿ ಚ್ವಿಪ್ರತ್ಯಯ ಮತ್ತು 'ಭವಂತಿ' ಎಂಬ ಕ್ರಿಯಾಪದದ ಅರ್ಥವು ವಿವಕ್ಷಿತವಲ್ಲ. ತಾದೃಶಜ್ಞಾನಾದಿವಿಷಯೋಪಾದಾನ, ಎಂದಿಷ್ಟೇ ಅರ್ಥವು ವಿವಕ್ಷಿತ.

ಘಟವತ್ ಎಂದು ದೃಷ್ಟಾಂತ. ಸಾಧ್ಯಘಟಕಸ್ವಪದವು ಸಮಭಿವ್ಯಾಹೃತಪರವಾದುದರಿಂದ ದೃಷ್ಟಾಂತವಾದ ಘಟದಲ್ಲಿ ಸಮನ್ವಯ ಮಾಡುವಾಗ ಘಟವನ್ನೇ ಸ್ವಪದದಿಂದ ಗ್ರಹಣಮಾಡಿ ಸಾಧ್ಯವನ್ನು ಸಮನ್ವಯ ಮಾಡಬೇಕು.

## ಪಕ್ಷವಿಶೇಷಣಗಳ ಕೃತ್ಯವಿಚಾರ

### ಅವತಾರಿಕೆ

**हेत्वोर्ध्वंसे गगनपरिमाणादौ च व्यभिचारवारकं विशेषणद्वयं विशेष्यद्वयं चेति व्यक्तमित्युपेत्य पक्षसाध्यगतपदकृत्यानि दूषणोक्ति सौकर्याय तदीयव्याख्यानाद्युक्तानि व्यनक्ति—अत्रेति ।**

ಈ ಅನುಮಾನದಲ್ಲಿ ಎರಡೂ ಹೇತುಗಳಲ್ಲಿ ಒಂದು ವಿಶೇಷಣ ಭಾಗ ಮತ್ತು ವಿಶೇಷ್ಯಾಂಶಗಳಿವೆ. ಮೊದಲನೆಯ ಹೇತುವಿನಲ್ಲಿ ಸಮವೇತತ್ವ ವಿಶೇಷಣವನ್ನು ಎರಡನೆಯ

ಹೇತುವಿನಲ್ಲಿ ಯಾವತ್ತ್ವವಿಶೇಷಣವನ್ನು ಬಿಟ್ಟರೆ ಧ್ವಂಸದಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಆ ವಿಶೇಷಣಗಳನ್ನು ಕೊಡಲಾಗಿದೆ. ವಿಶೇಷಣಾಂಶಗಳನ್ನು ಮಾತ್ರ ಹೇತು ಮಾಡಿದರೆ ಗಗನದಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ವಿಶೇಷ್ಯಾಂಶವಿದೆ. ಹೀಗೆ ಹೇತುಗಳಲ್ಲಿರುವ ಎರಡೂ ಅಂಶಗಳ ಕೃತ್ಯವು ಸ್ಪಷ್ಟವಾಗಿದೆ. ಆದ್ದರಿಂದ ಹೇತುವನ್ನು ಬಿಟ್ಟು ಪಕ್ಷಸಾಧ್ಯಗಳಲ್ಲಿರುವ ವಿಶೇಷಣಗಳ ಕೃತ್ಯವನ್ನು ಮಣಿವ್ಯಾಖ್ಯಾನದಲ್ಲಿ ಹೇಳಿದಂತೆಯೇ ತೋರಿಸಲಾಗಿದೆ. ಇದರಿಂದ ಈ ಅನುಮಾನಗಳನ್ನು ನಿರಾಕರಿಸಲು ಅನುಕೂಲವಾಗುತ್ತದೆ.

**अत्र, पक्षे जन्यानीत्येवोक्ते ध्वंसस्यापि पक्षत्वेनांशे बाधः स्यात् । तस्योपादानाभावात् । तन्निवृत्यर्थं समवेतानीति । तावत्युक्ते घटादेरपि पक्षत्वेनांशे सिद्धसाधनं स्यात् । तन्निवृत्यर्थं जन्यभिन्नानीति । तावत्युक्तेऽङ्कुरादेरपि जन्यत्वादाश्रयासिद्धिः । तन्निवृत्यर्थं जन्यकृतीति ।।**

ಜನ್ಯಾನಿ ಎಂದಿಷ್ಟೇ ಪಕ್ಷವಾದರೆ ಧ್ವಂಸವೂ ಪಕ್ಷದಲ್ಲಿ ಸೇರುತ್ತದೆ. ಅದರಲ್ಲಿ ಸಾಧ್ಯವಿಲ್ಲ. ಅದಕ್ಕೆ ಉಪಾದಾನ ಇಲ್ಲದಿರುವುದರಿಂದ ಉಪಾದಾನವಿಷಯಕಾಪರೋಕ್ಷಾದಿಜನ್ಯತ್ವ ಇಲ್ಲ. ಬಾಧ ಬರುತ್ತಿತ್ತು. ಅದರ ಪರಿಹಾರಕ್ಕಾಗಿ 'ಸಮವೇತಾನಿ' ಎಂಬ ವಿಶೇಷಣ ಬೇಕು. ಅಷ್ಟೇ ಪಕ್ಷವಾದಲ್ಲಿ ಘಟಾದಿ ಜೀವಕರ್ತೃಕಪದಾರ್ಥಗಳೂ ಪಕ್ಷದಲ್ಲಿ ಸೇರುವುದರಿಂದ ಸಿದ್ಧಸಾಧನತಾ ಬರುತ್ತದೆ. ಅದರ ಪರಿಹಾರಕ್ಕಾಗಿ 'ಜನ್ಯಭಿನ್ನಾನಿ' ಎಂದೂ ಸೇರಿಸಬೇಕು. ಹಾಗೆ ಸೇರಿಸಿದರೆ ವಿವಕ್ಷಿತವಾದ ಅಂಕುರಾದಿಗಳೂ ಸಂಗ್ರಹೀತವಾಗುವುದಿಲ್ಲ. ಜನ್ಯಭಿನ್ನವಾದ ಜನ್ಯವಸ್ತುವೇ ಇಲ್ಲದುದರಿಂದ ಆಶ್ರಯಾಸಿದ್ಧಿ ಬರುತ್ತದೆ. ಅದರ ಪರಿಹಾರಕ್ಕಾಗಿ 'ಜನ್ಯಕೃತಿ' ಎಂದು ಕೃತಿಗೆ ಜನ್ಯತ್ವ ವಿಶೇಷಣವನ್ನು ಸೇರಿಸಬೇಕು. ಜನ್ಯಕೃತಿಜನ್ಯ-ಭಿನ್ನವಾದುದು ಅಂಕುರಾದಿಗಳು. ಏಕೆಂದರೆ, ಅಂಕುರಾದಿಗಳು ಜನ್ಯವಾದ ಜೀವರ ಕೃತಿಯಿಂದ ಜನ್ಯಗಳಲ್ಲ. ಆಶ್ರಯಾಸಿದ್ಧಿ ಇಲ್ಲ.

## ನ್ಯಾಯದೀಪ

**अत्रेति ।।** प्रयोग इत्यर्थः । अंशे बाध इत्युक्तं साध्याभावोपपादनेन व्यनक्ति । **तस्योपादानाभावादिति ।** येन तद्गोचरज्ञानादिजन्यत्वं स्यादिति भावः । **अंशे सिद्धसाधनमिति ।** अदृष्टजनकभिन्नोपादान-गोचरकुलालादिनिष्ठ–ज्ञानादिजन्यत्वात्, स्वजनकादृष्टोत्तरत्वात् कुलालज्ञानचिकीर्षादेरिति भावः ।।

ಘಟದಲ್ಲಿ ಸಿದ್ಧಸಾಧನತಾ ಹೇಗೆಂದರೆ—ಅದೃಷ್ಟಜನಕಭಿನ್ನ-ಉಪಾದಾನ-ವಿಷಯಕವಾದ ಕುಲಾಲಾದಿನಿಷ್ಠ-ಜ್ಞಾನಾದಿಗಳಿಂದ ಜನ್ಯವಾಗಿದೆ ಘಟ. ಹೀಗೆ ಮೊದಲನೆಯ ಸಾಧ್ಯವು ಬರುತ್ತದೆ.

ಘಟಜನಕವಾದ ಭೋಜಕಾದೃಷ್ಟೋತ್ತರವಾಗಿವೆ ಕುಲಾಲನ ಜ್ಞಾನಾದಿಗಳು. ತಜ್ಜನ್ಯತ್ವ ಇರುವುದರಿಂದ ದ್ವಿತೀಯ ಸಾಧ್ಯವೂ ಬರುತ್ತದೆ.

**नचानीश्वरवादिनं प्रति व्यावर्त्याभावेन जन्यपदं व्यर्थम् । तन्मते प्रमेयो घट इतिवत् तदुपरक्तबुद्धेरुद्देश्यत्वात् । उभयसिद्धप्रयोजनवत्त्वं तन्त्रम् । नत्वेकस्यैव प्रयोजनस्योभयसिद्धिः ।**

**तावत्युक्ते शब्दफूत्कारादेः पक्षता न स्यात् । तस्य शब्दादि-निमित्तभूतमृदङ्ग-ताल्वादिगोचरास्मदादिनिष्ठ-जन्यकृति-जन्यत्वात् । तदर्थं स्वोपादानगोचरेति । तज्जनकास्मदादिनिष्ठकृतेर्निमित्तभूतमृदङ्गादि-गोचरत्वेपि उपादानीभूताकाशादिगोचरत्वाभावात् । तावत्युक्ते कालीरूपादेः पक्षता न स्यात् । तस्य स्वोपादानभूतशरीरगोचरतया उक्तरूपकृतिजन्यत्वेन तद्भिन्नत्वाभावात् । भाव्यं च तस्य पक्षतया । अन्यथा पक्षातिरिक्ते तत्र साध्यसन्देहेन सन्दिग्धानैकान्तिकतापत्तेः । तदर्थमदृष्टाद्वारकेति । कालीकृतिस्त्वदृष्टद्वारैव रूपजनिकेति न दोषः ।।**

ಕೃತಿಯಲ್ಲಿ ಜನ್ಯತ್ವ ವಿಶೇಷಣ, ಹಿಂದೆ ಹೇಳಿದಂತೆ, ಆಶ್ರಯಾಸಿದ್ಧಿದೋಷದ ಪರಿಹಾರಕ್ಕಾಗಿ ಇದೆ. ಆದರೆ, ನೈಯಾಯಿಕರ ಮತದಂತೆ ಅಂಕುರಾದಿಗಳು ಈಶ್ವರಕೃತಿಯಿಂದ ಜನ್ಯವಾದುದರಿಂದ, ಆ ಕೃತಿಯು ನಿತ್ಯವಾದ ಕಾರಣ ಜನ್ಯವಾಗುವುದಿಲ್ಲ. ಹೀಗೆ, ಅಜನ್ಯಕೃತಿಯ ವ್ಯಾವೃತ್ತಿಗಾಗಿ ಜನ್ಯಪದವು ಸಾರ್ಥಕ. ಆದರೆ, ಮೀಮಾಂಸಕರು ಅನೀಶ್ವರವಾದಿಗಳು. ಅವರ ಮತದಂತೆ ಅಜನ್ಯಕೃತಿಯೇ ಇಲ್ಲದುದರಿಂದ ವ್ಯಾವರ್ತ್ಯಾಭಾವಾತ್ ಜನ್ಯಪದವು ವ್ಯರ್ಥ. ಆದರೂ 'ಪ್ರಮೇಯೋ ಘಟಃ' ಎಂಬ ಜ್ಞಾನದಲ್ಲಿ ಪ್ರಮೇಯತ್ವ ವಿಶೇಷಣವು ಅವ್ಯಾವರ್ತಕವಾದರೂ ತದ್ವಿಷಯಕ ಜ್ಞಾನವು ಉದ್ದಿಷ್ಟವಾದಂತೆ ಮೀಮಾಂಸಕಮತದಲ್ಲೂ ಅಜನ್ಯಕೃತಿ ಇಲ್ಲದಿರುವುದರಿಂದ 'ಜನ್ಯತ್ವವು' ವ್ಯಾವರ್ತಕವಿಶೇಷಣವಲ್ಲದಿದ್ದರೂ ಜನ್ಯಕೃತ್ಯಜನ್ಯ-ಕೃತಿಜನ್ಯತ್ವಾವಚ್ಛೇದೇನ ಸಾಧ್ಯಸಿದ್ಧಿ ರೂಪವಾದ ಪ್ರಯೋಜನಕ್ಕಾಗಿ. ವಿಶೇಷಣಗಳಿಗೆ ಉಭಯಮತದಲ್ಲೂ ಪ್ರಯೋಜನವಿರಬೇಕು, ಎಂಬಷ್ಟೇ ನಿಯಮ. ಆ ಪ್ರಯೋಜನವು ಒಂದೇ ಆಗಿರಬೇಕೆಂದೇನೂ ನಿಯಮವಿಲ್ಲ.

ಜನ್ಯಕೃತ್ಯಜನ್ಯಾನಿ ಜನ್ಯಾನಿ ಎಂದು ಹೇಳಿದರೂ ಶಬ್ದ, ಫೂತ್ಕಾರಗಳು ಪಕ್ಷದಲ್ಲಿ ಸೇರುವುದಿಲ್ಲ. ಮೃದಂಗದ ಶಬ್ದಕ್ಕೆ ನಿಮಿತ್ತವಾದುದು ಮೃದಂಗ. ಫೂತ್ಕಾರಕ್ಕೆ ನಿಮಿತ್ತ ತಾಲ್ವಾದಿಸ್ಥಾನಗಳು. ತದ್ವಿಷಯಕವಾದ ನಮ್ಮ ಪ್ರಯತ್ನದಿಂದಲೇ ಶಬ್ದ ಮತ್ತು ಫೂತ್ಕಾರವು ಜನ್ಯವಾಗಿದೆ, ಜನ್ಯಕೃತ್ಯ ಜನ್ಯವಲ್ಲ. ಆದ್ದರಿಂದ ಶಬ್ದಾದಿಗಳನ್ನೂ ಪಕ್ಷದಲ್ಲಿ ಸೇರಿಸುವುದಕ್ಕಾಗಿ 'ಸ್ವೋಪಾದಾನ ಗೋಚರ' ಎಂದು ಕೃತಿಗೆ ವಿಶೇಷಣವನ್ನು ಕೊಡಲಾಗಿದೆ. ಶಬ್ದಜನಕವಾದ ನಮ್ಮ ಪ್ರಯತ್ನವು ಶಬ್ದನಿಮಿತ್ತ ಭೂತವಾದ ಮೃದಂಗವಿಷಯಕವಾದರೂ ಶಬ್ದಕ್ಕೆ ಉಪಾದಾನವಾದ ಆಕಾಶಾದಿ ವಿಷಯಕವಾಗಿಲ್ಲ. ಆದ್ದರಿಂದ ತಾದೃಶಜನ್ಯಕೃತ್ಯಜನ್ಯತ್ವವು ಶಬ್ದದಲ್ಲಿ ಬರುತ್ತದೆ. ಅದೂ ಪಕ್ಷದಲ್ಲಿ ಸೇರುತ್ತದೆ.

ಇಷ್ಟಾದರೂ 'ಕಾಲೀರೂಪವು' ಪಕ್ಷದಲ್ಲಿ ಸೇರುವುದಿಲ್ಲ. ಕಾಲೀ ಎಂಬ ಒಬ್ಬ ತಪಸ್ವಿನಿಯು ತನ್ನ ತಪೋಬಲದಿಂದ ಕಪ್ಪಿದ್ದವಳು ಬಿಳಿಯಾಗುತ್ತಾಳೆ. ಆ ಬಿಳೀರೂಪಕ್ಕೆ ಉಪಾದಾನ ಅವಳ ಶರೀರ. ಅವಳ ತಪಸ್ಸಿನ ಪ್ರಯತ್ನಕ್ಕೆ ಶರೀರವೇ ವಿಷಯ. ಹೀಗೆ ಆ ರೂಪವು ಸ್ವೋಪಾದಾನ ವಿಷಯಕ–ಜನ್ಯಕೃತಿ–ಜನ್ಯವೇ ಆಗಿದೆ. ಅಜನ್ಯವಲ್ಲವಾದುದರಿಂದ ಪಕ್ಷದಲ್ಲಿ ಸೇರುವುದಿಲ್ಲ. ಅದೂ ಪಕ್ಷದಲ್ಲಿ ಸೇರಬೇಕು. ಇಲ್ಲದಿದ್ದಲ್ಲಿ ಪಕ್ಷಾತಿರಿಕ್ತವಾದ ಆ ರೂಪದಲ್ಲಿ ಹೇತು ನಿಶ್ಚಿತವಾಗಿದ್ದು ಸಾಧ್ಯವು (ಈಶ್ವರಕೃತಿಜನ್ಯತ್ವವು) ಸಂದಿಗ್ಧವಾದುದರಿಂದ ಸಂದಿಗ್ಧಾನೈಕಾಂತಿಕತಾದೋಷವು ಬರುತ್ತದೆ. ಅದಕ್ಕಾಗಿ ಪಕ್ಷದಲ್ಲೂ ಅದೃಷ್ಟಾದ್ವಾರಕ ಎಂಬ ವಿಶೇಷಣವನ್ನು ಕೃತಿಯಲ್ಲಿ ಸೇರಿಸಬೇಕು. ಕಾಲೀ ತಪಸ್ವಿನಿಯ ಕೃತಿಯಿಂದ ಅದೃಷ್ಟಹುಟ್ಟಿ ಆ ಮೂಲಕ ಗೌರರೂಪ ಹುಟ್ಟುತ್ತದೆ. ಆದ್ದರಿಂದ ಆ ರೂಪವೂ ಪಕ್ಷದಲ್ಲಿ ಸೇರುತ್ತದೆ. ಹೀಗೆ ಪಕ್ಷದಲ್ಲಿರುವ ಎಲ್ಲ ವಿಶೇಷಣಗಳೂ ಸಾರ್ಥಕ.

## ನ್ಯಾಯದೀಪ

मण्युक्तमेवाह—**तन्मत इति । तदुपरक्तेति ।** तद्विषयकेत्यर्थः । पक्षधरायुक्तमाह—**उभयसिद्धेति ।** न्यायमते जन्यमात्रस्येश्वरकृति-जन्यतयाऽऽश्रयासिद्धिवारणरूपप्रयोजनवत्त्वम् । अनीश्वरमते च उद्देश्यसिद्ध्यादिरूपप्रयोजनवत्त्वमित्युभयसिद्धप्रयोजनवत्त्वमित्यर्थः ।

'एवञ्च शब्दफूत्कारादीनां पक्षतैव'इति मण्युक्तं हृदि कृत्वाह—**तावत्युक्त इति ।** जन्यकृतीत्याद्येवोक्त इत्यर्थः । फूत्कारो मुखवायुविशेषः । न स्यादित्युक्तं व्यनक्ति—**तस्येति । तदर्थमिति ।** शब्दादेः पक्षता-सिद्ध्यर्थमित्यर्थः । तां व्यनक्ति—**तज्जनकेति ।** मृदङ्गः शब्दस्य निमित्तं, ताल्वादि च फूत्कारादेः ॥

ಪಕ್ಷಘಟಕ ಜನ್ಯಪದಕ್ಕೆ ಮೀಮಾಂಸಕಮತರೀತ್ಯಾ ಸಾರ್ಥಕ್ಯವನ್ನು ಮಣಿಗ್ರಂಥದಲ್ಲೇ ಹೇಳಲಾಗಿದೆ. ಅದನ್ನೇ ಮೂಲದಲ್ಲಿ ಹೇಳಲಾಗಿದೆ.[1]

ಮಣಿವ್ಯಾಖ್ಯಾನವಾದ ಆಲೋಕದಲ್ಲಿ ಪಕ್ಷಧರಮಿಶ್ರ ಹೇಳಿರುವ ಮಾತನ್ನು 'ಉಭಯಸಿದ್ಧ' ಎಂದು ಯಥಾವತ್ತಾಗಿ ಅನುವಾದಮಾಡಲಾಗಿದೆ. ನ್ಯಾಯಮತದಲ್ಲಿ ಜನ್ಯವಸ್ತುಗಳೆಲ್ಲವೂ ಈಶ್ವರಕೃತಿಜನ್ಯವಾದುದರಿಂದ 'ಕೃತ್ಯಜನ್ಯವಾದ' ಜನ್ಯವಸ್ತುಗಳು ಇಲ್ಲ. ಆಶ್ರಯಾಸಿದ್ಧಿದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ 'ಜನ್ಯ' ಎಂಬ ವಿಶೇಷಣವು ಸಾರ್ಥಕ. ಈ ವಿಶೇಷಣದಿಂದ ಅಜನ್ಯವಾದ ಈಶ್ವರಕೃತಿಯು ವ್ಯಾವೃತ್ತವಾಗುತ್ತದೆ. ಅನೀಶ್ವರವಾದಿಗಳಾದ ಮೀಮಾಂಸಕರ ಮತದಂತೆ ಹೀಗೆ ವ್ಯಾವೃತ್ತಿರೂಪಪ್ರಯೋಜನವಿಲ್ಲ. ಅವರ ಮತದಂತೆ, ಉದ್ದೇಶ ಸಿದ್ಧಿರೂಪವಾದ ಪ್ರಯೋಜನ ಜನ್ಯತ್ವ ವಿಶೇಷಣಕ್ಕೆ. ಹೀಗೆ ಆ ವಿಶೇಷಣಕ್ಕೆ ಉಭಯಮತದಲ್ಲೂ ಪ್ರಯೋಜನವಿದೆ. ಆದರೆ, ಒಂದೇ ಪ್ರಯೋಜನವು ಉಭಯ ಸಿದ್ಧವಲ್ಲ. ಇದು ಪಕ್ಷಧರಮಿಶ್ರರ ಅಭಿಪ್ರಾಯ.[2]

ಅದರಂತೆ ಮೃದಂಗಾದಿ ಶಬ್ದಗಳು, ''ಫೂ'' ಎಂದು ಊದಿದಾಗ ಬರುವ ಗಾಳಿ ಇವೆರಡೂ ಪಕ್ಷದಲ್ಲಿ ಸೇರಿವೆ, ಎಂದು ಮಣಿಯಲ್ಲಿದೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಮೂಲದಲ್ಲಿ ''ತಾವತ್ಪುಕ್ತೇ'' ಎಂಬ ವಾಕ್ಯವಿದೆ.[3]

ಮೃದಂಗವು ಶಬ್ದಕ್ಕೆ ನಿಮಿತ್ತ. ಫೂತ್ಕಾರಕ್ಕೆ ತಾಲ್ವಾದಿ ಸ್ಥಾನಗಳು ನಿಮಿತ್ತಗಳು. ಅವೆರಡೂ ಉಪಾದಾನಗಳಲ್ಲ.

## ನ್ಯಾಯದೀಪ

पक्षधराद्युक्तमाह—**कालीति**। काली नाम काचित् तपस्विनी तपसा स्वशरीरे गौरं रूपमुत्पादितवतीति तद्रूपादेरित्यर्थः। **तस्येति**। कालीशरीरोत्पन्नगौररूपस्येत्यर्थः। **सन्दिग्धेति**। प्राचीनमतेनेदं दूषणं बोध्यम्। मणिकृन्मते उक्तरूपसन्दिग्धानैकान्त्यं न दोषायेत्यग्रे व्यक्तत्वात्।

---

१. न च जन्यत्वविशेषण-व्यावर्त्याप्रसिद्धिः, 'प्रमेयो घटः' इतिवत् अव्यावर्तकत्वेऽपि तदुपरक्तबुद्धेः उद्देश्यत्वेन तस्य उपरञ्जकत्वात्। (अनुमानखण्डमणि. पु.१९)

२. उपपन्नेति। उभयसिद्धप्रयोजनवत्त्वं तन्त्रम्। न तु प्रयोजनस्योभयसद्धिः इति भावः। (पु.१९)

३. ''एवञ्च शब्दफूत्करणादीनां पक्षतैव'' (मणिः. पु.२०)

ಪಕ್ಷಧರಮಿಶ್ರರು (ಜಯದೇವಮಿಶ್ರ) ಆಲೋಕವ್ಯಾಖ್ಯಾನದಲ್ಲಿ ಹೇಳಿರುವ ಸಾರ್ಥಕ್ಯವನ್ನು 'ಕಾಲೀರೂಪಾದೇಃ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.[1]

ಕಾಲೀ ಎಂದರೆ ಒಬ್ಬಳು ತಪಸ್ವಿನಿ. ಅವಳು ತಪಃಪ್ರಭಾವದಿಂದ ತನ್ನ ಕರಿ ಶರೀರದಲ್ಲಿ ಬಿಳಿರೂಪವನ್ನು ಪಡೆದುಕೊಂಡಳು. ಆ ರೂಪವು ಪಕ್ಷದಲ್ಲಿ ಸೇರಲಿಕ್ಕಿಲ್ಲ.

ಕಾಲೀರೂಪದಲ್ಲಿ ಸಂದಿಗ್ಧಾನೈಕಾಂತಿಕತ್ವವನ್ನು ಹೇಳಿರುವುದು ಪ್ರಾಚೀನ ಮತದಂತೆ. ಮಣಿಕಾರ ಮತದಲ್ಲಿ ಇಂತಹ ಸಂದಿಗ್ಧಾನೈಕಾಂತ್ಯವು ದೋಷವಲ್ಲ. ಅದು ಮುಂದಿನ ಭಾಗದಲ್ಲಿ (**''तस्मात् साध्यसंदेहवति हेतुनिश्चयः न दोषः। किंतु गुण एव। अन्यथानुमानमात्रं उच्छियेत ।।''** -ಮಣಿ.ಪು.22) ಸ್ಪಷ್ಟವಿದೆ.(ತ.ತಾಂಡವ-ಪುಟ.178)

## ಸಾಧ್ಯಘಟಕ ವಿಶೇಷಣಕೃತ್ಯ

**साध्ये यद्यपि ज्ञानचिकीर्षाकृतीनां मध्ये एकैकोक्तावपीश्वरसिद्धिः। तथापि यावदभिमतविशेषगुणवत्त्वसिद्ध्यर्थं त्रितयोक्तिः। साध्यविशेषणानामुद्देश्यसिद्धिप्रयोजनकत्वात् ।।**

ಸಾಧ್ಯಾಂಶದಲ್ಲಿ ಜ್ಞಾನ-ಚಿಕೀರ್ಷಾ-ಕೃತಿ ಈ ಮೂರರ ಮಧ್ಯದಲ್ಲಿ ಯಾವುದಾದರೂ ಒಂದನ್ನು ಹೇಳಿದರೂ ತದಾಶ್ರಯನಾದ ಈಶ್ವರನು ಸಿದ್ಧನಾಗುತ್ತಾನೆ. ಆದರೂ ನೈಯಾಯಿಕರಿಗೆ ಅಭಿಮತವಾದ ಎಲ್ಲಾ ವಿಶೇಷಗುಣಗಳೂ ಅಂದರೆ ಜ್ಞಾನ-ಇಚ್ಛಾ-ಕೃತಿಗಳೂ ಈಶರನಲ್ಲಿ ಸಿದ್ಧವಾಗ ಬೇಕೆಂಬ ಉದ್ದೇಶದಿಂದ ಈ ಮೂರನ್ನೂ ಹೇಳಲಾಗಿದೆ. ಸಾಧ್ಯಘಟಕ ವಿಶೇಷಣಗಳಿಗೆ ಬೇರೆ ಪ್ರಯೋಜನಗಳು ಇಲ್ಲದಿದ್ದರೂ ಅನುಮಾನ ಪ್ರಯೋಗಿಸುವವನ ಉದ್ದೇಶಸಿದ್ಧಿಗಾಗಿ ಅವುಗಳು ಇರಬಹುದು.

## ನ್ಯಾಯದೀಪ

**यावदिति। यावन्तोऽभिमता विशेषगुणास्तद्वत्त्वसिद्ध्यर्थमित्यर्थः।**

ಮೂಲದಲ್ಲಿ ಯಾವದಭಿಮತ ವಿಶೇಷಗುಣಗಳ ಸಿದ್ಧಿಗಾಗಿ ಎನ್ನುವುದಕ್ಕೆ ಅಭಿಮತವಾದ ಎಷ್ಟು ವಿಶೇಷಗುಣಗಳವೆಯೋ ಅವುಗಳ ಸಿದ್ಧಿಗಾಗಿ ಎಂದರ್ಥ.

---

१. अपि तु कालीशरीरे यद् गौरं रूपं उत्पन्नं तत् कालीशरीरगोचरतपश्चरणादिकृत्या जन्यते। सा च कृतिः अदृष्टद्वारिकेति तद्रूपं अव्याप्तिवारणाय तद्विशेषणमिति सम्यक्। (आलोक. पु.१६)

**अपरोक्षपदन्तु उपादानज्ञानस्यापरोक्षत्वेनैव हेतुत्वाद् व्यापकतासिद्ध्यर्थम् । साक्षात्कारपदं तु नोपात्तम् । प्राभाकरं प्रति साक्षात्त्वजातेरसिद्धेः । अपरोक्षपदेन तु परोक्षान्यज्ञानस्य विवक्षितत्वाददोषः ।**

ಸಾಧ್ಯದಲ್ಲಿ ಉಪಾದಾನಗೋಚರಜ್ಞಾನ, ಎಂದಿಷ್ಟೇ ಹೇಳದೆ ಅಪರೋಕ್ಷಜ್ಞಾನ ಎಂದಿರುವುದು ಉಪಾದಾನದ ಅಪರೋಕ್ಷಜ್ಞಾನವು ಅಪರೋಕ್ಷಜ್ಞಾನತ್ವೇನ್ಯೆವ ಕಾರಣ ಎಂದು ತಿಳಿಸುವುದಕ್ಕಾಗಿ. ಅದನ್ನು ಹೇಳಿರುವುದರಿಂದಾಗಿಯೇ ಭಾವಕಾರ್ಯತ್ವರೂಪಹೇತುವ್ಯಾಪಕತ್ವವು ಸಾಧ್ಯಕ್ಕೆ ಸಿದ್ಧವಾಗುತ್ತದೆ.

ಉಪಾದಾನಗೋಚರ ಸಾಕ್ಷಾತ್ಕಾರ ಎಂದು ಹೇಳಿದರೆ ಪ್ರಾಭಾಕರ ಮೀಮಾಂಸಕರು ಅಸಿದ್ಧಿದೋಷವನ್ನು ಹೇಳುವ ಅವಕಾಶವಿದೆ. ಅವರ ಮತದಲ್ಲಿ ಸಾಕ್ಷಾತ್ಕಾರತ್ವ ಎಂಬ ಜಾತಿ ಜ್ಞಾನದಲ್ಲಿ ಇಲ್ಲ. ಅವರು ಗುಣದಲ್ಲಿ ಜಾತಿಯನ್ನು ಒಪ್ಪಿಲ್ಲ. ಆದಕ್ಕಾಗಿ 'ಅಪರೋಕ್ಷ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಅದಕ್ಕೂ 'ಅಪರೋಕ್ಷತ್ವ ಜಾತಿವುಳ್ಳ' ಎಂದು ಅರ್ಥವಲ್ಲ. ಮತ್ತೆ ಅಸಿದ್ಧಿ ಬಂದೀತು. ಪರೋಕ್ಷಭಿನ್ನಜ್ಞಾನ ಎಂದಿಷ್ಟೇ ಅರ್ಥ.

## ನ್ಯಾಯದೀಪ

**व्यापकतेति ।** गगनपरमाण्वादेः शव्दादिकं प्रत्युपादानत्वेऽपि तज्ज्ञानस्य चिकीर्षाकृतिद्वारा शव्दाद्यहेतुत्वाद् भावकार्यत्वादिरूपहेतुव्यापकत्वसिद्ध्यर्थम् अपरोक्षपदोपादानमित्यर्थः ।

पक्षधरोक्तमाह—**सक्षात्कारेति ।** **असिद्धेरिति ।** गुणगतजातेरनङ्गीकारात् । इन्द्रियजन्यज्ञानपरत्वं तु न शङ्कार्हम् । बाधापातादिति भावः ।

ಮೂಲದಲ್ಲಿ 'ವ್ಯಾಪಕತಾಸಿದ್ಧ್ಯರ್ಥಮ್' ಎಂದಿದೆ. ಸಾಧ್ಯದಲ್ಲಿ ಅಪರೋಕ್ಷಪದವು ಸಾಧ್ಯಕ್ಕೆ ಹೇತುವ್ಯಾಪಕತಾಸಿದ್ಧಿಗಾಗಿ ಎಂದರ್ಥ. ಅಂದರೆ, ಶಬ್ದಕ್ಕೆ ಸಮವಾಯಿಕಾರಣ ಆಕಾಶ. ತದ್ವಿಷಯಕವಾದ ಪರೋಕ್ಷಜ್ಞಾನವು ಜೀವರಿಗೆ ಇದ್ದರೂ ತದ್ವಿಷಯಕವಾದ ಚಿಕೀರ್ಷಾ, ಕೃತಿಗಳು ಇಲ್ಲ. ಅದರಂತೆ ಪಾರ್ಥಿವಪರಮಾಣುಗತವಾದ ರೂಪಾದಿಗಳಿಗೆ ಸಮವಾಯಿಕಾರಣ ಪಾರ್ಥಿವ ಪರಮಾಣುಗಳು. ಅವುಗಳ ಪರೋಕ್ಷಜ್ಞಾನವೂ ಜೀವರಿಗಿದೆ. ಆದರೂ, ಜೀವರು ಆಕಾಶದ ಗುಣವಾದ ಶಬ್ದಕ್ಕೂ, ಪರಮಾಣು ಗುಣವಾದ ರೂಪಕ್ಕೂ ಕಾರಣರಲ್ಲ. ಹೀಗೆ, ಉಪಾದಾನದ

ಪರೋಕ್ಷಜ್ಞಾನವು ಭಾವಕಾರ್ಯತ್ವ ವ್ಯಾಪಕವಲ್ಲ. ಆದ್ದರಿಂದ, ಭಾವಕಾರ್ಯತ್ವಕ್ಕೆ ವ್ಯಾಪಕವಾದುದು ಉಪಾದಾನವಿಷಯಕವಾದ ಅಪರೋಕ್ಷಜ್ಞಾನ ಮಾತ್ರ.

ಅಪರೋಕ್ಷಪದಕ್ಕೆ ಇಂದ್ರಿಯಜನ್ಯಜ್ಞಾನ ಎಂದು ಅರ್ಥಮಾಡಿದರೆ ಬಾಧ ಬರುತ್ತದೆ. ಏಕೆಂದರೆ, ಈಶ್ವರನ ಜ್ಞಾನ ನಿತ್ಯವಾದುದರಿಂದ ಇಂದ್ರಿಯಜನ್ಯವಲ್ಲ. ಆದ್ದರಿಂದ ಪರೋಕ್ಷಭಿನ್ನ ಎಂದೇ ಅರ್ಥಹೇಳಬೇಕು.

**उपादानगोचरपदं तु भाष्यकाराद्युक्तध्वंसव्यावृत्तसकर्तृकत्व-सिद्ध्यर्थम् । तावत्युक्ते सिद्धसाधनम् । अङ्कुरादेरपि स्वजनकादृष्टजनकयत्किञ्चिदुपादानभूत–हविरादिगोचरज्ञानादिमद–स्मदादिजन्यत्वात् । तदर्थमदृष्टेत्यादिभिन्नान्तं ज्ञानादिविशेषणम् । एवञ्च न सिद्धसाधनम् । कारणप्रागभावस्य कार्यप्रागभावं प्रति व्याप्यत्वेनास्मदादिनिष्ठादृष्टजनकज्ञानदिप्रागभावस्य स्वजन्यादृष्टप्रागभावं प्रति व्याप्यत्वेन तद्भिन्नत्वाभावात् ।**

**नचैवं कपालादिरूपोपादानगोचरम् अदृष्टप्रागभावव्याप्यप्रागभावप्रतियोगिभिन्नं च यज्ज्ञानादि तद्वता अस्मदादिना अर्थान्तरम् । ज्ञानेच्छाकृतीनां स्वविषयसमवेतकार्यं प्रत्येव जनकत्वेन कपालादिगोचरज्ञानादेः क्षित्याद्यजनकत्वेन बाधात् ॥**

ಅಪರೋಕ್ಷಜ್ಞಾನಾದಿಗಳಲ್ಲಿ ''ಉಪಾದಾನಗೋಚರ'' ಎಂದು ಹೇಳಿರುವುದು ಧ್ವಂಸವ್ಯಾವೃತ್ತ–ಸಕರ್ತೃಕತ್ವಸಿದ್ಧಿಗಾಗಿ. ಧ್ವಂಸಕ್ಕೆ ಉಪಾದಾನವು ಇಲ್ಲವಾದುದರಿಂದ ಅದು ಈಶ್ವರಾಪರೋಕ್ಷಜ್ಞಾನಾದಿಗಳಿಂದ ಜನ್ಯವಾದರೂ ಆ ಜ್ಞಾನಾದಿಗಳು ಉಪಾದಾನ ವಿಷಯಕಗಳಲ್ಲ. ಆದ್ದರಿಂದ ಧ್ವಂಸದಲ್ಲಿ ಇಂತಹ ಸಕರ್ತೃಕತ್ವ ಇಲ್ಲ. ಗೌತಮಸೂತ್ರಭಾಷ್ಯ ಮತ್ತು ಟೀಕೆಯಲ್ಲಿ ಸಾಧ್ಯಶರೀರದಲ್ಲಿ ಅಥವಾ, ಹೇತುಶರೀರದಲ್ಲಿ ಉಪಾದಾನಪದವನ್ನು ಪ್ರಯೋಗಿಸಲಾಗಿದೆ.[1]

---

१. ''ईश्वरः कारणं पुरुषकर्मसाफल्यदर्शनात्'' (४.१.१९)
ಎಂಬ ಗೌತಮಸೂತ್ರ, ವಾರ್ತಿಕ ಮತ್ತು ತಾತ್ಪರ್ಯಗಳಲ್ಲಿ ಈ ವಿಷಯ ಪ್ರಸ್ತುತವಾಗಿದೆ.
विवादाध्यासिताः तनुमहीधरादयः उपादानाभिज्ञकर्तृकाः,
उत्पत्तिमत्वात्, अचेतनोपादानत्वाद्वा (तात्पर्यटीका. ४.१.२१)
ವಾಚಸ್ಪತಿಮಿಶ್ರವಿರಚಿತ ನ್ಯಾಯತತ್ತ್ವಾಲೋಕ– ''एवमपि ध्वंसवारणाय उपादानपदम्''

ಉಪಾದಾನ-ವಿಷಯಕಾಪರೋಕ್ಷಜ್ಞಾನಾದಿ-ಜನ್ಯತ್ವ ಮಾತ್ರ ಸಾಧ್ಯವಾದರೆ ಸಿದ್ಧಸಾಧನತಾ ದೋಷ ಬರುತ್ತದೆ. ಕಾರ್ಯಪ್ರಪಂಚವು ಜೀವರ ಉಪಭೋಗಕ್ಕೆ ಸಾಧನವಾಗಿರುವುದರಿಂದ ಜೀವರ ಭೋಗಾದೃಷ್ಟವು ಅದರ ಉತ್ಪತ್ತಿಗೆ ಕಾರಣವಾಗಿದೆ. ಅದೃಷ್ಟ ಹುಟ್ಟಬೇಕಾದರೆ ಸತ್ಕರ್ಮಗಳನ್ನು ಮಾಡಬೇಕು. ಅದಕ್ಕಾಗಿ ಜ್ಞಾನೇಚ್ಛಾಕೃತಿಗಳು ಬೇಕು. ಆ ಜ್ಞಾನಾದಿಗಳು ಯದ್ಯಪಿ ವಿಶ್ವೋಪಾದಾನ ವಿಷಯಕಗಳಲ್ಲ, ಯಾಗಾದಿ ಸತ್ಕರ್ಮಗಳಿಗೆ ಕಾರಣವಾದ ಹವಿರಾದಿವಿಷಯಕಗಳು. ಆದರೂ ಆ ಹವಿರಾದಿಗಳೂ ಯತ್ಕಿಂಚಿದುಪಾದಾನಗಳಾಗಿವೆ. ಅಂದರೆ, ಸ್ವಗತರೂಪಾದಿಗಳಿಗೆ ಉಪಾದಾನ ಗಳಾಗಿವೆ. ಹೀಗೆ ಅದೃಷ್ಟದ್ವಾರಾ ಜೀವರೂ ಕರ್ತೃಗಳಾದುದರಿಂದ ಸಿದ್ಧಸಾಧನತಾ. ಆದರ ಪರಿಹಾರಕ್ಕಾಗಿ ಸ್ವಜನ್ಯಾದೃಷ್ಟಪ್ರಾಗಭಾವವ್ಯಾಪ್ತ-ಪ್ರಾಗಭಾವಪ್ರತಿಯೋಗಿಭಿನ್ನ ಎಂದು ಜ್ಞಾನಾದಿಗಳಿಗೆ ವಿಶೇಷಣವನ್ನು ಕೊಡಲಾಗಿದೆ. ಈಗ ಸಿದ್ಧಸಾಧನತಾ ಇಲ್ಲ. ಏಕೆಂದರೆ, ಕಾರಣದ ಪ್ರಾಗಭಾವವು ಕಾರ್ಯದ ಪ್ರಾಗಭಾವಕ್ಕೆ ವ್ಯಾಪ್ಯ. ಕಾರಣದ ಪ್ರಾಗಭಾವ ಇದ್ದರೆ ಕಾರಣ ಇಲ್ಲ ಎಂದರ್ಥ. ಆಗ ಕಾರ್ಯವೂ ಹುಟ್ಟುವುದಿಲ್ಲ. ಅರ್ಥಾತ್ ಕಾರ್ಯದ ಪ್ರಾಗಭಾವವೂ ಇರುತ್ತದೆ. ಯದಾ ದಂಡಪ್ರಾಗಭಾವಃ ತದಾ ಘಟಪ್ರಾಗಭಾವಃ ಎಂದು ಕಾಲಿಕವ್ಯಾಪ್ತಿ. ಪ್ರಕೃತದಲ್ಲಿ ಅದೃಷ್ಟವು ಕಾರ್ಯ. ಹವಿರಾದಿಗೋಚರವಾದ (ಸ್ವಗತರೂಪಾದಿ) ಉಪಾದಾನಜ್ಞಾನಾದಿಗಳು ಕಾರಣ. 'ಯದಾ ಜ್ಞಾನಾದಿಪ್ರಾಗಭಾವಃ ತದಾ ತಾದೃಶಾದೃಷ್ಟಪ್ರಾಗಭಾವಃ' ಎಂದು ವ್ಯಾಪ್ತಿ. ಇಲ್ಲಿ ಜ್ಞಾನಾದಿ ಪ್ರಾಗಭಾವವು ವ್ಯಾಪ್ಯ. ಆದಕ್ಕೆ ಪ್ರತಿಯೋಗಿಯಾಗಿವೆ ಜೀವರ ಜ್ಞಾನೇಚ್ಛಾಕೃತಿಗಳು. ಪ್ರತಿಯೋಗಿ ಭಿನ್ನಗಳಾಗಿಲ್ಲ. ಸಿದ್ಧಸಾಧನತಾ ಪರಿಹಾರವಾಗುತ್ತದೆ.

## ನ್ಯಾಯದೀಪ

**भाष्येति ।** गौतमसूत्रभाष्यकारतट्टीकाकारोक्तेरित्यर्थः । **अङ्कुरादेरिति ।** सर्वस्यापि जीवोपभोग्यतया तत्तददृष्टार्जितत्वेन यदङ्कुरादिकं यज्जीवादृष्टजन्यं तददृष्टं तावद्यज्ञादि-सत्कर्मजन्यम् । तादृशादृष्टजनकं, स्वगतरूपाद्युपादानभूतहविरादिगोचरं यज्ज्ञानादि तद्वदस्मदादिजीव-जन्यत्वादित्यर्थः । **तदर्थमिति ।** सिद्धसाधनतानिवृत्त्यर्थमित्यर्थः । **व्याप्यत्वेनेति ।** यदा ज्ञानादिप्रागभावस्तदा तज्जन्यादृष्टप्रागभाव इति संभवादिति भावः ।

ಅಂಕುರಾದಿಗಳು ಜೀವಾದೃಷ್ಟಜನ್ಯವಾಗುವುದು ಹೀಗೆ—ಎಲ್ಲಾ ಕಾರ್ಯವಸ್ತುಗಳೂ ಒಬ್ಬನಲ್ಲ ಒಬ್ಬ ಚೇತನನ ಭೋಗಕ್ಕೆ ಕಾರಣವಾಗುತ್ತದೆ. ಅದು ಉಪಭೋಗ್ಯವಾಗಬೇಕಾದರೆ ಅದರ

ಉತ್ಪತ್ತಿ ಅವನ ಅದೃಷ್ಟದಿಂದ ಆಗಿದೆ. ಯಾವ ವಸ್ತು ಯಾರ ಅದೃಷ್ಟದಿಂದ ಹುಟ್ಟಿದೆಯೋ ಆ ಅದೃಷ್ಟಕ್ಕೆ ಕಾರಣವಾದ ಸತ್ಕರ್ಮವನ್ನು ಅವನು ಮಾಡಬೇಕು. ಆ ಸತ್ಕರ್ಮ ಯಾಗವಾದರೆ ಹವಿಃಪ್ರಕ್ಷೇಪರೂಪವಾದ ಯಾಗವಿಷಯಕ ಪ್ರಯತ್ನವನ್ನು ಅವನು ಮಾಡಬೇಕು. ಆ ಹವಿರಾದಿಗಳು ಸ್ವಗತರೂಪಾದಿಗಳಿಗೆ ಉಪಾದಾನಗಳೂ ಆಗಿವೆ. ಹೀಗೆ ಅದೃಷ್ಟದ್ವಾರಾ ಉಪಾದಾನಗೋಚರ ಜೀವನ ಕೃತಿಜನ್ಯತ್ವವು ಕಾರ್ಯದಲ್ಲಿ ಸಿದ್ಧವಾದುದರಿಂದ ಸಿದ್ಧಸಾಧನತಾ.

**अत्र यद्यप्यदृष्टजनकभिन्नेत्युक्तेऽप्यस्मदादिभिर्न सिद्धसाधनम् । तथापीश्वरज्ञानादेरप्यदृष्टजनकत्वाद् बाधः । स माभूदिति वक्रोक्तिः । एवं च न बाधः । ईश्वरज्ञानादेरनादित्वेन प्रागभावप्रतियोगित्वस्यैवाभावेन तत्प्रतियोगिभिन्नत्वात् । तावत्युक्ते दृष्टान्तस्य साध्यवैकल्यम् । कुलालनिष्ठस्य घटजनकज्ञानादिप्रागभावस्य तन्निष्ठविहितादिक्रियान्तरोत्पत्स्यमानादृष्टप्रागभावं प्रति व्याप्यत्वात् । तदर्थं स्वजन्यत्वेनादृष्टं विशेषितम् । एवञ्च न साध्यवैकल्यम् । उत्पत्स्यमानादृष्टस्य घटोपादानादिविषयकज्ञानादिजन्यत्वाभावात् ।**

ಜೀವನ ಕೃತಿಜನ್ಯತ್ವ ಪ್ರಯುಕ್ತವಾದ ಸಿದ್ಧಸಾಧನತಾವನ್ನು ಜ್ಞಾನಾದಿಗಳಲ್ಲಿ 'ಅದೃಷ್ಟಜನಕ ಭಿನ್ನ' ಎಂಬ ವಿಶೇಷಣವನ್ನು ಕೊಡುವ ಮೂಲಕವೂ ಪರಿಹರಿಸಬಹುದು. ಆದರೆ ಹಾಗೆ ಮಾಡಿದರೆ ಬಾಧದೋಷ ಬರುತ್ತದೆ. ಈಶ್ವರನ ಜ್ಞಾನವೂ ಸರ್ವಕಾರಣವಾದುದರಿಂದ ಅದೃಷ್ಟಜನಕವಾಗಿದೆ. ಈ ಬಾಧಬರದಿರಲಿ ಎಂದು 'ವಕ್ರೋಕ್ತಿ'ಯನ್ನು ಮಾಡಲಾಗಿದೆ. ಅಂದರೆ, ಇದನ್ನೇ 'ಅದೃಷ್ಟ ಪ್ರಾಗಭಾವವ್ಯಾಪ್ಯ-ಪ್ರಾಗಭಾವಪ್ರತಿಯೋಗಿಭಿನ್ನ' ಎಂದು ಹೇಳಲಾಗಿದೆ. ಇದರ ಅರ್ಥವೂ ಅದೃಷ್ಟಜನಕಭಿನ್ನ ಎಂದಾದರೂ ಇದು ಈಶ್ವರಜ್ಞಾನದಲ್ಲಿ ಇದೆ. ಅದು ಅನಾದಿಯಾದುದರಿಂದ ಪ್ರಾಗಭಾವಕ್ಕೆ ಪ್ರತಿಯೋಗಿಯೇ ಆಗಿಲ್ಲ. ತತ್ಪ್ರತಿಯೋಗಿಭಿನ್ನತ್ವ ಅದರಲ್ಲಿದೆ. ಬಾಧಕ್ಕೆ ಅವಕಾಶ ಇಲ್ಲ.

ಇಷ್ಟನ್ನೇ ಸಾಧ್ಯಮಾಡಿದರೆ ದೃಷ್ಟಾಂತವಾದ ಘಟದಲ್ಲಿ ಸಾಧ್ಯವೈಕಲ್ಯ. ಘಟಕಾರಣವಾದ ಕುಲಾಲನ ಜ್ಞಾನಾದಿಪ್ರಾಗಭಾವವು ಅವನು ಮುಂದೆಂದೋ ಮಾಡಲಿರುವ ಸತ್ಕರ್ಮಜನ್ಯ-ಅದೃಷ್ಟಪ್ರಾಗಭಾವಕ್ಕೆ ವ್ಯಾಪ್ಯವಾಗಿದೆ. ತಾದೃಶಪ್ರಾಗಭಾವ ಪ್ರತಿಯೋಗಿಯೇ ಆಗಿದೆ ಅವನ ಜ್ಞಾನಾದಿಗಳು. ಅದರ ಪರಿಹಾರಕ್ಕಾಗಿ ಅದೃಷ್ಟದಲ್ಲಿ 'ಸ್ವಜನ್ಯ' ಎಂಬ ವಿಶೇಷಣ ಬೇಕು. ಸ್ವಜನ್ಯ ಎಂದರೆ ಘಟಾದಿಕಾರ್ಯಹೇತುವಾದ ಜ್ಞಾನಜನ್ಯ ಎಂದರ್ಥ. ಮುಂದೆಂದೋ ಬರುವ ಕುಲಾಲನ ಅದೃಷ್ಟವು ಘಟೋಪಾದಾನವಿಷಯಕವಾದ ಜ್ಞಾನಾದಿಗಳಿಂದ ಜನ್ಯವಲ್ಲ. ಆದರೆ ಕಾರ್ಯಪ್ರಪಂಚಕ್ಕೆ ಕಾರಣವಾದ ಜೀವರಭೋಗಾದೃಷ್ಟವು ಅದೃಷ್ಟದ್ವಾರಾ ಆ ಪ್ರಪಂಚಕ್ಕೆ

ಕಾರಣವಾದ ಕಪಾಲಾದಿಗೋಚರಜ್ಞಾನದಿಂದ ಜನ್ಯವೇ ಆಗಿದೆ. ಹೀಗೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವೂ ಇಲ್ಲ, ಪಕ್ಷದಲ್ಲಿ ಸಿದ್ಧಸಾಧನತಾವೂ ಇಲ್ಲ.

## ನ್ಯಾಯದೀಪ

**वक्रोक्तिरिति ।** अदृष्टजनकभिन्नेत्यर्थ एवादृष्टप्रागभावव्याप्यप्रागभाव-प्रतियोगिभिन्नेत्युक्तिरित्यर्थः । **ज्ञानादीति ।** घटाद्युपादानकपालादि-गोचरज्ञानादीत्यर्थः । **तन्निष्ठेति ।** कुलालनिष्ठेत्यर्थः । **विहितादीति ।** निषिद्धाकरणमादिपदार्थः । **क्रियान्तरेति ।** कपालादिक्रियातोऽन्य-क्रियेत्यर्थः ॥

ಅದೃಷ್ಟಜನಕಭಿನ್ನ ಎಂಬ ಅರ್ಥವನ್ನೇ 'ಪ್ರಾಗಭಾವಪ್ರತಿಯೋಗಿಭಿನ್ನ' ಎಂಬುದಾಗಿ ಪರಂಪರಯಾ ಹೇಳುವುದೇ ವಕ್ರೋಕ್ತಿ.

## ನ್ಯಾಯದೀಪ

**स्वजन्यत्वेनादृष्टं विशेषितमिति ।** यद्यपि पक्षधरादावदृष्टपदं स्वजनकादृष्टपरं, स्वपदं च समभिव्याहृतपक्षदृष्टान्तरूपकार्यपर-मित्युक्तम् । तथापि तस्मिन् पक्षे स्वपदार्थः क्वचित् पक्षः, क्वचिद् दृष्टान्त इत्यननुगमः ।

नचात्र ग्रन्थकृदभिमतसामान्यव्याप्तावननुगमो न दोषायेति रुचिदत्तोक्तं युक्तम् । यत्तद्भ्यां सामान्यव्याप्तिर्नानुमानाङ्गमित्यर्थापत्तौ ग्रन्थकृतैव निरासात् । तथा कुलालकृतेर्घटजनकादृष्टसमानजातीया-गाम्यदृष्टप्रागभाव–व्याप्यप्रागभावप्रतियोगित्वेन उक्तदोषतादवस्थ्यात् । तदर्थं ठक्कुरोक्तदिशा जनकत्वं फलोपधानरूपं विवक्षिणीयमिति क्लेश इत्युत्तरसाध्यासाङ्कर्याय च स्वजन्येत्येव विवक्षणीयमिति भावः ।

ಘಟಾದಿಗಳಲ್ಲಿ ಸಿದ್ಧಸಾಧನತಾಪರಿಹಾರಕ್ಕಾಗಿ ತರ್ಕತಾಂಡವದಲ್ಲಿ ಸ್ವಜನ್ಯತ್ವ ವಿಶೇಷಣವನ್ನು

ಅದೃಷ್ಟದಲ್ಲಿ ಕೊಡಲಾಗಿದೆ.ಆದರೆ ಮಣಿವ್ಯಾಖ್ಯಾನವಾದ ಆಲೋಕದಲ್ಲಿ ಸ್ವಜನಕತ್ವವಿಶೇಷಣವನ್ನು[1] ಕೊಡಲಾಗಿದೆ. ಅದರಿಂದಲೂ ಸಾಧ್ಯವೈಕಲ್ಯದೋಷದ ಪರಿಹಾರವಾಗುತ್ತದೆ. ಸ್ವಜನ್ಯ ಎಂದಾಗ ಸ್ವಪದದಿಂದ ಕಾರ್ಯೋಪಾದಾನವಿಷಯಕವಾದ ಜ್ಞಾನವು ಗ್ರಾಹ್ಯ. ಸ್ವಜನಕವೆಂದಾಗ ಸ್ವಪದದಿಂದ ಘಟಾದಿಕಾರ್ಯವು ಗ್ರಾಹ. ಭೋಗಾದೃಷ್ಟವು ಕಾರ್ಯಜನಕವಾಗಿದೆ. ಆದರೆ ಭಾವಿ ಅದೃಷ್ಟವು ಕಾರ್ಯಜನಕವಲ್ಲ. ಹೀಗೆ ವಿವಕ್ಷಿತವಾದ ಅದೃಷ್ಟದ ಸಂಗ್ರಹ ಮತ್ತು ಅವಿವಕ್ಷಿತವಾದ ಅದೃಷ್ಟದ ವ್ಯಾವೃತ್ತಿ ಸ್ವಜನಕಪದದಿಂದಲೂ ಆಗುತ್ತದೆ.

ಆದರೆ ಸ್ವಜನಕತ್ವವಿಶೇಷಣಕ್ಕಿಂತಲೂ ಸ್ವಜನ್ಯತ್ವವಿಶೇಷಣವೇ ಸೂಕ್ತವಾದುದು—ಸ್ವಜನಕ ಎಂದು ಹೇಳಿದಾಗ ಪಕ್ಷದಲ್ಲಿ ಸಾಧ್ಯಸಮನ್ವಯ ಮಾಡುವಾಗ ಸ್ವ ಎಂದರೆ ಪಕ್ಷ, ದೃಷ್ಟಾಂತದಲ್ಲಿ ಸಮನ್ವಯಮಾಡುವಾಗ ಘಟಾದಿಗಳು. ಹೀಗೆ ಅನನುಗಮ. ಸ್ವಜನ್ಯ ಎಂದಾಗ ಪಕ್ಷ-ದೃಷ್ಟಾಂತ ಗಳೆರಡರಲ್ಲೂ ಉಪಾದಾನವಿಷಯಕಜ್ಞಾನವೇ ಸ್ವಪದಾರ್ಥ.

ಯದ್ಯಪಿ ರುಚಿದತ್ತನು ಮಣಿವ್ಯಾಖ್ಯಾನದಲ್ಲಿ ಗ್ರಂಥಕಾರನಿಗೆ ವಿವಕ್ಷಿತವಾದ ವ್ಯಾಪ್ತಿಯಲ್ಲಿ ಅನನುಗಮವು ದೋಷವಲ್ಲ ಎಂದು ಹೇಳಿದ್ದಾನೆ. ಆದರೆ ಅದು ಮಣಿಕಾರನಿಗೆ ಸಮ್ಮತವಲ್ಲ. ಮಣಿಕಾರ 'ಯತ್ತದ್ಭ್ಯಾಂ ಸಾಮಾನ್ಯವ್ಯಾಪ್ತಿಃ ನಾನುಮಾನಾಂಗಮ್'[2] ಎಂದು ಅನನುಗತವಾದ ವ್ಯಾಪ್ತಿಯು ಅನುಮಾನಕ್ಕೆ ಅಂಗವಲ್ಲ ಎಂದು ಅರ್ಥಾಪತ್ತಿಗ್ರಂಥದಲ್ಲಿ ನಿರಾಕರಿಸಿದ್ದಾನೆ.

ಅನನುಗಮ ಮಾತ್ರವಲ್ಲ, ದೋಷಾಂತರವೂ ಇದೆ— ಸ್ವಜನಕತ್ವವಿಶೇಷಣವನ್ನು ಕೊಟ್ಟರೂ ಕುಲಾಲಕೃತಿಯ ಸಂಗ್ರಹವಾಗುವುದಿಲ್ಲ. ಆಗಾಮಿ ಅದೃಷ್ಟವೂ ಘಟಜನಕಾದೃಷ್ಟಕ್ಕೆ ಸಜಾತೀಯ ವಾದುದರಿಂದ ಅದರಲ್ಲೂ ಘಟಜನಕತ್ವಯೋಗ್ಯತ್ವವು ಇದೆ. ಅರ್ಥಾತ್ ಘಟಜನಕತ್ವವಿದೆ. ಹೀಗೆ ಸ್ವಜನಕತ್ವವು ಅವ್ಯಾವರ್ತಕ. ಆದಕ್ಕಾಗಿ 'ಜನಕತ್ವಂ ಫಲೋಪಧಾಯಕತ್ವಂ' ಎಂದು ಹೇಳಬೇಕು. ಮಣಿಗ್ರಂಥಕ್ಕೆ 'ಮಣಿಸಾರ' ಎಂಬ ವ್ಯಾಖ್ಯಾನವನ್ನು ಬರೆದಿರುವ ಗೋಪೀನಾಥಠಕ್ಕುರ (15ನೇ ಶತಮಾನ) ಇದೇ ಅರ್ಥವನ್ನು ಮಾಡಿದ್ದಾನೆ. ಹೀಗೆ ಮಾಡಿದಾಗ ಗೌರವ. ಅದಕ್ಕಾಗಿ ತರ್ಕತಾಂಡವದಲ್ಲಿ ಸ್ವಜನ್ಯತ್ವವಿಶೇಷಣವನ್ನು ಕೊಡಲಾಗಿದೆ. ಇದರಿಂದಾಗಿಯೇ ಮುಂದಿನ ಎರಡನೆಯ ಸಾಧ್ಯದಲ್ಲಿ ಸ್ವಜನಕ ಎಂಬ ವಿಶೇಷಣವು ಇರುವುದರಿಂದ ಆದರ ಸಾಂಕರ್ಯವೂ ಪರಿಹಾರವಾಗುತ್ತದೆ.

## ದ್ವಿತೀಯ, ತೃತೀಯ ಸಾಧ್ಯಘಟಕಪದಕೃತ್ಯ

**द्वितीयसाध्येऽस्मदादिभिः सिद्धसाधनवारणाय स्वजनकादृष्टोत्तरेति । तृतीये च विषयीभवदिति विशेषणम् ।।**

१. अदृष्टेति। अदृष्टपदं स्वजनकादृष्टपरम्। (अलोकः पु.१६)

२. ''सामान्यतो व्याप्तिश्च अनुमाने उपहर्तुमशक्या'' (ಮಣಿ-ಅರ್ಥಾಪತ್ತಿಗ್ರಂಥ)

ಎರಡನೆಯ ಸಾಧ್ಯ–ಸ್ವಜನಕಾದೃಷ್ಟೋತ್ತರೋಪಾದಾನಗೋಚರಾಪರೋಕ್ಷಜ್ಞಾನ–ಚಿಕೀರ್ಷಾ–ಕೃತಿಮಜನ್ಯತ್ವ. ಈ ಸಾಧ್ಯದಲ್ಲಿ, ಅದೃಷ್ಟದ್ವಾರಾ ಅಸ್ಮದಾದಿಕೃತಿಮಜ್ಜನ್ಯತ್ವವು ಕಾರ್ಯ–ಪ್ರಪಂಚದಲ್ಲಿ ಇರುವುದರಿಂದ ಸಿದ್ಧಸಾಧನತಾ ಪರಿಹಾರಕ್ಕಾಗಿ ಸ್ವಜನಕಾದೃಷ್ಟೋತ್ತರತ್ವ ವಿಶೇಷಣವನ್ನು ಜ್ಞಾನಾದಿಗಳಿಗೆ ಕೊಡಲಾಗಿದೆ. ಇವರಾದಿಗೋಚರವಾದ ನಮ್ಮ ಜ್ಞಾನಾದಿಗಳು ಕಾರ್ಯೋತ್ಪಾದಕವಾದ ಅದೃಷ್ಟಕ್ಕೆ ಜನಕಗಳಾದುದರಿಂದ ಅವುಗಳು ಅದೃಷ್ಟಪೂರ್ವವೃತ್ತಿಯಾಗಿವೆ, ಅದೃಷ್ಟೋತ್ತರಗಳಾಗಿಲ್ಲ. ಆದ್ದರಿಂದ ಸಿದ್ಧಸಾಧನತಾಪರಿಹಾರವಾಗುತ್ತದೆ.

ತೃತೀಯಸಾಧ್ಯ–ಅಪರೋಕ್ಷಜ್ಞಾನ–ಚಿಕೀರ್ಷಾ–ಪ್ರಯತ್ನವಿಷಯೀಭವದುಪಾದಾನಾನಿ, ಎಂದು. ಅಲ್ಲಿ ಉಪಾದಾನಕ್ಕೆ 'ವಿಷಯೀಭವತ್' ಎಂಬ ವಿಶೇಷಣವಿರುವುದರಿಂದ ಅದೃಷ್ಟದ್ವಾರಕ ಜೀವೀಯಪ್ರಯತ್ನಜನ್ಯತ್ವಮಾದಾಯ ಸಿದ್ಧಸಾಧನತಾ ಇಲ್ಲ. ನಮ್ಮ ಜ್ಞಾನಾದಿಗಳಿಗೆ ಕಾರ್ಯಪ್ರಪಂಚೋಪಾದಾನಗಳು ವಿಷಯಗಳಲ್ಲ.

## ನ್ಯಾಯದೀಪ

**सिद्धसाधनेति ।** तत्र स्वपदस्य समभिव्याहृतपक्षदृष्टान्तपरत्वात् अस्मदादिजीवकृतेः क्षित्यादिजनकत्वेऽप्यदृष्टद्वारैव, न साक्षादिति क्षित्यादिजनकादृष्टपूर्वभावितया तदुत्तरभावित्वाभावान्न सिद्धसाधनमिति भावः । ठक्कुरादौ तु कालीरूपादावंशतःसिद्धसाधनवारणाय— **स्वजनकादृष्टोत्तरेति** विशेषणमित्युक्तम् । **तृतीये चेति ।** सिद्धसाधनवारणायेत्यनुषङ्गः । **इति विशेषणमिति ।** तस्य ज्ञानादिविषयोपादानसमवेतानीत्यर्थत्वेन क्षित्यादेरस्मदादिज्ञानादिविषयसमवेतत्वाभावादिति भावः ।।

ಎರಡನೆಯ ಸಾಧ್ಯದಲ್ಲಿ ಸ್ವಪದವು ಸಮಭಿವ್ಯಾಹೃತಪರ. ಪಕ್ಷದಲ್ಲಿ ಸಮನ್ವಯ ಮಾಡುವಾಗ ಪಕ್ಷವಾಚಕ, ದೃಷ್ಟಾಂತದಲ್ಲಿ ದೃಷ್ಟಾಂತವಾಚಕ. ನಮ್ಮ ಕೃತಿಯು ಕ್ಷಿತ್ಯಾದಿಜನಕವಾದರೂ ಅದೃಷ್ಟದ್ವಾರಾ ಜನಕ, ಈಶಕೃತಿಯಂತೆ ಸಾಕ್ಷಾಜ್ಜನಕವಲ್ಲ. ಆದ್ದರಿಂದ ಅದು ವಿಶ್ವಜನಕವಾದ ಅದೃಷ್ಟಪೂರ್ವಭಾವಿಯಾಗಿದೆ, ಉತ್ತರಭಾವಿಯಲ್ಲ. ಆದ್ದರಿಂದ ಸಿದ್ಧಸಾಧನತಾ ಇಲ್ಲ.

ಗೋಪೀನಾಥಠಕ್ಕುರನ ಮಣಿವ್ಯಾಖ್ಯಾನದಲ್ಲಿ ಈ ವಿಶೇಷಣಕ್ಕೆ 'ಕಾಲೀರೂಪದಲ್ಲಿ' ಅಂಶತಃ ಸಿದ್ಧಸಾಧನತಾಪರಿಹಾರವು ಪ್ರಯೋಜನ ಎಂದಿದೆ. ಕಾಲಿಯ ಕೃತಿಯು ಗೌರರೂಪ–ಜನಕವಾದರೂ

ಅದೃಷ್ಟದ್ವಾರಾ ಜನಕವಾದುದರಿಂದ ಅದು ಸ್ವಜನಕಾದೃಷ್ಟ ಪೂರ್ವಭಾವಿ, ಉತ್ತರಕಾಲೀನವಲ್ಲ, ಎಂದು ಸಿದ್ಧಸಾಧನತಾಪರಿಹಾರ.

ಮೂರನೆಯ ಸಾಧ್ಯದಲ್ಲಿ 'ವಿಷಯೀಭವತ್' ಎಂಬ ವಿಶೇಷಣದಿಂದ ಸಿದ್ಧಸಾಧನತಾ ಪರಿಹಾರ ಹೀಗೆ– ವಿಷಯೀಭವದುಪಾದಾನಾನಿ ಎಂದರೆ ತಾದೃಶಉಪಾದಾನ ಸಮವೇತಾನಿ ಎಂದರ್ಥ. ಕ್ಷಿತ್ಯಾದ್ಯುಪಾದಾನಗಳು ನಮ್ಮ ಜ್ಞಾನಕ್ಕೆ ವಿಷಯಗಳಲ್ಲ. ಆದ್ದರಿಂದ ಕ್ಷಿತ್ಯಾದಿಗಳಲ್ಲಿ ಅಸ್ಮದಾದಿ–ಜ್ಞಾನವಿಷಯೀಭವತ್–ಉಪಾದಾನ–ಸಮವೇತತ್ವ ಬರುವುದಿಲ್ಲ.

## ಅವತಾರಿಕೆ

**प्रागुक्तप्रयोगे ध्वंसस्य सकर्तृकत्वानापत्त्या सकलजगन्निर्मातृ-कर्तृसिद्धिर्न स्यादित्यतो यद्वेत्यादिना मणावुक्तं पक्षान्तरं तत्पूर्वोक्त पक्षतात्पर्यविवरणपूर्वमनुवदति–अत्र चेत्यादिना ।**

ಭಾಷ್ಯಾದಿಗಳಿಗೆ ಸಮ್ಮತವಾದ ಈ ಅನುಮಾನದಂತೆ ಪಕ್ಷದಲ್ಲಿ ಧ್ವಂಸವು ಸೇರುವುದಿಲ್ಲ. ಅಲ್ಲಿ ಉಕ್ತಸಕರ್ತೃಕತ್ವವೂ ಇಲ್ಲ. ಇದರಿಂದ ಈಶ್ವರನಿಗೆ ಸಕಲ ಜಗನ್ನಿರ್ಮಾತೃತ್ವವು ಸಿದ್ಧವಾಗವುದಿಲ್ಲ. ಆದಕ್ಕಾಗಿ ಮಣಿಯಲ್ಲಿ 'ಯದ್ವಾ' ಎಂದು ಈಶ್ವರಸಾಧಕವಾದ ಅನುಮಾನಾಂತರವನ್ನು ಮಾಡಲಾಗಿದೆ. ಈ ಅನುಮಾನದ ತಾತ್ಪರ್ಯವನ್ನು ವಿವರಿಸುವ ಮೂಲಕ ಮಣಿಯಲ್ಲಿ ಹೇಳಿದ್ದನ್ನು 'ಅತ್ರಚ' ಎಂಬ ಗ್ರಂಥದಲ್ಲಿ ಅನುವಾದ ಮಾಡಿದ್ದಾರೆ.

**अत्रच भाष्यादौ सकर्तृकत्वनिरुक्तावुपादानपदप्रक्षेपाद् ध्वसव्यावृत्त-सकर्तृकत्वसिद्ध्यर्थं पक्षसाध्यहेतुषु समवेतोपादानभावपदानि प्रयुक्तानि । यदातु ध्वंससाधारणसकर्तृकत्वमात्रेणेश्वरसिद्धेस्तन्मात्रं सिषाधयिषितं तदा पक्षादौ समवेतादिपदानि अनपेक्षितान्येव । अस्मिंश्च पक्षे अस्मदादि-निष्ठघटादिजनककृतिध्वंसस्य निरुक्तरूपकृतिजन्यत्वेन तद्भिन्नत्वाभावात् तस्य पक्षता न स्यात् । तदर्थं कृतिपदस्थाने सविषयत्रितयेति वाच्यम् ।**

**एवञ्च कृतिध्वंसस्य प्रतियोगिभूतया कृत्या, विरोधिगुण-भूतेनोत्तरज्ञानेन च जन्यत्वेऽपि चिकीर्षाजन्यत्वाभावात्, चिकीर्षा-ध्वंसस्य चोक्तरीत्या चिकीर्षाकृतिजन्यत्वेऽपि ज्ञानजन्यत्वाभावात् तयोरपि पक्षतासिद्धः ।।**

ಭಾಷ್ಯ-ಟೀಕಾದಿ ಗ್ರಂಥಗಳಲ್ಲಿ ಈ ಅನುಮಾನದ ಸಾಧ್ಯವನ್ನು ನಿರೂಪಿಸುವಾಗ ಅದರಲ್ಲಿ ಉಪಾದಾನಪದವನ್ನು ಸೇರಿಸಲಾಗಿದೆ. ಇದರಿಂದ ಧ್ವಂಸದಲ್ಲಿ ಸಕರ್ತೃಕತ್ವವನ್ನು ವ್ಯಾವೃತ್ತಿಗೊಳಿಸುವುದಕ್ಕಾಗಿ ಪಕ್ಷ-ಸಾಧ್ಯ-ಹೇತು ಈ ಮೂರರಲ್ಲೂ ಕ್ರಮವಾಗಿ ಸಮವೇತ- ಉಪಾದಾನ-ಭಾವ ಎಂಬ ಪದಗಳನ್ನು ಪ್ರಯೋಗಿಸಲಾಗಿದೆ. ಇದರಿಂದ ಧ್ವಂಸವು ಪಕ್ಷದಲ್ಲಿ ಸೇರುವುದಿಲ್ಲ, ಅಲ್ಲಿ ಸಾಧ್ಯ-ಹೇತುಗಳೂ ಬರುವುದಿಲ್ಲ. ಒಂದುವೇಳೆ ಧ್ವಂಸಸಾಧಾರಣವಾದ ಸಕರ್ತೃಕತ್ವದಿಂದಲೇ ಈಶ್ವರನನ್ನು ಸಾಧಿಸುವುದಾದಲ್ಲಿ ಪಕ್ಷ-ಸಾಧ್ಯ-ಹೇತುಗಳಲ್ಲಿ ಸಮವೇತಾದಿ ಪದಗಳ ಅಗತ್ಯ ಇಲ್ಲ.

ಆದರೆ, ಈ ಪಕ್ಷದಲ್ಲಿ ಘಟಾದಿಜನಕವಾದ ಕುಲಾಲಾದಿಗಳ ಕೃತಿಯಧ್ವಂಸವೂ ಕೃತಿಜನ್ಯವಾಗಿದೆ. ಧ್ವಂಸಕ್ಕೆ ಪ್ರತಿಯೋಗಿಯು ಕಾರಣವಾದುದರಿಂದ. ಹೀಗೆ ಆ ಧ್ವಂಸವು ಜನ್ಯಕೃತಿಜನಜ್ಯವೇ ಆಗಿರುವುದರಿಂದ ತದ್ಭಿನ್ನತ್ವರೂಪಪಕ್ಷವಿಶೇಷಣವು ಅದರಲ್ಲಿ ಬರುವುದಿಲ್ಲ. ಅದು ಪಕ್ಷದಲ್ಲಿ ಸೇರುವುದಿಲ್ಲ. ಅದನ್ನೂ ಪಕ್ಷದಲ್ಲಿ ಸೇರಿಸುವುದಕ್ಕಾಗಿ ಪಕ್ಷದಲ್ಲಿ ಕೇವಲ ಕೃತಿಪದದ ಬದಲು ಸವಿಷಯವಾದ ಜ್ಞಾನೇಚ್ಛಾಕೃತಿ ಏತತ್ತ್ರಿತಯಜನ್ಯತ್ವವನ್ನು ಸೇರಿಸಬೇಕು. ಕೃತಿಧ್ವಂಸವು ಕೃತಿಜನ್ಯವಾದರೂ ಅಥವಾ ಆತ್ಮವಿಶೇಷಗುಣವಾದ, ಉತ್ತರಗುಣವಾದ ಜ್ಞಾನದಿಂದ ಜನ್ಯವಾದರೂ ಚಿಕೀರ್ಷಾಜನ್ಯತ್ವವು ಅದರಲ್ಲಿ ಇಲ್ಲ. ತ್ರಿತಯಜನ್ಯಭಿನ್ನವಾಯಿತು. ಪಕ್ಷಕೋಟಿಯಲ್ಲಿ ಪ್ರವಿಷ್ಟವಾಗುತ್ತದೆ. ಅದರಂತೆ ಚಿಕೀರ್ಷಾಧ್ವಂಸವೂ ಪ್ರತಿಯೋಗಿಭೂತ-ಚಿಕೀರ್ಷಾ ಮತ್ತು ಉತ್ತರವರ್ತಿ ಕೃತಿಯಿಂದ ಜನ್ಯವಾದರೂ ಜ್ಞಾನಜನ್ಯವಲ್ಲದ ಕಾರಣ (ಜ್ಞಾನವು ಚಿಕೀರ್ಷಾಪೂರ್ವಭಾವಿಯೇ ಆಗಿರುತ್ತದೆ) ತ್ರಿತಯಜನ್ಯತ್ವವು ಅದರಲ್ಲೂ ಇಲ್ಲ. ಅದೂ ಪಕ್ಷದಲ್ಲಿ ಸೇರುತ್ತದೆ.[1]

## ನ್ಯಾಯದೀಪ

**मात्रेणेति ।** उपादानादिघटितत्वेन विनेति मात्रपदार्थः । **पक्षादाविति।** पक्षसाध्यहेतुषु समवेतोपादानभावपदानि अनपेक्षितानीत्यर्थः । ''नन्वदृष्टाद्वारकजन्यकृतिजन्यभिन्नानि जन्यानि, इत्येव पक्षनिर्देशे सति घटजनककृतिध्वंसस्य पक्षता न स्यादित्यतो जन्येच्छाकृति-जन्यत्वं च पक्षे विवक्षितम्'' इत्युक्तं मणौ । पक्षधरे चात्र

1. ಆಲೋಕವ್ಯಾಖ್ಯಾನದಲ್ಲಿ ಪ್ರಥಮಾನುಮಾನದಲ್ಲಿ ಅಸ್ವಾರಸ್ಯವೇ ಕಲ್ಪಾಂತರಾನುಸರಣೆಗೆ ಕಾರಣ ಎನ್ನಲಾಗಿದೆ—
किञ्च तन्मते (मीमांसकमते) ध्वंसोऽपि अधिकरणात्मैवेति साध्यमपि तत्रास्तीति व्यभिचाराभावात् विशेषणोपादानमेवान्यतरासिद्धम् । ..इत्यस्वरसात् कल्पान्तरमाह-यद्वेति ॥

ज्ञानेच्छाकृत्यजन्यत्वं विवक्षणीयमित्युक्त्वा कृतिध्वंसादेः पक्षत्वमुपपादितम् । तदाह—**अस्मिंश्चेति।** **सविषयकेति ।** अदृष्टाद्वारकसविषयकत्रितयजन्यभिन्नानि जन्यानीति वाच्यमित्यर्थः । **विरोधीति ।** उत्तरात्मविशेषगुणानां पूर्वपूर्व-निवर्तकत्वादिति भावः । चिकार्षाध्वंसस्य पक्षता न स्यात्। प्रतियोगितया चिकीर्षाजन्यत्वात् । विरोधिगुणभूतयोत्तरकृत्या जन्यत्वादित्यत आह–**चिकीर्षेति। ज्ञानेति ।** तस्य चिकीर्षातः पूर्वभावितया तज्जनकत्वेन तद्ध्वंसाजनकत्वादिति भावः । **तयोरपीति ।** कृतिचिकीर्षाध्वंसयोरपीत्यर्थः ।।

ಮೂಲದಲ್ಲಿ ಧ್ವಂಸಸಾಧಾರಣ ಸಕರ್ತೃಕತ್ವಮಾತ್ರೇಣ ಎಂದಿದೆ. ಸಕರ್ತೃಕತ್ವವು ಧ್ವಂಸದಲ್ಲೂ ಬರಬೇಕಾದರೆ ಅಪರೋಕ್ಷಜ್ಞಾನಾದಿಗಳಲ್ಲಿ ಉಪಾದಾನಗೋಚರತ್ವಾಂಶವನ್ನು ಬಿಡಬೇಕು. ಅದನ್ನು ಸೇರಿಸಿದರೆ ಧ್ವಂಸಕ್ಕೆ ಉಪಾದಾನವಿಲ್ಲವಾದುದರಿಂದ ಅದರಲ್ಲಿ ಸಾಧ್ಯವು ಬರುವುದಿಲ್ಲ. ಆದ್ದರಿಂದ, ಆಗ ಸಾಧ್ಯ ಅಪರೋಕ್ಷಜ್ಞಾನ–ಚಿಕೀರ್ಷಾ–ಕೃತಿಜನ್ಯತ್ವಮಾತ್ರ.

ಈ ಸಂದರ್ಭದ ಮಣಿಗ್ರಂಥದಲ್ಲಿ ಹೀಗಿದೆ— ಧ್ವಂಸವನ್ನೂ ಪಕ್ಷದಲ್ಲಿ ಸೇರಿಸಬೇಕಾದರೆ ಸಮವೇತಪದವನ್ನು ಬಿಟ್ಟು 'ಜನ್ಯಕೃತ್ಯಜನ್ಯಾನಿ ಜನ್ಯಾನಿ' ಎಂದು ಪಕ್ಷನಿರ್ದೇಶಮಾಡಬೇಕು. ಹೀಗೆ ಮಾಡಿದರೆ ಘಟಜನಕವಾದ ಕುಲಾಲನ ಕೃತಿಯ ಧ್ವಂಸವು ಪಕ್ಷದಲ್ಲಿ ಸೇರುವುದಿಲ್ಲ. ಅದು ಕುಲಾಲನ ಜನ್ಯಕೃತಿಯಿಂದ ಜನ್ಯವೇ ಆಗಿದೆ. ಧ್ವಂಸಕ್ಕೆ ಪ್ರತಿಯೋಗಿಯು ಕಾರಣವಾದುದರಿಂದ. ಅದಕ್ಕಾಗಿ ಬರೇ ಜನ್ಯಕೃತ್ಯಜನ್ಯತ್ವವನ್ನು ಬಿಟ್ಟು ಅದರೊಂದಿಗೆ ಇಚ್ಛಾವನ್ನೂ ಸೇರಿಸಿ 'ಜನ್ಯೇಚ್ಛಾಕೃತ್ಯಜನ್ಯತ್ವ'ವನ್ನು ಪಕ್ಷದಲ್ಲಿ ಸೇರಿಸಬೇಕು. ಆಗ ಕೃತಿಧ್ವಂಸವು ಇಚ್ಛಾಜನ್ಯವಲ್ಲದ ಕಾರಣ ಉಭಯಾಜನ್ಯತ್ವವು ಅದರಲ್ಲಿ ಬರುತ್ತದೆ. ಅದೂ ಪಕ್ಷದಲ್ಲಿ ಸೇರುತ್ತದೆ, ಎನ್ನಲಾಗಿದೆ. ಮಣಿವ್ಯಾಖ್ಯಾನಕಾರ ಪಕ್ಷಧರಮಿಶ್ರರು 'ಜ್ಞಾನೇಚ್ಛಾಕೃತ್ಯಜನ್ಯತ್ವ' ಈ ಮೂರನ್ನೂ ಪಕ್ಷದಲ್ಲಿ ಸೇರಿಸಿರುತ್ತಾರೆ. ಇದನ್ನೇ ಮೂಲದಲ್ಲಿ ಹೇಳಲಾಗಿದೆ.[1]

ಮೂಲದಲ್ಲಿ ಚಿಕೀರ್ಷಾಧ್ವಂಸವೂ ಪಕ್ಷದಲ್ಲಿ ಸೇರುತ್ತದೆ, ಎನ್ನಲಾಗಿದೆ. ಅದರಲ್ಲಿ ಪ್ರತಿಯೋಗಿತಯಾ ಚಿಕೀರ್ಷಾಜನ್ಯತ್ವವು ಇದೆ. ಉತ್ತರಾತ್ಮಗುಣತ್ವೇನ ಕೃತಿಜನ್ಯತ್ವವೂ ಇದೆ. ಸ್ವೋತ್ತರಪ್ರವೃತ್ತಿಕೃತಿಯಿಂದಾಗಿ ಚಿಕೀರ್ಷಾವು ನಾಶವಾಗುತ್ತದೆ. ಆದರೂ ಅದು ಜ್ಞಾನಜನ್ಯವಲ್ಲ.

---

१. अत्र ज्ञानेच्छाकृत्यजन्यत्वं विवक्षणीयम् । अन्यथा प्रतियोगितया इच्छया, विरोधिगुणत्वेन (उतरगुणत्वेन) कृत्या च जनिते इच्छाध्वंसे पक्षतावच्छेदकाव्याप्त्यापत्तेः इत्यवधेयम् । (अलोक.पु.२१)

ಚಿಕೀರ್ಷಾವು(ಇಚ್ಛಾವು) ಜ್ಞಾನಜನ್ಯವಾದುದರಿಂದ ಜ್ಞಾನವು ಚಿಕೀರ್ಷಾಪೂರ್ವಭಾವಿ. ಅದು ಚಿಕೀರ್ಷಾಧ್ವಂಸಕ್ಕೆ ಕಾರಣವಲ್ಲ. ಹೀಗೆ ಚಿಕೀರ್ಷಾಧ್ವಂಸದಲ್ಲಿ ತ್ರಿತಯಜನ್ಯತ್ವವು ಇಲ್ಲವಾದುದರಿಂದ ಅದು ಪಕ್ಷದಲ್ಲಿ ಸೇರುತ್ತದೆ.

## ಅವತಾರಿಕೆ

**नन्वेवमपि न सर्वध्वंसस्य पक्षता। चरमघट-सुखादिध्वंसस्य पक्षबहिर्भावावश्यंभावात्। अन्यथा तस्य भोग-तत्साधनेतरतया अदृष्टाजन्यत्वेन स्वजनकादृष्टाप्रसिध्या उक्तरूपसाध्यासंभवेन तदंशे बाधापत्तेः। उक्तदिशा अन्योन्याभावस्य पक्षतावच्छेदकतया तस्य तन्मतेऽप्रसिद्ध्या आश्रयासिद्धेश्चेति पक्षधरोक्तारुच्या मणौ ''क्षितिरेव वा पक्ष''इत्यादिना पक्षान्तरमुक्त्वोपपादितम् तदाह—यद्वेति।**

ಉಕ್ತವಿಶೇಷಣಗಳನ್ನು ಜಿಟ್ಟಾಗ ಧ್ವಂಸವು ಪಕ್ಷದಲ್ಲಿ ಸೇರಿದರೂ ಎಲ್ಲಾ ಧ್ವಂಸಗಳೂ ಪಕ್ಷವಾಗಲು ಸಾಧ್ಯವಿಲ್ಲ. ಚರಮಘಟಧ್ವಂಸ ಮತ್ತು ಚರಮಸುಖಾದಿಧ್ವಂಸವು ಪಕ್ಷದಲ್ಲಿ ಸೇರುವುದಿಲ್ಲ. ಅವುಗಳು ಅದೃಷ್ಟಜನ್ಯಕಾರ್ಯಗಳಲ್ಲ. ಭೋಗ ಮತ್ತು ಭೋಗಸಾಧನಗಳು ಮಾತ್ರ ಅದೃಷ್ಟಜನ್ಯವಾಗುತ್ತವೆ. ಈ ಚರಮಧ್ವಂಸಗಳು ಸ್ವಯಂ ಭೋಗರೂಪಗಳೂ ಅಲ್ಲ, ಮುಂದೆ ಪ್ರಲಯದಲ್ಲಿ ಭೋಗವೇ ಇಲ್ಲದುದರಿಂದ ಭೋಗಸಾಧನಗಳೂ ಅಲ್ಲ. ಹೀಗಾಗಿ, ಸ್ವಜನಕಾದೃಷ್ಟವೇ ಅಲ್ಲಿ ಅಪ್ರಸಿದ್ಧ. ಆದ್ದರಿಂದ ತದ್‌ಘಟಿತವಾದ ಸಾಧ್ಯವೂ ಅಪ್ರಸಿದ್ಧವಾದುದರಿಂದ ತದಂಶೇ ಬಾಧ ಬರುತ್ತದೆ. ಅದಕ್ಕಾಗಿ ಅವುಗಳನ್ನು ಪಕ್ಷದಿಂದ ಹೊರಗಿಡುವುದು ಅನಿವಾರ್ಯ.

ಅದರಂತೆ 'ಜನ್ಯಕೃತ್ಯಜನ್ಯಾನಿ' ಎಂದು ಪಕ್ಷಘಟಕವಾದ ವಿಶೇಷಣ. ಅಜನ್ಯಪದಕ್ಕೆ 'ಜನ್ಯಭಿನ್ನ' ಎಂದು ಅನ್ಯೋನ್ಯಾಭಾವವು ಅರ್ಥ. ಮೀಮಾಂಸಕರು ಅತಿರಿಕ್ತಾನ್ಯೋನ್ಯಾಭಾವವನ್ನು ಅಂಗೀಕರಿಸಿಲ್ಲ. ಆದ್ದರಿಂದ ತಾದೃಶವಿಶೇಷಣಘಟಿತವಾದ ಪಕ್ಷವು ಅವರಿಗೆ ಅಪ್ರಸಿದ್ಧ.

ಈ ಎರಡೂ ದೋಷಗಳನ್ನು ಪಕ್ಷಧರಮಿಶ್ರರು 'ಆಲೋಕ'ದಲ್ಲಿ ಹೇಳಿದ್ದಾರೆ. ಅದಕ್ಕಾಗಿ ಮಣಿಗ್ರಂಥದಲ್ಲಿ 'ಕ್ಷಿತಿರೇವ ವಾ ಪಕ್ಷಃ' ಎಂದು ತೃತೀಯಕಲ್ಪವನ್ನು ಅನುಸರಿಸಲಾಗಿದೆ. ಆ ಕಲ್ಪವನ್ನೇ ಮೂಲದಲ್ಲಿ ಯದ್ವಾ ಎಂದು ಹೇಳಲಾಗಿದೆ.[1]

---

१ ननु ध्वन्ससाधारणपक्षत्वे चरमदुःखध्वन्से स्वजनकादृष्टाप्रसिद्ध्या साध्यासम्भवः। तस्य भोगतत्सधनेतरतया अदृष्टाजन्यत्वात्। अतस्तस्य पक्षवहिर्भाव एव कर्तव्यो गत्यन्तराभावात्।

**यद्वा, क्षितिरेव पक्षः ।**

**नन्वेवं पक्षादन्यत्राङ्कुरे संदिग्धानैकान्त्यम् । नच निश्चितसाध्याभाववति साधनसन्देह एव दोषो नतु सन्दिग्धसाध्ये साधननिश्चयोऽपीति वाच्यम् । हेतौ साध्याभाववद्गामित्वसन्देहस्य दूषकताबीजस्योभयत्रापि सत्वात् । नचैवंविधस्य सन्देहस्य पक्षेऽपि सत्वादनुमानमात्रोच्छेदः । तदर्थमेव पक्षादन्यत्रेति विशेषितत्वात् ।।**

ಅಥವಾ 'ಕ್ಷಿತಿಃ' ಎಂದಿಷ್ಟೇ ಪಕ್ಷನಿರ್ದೇಶ. ತತ್ಕರ್ತೃಕತ್ವೇನ ಈಶ್ವರಸಿದ್ಧಿ. ಹೀಗಾದರೆ ಅಂಕುರವು ಪಕ್ಷಾನ್ಯವಾಯಿತು. ಅಲ್ಲಿ ಸಕರ್ತೃಕತ್ವಸಂದೇಹ ಇದೆ. ಹೇತು ನಿಶ್ಚಿತವಾಗಿದೆ. ಹೇತುವಿನಲ್ಲಿ ಸಾಧ್ಯಾಭಾವವದ್ ವೃತ್ತಿತ್ವಸಂದೇಹ ಬರುವುದರಿಂದ ವ್ಯಭಿಚಾರ ಸಂದೇಹವು ದೋಷವಾಗುತ್ತದೆ.

**ಆಕ್ಷೇಪ**–ಸಾಧ್ಯಾಭಾವವು ನಿಶ್ಚಿತವಾಗಿರುವ ಅಧಿಕರಣದಲ್ಲಿ ಹೇತುವು ಸಂದಿಗ್ಧವಾದರೆ ಮಾತ್ರ ಸದಿಗ್ಧವ್ಯಬಿಚಾರವು ದೋಷವಾಗುತ್ತದೆ. ಪ್ರಕೃತದಲ್ಲಿ, ಸಾಧ್ಯಸಂದಿಗ್ಧವಾದ ಅಧಿಕರಣದಲ್ಲಿ ಹೇತುವು ನಿಶ್ಚಿತವಾಗಿದೆ. ಆದ್ದರಿಂದ ಸಂದಿಗ್ಧವ್ಯಭಿಚಾರವು ದೋಷವಲ್ಲ.

**ಸಮಾಧಾನ**—ಹೇತುವಿನಲ್ಲಿ ಸಾಧ್ಯಾಭಾವವದ್‌ಗಾಮಿತ್ವ ಸಂದೇಹವೇ ಸಂದಿಗ್ಧವ್ಯಭಿಚಾರಕ್ಕೆ ದೂಷಕತ್ವಪ್ರಯೋಜಕವಾದ ಧರ್ಮ. ಈ ಧರ್ಮ ಎರಡು ವಿಧದಿಂದ ಹೇತುವಿನಲ್ಲಿ ಬರುತ್ತದೆ— 1.ಸಾಧ್ಯಭಾವನಿಶ್ಚಯವಿದ್ದಲ್ಲಿ ಹೇತುಸಂದಿಗ್ಧವಾದಾಗ. 2.ಸಾಧ್ಯಾಭಾವಸಂದೇಹವಿದ್ದಲ್ಲಿ ಹೇತು ನಿಶ್ಚಿತವಾದಾಗ. ಹೀಗೆ ಈ ಎರಡೂ ಸಂದರ್ಭಗಳೂ ದೂಷಕತಾಬೀಜಕ್ಕೆ ಪ್ರಯೋಜಕವಾದುದರಿಂದ ಸಂದಿಗ್ಧಸಾಧ್ಯವತ್ತಾದ ಅಂಕುರದಲ್ಲಿ ಹೇತುನಿಶ್ಚಯವೂ ದೋಷವೆ.

**ಆಕ್ಷೇಪ**—ಇಂತಹ ಸಂದೇಹವು ಪಕ್ಷದಲ್ಲೂ ಇದೆ. ಅದರಲ್ಲಿ ಹೇತು ನಿಶ್ಚಿತವಾಗಿದೆ. ಆದ್ದರಿಂದ ಸಕಲಾನುಮಾನಗಳಲ್ಲಿ ಸಂದಿಗ್ಧವ್ಯಭಿಚಾರದೋಷವಿದೆ. ಸರ್ವಾನುಮಾನಗಳೂ ದುಷ್ಟವಾಗಬೇಕಾದೀತು.

**ಸಮಾಧಾನ**—ಇಲ್ಲ. ಅದಕ್ಕಾಗಿಯೇ 'ಪಕ್ಷಾದನ್ಯತ್ರಸಾಧ್ಯಸಂದೇಹ ಪ್ರಯುಕ್ತವಾದ ವ್ಯಭಿಚಾರಸಂದೇಹಃ ದೋಷಃ' ಎಂದು ಹೇಳಬೇಕು. ಪಕ್ಷೀಯವ್ಯಭಿಚಾರಸಂದೇಹವು ದೋಷವಲ್ಲ. ಪ್ರಕೃತ ಈಶ್ವರಾನುಮಾನದಲ್ಲಿ ಪಕ್ಷಾದನ್ಯತ್ರ ಅಂಕುರಾದಿಗಳಲ್ಲಿ ವ್ಯಭಿಚಾರ ಸಂದೇಹವಿದೆ. ಅದು ದೋಷ. ಹೀಗೆ ಪೂರ್ವಪಕ್ಷ.

---

किञ्च पक्षतावच्छेदकस्यान्योन्याभावतया तस्य च तन्मते अप्रसिद्ध्या आश्रयासिद्धिरिति मनसिकृत्य प्रत्येकपक्षतामेव सिद्धान्तयति–क्षितिरिति ।। (आलोक. पु.२१)

## ನ್ಯಾಯದೀಪ

**पक्ष इति।** प्रतिज्ञाविषय इत्यर्थः । संदेहादिरूपपक्षताया अन्यत्रापि भावात् क्षितेरेव पक्षत्वे मण्युक्तवाधकशंकां तदुत्तरं च निष्कृष्याह– **नन्वित्यादिनेष्टसिद्धेरित्यन्तेन ।** अनुमानमात्रोच्छेदभयात् पक्षादन्यत्रेत्युक्तम् । पक्षस्वरूपमग्रे विकल्पयिष्यते ।

ಮೂಲದಲ್ಲಿ 'ಕ್ಷಿತಿರೇವ ಪಕ್ಷಃ' ಎಂಬಲ್ಲಿ ಪಕ್ಷ ಎಂದರೆ ಪ್ರತಿಜ್ಞಾವಿಷಯ ಎಂದರ್ಥ. 'ಸಂದಿಗ್ಧಸಾಧ್ಯವಾನ್' ಎಂಬ ಅರ್ಥದಲ್ಲಿ ಸಾಧ್ಯಸಂದೇಹರೂಪವಾದ ಪಕ್ಷತಾ ಪ್ರಕೃತಪಕ್ಷವಲ್ಲದ ಅಂಕುರಾದಿಗಳಲ್ಲೂ ಸಮಾನವಾಗಿದೆ.

ಕ್ಷಿತಿಯನ್ನು ಮಾತ್ರ ಪಕ್ಷಮಾಡಿದರೆ ಮಣಿಯಲ್ಲಿ ಹೇಳಿರುವ ಬಾಧಕವನ್ನೂ ಅದಕ್ಕಿಲ್ಲಿ ಹೇಳಿರುವ ಸಮಾಧಾನವನ್ನೂ 'ನನು' ಇತ್ಯಾದಿ ಮೂಲದಲ್ಲಿ ಸಂಗ್ರಹಿಸಿ ಹೇಳಲಾಗಿದೆ.[1]

**इति चेन्न। पक्षादित्यत्र पक्षशब्देन प्रयोगविषयविवक्षायां स्वार्थानुमानोच्छेदात् । पक्षलक्षणवद्विवक्षायां चाङ्कुरस्यापि पक्षत्वात् । अत एव तत्र पक्षसमव्यवहारः । अङ्कुरस्यानुपादानं तु क्षितिमात्रोपादानेपीष्टसिद्धेः ।।**

ಈ ವ್ಯಭಿಚಾರಾಶಂಕೆಯು ಸರಿಯಲ್ಲ. "ಪಕ್ಷಾದನ್ಯತ್ರಸಂದಿಗ್ಧಾನೈಕಾಂತ್ಯಮ್" ಎಂಬಲ್ಲಿ ಪಕ್ಷಪದಕ್ಕೆ ಏನರ್ಥ? "ಪ್ರಯೋಗವಿಷಯ" (ಪ್ರತಿಜ್ಞಾವಿಷಯ) ಎಂದು ಅರ್ಥಮಾಡಿದರೆ ಸ್ವಾರ್ಥಾನುಮಾನದಲ್ಲಿ ಅದು ದೋಷವಾಗಲಿಕ್ಕಿಲ್ಲ. ಅಲ್ಲಿ ಪ್ರಯೋಗವೇ ಇಲ್ಲ.

---

१ नचाङ्कुरे संदिग्धानैकांतिकत्वम्, पक्ष-पक्षसमनैरपेक्ष्येण घटादौ निश्चितव्याप्तेः लिङ्गस्य तयोर्दर्शनेन उभयत्रानुमित्यविरोधात्। प्रतिज्ञायाः अविषयत्वात् तत्र पक्षसमत्वव्यपदेशः। ...यदि च क्षितौ हेतुनिश्चयदशायां अङ्कुरस्य हेतुमत्तया न निश्चयः तदा क सन्दिग्धानैकान्तिकत्वम्? ...तस्मात् साध्यसन्देहवति हेतुनिश्चयः न दोषः। किन्तु गुण एव । अन्यथा अनुमानमात्रम् उच्छिद्येत ।

पक्षादन्यत्र तद्दूषणम् इति यदुक्तम्, तत्र पक्षान्यत्वं सिषाधयिषितसाध्यान्यत्वं यदि तदा अपेक्षितानुमितिः न स्यात्। ....अथ प्रतिज्ञा–विषयान्यत्वं तदा स्वार्थामित्युच्छेदः। (मणिः पु.२३)

"ಪಕ್ಷಲಕ್ಷಣೋಪೇತವಾದುದು" ಎಂದು ಅರ್ಥಮಾಡಿದರೆ ಕ್ಷಿತಿಯಂತೆ ಅಂಕುರವೂ ಪಕ್ಷವೇ ಆಯಿತು. ಪಕ್ಷಾದನ್ಯತ್ರ ವ್ಯಭಿಚಾರಸಂದೇಹ ಇಲ್ಲ. ಪಕ್ಷಾಂತರ್ಗತದಲ್ಲೂ ಸಾಧ್ಯಸಂದೇಹವು ಇರುವುದರಿಂದಾಗಿಯೇ ಅದನ್ನೂ ಪಕ್ಷಸಮ ಎಂದು ಕರೆಯಲು ಸಾಧ್ಯಸಂದೇಹವೇ ಕಾರಣ. ಆದ್ದರಿಂದ ಕ್ಷಿತಿಮಾತ್ರಪಕ್ಷಕವಾದ ಅನುಮಾನವೂ ಯುಕ್ತವಾಗಿದೆ.

ಅಂಕುರದಲ್ಲಿ ಸಾಧ್ಯಸಂದೇಹವಿದ್ದರೂ ಅದನ್ನು ಬಿಡಲು ಕಾರಣವೇನು? ಎಂದರೆ, ಕ್ಷಿತಿಮಾತ್ರವನ್ನು ಪಕ್ಷಮಾಡಿದರೂ ವಿವಕ್ಷಿತವಾದ ಈಶ್ವರಸಿದ್ಧಿಯಾಗುವುದರಿಂದ (ಇಷ್ಟಸಿದ್ಧಿಯಾಗುವುದರಿಂದ) ಅಂಕುರವನ್ನು ಪಕ್ಷದಲ್ಲಿ ಸೇರಿಸುವ ಅಗತ್ಯವಿಲ್ಲ.

## ನ್ಯಾಯದೀಪ

**पक्षलक्षणवदिति ।** सिषाधयिषाविरहसहकृतसाधकबाधकमानाभावादिरूपपक्षलक्षणवदित्यर्थः । **अत एव ।** पक्षलक्षणसत्त्वादेव । प्रतिज्ञाविषयत्वाभावात् समपदप्रयोग इति भावः । **इष्टसिद्धेरिति ।** तावतैवेश्वरसिद्धेरिति वा घटादौ निश्चितव्याप्तिकस्य लिंगस्य पक्षपक्षसमयोर्दर्शनेन उभयत्राप्यनुमित्युत्पत्तेरिति वार्थः ।

ಮೂಲದಲ್ಲಿ 'ಇಷ್ಟಸಿದ್ಧೇಃ' ಎಂದರೆ ಕ್ಷಿತಿಯಲ್ಲಿ ಸಾಧ್ಯನಿಶ್ಚಯವಾಗುವುದರಿಂದಲೇ ಈಶ್ವರಸಿದ್ಧಿಯಾಗುತ್ತದೆ, ಎಂದರ್ಥ. ಅಥವಾ, ಘಟಾದಿ ಸಪಕ್ಷಗಳಲ್ಲಿ ಕಾರ್ಯತ್ವಹೇತುವಿಗೆ ಸಾಧ್ಯವ್ಯಾಪ್ತಿಯು ನಿಶ್ಚಯವಾಗಿ ಅಂತಹ ಹೇತು ಪಕ್ಷ ಮತ್ತು ಸಪಕ್ಷಗಳಲ್ಲಿ (ಕ್ಷಿತಿ ಮತ್ತು ಅಂಕುರಗಳಲ್ಲಿ) ಜ್ಞಾತವಾದಾಗ ಉಭಯತ್ರ ಸಾಧ್ಯಾನುಮಿತಿ ಬರುತ್ತದೆ, ಎಂದು ಭಾವ.

## ಅವತಾರಿಕೆ

संदिग्धसाध्यवति हेतुनिश्चयो न दोष इत्यत्र बाधकं वक्ष्यमाणदूषणदार्ढ्याय स्वयमाशङ्क्य हेत्वाभासादिग्रन्थे मण्यायुक्तसमाधिमाह—**नन्वित्यादिना अदोषत्वादित्यन्तेन ।**

ಸಾಧ್ಯಸಂದೇಹವಿರುವ ಅಧಿಕರಣದಲ್ಲಿ ಹೇತು ನಿಶ್ಚಯವು ದೋಷವಲ್ಲ ಎಂದು ಈ ಹಿಂದೆ ಹೇಳಲಾಯಿತು. ಇದಕ್ಕೆ ಬಾಧಕವನ್ನು ಶಂಕೆಮಾಡಿ ಹೇತ್ವಾಭಾಸಗ್ರಂಥದಲ್ಲಿ ಮಣಿಕಾರ ಹೇಳಿರುವ

ಸಮಾಧಾನವನ್ನು 'ನನು' ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಇದರಿಂದ ಮುಂದೆ ಮೂಲದಲ್ಲಿ ಹೇಳಲಿರುವ ದೋಷವು ದೃಢವಾಗುತ್ತದೆ.[1]

**नन्वेवं संदिग्धोपाध्याहितः पक्ष एव व्यभिचारसन्देहोऽपि न दोषः स्यात्। नच तत्रानुकूलतर्काभावाद् व्याप्त्यनिश्चयः। अत्रतु कार्यत्वरूपहेतूच्छित्तेरेव बाधकत्वात् तन्निश्चय इति वैषम्यमिति वाच्यम्। पक्षे व्यभिचारसन्देहस्य दूषकत्वे तर्कस्यापि पक्षे व्यभिचारसन्देहेन प्रशिथिलमूलत्वापातात्।**

ಸಂದಿಗ್ಧವ್ಯಭಿಚಾರವು ದೋಷವಲ್ಲವಾದರೆ ಸಂದಿಗ್ಧೋಪಾದಿಯಿಂದ ಆಹಿತವಾದ ಪಕ್ಷೀಯವ್ಯಭಿಚಾರಸಂದೇಹವೂ ದೋಷವಾಗಲಿಕ್ಕಿಲ್ಲ. ಉದಾಹರಣೆಗೆ— ಅಷ್ಟಮಗರ್ಭಸ್ಥ ಮಿತ್ರಾತನಯನನ್ನು ಪಕ್ಷವನ್ನಾಗಿ ಮಾಡಿ 'ಅಯಂ ಶ್ಯಾಮಃ ಮಿತ್ರಾತನಯತ್ವಾತ್' ಎಂದು ಅನುಮಾನ ಮಾಡಿದಾಗ ಇಲ್ಲಿ ಶಾಕಪಾಕಜತ್ವವು ಉಪಾಧಿ. (ತಾಯಿ ಶಾಕಪದಾರ್ಥಗಳನ್ನು ತಿಂದು ಅದರ ಪಚನದಿಂದಾಗಿ ದೇಹವು ನಿರ್ಮಾಣವಾದರೆ ಅದು ಕಪ್ಪಾಗಿರುತ್ತದೆ.) ಆ ಉಪಾಧಿಯು ಸಾಧ್ಯವ್ಯಾಪಕವೆಂದು ಸಪಕ್ಷದಲ್ಲಿ (ಶಾಕಪಾಕದಿಂದ ಹುಟ್ಟಿದ ಮಕ್ಕಳಲ್ಲಿ) ನಿಶ್ಚಿತವಾಗಿದೆ. ಉಪಾಧಿ ಪಕ್ಷಾತ್ ವ್ಯಾವೃತ್ತವೆಂದು ನಿಶ್ಚಿತವಾದಲ್ಲಿ ತನ್ನಿವೃತ್ಯಾ ಸಾಧ್ಯನಿವೃತ್ತಿಯೂ ನಿಶ್ಚಿತವಾಗಬಹುದು. ಆದರೆ, ಆ ಉಪಾಧಿಗೆ ಪಕ್ಷವ್ಯಾವೃತ್ತಿ ಸಂದಿಗ್ಧವಾದುದರಿಂದ (ಗರ್ಭದಲ್ಲಿರುವದೇಹ ಶಾಕಪಾಕದಿಂದ ಹುಟ್ಟಿದೆಯೊ ಇಲ್ಲವೊ ಎಂಬ ಸಂದೇಹವಿದೆ) ಪಕ್ಷದಲ್ಲಿ ಸಾಧ್ಯಸಂದೇಹ ಬರುತ್ತದೆ. ಇದರಿಂದಾಗಿ ಹೇತುವಿನಲ್ಲಿ ವ್ಯಭಿಚಾರಸಂದೇಹ ಬರುತ್ತದೆ. ಈ ಆಹಿತ ಸಂದೇಹವು ದೋಷವೆಂದು ಸಮ್ಮತವಾಗಿದೆ. ಇದೂ ದೋಷವಾಗಲಿಕ್ಕಿಲ್ಲ. ಏವಂಚ ಅಲ್ಲಿಯೂ ಶ್ಯಾಮತ್ವದ ವ್ಯಾಪ್ತಿಯು ಮಿತ್ರಾತನಯತ್ವರೂಪ ಹೇತುವಿನಲ್ಲಿ ನಿಶ್ಚಿತವಾದೀತು ಎಂದು ಆಕ್ಷೇಪ.

**ಆಕ್ಷೇಪ**—ಅಲ್ಲಿ ಅನುಕೂಲತರ್ಕವಿಲ್ಲವಾದ ಕಾರಣ ವ್ಯಾಪ್ತಿಯು ನಿಶ್ಚಯವಾಗುವುದಿಲ್ಲ. ಆದರೆ, ಪ್ರಕೃತದಲ್ಲಿ ಬಾಧಕತರ್ಕವಿರುವುದರಿಂದ ವ್ಯಾಪ್ತಿಯು ನಿಶ್ಚಯವಾಗುತ್ತದೆ. 'ಯದಿ ಸಕರ್ತೃಕತ್ವಂ ನ ಸ್ಯಾತ್ ತರ್ಹಿ ಕಾರ್ಯತ್ವಮಪಿ ನಸ್ಯಾತ್, ಕಾರ್ಯಂ ಪ್ರತಿ ಕೃತೇಃ ಕಾರಣತ್ವಾತ್'

---

१. यत्र साधनाव्यापकत्वसन्देहः, साध्यव्यापकत्वसंदेहो वा, तदुभयसन्देहो वा तत्र हेतुव्यभिचारसंशायकत्वेन सदिग्धोपाधिः। यथा, मित्रातनयत्वेन श्यामत्वे साध्ये शाकाद्याहारपरिणतिजन्यत्वम्। (उपाधिविभागभागः-मणिः)

ಹೀಗೆ ಬಾಧಕತರ್ಕ ಪ್ರಕೃತದಲ್ಲಿ ಇದೆ. ಈ ವೈಷಮ್ಯವು ಇರುವುದರಿಂದಾಗಿ ಸಂದಿಗ್ಧವ್ಯಭಿಚಾರವು ಒಂದು ಕಡೆ ದೋಷ, ಇನ್ನೊಂದು ಕಡೆ ದೋಷವಲ್ಲ, ಎಂದು ನಿರ್ಧರಿಸಬಹುದು.

**ಸಮಾಧಾನ**—ಪಕ್ಷದಲ್ಲಿ ವ್ಯಭಿಚಾರ ಸಂದೇಹವು ದೋಷವೆಂದಾದಲ್ಲಿ ಬಾಧಕತರ್ಕವನ್ನೂ ಹೇಳಲಾಗುವುದಿಲ್ಲ. ತರ್ಕದಲ್ಲೂ ಆಪಾದ್ಯಾಪಾದಕಗಳಿಗೆ ವ್ಯಾಪ್ತಿ ಇರಬೇಕು. 'ಸಕರ್ತೃಕತ್ವಾಭಾವೇ ಕಾರ್ಯತ್ವಂ ನ ಸ್ಯಾತ್' ಎಂದು ತರ್ಕಮಾಡಬೇಕಾದರೆ 'ಯತ್ರ ಸಕತೃಕತ್ವಾಭಾವಃ ತತ್ರಕಾರ್ಯತ್ವಾಭಾವಃ' ಎಂದು ವ್ಯಾಪ್ತಿ ನಿಶ್ಚಯಬೇಕು. ವ್ಯಭಿಚಾರಸಂದೇಹವು ದೋಷವಾದಲ್ಲಿ ಈ ವ್ಯಾಪ್ತಿಯೂ ನಿರ್ಧಾರಿತವಾಗುವುದಿಲ್ಲ. ತರ್ಕದ ಮೂಲ ಅಂದರೆ ವ್ಯಾಪ್ತಿ. ಅದು ಪ್ರಶಿಥಿಲ=ಸಂದಿಗ್ಧವಾಗುತ್ತದೆ.

## ನ್ಯಾಯದೀಪ

**संदिग्धेति ।** स श्यामो मित्रातनयत्वादित्यष्टमगर्भस्थविषयप्रयोगे शाकपाकजत्वोपाधेः पक्षाद् व्यावृत्तिसंदेहेनाहितसाध्यसंदेहमूलो व्यभिचारसंशयोऽपीत्यर्थः । तत्र तस्यादोषत्वे व्याप्तिनिश्चयः स्यादिति भावः । तत्र व्याप्त्यनिश्चयोऽन्यनिमित्तक इत्याशङ्क्याह—**नचेति ।** **तर्कस्यापीति ।** साध्याभावे हेतुर्न स्यादित्येवं रूपतर्कस्यापि आपाद्यापादकयोर्व्याप्ति-संदेहेनेत्यर्थः ।

'ಮಿತ್ರಾ' ಎಂಬ ಹೆಂಗಸಿನ ಏಳೂ ಮಕ್ಕಳು ಕಪ್ಪಿದ್ದಾರೆ. ಇದನ್ನು ನೋಡಿ ಗರ್ಭಸ್ಥವಾದ ಎಂಟನೆಯ ಮಗುವೂ ಕಪ್ಪಾಗಿದೆ, ಎಂದು ಸಾಧನೆ ಮಾಡುವ ಅನುಮಾನಕ್ಕೆ ಶಾಕಪಾಕಜತ್ವವು ಉಪಾಧಿ. ಎಂಟನೆಯ ಮಗು ಕಪ್ಪೇ ಆಗಿರಬೇಕೆಂಬ ನಿಯಮವೇನಿಲ್ಲ. ಮಗುವಿನ ಬಣ್ಣಕ್ಕೆ ಮಿತ್ರಾತನಯತ್ವವು ಪ್ರಯೋಜಕವಲ್ಲ. ಶಾಕಪದಾರ್ಥಗಳ ಸಾರದಿಂದ ಹುಟ್ಟಿದರೆ ಮಗು ಕಪ್ಪಾಗುತ್ತದೆ. ಆದರೆ, ಗರ್ಭಸ್ಥಶಿಶು ಶಾಕಪಾಕದಿಂದಲೇ ಹುಟ್ಟಿದೆ ಎಂದು ನಿರ್ಧರಿಸಲಾಗದು. ಆದ್ದರಿಂದ ಆ ಉಪಾಧಿಯು ಪಕ್ಷವಾದ ಗರ್ಭಸ್ಥಶಿಶುವಿನಿಂದ ವ್ಯಾವೃತವಾದಲ್ಲಿ ಸಾಧ್ಯವೂ ವ್ಯಾವೃತ್ತವಾಗುವುದು. ಅಲ್ಲಿ ಹೇತು ಇರುವುರಿಂದ ಅದು ವ್ಯಭಿಚಾರಿಯಾಗುತ್ತದೆ. ಉಪಾಧಿಯು ಪಕ್ಷದಲ್ಲಿ ಇದೆ ಎಂದಾದರೆ ಸಾಧ್ಯವೂ ಇರಬಹುದಾದ್ದರಿಂದ ವ್ಯಭಿಚಾರವಿಲ್ಲ. ಹೀಗೆ ಉಪಾಧಿ ಸಂದೇಹದಿಂದ ಆಹಿತವಾಗಿದೆ ವ್ಯಭಿಚಾರ ಸಂದೇಹ. ಇಂತಹ ಸಂದೇಹವು ದೋಷವಲ್ಲ ಎಂದಾದಲ್ಲಿ ಹೇತುವಿನಲ್ಲಿ ಶ್ಯಾಮತ್ವದ ವ್ಯಾಪ್ತಿಯು ನಿಶ್ಚಿತವಾದೀತು, ಎಂದು ಆಪತ್ತಿ.

**इति चेन्न । विप्रतिपत्त्यादिजन्यस्य पक्षताप्रयोजकस्य**

**संशयस्यानुमित्यनुकूलत्वेन अदोषत्वेऽप्युपाध्याहितस्य तस्यातथात्वेन दोषत्वात् ।।**

ಸಾಧ್ಯಸಂದೇಹವು ವಿಪ್ರಪತ್ತಿ–ಸಾಧಾರಣಧರ್ಮದರ್ಶನಗಳಿಂದ ಸಹಜವಾಗಿ ಬಂದರೆ ಅದು ಪಕ್ಷತಾಪ್ರಯೋಜಕವಾಗುತ್ತದೆ. ಅಂತಹ ಸಂದೇಹವು ಅನುಮಾನಕ್ಕೆ ದೋಷವಲ್ಲ. ಆ ಸಂದೇಹವು ಉಪಾಧಿಸಂದೇಹದಿಂದ ಆಹಿತವಾದರೆ ಅದು ದೋಷವೇ ಆಗುತ್ತದೆ. ಆದ್ದರಿಂದ ಶ್ಯಾಮತ್ವಸಂದೇಹವು ಉಪಾಧಿಸಂದೇಹದಿಂದ ಆಹಿತವಾದುದರಿಂದ ಅದು ದೋಷ. ಪ್ರಕೃತ, ಪಕ್ಷಸಮವಾದ ಅಂಕುರದಲ್ಲಿರುವ ಸಾಧ್ಯಸಂದೇಹವು ದೋಷವಲ್ಲ.

## ನ್ಯಾಯದೀಪ

**विप्रतिपत्त्यादीति ।** साधारणधर्मादिरादिपदार्थः । **अतथात्वेनेति ।** अनुमित्यननुकूलत्वेनेत्यर्थः ।

ಆಹಿತ ಸಂದೇಹವು 'ಅತಥಾ' ಎಂದರೆ ಅನುಮಿತಿಗೆ ಅನುಕೂಲವಲ್ಲ ಎಂದು ಅರ್ಥ.

## ಈಶ್ವರಾನುಮಾನದಲ್ಲಿ ಅಪ್ರಯೋಜಕತಾಶಂಕೆ

### ಅವತಾರಿಕೆ

"अथ कृतिकार्ययोर्नान्वयव्यतिरेकाभ्यां व्याप्तिग्रहः" इत्यादिना मण्युक्तमेव दूष्यांशं शङ्कापूर्वमनुवदति—**नन्विदमित्यादिना ।**

ಮಣಿಗ್ರಂಥದಲ್ಲಿ ಪ್ರಕೃತಾನುಮಾನದ ಸಾಧ್ಯ–ಹೇತುಗಳಾದ ಕೃತಿ ಮತ್ತು ಕಾರ್ಯತ್ವ ಹೇತುಗಳಿಗೆ ಅನ್ವಯ–ವ್ಯತಿರೇಕಗಳಿಂದ ವ್ಯಾಪ್ತಿಗ್ರಹವಾಗುವುದಿಲ್ಲ, ಎಂದು ಹೇಳಲಾಗಿದೆ. ಈ ದೂಷಣೀಯಾಂಶವನ್ನು 'ನನು' ಎಂದು ಮುಂದಿನ ಗ್ರಂಥದಲ್ಲಿ ಶಂಕಾಪುರಃಸರವಾಗಿ ಅನುವಾದ ಮಾಡಲಾಗಿದೆ.[1]

---

१. अथ कृतिकार्ययोर्नान्वय-व्यतिरेकाभ्यां व्याप्तिग्रहः। त्वन्मते व्यापककृतेः सत्वे तद्देशे तत्समये वा कृतिमात्रव्यतिरेकानिरूपणात् । नित्यकृतेः अन्वयोऽपि न गृहीतः। वह्निमात्रव्यतिरेकस्तु, गृह्यते चेति। ...तथा इहापि कृतिविशेष-कार्यविशेषयोः अन्वय-व्यतिरेकग्रहः बाधकमंतरेण कृतिकार्यमात्रयोः व्याप्तिग्रहे उपायः । (मणि.पु.३५)

ಹೀಗೆ ಬಾಧಕತರ್ಕ ಪ್ರಕೃತದಲ್ಲಿ ಇದೆ. ಈ ವೈಷಮ್ಯವು ಇರುವುದರಿಂದಾಗಿ ಸಂದಿಗ್ಧವ್ಯಭಿಚಾರವು ಒಂದು ಕಡೆ ದೋಷ, ಇನ್ನೊಂದು ಕಡೆ ದೋಷವಲ್ಲ, ಎಂದು ನಿರ್ಧರಿಸಬಹುದು.

**ಸಮಾಧಾನ—**ಪಕ್ಷದಲ್ಲಿ ವ್ಯಭಿಚಾರ ಸಂದೇಹವು ದೋಷವೆಂದಾದಲ್ಲಿ ಬಾಧಕತರ್ಕವನ್ನೂ ಹೇಳಲಾಗುವುದಿಲ್ಲ. ತರ್ಕದಲ್ಲೂ ಆಪಾದ್ಯಾಪಾದಕಗಳಿಗೆ ವ್ಯಾಪ್ತಿ ಇರಬೇಕು. 'ಸಕರ್ತೃಕತ್ವಾಭಾವೇ ಕಾರ್ಯತ್ವಂ ನ ಸ್ಯಾತ್' ಎಂದು ತರ್ಕಮಾಡಬೇಕಾದರೆ 'ಯತ್ರ ಸಕತೃಕತ್ವಾಭಾವಃ ತತ್ರಕಾರ್ಯತ್ವಾಭಾವಃ' ಎಂದು ವ್ಯಾಪ್ತಿ ನಿಶ್ಚಯಬೇಕು. ವ್ಯಭಿಚಾರಸಂದೇಹವು ದೋಷವಾದಲ್ಲಿ ಈ ವ್ಯಾಪ್ತಿಯೂ ನಿರ್ಧಾರಿತವಾಗುವುದಿಲ್ಲ. ತರ್ಕದ ಮೂಲ ಅಂದರೆ ವ್ಯಾಪ್ತಿ. ಅದು ಪ್ರಶಿಥಿಲ=ಸಂದಿಗ್ಧವಾಗುತ್ತದೆ.

## ನ್ಯಾಯದೀಪ

**संदिग्धेति ।** स श्यामो मित्रातनयत्वादित्यष्टमगर्भस्थविषयप्रयोगे शाकपाकजत्वोपाधेः पक्षाद् व्यावृत्तिसंदेहेनाहितसाध्यसंदेहमूलो व्यभिचारसंशयोऽपीत्यर्थः । तत्र तस्यादोषत्वे व्याप्तिनिश्चयः स्यादिति भावः । तत्र व्याप्त्यनिश्चयोऽन्यनिमित्तक इत्याशङ्‌क्याह—**नचेति । तर्कस्यापीति ।** साध्याभावे हेतुर्न स्यादित्येवं रूपतर्कस्यापि आपाद्यापादकयोर्व्याप्ति-संदेहेनेत्यर्थः ।

'ಮಿತ್ರಾ' ಎಂಬ ಹೆಂಗಸಿನ ಏಳೂ ಮಕ್ಕಳು ಕಪ್ಪಿದ್ದಾರೆ. ಇದನ್ನು ನೋಡಿ ಗಭಸ್ಥವಾದ ಎಂಟನೆಯ ಮಗುವೂ ಕಪ್ಪಾಗಿದೆ, ಎಂದು ಸಾಧನೆ ಮಾಡುವ ಅನುಮಾನಕ್ಕೆ ಶಾಕಪಾಕಜತ್ವವು ಉಪಾಧಿ. ಎಂಟನೆಯ ಮಗು ಕಪ್ಪೇ ಆಗಿರಬೇಕೆಂಬ ನಿಯಮವೇನಿಲ್ಲ. ಮಗುವಿನ ಬಣ್ಣಕ್ಕೆ ಮಿತ್ರಾತನಯತ್ವವು ಪ್ರಯೋಜಕವಲ್ಲ. ಶಾಕಪದಾರ್ಥಗಳ ಸಾರದಿಂದ ಹುಟ್ಟಿದರೆ ಮಗು ಕಪ್ಪಾಗುತ್ತದೆ. ಆದರೆ, ಗರ್ಭಸ್ಥಶಿಶು ಶಾಕಪಾಕದಿಂದಲೇ ಹುಟ್ಟಿದೆ ಎಂದು ನಿರ್ಧರಿಸಲಾಗದು. ಆದ್ದರಿಂದ ಆ ಉಪಾಧಿಯು ಪಕ್ಷವಾದ ಗರ್ಭಸ್ಥಶಿಶುವಿನಿಂದ ವ್ಯಾವೃತವಾದಲ್ಲಿ ಸಾಧ್ಯವೂ ವ್ಯಾವೃತ್ತವಾಗುವುದು. ಅಲ್ಲಿ ಹೇತು ಇರುವುದರಿಂದ ಅದು ವ್ಯಭಿಚಾರಿಯಾಗುತ್ತದೆ. ಉಪಾಧಿಯು ಪಕ್ಷದಲ್ಲಿ ಇದೆ ಎಂದಾದರೆ ಸಾಧ್ಯವೂ ಇರಬಹುದಾದ್ದರಿಂದ ವ್ಯಭಿಚಾರವಿಲ್ಲ. ಹೀಗೆ ಉಪಾಧಿ ಸಂದೇಹದಿಂದ ಆಹಿತವಾಗಿದೆ ವ್ಯಭಿಚಾರ ಸಂದೇಹ. ಇಂತಹ ಸಂದೇಹವು ದೋಷವಲ್ಲ ಎಂದಾದಲ್ಲಿ ಹೇತುವಿನಲ್ಲಿ ಸ್ಯಾಮತ್ವದ ವ್ಯಾಪ್ತಿಯು ನಿಶ್ಚಿತವಾದೀತು, ಎಂದು ಆಪತ್ತಿ.

**इति चेन्न । विप्रतिपत्त्यादिजन्यस्य पक्षताप्रयोजकस्य**

**संशयस्यानुमित्यनुकूलत्वेन अदोषत्वेऽप्युपाध्याहितस्य तस्यातथात्वेन दोषत्वात् ।।**

ಸಾಧ್ಯಸಂದೇಹವು ವಿಪ್ರಪತ್ತಿ–ಸಾಧಾರಣಧರ್ಮದರ್ಶನಗಳಿಂದ ಸಹಜವಾಗಿ ಬಂದರೆ ಅದು ಪಕ್ಷತಾಪ್ರಯೋಜಕವಾಗುತ್ತದೆ. ಅಂತಹ ಸಂದೇಹವು ಅನುಮಾನಕ್ಕೆ ದೋಷವಲ್ಲ. ಆ ಸಂದೇಹವು ಉಪಾಧಿಸಂದೇಹದಿಂದ ಆಹಿತವಾದರೆ ಅದು ದೋಷವೇ ಆಗುತ್ತದೆ. ಆದ್ದರಿಂದ ಶ್ಯಾಮತ್ವಸಂದೇಹವು ಉಪಾಧಿಸಂದೇಹದಿಂದ ಆಹಿತವಾದುದರಿಂದ ಅದು ದೋಷ. ಪ್ರಕೃತ, ಪಕ್ಷಸಮವಾದ ಅಂಕುರದಲ್ಲಿರುವ ಸಾಧ್ಯಸಂದೇಹವು ದೋಷವಲ್ಲ.

## ನ್ಯಾಯದೀಪ

**विप्रतिपत्त्यादीति ।** साधारणधर्मादिरादिपदार्थः । **अतथात्वेनेति ।** अनुमित्यननुकूलत्वेनेत्यर्थः ।

ಆಹಿತ ಸಂದೇಹವು 'ಅತಥಾ' ಎಂದರೆ ಅನುಮಿತಿಗೆ ಅನುಕೂಲವಲ್ಲ ಎಂದು ಅರ್ಥ.

## ಈಶ್ವರಾನುಮಾನದಲ್ಲಿ ಅಪ್ರಯೋಜಕತಾಶಂಕೆ

### ಅವತಾರಿಕೆ

''अथ कृतिकार्ययोर्नान्वयव्यतिरेकाभ्यां व्याप्तिग्रहः'' इत्यादिना मण्युक्तमेव दूष्यांशं शङ्कापूर्वमनुवदति—**नन्विदमित्यादिना ।**

ಮಣಿಗ್ರಂಥದಲ್ಲಿ ಪ್ರಕೃತಾನುಮಾನದ ಸಾಧ್ಯ-ಹೇತುಗಳಾದ ಕೃತಿ ಮತ್ತು ಕಾರ್ಯತ್ವ ಹೇತುಗಳಿಗೆ ಅನ್ವಯ–ವ್ಯತಿರೇಕಗಳಿಂದ ವ್ಯಾಪ್ತಿಗ್ರಹವಾಗುವುದಿಲ್ಲ ಎಂದು ಹೇಳಲಾಗಿದೆ. ಈ ದೂಷಣೀಯಾಂಶವನ್ನು 'ನನು' ಎಂದು ಮುಂದಿನ ಗ್ರಂಥದಲ್ಲಿ ಶಂಕಾಪುರಃಸರವಾಗಿ ಅನುವಾದ ಮಾಡಲಾಗಿದೆ.[1]

---

१. अथ कृतिकार्ययोर्नान्वय-व्यतिरेकाभ्यां व्याप्तिग्रहः। त्वन्मते व्यापककृतेः सत्वे तद्देशे तत्समये वा कृतिमात्रव्यतिरेकानिरूपणात् । नित्यकृतेः अन्वयोऽपि न गृहीतः। वह्निमात्रव्यतिरेकस्तु, गृह्यते चेति। ...तथा इहापि कृतिविशेष-कार्यविशेषयोः अन्वय-व्यतिरेकग्रहः बाधकमंतरेण कृतिकार्यमात्रयोः व्याप्तिग्रहे उपायः । (मणि.पु.३५)

**नन्विदमप्रयोजकं । नित्यायाः सर्वविषयायाश्चेश्वरकृतेरिदानीं सन्दिग्धत्वेन कृतिसामान्यस्य देशतः कालतो वा व्यतिरेकानिश्चयेन कार्यसामान्यं प्रति कारणत्वाग्रहात् । वह्निधूमसामान्ययोस्तु ह्रदादौ व्यतिरेकनिश्चयोऽस्ति ।**

ಈಶ್ವರಸಾಧಕವಾದ ಈ ಅನುಮಾನವು ಅಪ್ರಯೋಜಕ. ನಿತ್ಯವಾದ ಹಾಗೂ ಸಕಲವಸ್ತುವಿಷಯಕವಾದ ಈಶ್ವರಕೃತಿಯು ಈ ಅನುಮಾನಪ್ರಯೋಗಕಾಲದಲ್ಲಿ ಸಂದಿಗ್ಧವಾಗಿದೆ. ಅಂತಹ ಕೃತಿಯು ಇದ್ದರೂ ಅದು ನಿತ್ಯವಾದುದರಿಂದ ತದಭಾವವು ಅಪ್ರಸಿದ್ಧ. ಹೀಗೆ ಯಾವ ಕೃತಿಯೂ ಇಲ್ಲದ ದೇಶ ಅಥವಾ ಕಾಲವನ್ನು ನಾವು ನೋಡಿಲ್ಲ. ಆದ್ದರಿಂದ 'ಯತ್ರಕೃತ್ಯಭಾವಃ ತತ್ರ ಕಾರ್ಯಾಭಾವಃ' ಎಂಬ ವ್ಯತಿರೇಕನಿಶ್ಚಯ ಇಲ್ಲ. ಇದರಿಂದಾಗಿ ಕಾರ್ಯಸಾಮಾನ್ಯಕ್ಕೆ ಕೃತಿಯು ಕಾರಣ, ಎಂಬ ಕಾರಣತ್ವಜ್ಞಾನವೂ ಬರುವುದಿಲ್ಲ. ಆದರೆ, ವಹ್ನಿಸಾಮಾನ್ಯಾಭಾವ ಮತ್ತು ಧೂಮಸಾಮಾನ್ಯಾಭಾವವು ಹ್ರದದಲ್ಲಿ ನಿಶ್ಚಿತವಾಗಿರುವುದರಿಂದ ವಹ್ನಿಯು ಧೂಮಕ್ಕೆ ಕಾರಣ ಎಂದು ತಿಳಿಯಬಹುದು.

**ವಿವರಣೆ**—ಅನ್ವಯವ್ಯತಿರೇಕಗಳಿಂದ ಕಾರ್ಯ-ಕಾರಣಭಾವವು ನಿಶ್ಚಿತವಾಗುತ್ತದೆ. 'ವಹ್ನಿಸತ್ತ್ವೇ ಧೂಮಸತ್ತ್ವಂ, ತದಭಾವೇ ತದಭಾವಃ' ಹೀಗೆ ಮಹಾನಸಾದಿಗಳಲ್ಲಿ ಅನ್ವಯ, ಹ್ರದದಲ್ಲಿ ವ್ಯತಿರೇಕವು ಗೃಹೀತವಾದುದರಿಂದ ವಹ್ನಿ-ಧೂಮಗಳಿಗೆ ಕಾರ್ಯ-ಕಾರಣಭಾವವು ಗೃಹೀತ ವಾಗುತ್ತದೆ. ಆದರೆ, ಕೃತಿ ಮತ್ತು ಕಾರ್ಯಗಳಿಗೆ ಘಟಾದಿಗಳಲ್ಲಿ ಅನ್ವಯವು ಗೃಹೀತವಾದರೂ ತದಭಾವಗಳಿಗೆ ವ್ಯತಿರೇಕ ಸಹಚಾರವು ಗೃಹೀತವಲ್ಲ. ಆದ್ದರಿಂದ ಕೃತಿಯು ಕಾರ್ಯಕ್ಕೆ ಕಾರಣ, ಎಂದು ನಿರ್ಧರಿಸಲು ಸಾಧ್ಯವಿಲ್ಲ. ಇದರಿಂದಾಗಿ ಪ್ರಕೃತಾನುಮಾನದಲ್ಲಿ 'ಹೇತುರಸ್ತು, ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕ ಶಂಕೆಯನ್ನು ಮಾಡಬಹುದು.

(ಮಣಿಗ್ರಂಥದಲ್ಲೂ ವ್ಯತಿರೇಕಗ್ರಹ ಇಲ್ಲದಿರುವುದರಿಂದ ವ್ಯಾಪ್ತಿಗ್ರಹ ಇಲ್ಲ ಎಂದು ಆಶಂಕೆ ಮಾಡಲಾಗಿದೆ.)

## ನ್ಯಾಯದೀಪ

भावकार्यत्वादिरूपानुमानमित्यर्थः । **इदानीमिति ।** अनुमानात् प्रागित्यर्थः । ईश्वरकृतिव्यतिरेकस्य न्यायमतेऽप्यभावेन प्राधान्याद् व्यतिरेकमात्र एवाक्षेपसमाध्युक्तिरिति ज्ञेयम् । अन्वयाक्षेपस्याप्युपलक्षणं वा । एवं ह्यनुमानमात्रोच्छेद इत्यत आह—**वह्नीति ।**

ಮೂಲದಲ್ಲಿ 'ಇದಂ' ಎಂದರೆ ಈಶ್ವರಸಾಧಕವಾದ 'ಭಾವಕಾರ್ಯತ್ವಾತ್' ಎಂಬ ಹೇತುವು (ಅಪ್ರಯೋಜಕ) ಎಂದರ್ಥ.

ಮೂಲದಲ್ಲಿ ಕೃತಿಕಾರ್ಯಗಳ ವ್ಯತಿರೇಕವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡಲಾಗಿದೆ. ಅನ್ವಯವನ್ನು ಆಕ್ಷೇಪಿಸಿಯೂ ಇಲ್ಲ, ಸಮಾಧಾನಿಸಿಯೂ ಇಲ್ಲ. ಇದಕ್ಕೆ ಕಾರಣ— ಕಾರ್ಯಪ್ರಪಂಚಕ್ಕೆ ಈಶ್ವರಕೃತಿಯು ಕಾರಣ, ಎಂದು ನೈಯಾಯಿಕರು ಹೇಳುತ್ತಾರೆ. ಆದರೆ, ಆ ಕೃತಿ ನಿತ್ಯವಾದುದರಿಂದ ಅದರ ವ್ಯತಿರೇಕವನ್ನು ಅವರೂ ಅಂಗೀಕರಿಸುವುದಿಲ್ಲ. ಹೀಗೆ ವ್ಯತಿರೇಕಾಭಾವವು ಉಭಯಮತಸಿದ್ಧವಾಗಿದ್ದು ಪ್ರಧಾನವಾದುದರಿಂದ ಅದನ್ನು ಮಾತ್ರ ಆಕ್ಷೇಪಿಸಲಾಗಿದೆ. ಅಥವಾ, ಇದೇರೀತಿ 'ಕೃತಿಸತ್ವೇ ಕಾರ್ಯಸತ್ವಂ' ಎಂಬ ಸಾಮಾನ್ಯಾನ್ವಯವೂ ಸಿದ್ಧವಲ್ಲ, ಎನ್ನುವುದನ್ನೂ ಉಪಲಕ್ಷಣಯಾ ತಿಳಿದುಕೊಳ್ಳಬೇಕು.

**इति चेन्न । घट-कुलालकृतिरूपविशेषयोरेव व्यतिरेकस्य कारणत्वस्य वा ग्रहणेनाबाधे सामान्ययोरपि हेतुत्वसिद्धेः । कथमन्यथाकाशादेः समवायिकारणस्य नित्यत्वाद् विभुत्वाच्च समवायिकारणसामान्यव्यतिरेकानिश्चयात् शब्दादिसमवायिकारणत्वेनाकाशादिसिद्धिः ॥**

ಈ ಆಕ್ಷೇಪ ಸರಿಯಲ್ಲ—ಘಟರೂಪಕಾರ್ಯವಿಶೇಷಕ್ಕೂ ಕುಲಾಲಕೃತಿಗೂ ಅನ್ವಯ ಮತ್ತು ವ್ಯತಿರೇಕಗಳು ಇವೆ. ಆದರಿಂದ ಕಾರ್ಯಕಾರಣಭಾವವು ಗೃಹೀತವಾಗಿದೆ. ಇದರ ಆಧಾರದಿಂದ, ಬಾಧಕವೇನೂ ಇಲ್ಲವಾದ ಕಾರಣ ಕೃತಿಸಾಮಾನ್ಯಕ್ಕೂ ಕಾರ್ಯಸಾಮಾನ್ಯಕ್ಕೂ ಕಾರ್ಯಕಾರಣ ಭಾವವು ಸಿದ್ಧವಾಗುತ್ತದೆ.

ಈ ಕ್ರಮವನ್ನು ಅಂಗೀಕರಿಸುವುದು ಅನಿವಾರ್ಯ—ಇಲ್ಲದಿದ್ದರೆ ಶಬ್ದಾದಿ ಸಮವಾಯಿಕಾರಣತ್ವೇನ ಆಕಾಶಸಿದ್ಧಿಯಾಗಲಿಕ್ಕಿಲ್ಲ. ಆಕಾಶವು ಕಣ್ಣಿಗೆ ಕಾಣುವುದಿಲ್ಲ. ಆದರೆ, ಶಬ್ದವು ಕಿವಿಗೆ ಕೇಳುತ್ತದೆ. ಶಬ್ದಗುಣ. ಅದಕ್ಕೊಂದು ಸಮವಾಯಿಕಾರಣ ಬೇಕು. ಅದು ಆಕಾಶ. ಹೀಗೆ ಅನುಮಾನದಿಂದ ಆಕಾಶವು ಸಿದ್ಧವಾಗುತ್ತದೆ. ಹೀಗೆ ಅನುಮಾನ ಮಾಡಬೇಕಾದರೆ ಭಾವಕಾರ್ಯ ಸಾಮಾನ್ಯಕ್ಕೆ ಸಮವಾಯಿಕಾರಣವು ಇರಬೇಕು ಎಂಬ ಸಾಮಾನ್ಯಕಾರ್ಯಕಾರಣಭಾವವು ಸಿದ್ಧವಾಗಬೇಕು. ಅದು ಸಿದ್ಧವಾಗಬೇಕಾದರೆ ಸಮವಾಯಿಕಾರಣಾಭಾವೇ ಕಾರ್ಯಾಭಾವಃ ಎಂದು ವ್ಯತಿರೇಕ ಹೇಳಬೇಕು. ಆಕಾಶವು ನಿತ್ಯವಾದುದರಿಂದ ಅದನ್ನು ಹೇಳಲಾಗುವುದಿಲ್ಲ. ಅದಕ್ಕಾಗಿ ಘಟಾದಿಕಾರ್ಯವಿಶೇಷಗಳಿಗೆ ಕಪಾಲಾದಿ ಉಪಾದಾನವಿಶೇಷಗಳ ಅನ್ವಯ-ವ್ಯತಿರೇಕದಿಂದ ವಿಶೇಷಕಾರ್ಯಕಾರಣಭಾವಸಿದ್ಧವಾಗಿ ಬಾಧಕಾಭಾವಾತ್ ಭಾವಕಾರ್ಯಸಾಮಾನ್ಯವು ಸಮವಾಯಿಕಾರಣಜನ್ಯ, ಎಂದು ಸಾಮಾನ್ಯಕಾರ್ಯಕಾರಣಭಾವಸಿದ್ಧಿಯನ್ನು ಹೇಳಬೇಕು.

ಇದರಿಂದ ಶಬ್ದವೂ ಭಾವಕಾರ್ಯವಾದುದರಿಂದ ಅದಕ್ಕೆ ಸಮವಾಯಿಕಾರಣವಾಗಿ ಆಕಾಶವು ಸಿದ್ಧವಾಗುತ್ತದೆ.

## न्यायदीप

**घटेति ।** घटरूपकुलालकृतिरूपविशेषयोरित्यर्थः । **कारणत्वस्येति ।** कार्यकारणभावस्येत्यर्थः । प्रमाणवाक्यत्वेन वक्तृवाक्यार्थप्रमात्वेन कार्यत्वादिकल्पनेऽपि वाक्यसामान्य वक्तृज्ञानसामान्ययोः तदभावात् अबाधे इत्युक्तम् । **आकाशादिसिद्धिरिति ।** तत्र घटकपाला-दिरूपविशेषयोरेव व्यतिरेकादिग्रहणेन, इत्युक्तरीतेरेवानुसर्तव्यत्वादिति भावः ।।

ಮೂಲದಲ್ಲಿ 'ಅಬಾಧೇ ಸಾಮಾನ್ಯಯೋರಪಿ' ಎಂದಿದೆ. ಬಾಧವಿಲ್ಲದಿದ್ದರೆ ಮಾತ್ರ ವಿಶೇಷಕಾರ್ಯಕಾರಣಭಾವವಿದ್ದಾಗ ಸಾಮಾನ್ಯಕಾರ್ಯಕಾರಣಭಾವವು ಸಿದ್ಧವಾಗುತ್ತದೆ, ಎಂದು ಅದರ ಅರ್ಥ. ಬಾಧ ಇದ್ದರೆ ಸಾಮಾನ್ಯಕಾರ್ಯಕಾರಣಭಾವ ಸಿದ್ಧವಾಗುವುದಿಲ್ಲ. ಉದಾಹರಣೆಗೆ, ಪ್ರಮಾಣವಾಕ್ಯಕ್ಕೆ ವಕ್ತೃವಿನ ಯಥಾರ್ಥಜ್ಞಾನವು ಕಾರಣ. ಇದು ವಿಶೇಷಕಾರ್ಯ–ಕಾರಣಭಾವ. ಇದರಿಂದ ವಾಕ್ಯಸಾಮಾನ್ಯಕ್ಕೆ ವಕ್ತೃವಿನ ಜ್ಞಾನವು ಕಾರಣ, ಎಂಬ ಸಾಮಾನ್ಯ ಕಾರ್ಯಕಾರಣ ಭಾವವು ಸಿದ್ಧವಾಗುವುದಿಲ್ಲ. ಶುಕಾದ್ಯುಚ್ಚರಿತ ವಿಸಂವಾದಿ ವಾಕ್ಯಕ್ಕೆ ವಕ್ತೃವಿನ ಜ್ಞಾನವು ಕಾರಣವಲ್ಲ. ಶುಕಕ್ಕೆ ವಾಕ್ಯಾರ್ಥಜ್ಞಾನವೇ ಇಲ್ಲ. ಶುಕ ಹೇಳಿದ ಪ್ರಮಾಣವಾಕ್ಯಕ್ಕೆ ಈಶ್ವರನ ಯಥಾರ್ಥಜ್ಞಾನವು ಕಾರಣ ಎಂದು ನೈಯಾಯಿಕರು ಹೇಳುತ್ತಾರೆ. ಆದ್ದರಿಂದ ವಿಶೇಷಕಾರ್ಯಕಾರಣಭಾವಕ್ಕೆ ಅಲ್ಲಿ ವ್ಯಭಿಚಾರವಿಲ್ಲ. ಆದರೆ ಶುಕೋಚ್ಚರಿತವಿಸಂವಾದಿ ವಾಕ್ಯಕ್ಕೆ ಈಶ್ವರಭ್ರಮೆ ಕಾರಣವಲ್ಲ. ಸಾಮಾನ್ಯಕಾರ್ಯಕಾರಣಭಾವಕ್ಕೆ ಅಲ್ಲಿ ವ್ಯಭಿಚಾರವಿದೆ. (ಇಲ್ಲಿ ಮೂಲಪಾಠ 'ತದಬಾಧಾತ್' ಎಂದಿದೆ. ತದ್‌ಬಾಧಾತ್, ಎಂದಿರಬಹುದು. ಪಾಠಾಂತರ 'ತದಭಾವಾತ್' ಎಂದಿದೆ. ಅದೇ ಯುಕ್ತಪಾಠ.)

**नन्वेवमपि दृष्टान्तः साध्यविकलः कुलालादिकृतेरेवान्वय-व्यतिरेकाभ्यां कारणत्वग्रहेण मानाभावेन कुलालस्याहेतुत्वात् ।**

ಇಷ್ಟಾದರೂ ದೃಷ್ಟಾಂತದಲ್ಲಿ ಸಾಧ್ಯವು ಬರುವುದಿಲ್ಲ. "ಸಕರ್ತೃಕತ್ವವು" ಸಾಧ್ಯ. 'ಕರ್ತೃಜನ್ಯ' ಎಂದರ್ಥ. ಘಟಕ್ಕೆ ಕರ್ತೃ ಕುಲಾಲ. ಅವನಿಂದ ಜನ್ಯವಾಗಬೇಕು, ಘಟ. ಆದರೆ ಘಟಕ್ಕೆ

ಕುಲಾಲನ ಕೃತಿಯೊಂದಿಗೆ ಮಾತ್ರ ಅನ್ವಯವ್ಯತಿರೇಕಗಳಿವೆ. ಇದರಿಂದ ಕೃತಿಗೇ ಕಾರಣತ್ವವು ಸಿದ್ಧವಾಗುತ್ತದೆ. ಕುಲಾಲನು ಘಟಕ್ಕೆ ಕಾರಣ ಎನ್ನುವುದಕ್ಕೆ ಪ್ರಮಾಣವಿಲ್ಲ. ಆದ್ದರಿಂದ ಘಟದಲ್ಲಿ ಕರ್ತೃಜನ್ಯತ್ವ ಇಲ್ಲ. ಸಾಧ್ಯವೈಕಲ್ಯ.

**अहेतुत्वादिति ।** तथाच कृतिमज्जन्यत्वरूपसाध्यं तत्र नेत्यर्थः ॥

## ಅವತಾರಿಕೆ

मानाभावेनेत्यसिद्धम् । 'कुलालो घटहेतुः तद्धेतुसंयोगावच्छेदकत्वात् कपालवत् घटहेत्वात्मसंयोगवदेकसमवायिप्रयत्नवद्वा'इति मानभावादिति भावेनाह—**प्रयत्नेति ।**

ಮೂಲದಲ್ಲಿ "ಕುಲಾಲನು ಘಟಕಾರಣ" ಎನ್ನುವುದಕ್ಕೆ ಪ್ರಮಾಣವಿಲ್ಲ, ಎನ್ನಲಾಗಿದೆ. ಪ್ರಮಾಣವಿಲ್ಲ, ಎನ್ನುವುದು ಅಸಿದ್ಧ, ಪ್ರಮಾಣವಿದೆ. ಅನುಮಾನವೇ ಪ್ರಮಾಣ–ಕುಲಾಲನು ಘಟಕ್ಕೆ ಕಾರಣನಾಗಿದ್ದಾನೆ, ಘಟಕಾರಣವಾದ ಸಂಯೋಗಕ್ಕೆ ಅವಚ್ಛೇದಕನಾದುದರಿಂದ, ಕಪಾಲವತ್. ಕಪಾಲದ್ವಯಸಂಯೋಗವು ಘಟಕ್ಕೆ ಅಸಮವಾಯಿಕಾರಣ. ತಾದೃಶಸಂಯೋಗವು ಕಪಾಲದಲ್ಲಿದೆ. ಆದರಿಂದಾಗಿ, ಕಪಾಲವೂ ಘಟಕ್ಕೆ ಕಾರಣ. ಆದರಂತೆ, ಚೇಷ್ಟಾದ್ವಾರಾ ಪ್ರಯತ್ನವದಾತ್ಮ ಸಂಯೋಗವು ಘಟಕ್ಕೆ ಕಾರಣ. ಶರೀರಕ್ಕೆ ಪ್ರಯತ್ನವದಾತ್ಮನ ಸಂಯೋಗವಾದಾಗ ಶರೀರದಲ್ಲಿ ಚೇಷ್ಟಾ(ಕ್ರಿಯಾ) ಹುಟ್ಟುತ್ತದೆ. ಆದರಿಂದ ಘಟನಿರ್ಮಾಣವಾಗುತ್ತದೆ. ಹೀಗೆ ಚೇಷ್ಟಾದ್ವಾರಾ 'ಶರೀರಾತ್ಮಸಂಯೋಗವು' ಘಟಕ್ಕೆ ಕಾರಣ. ಪ್ರಯತ್ನವದಾತ್ಮಸಂಯೋಗವು ಘಟಹೇತುವಾದಾಗ ಸಂಯೋಗಾಶ್ರಯನಾದ ಆತ್ಮನಲ್ಲಿರುವ ಪ್ರಯತ್ನವೂ ಘಟಕ್ಕೆ ಕಾರಣವಾಗುವಂತೆ. ಹೀಗೆ, ಎರಡು ದೃಷ್ಟಾಂತಗಳಿಂದ ಕುಲಾಲನೂ ಘಟಕ್ಕೆ ಕಾರಣನಾಗುತ್ತಾನೆ. ಆದ್ದರಿಂದ 'ಮಾನಾಭಾವಾತ್' ಎಂದುದು ಸರಿಯಲ್ಲ.

(ಇಲ್ಲಿ "ಘಟಸಂಯೋಗವದೇಕಪ್ರಯತ್ನವದ್ವಾ" ಎಂದು ನ್ಯಾಯದೀಪದ ಮುದ್ರಿತ ಪಾಠ. ಅದು 'ಸಂಯೋಗವದೇಕಸಮವಾಯಿಪ್ರಯತ್ನವದ್ವಾ' ಎಂದಿರಬೇಕು. ಆತ್ಮಸಂಯೋಗವು ಘಟಕಾರಣ. ಅದಕ್ಕೆ ಆಶ್ರಯ ಆತ್ಮ. ಅಲ್ಲಿ ಸಮವೇತ ಪ್ರಯತ್ನ.)

**इति चेन्न । प्रयत्नवदात्मसंयोगस्य चेष्टाद्वारा घटहेतुतया तद्विशेषणतया प्रयत्नस्येवात्मनोऽपि हेतुत्वात् ॥**

ಶರೀರಚೇಷ್ಟಾದ್ವಾರಾ ಪ್ರಯತ್ನವುಳ್ಳ ಆತ್ಮನ ಸಂಯೋಗವು ಘಟಕ್ಕೆ ಕಾರಣ. ಆ

ಸಂಯೋಗದಲ್ಲಿ ವಿಶೇಷಣವಾದುದರಿಂದ ಪ್ರಯತ್ನವು ಹೇಗೆ ಕಾರಣವೋ ಅದರಂತೆ, ಆತ್ಮನೂ ವಿಶೇಷಣನಾದುದರಿಂದ ಕಾರಣ. ಆತ್ಮನೆಂದರೆ ಕುಲಾಲ. ಕುಲಾಲನೂ ಘಟಕಾರಣ.

**ವಿವರಣೆ**—ನ್ಯಾಯದೀಪದಲ್ಲಿ ಕುಲಾಲನು (ಆತ್ಮನು) ಸಂಯೋಗಾವಚ್ಛೇದಕ, ಎಂದಿದೆ. ಮೂಲದಲ್ಲಿ ಆತ್ಮನು ವಿಶೇಷಣ, ಎಂದಿದೆ. ಇವೆರಡಕ್ಕೂ ಒಂದೇ ಅರ್ಥ. ಆತ್ಮಸಂಯೋಗವು ಘಟ ಕಾರಣವಾದಾಗ ಆತ್ಮನು ವಿಶೇಷಣನೂ ಆಗಿದ್ದಾನೆ, ಸಂಯೋಗನಿಷ್ಠಕಾರಣತಾದಲ್ಲಿ ಅವಚ್ಛೇದಕನೂ ಆಗಿದ್ದಾನೆ.

ಮೂಲದಲ್ಲಿ 'ಸಂಯೋಗಸ್ಯ ಚೇಷ್ಟಾದ್ವಾರಾ' ಎನ್ನುವ ಬದಲು 'ಸಂಯೋಗಸ್ಯ ಚಾದೃಷ್ಟದ್ವಾರಾ' ಎಂದು ಪಾಠಾಂತರವಿದೆ. ಕಾರ್ಯಕ್ಕೆ ಅದೃಷ್ಟವದಾತ್ಮಸಂಯೋಗವು ಕಾರಣ. ಅದನ್ನು ಅದೃಷ್ಟದ್ವಾರಾ ಆತ್ಮಸಂಯೋಗ ಕಾರಣ, ಎಂದಿರಬಹುದು. ಆದರೆ ಮಣಿಗ್ರಂಥದಲ್ಲಿ 'ಪ್ರಯತ್ನವದಾತ್ಮಸಂಯೋಗಶ್ಚೇಷ್ಟಾದ್ವಾರಾ ಘಟಹೇತುಃ'' ಎಂದೇ ಇದೆ. ಅದಕ್ಕೆ ಅನುಗುಣವಾಗಿದೆ, ಮೂಲಪಾಠ.

## ನ್ಯಾಯದೀಪ

**प्रयत्नस्येवेत्युपलक्षणम् । असमवायिकारणसंयोगाश्रयकपालादेरि-वेत्यपि ध्येयम् ।।**

ಮೂಲದಲ್ಲಿ ಪ್ರಯತ್ನಸ್ಯೇವ, ಎಂದು ಒಂದು ಉದಾಹರಣೆ ಇದೆ. ಘಟಕ್ಕೆ ಅಸಮವಾಯಿಕಾರಣವಾದ ಸಂಯೋಗಕ್ಕೆ ಆಶ್ರಯವಾದ ಕಪಾಲದಂತೆ, ಎಂದು ಇನ್ನೊಂದು ದೃಷ್ಟಾಂತವನ್ನೂ ಹೇಳಬಹುದು. (ಇದನ್ನು ಮುಂದೆ ಮೂಲದಲ್ಲಿ ಹೇಳಲಾಗಿದೆ.)

## ಅವತಾರಿಕೆ

**नन्वात्मसंयोगे सति प्रयत्नं विना न चेष्टेति प्रयत्न एव हेतुर्नतु प्रयत्नवदात्मसंयोग इत्यत आह—संयोगस्येति ।**

ಶರೀರಕ್ಕೆ ಆತ್ಮಸಂಯೋಗವಾದರೂ (ಅದು ಸಾರ್ವಕಾಲಿಕವಾದುದರಿಂದ) ಆತ್ಮನಲ್ಲಿ ಪ್ರಯತ್ನವಿಲ್ಲದ ಹೊರತು ಶರೀರದಲ್ಲಿ ಚೇಷ್ಟಾ (ಕ್ರಿಯಾವಿಶೇಷ) ಹುಟ್ಟುವುದಿಲ್ಲ. ಆದ್ದರಿಂದ ಪ್ರಯತ್ನವೇ ಚೇಷ್ಟಾಕ್ಕೆ ಕಾರಣ, ಶರೀರಾತ್ಮಸಂಯೋಗವಲ್ಲ. ಈ ಆಕ್ಷೇಪಕ್ಕೆ ಉತ್ತರ 'ಸಂಯೋಗಸ್ಯ' ಎಂಬ ಮುಂದಿನ ಮೂಲವಾಕ್ಯ.

**संयोगस्य हेतुत्वे मानं तु, चेष्टा प्रयत्नवदात्मसंयोगासमवायिकारणिका स्वव्यधिकरणतदीयगुणव्यतिरेकप्रयुक्तव्यतिरेकप्रतियोगित्वात् । यत् स्वव्यधिकरणतदीयगुण-व्यतिरेकप्रयुक्तव्यतिरेकप्रतियोगि तत् तदीयसंयोगासमवायिकारणकम् । यथा स्पर्शवद्वेगवत्पवनाभिघात-कारणिका पर्णादिक्रिया पवनसंयोगासमवायिकारणिका, इत्यनुमानम् ॥**

ಆತ್ಮಸಂಯೋಗವು ಘಟಕಾರಣವಾದ ಶರೀರಕ್ರಿಯೆಗೆ ಅಸಮವಾಯಿಕಾರಣವಾಗಿದೆ, ಎಂದು ಅನುಮಾನದಿಂದ ಸಾಧಿಸಬಹುದು—

**ಪಕ್ಷ**—ಶರೀರ ಕ್ರಿಯಾ. (ಚೇಷ್ಟಾ)

**ಸಾಧ್ಯ**—(ಅದಕ್ಕೆ) ಪ್ರಯತ್ನವುಳ್ಳ ಆತ್ಮನ ಸಂಯೋಗವು ಅಸಮವಾಯಿಕಾರಣವಾಗಿದೆ.

**ಹೇತು**—ಕ್ರಿಯಾವ್ಯಧಿಕರಣವಾದ ಆತ್ಮಗುಣದ(ಪ್ರಯತ್ನದ) ಅಭಾವವಿದ್ದರೆ ಶರೀರ ಕ್ರಿಯೆಯ ಅಭಾವವೂ ಇರುತ್ತದೆ. ಅಂತಹ ಅಭಾವಕ್ಕೆ ಪ್ರತಿಯೋಗಿಯಾಗಿರುವುದರಿಂದ.

**ಹೇತುವಿನ ವಿವರಣೆ**—ಆತ್ಮನಲ್ಲಿ ಪ್ರಯತ್ನವಿಲ್ಲದೇ ಹೋದರೆ ಶರೀರದಲ್ಲಿ ಚೇಷ್ಟಾ ಹುಟ್ಟುವುದಿಲ್ಲ. ಚೇಷ್ಟಾವ್ಯತಿರೇಕವು (ಅಭಾವವು) ಪ್ರಯತ್ನವ್ಯತಿರೇಕ ಪ್ರಯುಕ್ತವಾಗಿದೆ. ಅಂತಹ ವ್ಯತಿರೇಕಕ್ಕೆ ಪ್ರತಿಯೋಗಿ ಚೇಷ್ಟಾ.

ಚೇಷ್ಟಾ ಶರೀರದಲ್ಲಿದೆ. ಪ್ರಯತ್ನ ಆತ್ಮನಲ್ಲಿದೆ. ಕಾರ್ಯ ಮತ್ತು ಕಾರಣಗಳು ವ್ಯಧಿಕರಣಗಳಾಗಿವೆ. ವ್ಯಧಿಕರಣಗಳಿಗೆ ಕಾರ್ಯ-ಕಾರಣಭಾವ ಇಲ್ಲ. ಆದಕ್ಕಾಗಿ, ಪ್ರಯತ್ನಾಶ್ರಯನಾದ ಆತ್ಮನ ಸಂಯೋಗವು ಶರೀರದಲ್ಲಿರುವುದರಿಂದ ಅದು ಕಾರಣ. ಆ ಸಂಯೋಗವು ಕಾರಣವಾದಾಗ ಅಂತಹ ಸಂಯೋಗಘಟಕತಯಾ ಪ್ರಯತ್ನಕ್ಕೂ ಕಾರಣತ್ವವನ್ನು ಹೇಳಬಹುದು.

**ವ್ಯಾಪ್ತಿ**—ಯಾವ ಕಾರ್ಯವು ತನಗೆ ವ್ಯಧಿಕರಣವಾದ ಗುಣದ ವ್ಯತಿರೇಕಪ್ರಯುಕ್ತವಾದ ವ್ಯತಿರೇಕಕ್ಕೆ ಪ್ರತಿಯೋಗಿಯಾಗಿರುವುದೋ ಆ ಕಾರ್ಯಕ್ಕೆ ವ್ಯಧಿಕರಣಗುಣವುಳ್ಳ ವಸ್ತುವಿನ ಸಂಯೋಗವು ಅಸಮವಾಯಿಕಾರಣವಾಗಿರುತ್ತದೆ.

**ದೃಷ್ಟಾಂತ**—ಸ್ಪರ್ಶ ಮತ್ತು ವೇಗವುಳ್ಳ ಗಾಳಿಯ ಅಭಿಘಾತಸಂಯೋಗದಿಂದಾಗಿ ಮರದ ಎಲೆಯಲ್ಲಿ ಉಂಟಾಗುವ ಕ್ರಿಯೆ.

**ದೃಷ್ಟಾಂತದ ವಿವರಣೆ**—ಗಾಳಿಯಲ್ಲಿ ಸ್ಪರ್ಶ ಮತ್ತು ವೇಗ ಎಂಬ ಎರಡು ಗುಣಗಳಿದ್ದಾಗ ಮರದ ಎಲೆ ಅಲುಗುತ್ತದೆ. ಮರದ ಎಲೆಯಲ್ಲಿ ಇರುವ ಈ ಕ್ರಿಯೆಗೆ ಗಾಳಿಯಲ್ಲಿರುವ ಆ ಎರಡು

ಗುಣಗಳು ಕಾರಣಗಳು. ಅವುಗಳು ಸ್ವವ್ಯಧಿಕರಣಗಳು=ಕಾರ್ಯಕ್ಕೆ ವ್ಯಧಿಕರಣಗಳು. ಕಾರ್ಯವಾದ ಕ್ರಿಯೆ ಎಲೆಯಲ್ಲಿದೆ, ಈ ಗುಣಗಳು ಗಾಳಿಯಲ್ಲಿವೆ. ಇಂತಹ ಗುಣಗಳು ಕ್ರಿಯೆಗೆ ಕಾರಣವಾಗಬೇಕಾದರೆ ಆ ಗುಣಗಳಿಗೆ ಆಶ್ರಯವಾದ ವಾಯುವಿನ ಸಂಯೋಗವು ಎಲೆಗೆ ಇರಬೇಕು. ಆ ಸಂಯೋಗವು ಎಲೆಯ ಕ್ರಿಯೆಗೆ ಅಸಮವಾಯಿಕಾರಣವಾಗಿದೆ. (ಈ ಅನುಮಾನವು ಮಣಿಗ್ರಂಥದಲ್ಲಿದೆ.)

## ನ್ಯಾಯದೀಪ

**प्रयत्नवदात्म-संयोगस्य घटहेत्वङ्गचेष्टाहेतुत्वे मानं त्वनुमानमित्यग्रे-तनेनान्वयः—चेष्टेति ।** शरीरस्पन्द इत्यर्थः । **प्रयत्नेति ।** प्रयत्नवतः आत्मनः शरीरस्य च यः संयोगः तदसमवायिकारणिकेत्यर्थः । अभिघातसंयोगेनार्थान्तरनिरासाय प्रयत्नवदित्यादिविशेषणम् । हेतौ स्वेति परिस्पन्दः। स्वव्यधिकरणः=स्वाधिकरणभिन्नाधिकरणकः, तदीयः आत्मीयो गुणः प्रयत्नः तद्व्यतिरेकप्रयुक्तव्यतिरेकप्रतियोगित्वादि-त्यर्थः । कपालरूपजन्यघटरूपे व्यभिचारनिरासाय तदीयेत्युक्तिः । आत्मीयेत्यर्थः ।

यद्वोक्तप्रतियोगिक्रियात्वादिति हेतुर्द्रष्टव्यः । अतो न व्यभिचारः । हेतोरेवाभावात् । एवञ्च तदीयेति तच्छब्दस्य समभिव्याहृतपरत्वेऽपि न दोषः । स्वव्यधिकरणपदकृत्यमग्रे व्यक्तम् ।।

ಮೂಲದಲ್ಲಿ ಸಂಯೋಗಸ್ಯ ಎಂದರೆ, ಘಟದೊಂದಿಗೆ ಆಗುವ ಪ್ರಯತ್ನವತ್ತಾದ ಆತ್ಮನ ಸಂಯೋಗಕ್ಕೆ ಎಂದರ್ಥ. ಹೇತುತ್ವೇ ಎಂದರೆ, ಘಟಕ್ಕೆ ಕಾರಣವಾದ ಕುಲಾಲನ ಹಸ್ತಾದಿ ಅಂಗಗಳಲ್ಲಿ ಆಗುವ ಕ್ರಿಯೆಗೆ ಕಾರಣತ್ವವು, ಎಂದರ್ಥ. 'ಮಾನಂ ತು' ಎಂಬ ಪದಕ್ಕೆ ಈ ವಾಕ್ಯದ ಕೊನೆಯಲ್ಲಿ ಇರುವ 'ಅನುಮಾನಮ್' ಎಂಬ ಶಬ್ದದೊಂದಿಗೆ ಅನ್ವಯ.

'ಪ್ರಯತ್ನವತ್' ಇತ್ಯಾದಿ ಪದಗಳ ಅರ್ಥ ಹೀಗೆ— ಪ್ರಯತ್ನವಿರುವ ಆತ್ಮನಿಗೂ (ಕುಲಾಲನಿಗೂ) ಅವನ ಶರೀರಕ್ಕೂ ಯಾವ ಸಂಯೋಗವಾಗುವುದೋ ಆ ಸಂಯೋಗವು ಕುಲಾಲನ ಶರೀರಕ್ರಿಯೆಗೆ ಅಸಮವಾಯಿಕಾರಣ, ಎಂದು.

ಕೆಲವೊಮ್ಮೆ ಕುಲಾಲನ ಶರೀರಕ್ಕೆ ಇನ್ನೊಂದು ವಸ್ತುವಿನ ಬಲವಾದ ಸಂಯೋಗವಾದಾಗ (ಅಭಿಘಾತಸಂಯೋಗ=ಶಬ್ದಜನಕ ಸಂಯೋಗ. ಮತ್ತೊಬ್ಬರು ದೂಕಿದಾಗ) ಕ್ರಿಯೆ ಉಂಟಾಗುತ್ತದೆ. ಇಂತಹ ಕ್ರಿಯೆಗೆ ಸಂಯೋಗವು ಅಸಮವಾಯಿಕಾರಣ, ಎನ್ನುವುದು ಸರ್ವಸಿದ್ಧ. ಅಂತಹ ಸಂಯೋಗ ನಿಮಿತ್ತವಾಗಿ ಅರ್ಥಾಂತರತಾದೋಷದ ಪರಿಹಾರಕ್ಕಾಗಿ ಈ ಅನುಮಾನದಲ್ಲಿ ಸಂಯೋಗಕ್ಕೆ 'ಪ್ರಯತ್ನವದಾತ್ಮ' ಎಂಬ ವಿಶೇಷಣವನ್ನು ಸೇರಿಸಲಾಗಿದೆ. ಅಭಿಘಾತಸಂಯೋಗ ದಿಂದ ಬಿದ್ದಾಗ ಆ ಶರೀರಕ್ರಿಯೆಗೆ ಬೀಳುವವನ ಪ್ರಯತ್ನ ಕಾರಣವಲ್ಲ. ಆ ಕ್ರಿಯೆಯು ಪ್ರಯತ್ನವದಾತ್ಮಸಂಯೋಗಪೂರ್ವಕವಲ್ಲ. ಆದ್ದರಿಂದ ಅದು ಪಕ್ಷದಲ್ಲಿ ಸೇರುವುದಿಲ್ಲ.

ಹೇತುಸಮನ್ವಯ—ಹೇತುವಿನಲ್ಲಿ ಸ್ವ ಎಂದರೆ ಶರೀರಕ್ರಿಯೆ. ಸ್ವವ್ಯಧಿಕರಣ ಎಂದರೆ, ಅಂತಹ ಕ್ರಿಯೆಗೆ ಅಧಿಕರಣವಾದ ಶರೀರಕ್ಕಿಂತ ಭಿನ್ನವಾದ ಅಧಿಕರಣದಲ್ಲಿ (ಆತ್ಮನಲ್ಲಿ) ಇರುವ ಗುಣ. ಅಂತಹ ಆತ್ಮೀಯಗುಣ ಪ್ರಯತ್ನ. ಪ್ರಯತ್ನದ ಅಭಾವಪ್ರಯುಕ್ತವಾದ ಅಭಾವ ಶಾರೀರಕ್ರಿಯಾಭಾವ. ಆ ಅಭಾವಕ್ಕೆ ಪ್ರತಿಯೋಗಿಯಾಗಿದೆ ಶರೀರಕ್ರಿಯೆ. ಆದ್ದರಿಂದ, ಎಂದರ್ಥ.

ಹೇತುವಿನಲ್ಲಿ 'ತದೀಯ' ಎಂಬ ಪದಕ್ಕೆ 'ಆತ್ಮೀಯಗುಣ' ಎಂದರ್ಥ. ಇದನ್ನು ಬಿಟ್ಟರೆ 'ಸ್ವವ್ಯಧಿಕರಣಗುಣ–ವ್ಯತಿರೇಕ–ಪ್ರಯುಕ್ತ–ವ್ಯತಿರೇಕ–ಪ್ರತಿಯೋಗಿತ್ವಾತ್' ಎಂದಿಷ್ಟೇ ಹೇತುವಾಗುತ್ತದೆ. ಈ ಹೇತು ಕಪಾಲರೂಪದಿಂದ ಜನ್ಯವಾದ ಘಟರೂಪದಲ್ಲಿದೆ. ಕಪಾಲರೂಪವ್ಯತಿರೇಕ–ಪ್ರಯುಕ್ತ–ವ್ಯತಿರೇಕ–ಪ್ರತಿಯೋಗಿಯಾಗಿದೆ ಘಟರೂಪ. ಅದರಲ್ಲಿ ಸಾಧ್ಯ ಇಲ್ಲ. ಅದಕ್ಕೆ ಆತ್ಮಸಂಯೋಗವು ಅಸಮವಾಯಿಕಾರಣವಲ್ಲ. ವ್ಯಭಿಚಾರದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ 'ತದೀಯ' ಎಂಬ ವಿಶೇಷಣ ಬೇಕು.

ಅಥವಾ, ಉಕ್ತವ್ಯತಿರೇಕ–ಪ್ರತಿಯೋಗಿ–ಕ್ರಿಯಾತ್ವಾತ್ ಎಂದಾದರೂ ಹೇತುವನ್ನು ಮಾಡಿ ಈ ವ್ಯಭಿಚಾರವನ್ನು ಪರಿಹರಿಸಬಹುದು. ಕ್ರಿಯಾತ್ವಹೇತುವು ಘಟರೂಪದಲ್ಲಿ ಬರುವುದಿಲ್ಲವಾದ್ದರಿಂದ ವ್ಯಭಿಚಾರಕ್ಕೆ ಆಸ್ಪದವಿಲ್ಲ. ಹೀಗೆ ಹೇತುಮಾಡಿದಾಗ 'ತದೀಯ' ಪದಕ್ಕೆ 'ಆತ್ಮೀಯ' ಎಂದೇ ಅರ್ಥಮಾಡಬೇಕಾಗಿಲ್ಲ. ಸಮಭಿವ್ಯಾಹೃತವಾದ ವ್ಯಧಿಕರಣವಾದ (ಗುಣ) ಎಂದು ಅರ್ಥವನ್ನೇ ಮಾಡಬಹುದು. ಸ್ವವ್ಯಧಿಕರಣ ಪದಕ್ಕೆ ಕೃತ್ಯ ಮುಂದಿದೆ.

## ನ್ಯಾಯದೀಪ

**यद्यपि मणौ "या क्रिया व्यधिकरणयदीयगुणजन्या" इत्यादि-व्याप्त्युक्त्या गुणजन्यत्वादिति हेतुर्वाच्या, व्याप्तिश्च तथैव प्रदर्शनीया। तथापि क्रियाया ईश्वरगुणजन्यत्वेऽपि नेश्वरसंयोगासमवायिकारणकत्व-मिति व्यभिचारनिरासाय तट्टीकार्थानुवादो गुणव्यतिरेकप्रयुक्तेत्यादिः ॥**

**यदिति** । यत् परिस्पन्दाख्यं कर्मेत्यर्थः। मणावपि या क्रियेत्येवोक्तेः। अन्यथा कपालरूपजन्यघटरूपे व्यभिचारापत्तेः। **यथेति**। यथा पर्णादिक्रियेत्यन्वयः। तत्र हेतुसत्त्वव्यक्त्यर्थं स्पर्शवदिति। पर्णादिक्रिया स्वव्यधिकरणवाय–वीयवेगरूपगुणव्यतिरेकप्रयुक्तव्यतिरेकप्रतियोगिनीत्यर्थः।

ಮಣಿಗ್ರಂಥದಲ್ಲಿ ಈ ಅನುಮಾನದ ವ್ಯಾಪ್ತಿಯನ್ನು ಹೀಗೆ ತೋರಿಸಲಾಗಿದೆ. 'ಯಾ ಕ್ರಿಯಾ ವ್ಯಧಿಕರಣ–ಯದೀಯಗುಣಜನ್ಯಾ ಸಾ ತತ್ಸಂಯೋಗಾಸಮವಾಯಿಕಾರಣಿಕಾ' ಎಂದು. ಈ ವ್ಯಾಪ್ತಿಗೆ ಅನುಗುಣವಾಗಿ 'ಗುಣಜನ್ಯತ್ವಾತ್' ಎಂದೇ ಹೇತುವನ್ನು ಹೇಳಬೇಕು. ಅದಕ್ಕನುಗುಣವಾಗಿಯೇ ವ್ಯಾಪ್ತಿಯನ್ನು ಹೇಳಬೇಕು. ಆದರೆ, ಮಣಿಕಾರ ಹೇಳಿರುವ ಈ ವ್ಯಾಪ್ತಿಗೆ ವ್ಯಭಿಚಾರವಿದೆ. ಸರ್ವಕಾರ್ಯಕ್ಕೂ ಈಶ್ವರೇಚ್ಛಾದಿಗಳು ಕಾರಣವಾದುದರಿಂದ ಎಲ್ಲಾ ಕ್ರಿಯೆಗಳೂ ಈಶ್ವರಗುಣಜನ್ಯವಾಗಿವೆ. ಆದರೆ, ಅವುಗಳಿಗೆ ಈಶ್ವರಾತ್ಮಸಂಯೋಗವು ಅಸಮವಾಯಿಕಾರಣವಲ್ಲ. ಹೀಗೆ ವ್ಯಭಿಚಾರ. ತರ್ಕತಾಂಡವೋಕ್ತ ಹೇತು ತದೀಯಗುಣ–ವ್ಯತಿರೇಕಪ್ರಯುಕ್ತ–ವ್ಯತಿರೇಕಪ್ರತಿಯೋಗಿತ್ವ. ಈ ಹೇತುವಿಗೆ ವ್ಯಭಿಚಾರವಿಲ್ಲ. ಈಶ್ವರೀಯಗುಣ ನಿತ್ಯವಾದುದರಿಂದ ಅದರ ವ್ಯತಿರೇಕವೇ ಅಪ್ರಸಿದ್ಧ. ಇದೇ ಕಾರಣಕೊಟ್ಟು ಮಣಿವ್ಯಾಖ್ಯಾನವಾದ ಆಲೋಕದಲ್ಲಿ ಹೇತುವನ್ನು, ಹೀಗೆಯೇ ನಿರೂಪಿಸಲಾಗಿದೆ.

ತರ್ಕತಾಂಡವದಲ್ಲಿ ವ್ಯಾಪ್ತಿಯನ್ನು ತೋರಿಸುವಾಗ 'ಯತ್' ಎಂದು ಸರ್ವನಾಮವನ್ನು ಹೇಳಲಾಗಿದೆ. ಆದರೆ, 'ಯಾ ಕ್ರಿಯಾ' ಎಂದು ಮಣಿಯಲ್ಲಿ ಹೇಳಿರುವ ಕರ್ಮ, ಎಂಬ ಅರ್ಥವನ್ನೇ ಅದಕ್ಕೆ ಹೇಳಬೇಕು. ಇಲ್ಲದಿದ್ದರೆ, ಹಿಂದೆ ಹೇಳಿದಂತೆ ಕಪಾಲರೂಪಜನ್ಯವಾದ ಘಟರೂಪದಲ್ಲಿ ವ್ಯಭಿಚಾರ ಬರುತ್ತದೆ.

**गुरुत्वव्यतिरेकप्रयुक्तव्यतिरेकप्रतियोगिनि गुरुत्वसमानाधिकरणे पतने गुरुत्ववद्द्रव्यसंयोगासमवायिकारणकत्वरहिते व्यभिचारनिरासाय हेतौ स्वव्यधिकरणेत्युक्तम्।**

ಹೇತುವಿನಲ್ಲಿ ಗುಣಕ್ಕೆ 'ಸ್ವವ್ಯಧಿಕರಣ' ಎಂಬ ವಿಶೇಷಣವನ್ನು ಕೊಡದಿದ್ದಲ್ಲಿ ಪತನಕ್ರಿಯೆಯಲ್ಲಿ ವ್ಯಭಿಚಾರ ಬರುತ್ತದೆ. ಆಮ್ರಫಲದ ಪತನಕ್ಕೆ ಆ ಫಲದಲ್ಲಿರುವ ಗುರುತ್ವವು ಅಸಮವಾಯಿಕಾರಣ. ಆದ್ದರಿಂದ ಗುರುತ್ವರೂಪ ಗುಣವ್ಯತಿರೇಕ–ಪ್ರಯುಕ್ತ–ವ್ಯತಿರೇಕ ಪ್ರತಿಯೋಗಿತ್ವವು ಪತನದಲ್ಲಿದೆ. ಹೇತು ಬಂತು. ಆದರೆ, ಪತನಕ್ಕೆ ಗುರುತ್ವವತ್ತಾದ ಫಲಸಂಯೋಗವು

ಅಸಮವಾಯಿಕಾರಣವಲ್ಲ. ಸಾಧ್ಯ ಇಲ್ಲ. ವ್ಯಭಿಚಾರ ಬರುತ್ತದೆ. ವ್ಯಧಿಕರಣ ಪದವಿದ್ದಾಗ ವ್ಯಭಿಚಾರಕ್ಕೆ ಅವಕಾಶವಿಲ್ಲ. ಗುರುತ್ವವು ಪತನವ್ಯಧಿಕರಣವಲ್ಲ.

## ನ್ಯಾಯದೀಪ

**पतन इति ।** आम्रफलादिपतन इत्यर्थः । स्वव्यधिकरणयदीयव्यतिरेक-प्रयुक्तव्यतिरेकप्रतियोगीत्येतावत्युक्ते आम्रादिवृक्षपतनक्रियायां व्यभिचारः । तस्यां, स्वव्यधिकरणो य आम्रादिवृक्षः यश्च स्वारम्भकावयवसम्बन्धित्वादवयवी तद्व्यतिरेकप्रयुक्तव्यतिरेकप्रतियोगित्वेऽपि आम्रावयवसंयोगासमवायिकारणकत्वाभावात् । अतो यदीयगुणेत्युक्तम् ॥

ವ್ಯಾಪ್ತಿಯಲ್ಲಿ 'ಯದೀಯಗುಣ' ಎಂದು ಗುಣ ಎಂಬ ವಿಶೇಷಣವೂ ಇದೆ. ಈ ವಿಶೇಷಣ ಇಲ್ಲದಿದ್ದಲ್ಲಿ ಮತ್ತೆ ವೃಕ್ಷಪತನಕ್ರಿಯೆಯಲ್ಲಿ ವ್ಯಭಿಚಾರ ಬರುತ್ತದೆ—ವೃಕ್ಷವು ಸ್ವಾರಂಭಕಾವಯವಗಳಿಂದ ಹುಟ್ಟಿದೆ. ಹೀಗಾಗಿ ಯದೀಯ ಎಂದರೆ ಅವಯವೀಯವಾದ ವೃಕ್ಷ. ತದ್ ವ್ಯತಿರೇಕಪ್ರಯುಕ್ತ- ವ್ಯತಿರೇಕ-ಪ್ರತಿಯೋಗಿಯಾಗಿದೆ ಪತನಕ್ರಿಯೆ. ವೃಕ್ಷವು ಪತನ ವ್ಯಧಿಕರಣವೂ ಆಗಿದೆ. ಪತನ ವೃಕ್ಷದಲ್ಲಿದ್ದರೆ ವೃಕ್ಷ ಸ್ವಾರಂಭಕಾವಯವದಲ್ಲಿದೆ. ಹೀಗೆ ಹೇತು ಬಂತು. ಆದರೆ, ಪತನಕ್ಕೆ ವೃಕ್ಷಾಧಾರವಾದ ತದವಯದ ಸಂಯೋಗವು ಅಸಮವಾಯಿಕಾರಣವಲ್ಲ. ಸಾಧ್ಯ ಬರಲಿಲ್ಲ. ಯದೀಯ ಗುಣ ಎಂದಾಗ ಈ ವ್ಯಭಿಚಾರವಿಲ್ಲ. ವೃಕ್ಷವು ಗುಣವಲ್ಲ, ದ್ರವ್ಯ.

**अन्यथा चेष्टैव नोत्पद्येत । असमवायिकारणाभावात् । कारणप्रत्यासत्त्यभावेन प्रयत्नस्य हेतुत्वानुपपत्तेश्च ॥**

ಆತ್ಮಸಂಯೋಗಜನ್ಯತ್ವವು ಶರೀರಕ್ರಿಯೆಯಲ್ಲಿ ಇಲ್ಲದಿದ್ದರೆ ಆ ಕ್ರಿಯೆಗೆ ಅಸಮವಾಯಿಕಾರಣವೇ ಇಲ್ಲದಿರುವುದರಿಂದ ಕ್ರಿಯೆಯೇ ಹುಟ್ಟಲಿಕ್ಕಿಲ್ಲ. ಅಲ್ಲದೆ, ಕ್ರಿಯೆಗೆ ಪ್ರಯತ್ನವು ಕಾರಣ. ಶರೀರಾತ್ಮಸಂಯೋಗವು ಕಾರಣವಲ್ಲದಿದ್ದಲ್ಲಿ ವ್ಯಧಿಕರಣವಾದ ಪ್ರಯತ್ನಕ್ಕೆ ಕಾರ್ಯಾಧಿಕರಣದೊಂದಿಗೆ ಪ್ರತ್ಯಾಸತ್ತಿಯೂ ಇಲ್ಲ. ಸ್ವಾಶ್ರಯಸಂಯೋಗವು ಪ್ರತ್ಯಾಸತ್ತಿಯಾಗಬೇಕು. ಆಗ ಪ್ರತ್ಯಾಸತ್ತಿರೂಪವಾಗಿ ಸಂಯೋಗವೂ ಕಾರಣವಾಗುತ್ತದೆ. ಹೀಗೆ, ಪ್ರಯತ್ನಕ್ಕೆ ಹೇತುತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಆತ್ಮಸಂಯೋಗಕ್ಕೆ ಕಾರಣತ್ವವನ್ನು ಒಪ್ಪಬೇಕು.

## ನ್ಯಾಯದೀಪ

विपक्षे बाधकरूपं हेतोरनुकूलतर्कमाह—**अन्यथेति ।** उक्तसाध्याभाव

इत्यर्थः । **कारणेति** । अन्यथेत्यनुषङ्गः । कारणीभूतप्रत्यासत्तीत्यर्थः । अप्रत्यासन्नस्य हेतुत्वेऽतिप्रसङ्ग इति भावः ।

ಈ ಅನುಮಾನದಲ್ಲಿ ಹೇತುವು ಸಾಧ್ಯಕ್ಕೆ ಪ್ರಯೋಜಕ ಎಂದು ಅಂಗೀಕರಿಸದಿದ್ದಲ್ಲಿ ಬಾಧಕರೂಪವಾದ ಅನುಕೂಲತರ್ಕವನ್ನು 'ಅನ್ಯಥಾ' ಎಂದು ಮೂಲದಲ್ಲಿ ಹೇಳಲಾಗಿದೆ. ಅನ್ಯಥಾ ಎಂದರೆ ಪಕ್ಷದಲ್ಲಿ ಸಾಧ್ಯವು ಇಲ್ಲದೇ ಹೋದಲ್ಲಿ, ಎಂದರ್ಥ.

ಕಾರಣ ಪ್ರತ್ಯಾಸತ್ತಿ, ಎಂದರೆ ಕಾರಣೀಭೂತವಾದ ಸಂಬಂಧವು ಇಲ್ಲದಿರುವುದರಿಂದ ಎಂದರ್ಥ. (ಆತ್ಮಗತವಾದ ಯತ್ನಕ್ಕೂ ಚೇಷ್ಟೆಗೆ ಅಧಿಕರಣವಾದ ಶರೀರಕ್ಕೂ ಸಂಬಂಧವು ಇಲ್ಲದಿರುವುದರಿಂದ) ಸಂಬಂಧವಿಲ್ಲದೆಯೂ ಕಾರಣವಾದರೆ ಅತಿಪ್ರಸಂಗ ಬಂದೀತು.

**नचैवमप्यात्मा हेतुभूतसंयोगावच्छेदक एव, न हेतुरिति वाच्यम् । घटकारणीभूतसंयोगाश्रयस्य कपालस्य घटकारणत्वदर्शनात् ।।**

ಇಷ್ಟಾದರೂ ಆತ್ಮನು ಕಾರಣನಾಗಲಾರ. ಕಾರಣವಾದುದು ಪ್ರಯತ್ನವದಾತ್ಮಸಂಯೋಗ. ಆತ್ಮನು ಅದರಲ್ಲಿ ಘಟಕನಾದುದರಿಂದ ಕಾರಣತಾವಚ್ಛೇದಕ ಮಾತ್ರ, ಕಾರಣನಲ್ಲ, ಹೀಗೆ ಹೇಳಬಾರದು. ಘಟಕ್ಕೆ ಅಸಮವಾಯಿಕಾರಣವಾದುದು ಕಪಾಲದ್ವಯಸಂಯೋಗ. ಆದಕ್ಕೆ ಆಶ್ರಯವಾದ ಕಪಾಲವು ಕಾರಣವಾಗಿದೆ. ಅದರಂತೆಯೇ, ಶರೀರಚೇಷ್ಟೆಗೆ ಅಸಮವಾಯಿಕಾರಣ ಆತ್ಮಸಂಯೋಗ. ಅದಕ್ಕೆ ಆಶ್ರಯವಾದ ಆತ್ಮನೂ ಕಾರಣನಾಗಲೇಬೇಕು.

## ನ್ಯಾಯದೀಪ

''असमवायिकारण-संयोगाश्रयस्य तत्कार्यजनकत्वनियमाच्च'' इति मण्युक्तमेवोदाहरणनिष्ठतया व्यनक्ति—**घटकारणेति** ।।

ಮಣಿಯಲ್ಲಿ 'ಕಾರ್ಯಕ್ಕೆ ಅಸಮವಾಯಿಕಾರಣವಾದ ಸಂಯೋಗಕ್ಕೆ ಯಾವುದು ಆಶ್ರಯವೋ ಅದೂ ಆ ಕಾರ್ಯಕ್ಕೆ ಜನಕ' ಎಂದಿದೆ. ಈ ನಿಯಮವನ್ನು ಪ್ರಕೃತ ಉದಾಹರಣೆಯಲ್ಲಿ ತೋರಿಸಿ 'ಘಟಕಾರಣ' ಇತ್ಯಾದಿವಾಕ್ಯದಲ್ಲಿ ಸ್ಪಷ್ಟಪಡಿಸಲಾಗಿದೆ.

## ಅವತಾರಿಕೆ

''अथ घटकृतिसाध्येष्टसाधनताज्ञानं चिकीर्षाद्वारा हेतुः । तच्च न प्रत्यक्षम्'' इत्यादिना मण्युक्तावेव प्रकारान्तरेण साध्यवैकल्यतत्समाधी निष्कृष्यानुवदति—**नन्वित्यादिना** ।

ಮಣಿಗ್ರಂಥದಲ್ಲಿ (ಪು.30) ಹೀಗೊಂದು ಆಕ್ಷೇಪವನ್ನು ಮಾಡಲಾಗಿದೆ— ಕೃತಿಸಾಧ್ಯತ್ವಪ್ರಕಾರಕ ಇಷ್ಟಸಾಧನತಾಜ್ಞಾನದಿಂದ "ಇದಂ ಮಯಾ ಕಾರ್ಯಂ' ಎಂಬ ಚಿಕೀರ್ಷಾ ಹುಟ್ಟುತ್ತದೆ. ಹೀಗೆ ಇಷ್ಟಸಾಧನತಾಜ್ಞಾನವು ಚಿಕೀರ್ಷಾ-ದ್ವಾರಾ ಘಟಹೇತು. ಚಿಕೀರ್ಷಾ ವಿಷಯವಾದ ಘಟಾದಿಕಾರ್ಯಗಳು ಇನ್ನೂ ಹುಟ್ಟಿರುವುದಿಲ್ಲವಾದುದರಿಂದ ತದ್ವಿಷಯಕವಾದ ಇಷ್ಟಸಾಧನತಾಜ್ಞಾನವು ಪ್ರತ್ಯಕ್ಷಾತ್ಮಕವಲ್ಲ" ಎಂದು.[1]

ಮಣಿಯಲ್ಲಿ ಹೇಳಿರುವ ಈ ಸಾಧ್ಯವೈಕಲ್ಯದೋಷವನ್ನೂ ಅದರ ಪರಿಹಾರವನ್ನೂ ಮೂಲದಲ್ಲಿ ಪರಿಷ್ಕರಿಸಿ ಅನುವಾದ ಮಾಡಲಾಗಿದೆ.

**ननु घटादौ ज्ञानस्य कृतिद्वारैव हेतुत्वात्, कृतिं च प्रतीष्टसाधनत्वानुमितेरेव हेतुत्वात् साक्षात्कारस्याहेतुत्वेन साध्यवैकल्यमिति चेन्न । कृतिर्हि सिद्धवृत्तिरसिद्धविषयिणी । तत्र साध्यांशे घटादाविष्टसाधनत्वानुमितिसत्त्वेऽपि सिद्धांशस्य कपालादेः साक्षात्कारव्यतिरेकेण कृतिव्यतिरेकदर्शनेन उपादानसाक्षात्कारस्यापि हेतुत्वात् ।।**

ಕುಲಾಲನ ಜ್ಞಾನದಿಂದ ಪ್ರಯತ್ನ, ಅದರಿಂದ ಘಟ. ಹೀಗೆ ಘಟಕ್ಕೆ ಜ್ಞಾನವು ಕೃತಿದ್ವಾರಾ ಕಾರಣ. ಕೃತಿಗೆ ಕಾರಣವಾದ ಜ್ಞಾನವಾದರೂ ಇಷ್ಟಸಾಧನತಾಜ್ಞಾನ. ಆ ಜ್ಞಾನ ಅನುಮಿತಿ ರೂಪವಾದುದು. ಹೀಗೆ ಕೃತಿಗೆ ಸಾಕ್ಷಾತ್ಕಾರವು ಕಾರಣವಲ್ಲ. ಆದ್ದರಿಂದ ಘಟದಲ್ಲಿ (ಉಪಾದಾನಗೋಚರ) ಸಾಕ್ಷಾತ್ಕಾರ ಜನ್ಯತ್ವವು ಇಲ್ಲ, ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಕೃತಿಯು ಸಿದ್ಧವಸ್ತುವಿನಲ್ಲಿ ಇರುತ್ತದೆ, ಅಸಿದ್ಧವಿಷಯಕವಾಗಿರುತ್ತದೆ. ಅನ್ನದಲ್ಲಿರುವ ಕೃತಿಯು ಭೋಜನಸಾಧ್ಯವಾದ ತೃಪ್ತಿವಿಷಯಕವಾಗಿರುತ್ತದೆ. ಪ್ರಕೃತದಲ್ಲಿ ಕಪಾಲವು ಸಿದ್ಧ, ಘಟವು ಅಸಿದ್ಧ. ಕಪಾಲಗತವಾದ, ಘಟವಿಷಯಕಕೃತಿಗೆ ಅಸಿದ್ಧವಾದ ಘಟಾಂಶದಲ್ಲಿ ಇಷ್ಟಸಾಧನತಾನುಮಿತಿಯು ಹೇತು. ಸಿದ್ಧವಾದ ಕಪಾಲದ ಅಪರೋಕ್ಷಜ್ಞಾನವೂ ಕಾರಣ. ಇಂತಹ ಅಪರೋಕ್ಷಜ್ಞಾನದ ವ್ಯತಿರೇಕದಿಂದ ಕೃತಿ ವ್ಯತಿರೇಕವೂ ದೃಷ್ಟವಾಗಿದೆ. ಉಪಾದಾನಗೋಚರವಾದ ಅಪರೋಕ್ಷಜ್ಞಾನವು ಇಲ್ಲದಿದ್ದರೆ ಕೃತಿಯೂ ಇರುವುದಿಲ್ಲ. ಆದ್ದರಿಂದ ಕಪಾಲವಿಷಯಕವಾದ ಅಪರೋಕ್ಷಜ್ಞಾನವೂ ಘಟಕ್ಕೆ ಕಾರಣವಾಗಿದೆ.

---

१. अथ घटे कृतिसाध्येष्टसाधनताज्ञानं चिकीर्षाद्वारा हेतुः । तच्च न प्रत्यक्षम् । चिकीर्षाविषये अनागते इन्द्रियसन्निकर्षाभावात् । किन्तु, अनुमितिरूपम् । तथा च साध्यविकलो दृष्टान्तः । (पु.३०)

इत्यर्थः । **कारणेति** । अन्यथेत्यनुषङ्गः । कारणीभूतप्रत्यासत्तीत्यर्थः । अप्रत्यासन्नस्य हेतुत्वेऽतिप्रसङ्ग इति भावः ।

ಈ ಅನುಮಾನದಲ್ಲಿ ಹೇತುವು ಸಾಧ್ಯಕ್ಕೆ ಪ್ರಯೋಜಕ ಎಂದು ಅಂಗೀಕರಿಸದಿದ್ದಲ್ಲಿ ಬಾಧಕರೂಪವಾದ ಅನುಕೂಲತರ್ಕವನ್ನು 'ಅನ್ಯಥಾ' ಎಂದು ಮೂಲದಲ್ಲಿ ಹೇಳಲಾಗಿದೆ. ಅನ್ಯಥಾ ಎಂದರೆ ಪಕ್ಷದಲ್ಲಿ ಸಾಧ್ಯವು ಇಲ್ಲದೇ ಹೋದಲ್ಲಿ, ಎಂದರ್ಥ.

ಕಾರಣ ಪ್ರತ್ಯಾಸತ್ತಿ, ಎಂದರೆ ಕಾರಣೀಭೂತವಾದ ಸಂಬಂಧವು ಇಲ್ಲದಿರುವುದರಿಂದ ಎಂದರ್ಥ. (ಆತ್ಮಗತವಾದ ಯತ್ನಕ್ಕೂ ಚೇಷ್ಟೆಗೆ ಅಧಿಕರಣವಾದ ಶರೀರಕ್ಕೂ ಸಂಬಂಧವು ಇಲ್ಲದಿರುವುದರಿಂದ) ಸಂಬಂಧವಿಲ್ಲದೆಯೂ ಕಾರಣವಾದರೆ ಅತಿಪ್ರಸಂಗ ಬಂದೀತು.

**नचैवमप्यात्मा हेतुभूतसंयोगावच्छेदक एव, न हेतुरिति वाच्यम् । घटकारणीभूतसंयोगाश्रयस्य कपालस्य घटकारणत्वदर्शनात् ॥**

ಇಷ್ಟಾದರೂ ಆತ್ಮನು ಕಾರಣನಾಗಲಾರ. ಕಾರಣವಾದುದು ಪ್ರಯತ್ನವದಾತ್ಮಸಂಯೋಗ. ಆತ್ಮನು ಅದರಲ್ಲಿ ಘಟಕನಾದುದರಿಂದ ಕಾರಣತಾವಚ್ಛೇದಕ ಮಾತ್ರ, ಕಾರಣನಲ್ಲ, ಹೀಗೆ ಹೇಳಬಾರದು. ಘಟಕ್ಕೆ ಅಸಮವಾಯಿಕಾರಣವಾದುದು ಕಪಾಲದ್ವಯಸಂಯೋಗ. ಅದಕ್ಕೆ ಆಶ್ರಯವಾದ ಕಪಾಲವು ಕಾರಣವಾಗಿದೆ. ಅದರಂತೆಯೇ, ಶರೀರಚೇಷ್ಟೆಗೆ ಅಸಮವಾಯಿಕಾರಣ ಆತ್ಮಸಂಯೋಗ. ಅದಕ್ಕೆ ಆಶ್ರಯವಾದ ಆತ್ಮನೂ ಕಾರಣನಾಗಲೇಬೇಕು.

## ನ್ಯಾಯದೀಪ

''असमवायिकारण-संयोगाश्रयस्य तत्कार्यजनकत्वनियमाच्च'' इति मण्युक्तमेवोदाहरणनिष्ठतया व्यनक्ति—**घटकारणेति** ॥

ಮಣಿಯಲ್ಲಿ 'ಕಾರ್ಯಕ್ಕೆ ಅಸಮವಾಯಿಕಾರಣವಾದ ಸಂಯೋಗಕ್ಕೆ ಯಾವುದು ಆಶ್ರಯವೋ ಅದೂ ಆ ಕಾರ್ಯಕ್ಕೆ ಜನಕ' ಎಂದಿದೆ. ಈ ನಿಯಮವನ್ನು ಪ್ರಕೃತ ಉದಾಹರಣೆಯಲ್ಲಿ ತೋರಿಸಿ 'ಘಟಕಾರಣ' ಇತ್ಯಾದಿವಾಕ್ಯದಲ್ಲಿ ಸ್ಪಷ್ಟಪಡಿಸಲಾಗಿದೆ.

## ಅವತಾರಿಕೆ

''अथ घटकृतिसाध्येष्टसाधनताज्ञानं चिकीर्षाद्वारा हेतुः । तच्च न प्रत्यक्षम्'' इत्यादिना मण्युक्तावेव प्रकारान्तरेण साध्यवैकल्यतत्समाधी निष्कृष्यानुवदति—**नन्वित्यादिना** ।

ಮಣಿಗ್ರಂಥದಲ್ಲಿ (ಪು.30) ಹೀಗೊಂದು ಆಕ್ಷೇಪವನ್ನು ಮಾಡಲಾಗಿದೆ— ಕೃತಿಸಾಧ್ಯತ್ವಪ್ರಕಾರಕ ಇಷ್ಟಸಾಧನತಾಜ್ಞಾನದಿಂದ "ಇದಂ ಮಯಾ ಕಾರ್ಯಂ' ಎಂಬ ಚಿಕೀರ್ಷಾ ಹುಟ್ಟುತ್ತದೆ. ಹೀಗೆ ಇಷ್ಟಸಾಧನತಾಜ್ಞಾನವು ಚಿಕೀರ್ಷಾ-ದ್ವಾರಾ ಘಟಹೇತು. ಚಿಕೀರ್ಷಾ ವಿಷಯವಾದ ಘಟಾದಿಕಾರ್ಯಗಳು ಇನ್ನೂ ಹುಟ್ಟಿರುವುದಿಲ್ಲವಾದುದರಿಂದ ತದ್ವಿಷಯಕವಾದ ಇಷ್ಟಸಾಧನತಾಜ್ಞಾನವು ಪ್ರತ್ಯಕ್ಷಾತ್ಮಕವಲ್ಲ" ಎಂದು.[1]

ಮಣಿಯಲ್ಲಿ ಹೇಳಿರುವ ಈ ಸಾಧ್ಯವೈಕಲ್ಯದೋಷವನ್ನೂ ಅದರ ಪರಿಹಾರವನ್ನೂ ಮೂಲದಲ್ಲಿ ಪರಿಷ್ಕರಿಸಿ ಅನುವಾದ ಮಾಡಲಾಗಿದೆ.

**ननु घटादौ ज्ञानस्य कृतिद्वारैव हेतुत्वात्, कृतिं च प्रतीष्टसाधनत्वानुमितेरेव हेतुत्वात् साक्षात्कारस्याहेतुत्वेन साध्यवैकल्यमिति चेन्न । कृतिर्हि सिद्धवृत्तिरसिद्धविषयिणी । तत्र साध्यांशे घटादाविष्टसाधनत्वानुमितिसत्त्वेऽपि सिद्धांशस्य कपालादेः साक्षात्कारव्यतिरेकेण कृतिव्यतिरेकदर्शनेन उपादानसाक्षात्कारस्यापि हेतुत्वात् ॥**

ಕುಲಾಲನ ಜ್ಞಾನದಿಂದ ಪ್ರಯತ್ನ, ಅದರಿಂದ ಘಟ. ಹೀಗೆ ಘಟಕ್ಕೆ ಜ್ಞಾನವು ಕೃತಿದ್ವಾರಾ ಕಾರಣ. ಕೃತಿಗೆ ಕಾರಣವಾದ ಜ್ಞಾನವಾದರೂ ಇಷ್ಟಸಾಧನತಾಜ್ಞಾನ. ಆ ಜ್ಞಾನ ಅನುಮಿತಿ ರೂಪವಾದುದು. ಹೀಗೆ ಕೃತಿಗೆ ಸಾಕ್ಷಾತ್ಕಾರವು ಕಾರಣವಲ್ಲ. ಆದ್ದರಿಂದ ಘಟದಲ್ಲಿ (ಉಪಾದಾನಗೋಚರ) ಸಾಕ್ಷಾತ್ಕಾರ ಜನ್ಯತ್ವವು ಇಲ್ಲ, ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಕೃತಿಯು ಸಿದ್ಧವಸ್ತುವಿನಲ್ಲಿ ಇರುತ್ತದೆ, ಅಸಿದ್ಧವಿಷಯಕವಾಗಿರುತ್ತದೆ. ಅನ್ನದಲ್ಲಿರುವ ಕೃತಿಯು ಭೋಜನಸಾಧ್ಯವಾದ ತೃಪ್ತಿವಿಷಯಕವಾಗಿರುತ್ತದೆ. ಪ್ರಕೃತದಲ್ಲಿ ಕಪಾಲವು ಸಿದ್ಧ, ಘಟವು ಅಸಿದ್ಧ. ಕಪಾಲಗತವಾದ, ಘಟವಿಷಯಕಕೃತಿಗೆ ಅಸಿದ್ಧವಾದ ಘಟಾಂಶದಲ್ಲಿ ಇಷ್ಟಸಾಧನತಾನುಮಿತಿಯು ಹೇತು. ಸಿದ್ಧವಾದ ಕಪಾಲದ ಅಪರೋಕ್ಷಜ್ಞಾನವೂ ಕಾರಣ. ಇಂತಹ ಅಪರೋಕ್ಷಜ್ಞಾನದ ವ್ಯತಿರೇಕದಿಂದ ಕೃತಿ ವ್ಯತಿರೇಕವೂ ದೃಷ್ಟವಾಗಿದೆ. ಉಪಾದಾನಗೋಚರವಾದ ಅಪರೋಕ್ಷಜ್ಞಾನವು ಇಲ್ಲದಿದ್ದರೆ ಕೃತಿಯೂ ಇರುವುದಿಲ್ಲ. ಆದ್ದರಿಂದ ಕಪಾಲವಿಷಯಕವಾದ ಅಪರೋಕ್ಷಜ್ಞಾನವೂ ಘಟಕ್ಕೆ ಕಾರಣವಾಗಿದೆ.

---

१. अथ घटे कृतिसाध्येष्टसाधनताज्ञानं चिकीर्षाद्वारा हेतुः। तच्च न प्रत्यक्षम् । चिकीर्षाविषये अनागते इन्द्रियसन्निकर्षाभावात् । किन्तु, अनुमितिरूपम् । तथा च साध्यविकलो दृष्टान्तः । (पु.३०)

## ನ್ಯಾಯದೀಪ

**साध्येति।** उपादानगोचरापरोक्षज्ञान-चिकीर्षाकृतिमज्जन्यत्वादिरूपसाध्येत्यर्थः ॥

ಮೂಲದಲ್ಲಿ ಸಾಧ್ಯ ಎಂದರೆ, ಈಶ್ವರಾನುಮಾನದ 'ಉಪಾದಾನ ಗೋಚರಾಪರೋಕ್ಷಜ್ಞಾನ-ಚಿಕೀರ್ಷಾಕೃತಿಮಜ್ಜನ್ಯತ್ವರೂಪಸಾಧ್ಯ' ಎಂದರ್ಥ.

**नच मनःक्रियाहेतुमनोविषयककृतौ व्यभिचारः । समानाधिकरणस्य सिद्धमनोविषयकसाक्षात्कारादेरभावादिति वाच्यम्। त्वगिन्द्रियगृहीतमनोवहननाडीगोचरकृत्या नाड्यां क्रियोत्पत्तौ वेगवन्नाड्यां संयोगविशेषरूपनोदनेन मनसि क्रियोत्पत्तेः ॥**

**ಆಕ್ಷೇಪ**—'ಎಲ್ಲಿ ಕೃತಿ ಇರುವುದೋ ಅದರ ಅಪರೋಕ್ಷಜ್ಞಾನವು ಕೃತಿಗೆ ಕಾರಣ' ಎಂಬ ನಿಯಮಕ್ಕೆ ಮನೋವಿಷಯಕ-ಕೃತಿಯಲ್ಲಿ ವ್ಯಭಿಚಾರವಿದೆ. ಮನಸ್ಸಿನಲ್ಲಿ ಕ್ರಿಯಾ ಹುಟ್ಟಬೇಕಾದರೆ ಮನೋನಿಷ್ಠ (ಮನೋವಿಷಯಕ) ಕೃತಿಯು ಕಾರಣ. ಆದರೆ, ಮನಸ್ಸಿನ ಅಪರೋಕ್ಷಾದಿಗಳು ಇಲ್ಲ, ಅದು ಅತೀಂದ್ರಿಯ. ಆದ್ದರಿಂದ ವ್ಯಭಿಚಾರ.

**ಪರಿಹಾರ**—ಮನಸ್ಸು ದೇಹದ ನಾಡಿಯಲ್ಲಿ ಸಂಚಾರ ಮಾಡುತ್ತದೆ. ನಾಡಿಯಲ್ಲಿ ಸಂಚಲನ ಕ್ರಿಯೆಯಾದಾಗ ವೇಗಾಖ್ಯಸಂಸ್ಕಾರ ಹುಟ್ಟುತ್ತದೆ. ಅಂತಹ ನಾಡಿಯ ನೋದನ ಸಂಯೋಗದಿಂದ ಮನಸ್ಸಿನಲ್ಲಿ ಕ್ರಿಯೆ ಹುಟ್ಟುತ್ತದೆ. ಹೀಗೆ ಮನಸ್ಸಿನ ಕ್ರಿಯೆ ಸಾಕ್ಷಾತ್ತಾಗಿ ಪ್ರಯತ್ನಸಾಧ್ಯವೇ ಅಲ್ಲ. ನಾಡಿಯ ಕ್ರಿಯೆ ಯತ್ನಜನ್ಯ. ನಾಡಿಯು ತ್ವಗಿಂದ್ರಿಯಗ್ರಾಹ್ಯ. ಹೀಗೆ ಆತ್ಮನ ಪ್ರಯತ್ನಕ್ಕೆ ವಿಷಯವಾದ ನಾಡಿಯ ತ್ವಾಚಪ್ರತ್ಯಕ್ಷವೂ ಇದೆ. ವ್ಯಭಿಚಾರ ಇಲ್ಲ.[1]

## ನ್ಯಾಯದೀಪ

**व्यभिचार इति।** यन्निष्ठा या कृतिः सा तद्गोचरापरोक्षपूर्विकेत्यस्य

---

१. न चाभिमतग्राहकेन्द्रियसंयोगार्थम् मनसि प्रयत्नजन्य-क्रियादर्शनात् व्यभिचारः। अदृष्टसहकृतत्वगिन्द्रियेण हि मनोवहननाडीनाम् उपलम्भेन तद्गोचरप्रयत्नात् नाडीक्रियया स्पर्शवत्-वेगवन्नाडीक्रियया नोदनान्मनसि क्रिया न तु प्रयत्नात् । अत एव जलाद्यभ्यवहारे मलोत्सर्गहेतुनाडीनाम् अनाद्यभ्यासवासनावशात् अदृष्टसहकृत-त्वगिन्द्रियोपलम्भात् तद्गोचरप्रयत्नः । (मणि. पु.३०)

**व्यभिचार** इत्यर्थः । तमेव व्यनक्ति–**समानाधिकरणस्येति ।** साक्षात्कारादेरित्यादिपदेन चिकीर्षाग्रहः । मनसोऽतीन्द्रियत्वादिति भावः । **मनोवहनेति ।** मनस आधारभूतेत्यर्थः । **मनसि क्रियोत्पत्तेरिति ।** तथाच यत्र कृतिर्नाड्यां तत्रास्त्यपरोक्षादिपूर्वकत्वम् । यत्र मनसि नास्त्यपरोक्षज्ञानं तत्र न कृतिरिति न व्यभिचार इति भावः ।।

ಮೂಲದಲ್ಲಿ 'ಸಾಕ್ಷಾತ್ಕಾರಾದೇಃ' ಎಂಬಲ್ಲಿ ಆದಿಪದದಿಂದ 'ಚಿಕೀರ್ಷಾ' ವಿವಕ್ಷಿತ. ಮನೋವಹನ ನಾಡೀ ಎಂದರೆ ಮನಸ್ಸಿಗೆ ಆಧಾರವಾದ ನಾಡೀ ಎಂದರ್ಥ.

ವ್ಯಭಿಚಾರದ ಪರಿಹಾರ ಹೀಗೆ— ಎಲ್ಲಿ ಕೃತಿ ಇದೆಯೋ, ನಾಡಿಯಲ್ಲಿ ಅಲ್ಲಿ ಅಪರೋಕ್ಷಜ್ಞಾನ ಮತ್ತು ಇಚ್ಛೆ ಇದೆ. ಎಲ್ಲಿ, ಮನಸ್ಸಿನಲ್ಲಿ ಅಪರೋಕ್ಷಜ್ಞಾನಾದಿಗಳೂ ಇಲ್ಲ, ಅಲ್ಲಿ ಕೃತಿಯೂ ಇಲ್ಲ.

**ಅವತಾರಿಕೆ**

**नन्वेवमपि सिद्धे करणेच्छाभावेनोपादाने चिकीर्षायोगात् पुनः साध्यवैकल्यमित्याशङ्कामनूद्य निराह—यद्यपीति ।**

ಘಟಕ್ಕೆ ಉಪಾದಾನವಾದುದು ಕಪಾಲ. ಅದು ಸಿದ್ಧ. ಸಿದ್ಧವಾದುದು ಸಾಧ್ಯವಲ್ಲ. ಹೀಗಾಗಿ ಕಪಾಲದಲ್ಲಿ ಚಿಕೀರ್ಷಾ (ಕರ್ತುಂ ಇಚ್ಛಾ) ಇಲ್ಲ. ಆದರೆ ಅದರಲ್ಲಿ ಕೃತಿ ಇದೆ. ಮತ್ತೆ ವ್ಯಭಿಚಾರ ಬರುತ್ತದೆ. ಇದಕ್ಕೆ ಪರಿಹಾರವನ್ನು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**यद्यप्युपादानमात्रं सिद्धम् । तथाऽप्युपादेयवत्त्वेन साध्यत्वात् तत्र चिकीर्षा युक्ता ।।**

ಘಟಕ್ಕೆ ಉಪಾದಾನವಾಗಿರುವ ಕಪಾಲವು ಯದ್ಯಪಿ ಸಿದ್ಧ. ಆದರಲ್ಲಿ ಚಿಕೀರ್ಷಾ ಇರಲು ಸಾಧ್ಯವಿಲ್ಲ. ಆದರೂ, ಕಪಾಲಸ್ವರೂಪವು ಸಿದ್ಧವಾದರೂ ಉಪಾದೇಯವಾದ ಘಟವತ್ತಯಾ ಅದು ಸಿದ್ಧವಲ್ಲ, ಸಾಧ್ಯ. ಆದ್ದರಿಂದ ಕಪಾಲದಲ್ಲಿ ಚಿಕೀರ್ಷಾ ಇರಬಹುದು. ಆದ್ದರಿಂದ ವ್ಯಭಿಚಾರವಿಲ್ಲ.

**ಅವತಾರಿಕೆ**

एवमप्रयोजकत्वसाध्यवैकल्ये निरस्य ''नन्वेवं घटादावनुमिति-

जन्यत्वदर्शनादीश्वरे अनुमितिरपि स्यात्'' इत्यादिना मण्युक्त-तर्कपराहतिशङ्कोत्तरे अनुवदति—**नचेत्यादिना ।**

ಇದುವರೆಗೆ ಈಶ್ವರಸಾಧಕಾನುಮಾನದಲ್ಲಿ ಅಪ್ರಯೋಜಕತ್ವ ಮತ್ತು ಸಾಧ್ಯವೈಕಲ್ಯಗಳನ್ನು ಪರಿಹರಿಸಲಾಯಿತು. ಮುಂದೆ, ಮಣಿಯಲ್ಲಿ (ಪು.31) ಹೇಳಿರುವ, ತರ್ಕಪರಾಹತಿ ಶಂಕೆ ಮತ್ತು ಅದಕ್ಕೆ ಪರಿಹಾರವನ್ನು ಮೂಲದಲ್ಲಿ ಹೇಳಲಾಗಿದೆ. ''ಯದಿ ಕ್ಷಿತ್ಯಾದಿಕಂ ಕರ್ತೃಜನ್ಯಂ ಸ್ಯಾತ್ ತರ್ಹಿ ಕ್ಷಿತ್ಯಾದಿಕರ್ತುಃ ನಿತ್ಯಪ್ರತ್ಯಕ್ಷವತ್ ನಿತ್ಯಾನುಮಿತಿರಪಿ ಸ್ಯಾತ್'' ಎಂದು ತರ್ಕಪರಾಹತಿ.

**नच घटे सिद्धविषयकसाक्षात्कारजन्यत्ववत् असिद्धविषयकपरोक्ष-ज्ञानजन्यत्वस्यापि दर्शनादीश्वरस्य नित्यप्रत्यक्षवन्नित्यानुमितिः स्यादिति वाच्यम् । सिद्धपरमाण्वादिविषयकपरोक्षज्ञाने सत्यप्यपरोक्षत्वव्यतिरेकेण कृतिव्यतिरेकस्येव साध्यांशज्ञाने सत्यपि परोक्षत्वव्यतिरेकेण कृतिव्यतिरेकस्यादर्शनात् ॥**

ಘಟವು ಸಿದ್ಧವಾದ ಕಪಾಲದ ಅಪರೋಕ್ಷ ಜ್ಞಾನದಿಂದ ಜನ್ಯವಾದಂತೆ ಅಸಿದ್ಧವಾದ ಘಟವಿಷಯಕವಾದ ಇಷ್ಟಸಾಧನತಾನುಮಿತಿಯಿಂದಲೂ ಜನ್ಯವಾಗಿದೆ. ಇಷ್ಟಸಾಧನತಾನುಮಿತಿ ಬರದಿದ್ದರೆ ಚಿಕೀರ್ಷಾವೇ ಹುಟ್ಟುವುದಿಲ್ಲ. ಇದಕ್ಕೆ ಅನುಗುಣವಾಗಿ ಕ್ಷಿತ್ಯಾದಿಕಾರ್ಯಗಳೂ ಅನುಮಿತಿಯಿಂದ ಜನ್ಯವಾಗಬೇಕು. ಆಗ ಕ್ಷಿತ್ಯಾದಿ ಕರ್ತನಾದ ಈಶ್ವರನಿಗೆ ಪರೋಕ್ಷಜ್ಞಾನವೂ ಇದೆ, ಎನ್ನಬೇಕಾಗುತ್ತದೆ. ನಮ್ಮ ಪ್ರತ್ಯಕ್ಷವು ಇಂದ್ರಿಯಜನ್ಯವಾದರೂ ಈಶ್ವರನ ಉಪಾದಾನವಿಷಯಕ ಪ್ರತ್ಯಕ್ಷವು ನಿತ್ಯ ಎನ್ನುವಂತೆ ನಮ್ಮ ಅನುಮಿತಿಯು ಲಿಂಗಜನ್ಯವಾದರೂ ಈಶ್ವರನ ಅನುಮಿತಿಯು ನಿತ್ಯ ಎಂದು ಅಂಗೀಕರಿಸಬೇಕಾದೀತು. ಇದು ಆಕ್ಷೇಪ.

ಪರಿಹಾರ ಹೀಗೆ—ಉಪಾದಾನದ ಅಪರೋಕ್ಷಜ್ಞಾನವೇ ಕಾರ್ಯಹೇತುವಾದಂತೆ ಕೃತಿಸಾಧ್ಯವಾದ ಘಟಾದಿಕಾರ್ಯಗಳ ಪರೋಕ್ಷಜ್ಞಾನವೇ ಕಾರ್ಯಹೇತು, ಎಂಬ ನಿರ್ಬಂಧವಿಲ್ಲ. ಅವುಗಳ ಜ್ಞಾನಮಾತ್ರ ಕಾರ್ಯಹೇತು. ಆ ಜ್ಞಾನ ಮನುಷ್ಯರಿಗೆ ಪರೋಕ್ಷರೂಪವಾದರೂ ಈಶ್ವರನಿಗೆ ಅಪರೋಕ್ಷರೂಪವಾಗಿದೆ. ಆದ್ದರಿಂದ ಅವನಿಗೆ ನಿತ್ಯಪರೋಕ್ಷಜ್ಞಾನದ ಅಗತ್ಯವಿಲ್ಲ.

ಈ ವ್ಯತ್ಯಾಸಕ್ಕೆ ಕಾರಣ–ದ್ವ್ಯಣುಕಕ್ಕೆ ಪರಮಾಣು ಉಪಾದಾನ. ಅದರ ಪರೋಕ್ಷಜ್ಞಾನ ನಮಗಿದೆ. ಆದರೂ, ಪರಮಾಣುಗಳಿಂದ ದ್ವ್ಯಣುಕವನ್ನು ಮಾಡುವುದಕ್ಕೆ ನಮಗಾಗುವುದಿಲ್ಲ. ಹೀಗೆ ಉಪಾದಾನ–ವಿಷಯಕಜ್ಞಾನದಲ್ಲಿ ಅಪರೋಕ್ಷತ್ವವು ಇಲ್ಲದಿರುವುದರಿಂದ ತದ್ವಿಷಯವಾದ ಅಸ್ಮದಾದಿಕೃತಿ ವ್ಯತಿರೇಕವು ದೃಷ್ಟವಾಗಿದೆ. ಇದರಂತೆ, ಸಾಧ್ಯವಾದ ಘಟಾದಿಕಾರ್ಯವಿಷಯಕ

ಜ್ಞಾನದಲ್ಲಿ ಪರೋಕ್ಷತ್ವವ್ಯತಿರೇಕೇಣ ಕಾರ್ಯವ್ಯತಿರೇಕವು ದೃಷ್ಟವಲ್ಲ. ಆದ್ದರಿಂದ ಸಾಧ್ಯವಾದ ಘಟಾದಿಕಾರ್ಯಗಳ ಜ್ಞಾನವಷ್ಟೆ ಕಾರಣ. ಅದರಲ್ಲಿ ಪರೋಕ್ಷತ್ವವು ಇರಬೇಕೆಂದಿಲ್ಲ. ಈಶ್ವರನಿಗೆ ಕಾರ್ಯದ ಅಪರೋಕ್ಷಜ್ಞಾನವಿರುವುದರಿಂದ ಅದೇ ಕಾರ್ಯಕ್ಕೆ ಕಾರಣವಾಗುತ್ತದೆ.

## ನ್ಯಾಯದೀಪ

ईश्वरे जन्यज्ञानाभावाल्लिङ्गजन्यज्ञानं कथं स्यादित्यत आह–**नित्येति** । प्रत्यक्षस्येन्द्रियजन्यत्वेऽपि नित्यप्रत्यक्षवदनुमितेः लिङ्गजन्यत्वेऽपि नित्यानुमितिः स्यादित्यर्थः । अनुमितेरनित्यत्वे आदिकालीनद्यणुकाद्यजननात् तदविनाभूतशरीरेन्द्रियाभावापाताच्चेति भावः । **अपरोक्षत्वेति** । तस्मिन्=ज्ञान इत्यर्थः । **कृतीति** । परमाणुगोचरकृतीत्यर्थः । **साध्यांशेति** । घटपटादिरूपसाध्यांशस्येष्टसाधनत्वेनानुमितिरूपपरोक्षज्ञाने सति तद्विषयककपालादिनिष्ठकृतेर्दर्शनवत् साध्यांशस्येष्टसाधनत्वेनापरोक्षज्ञाने असति साध्यविषयिण्यास्तद्धेतुनिष्ठायाः कृतेः व्यतिरेकस्य क्वाप्यदर्शनेन साध्यांशस्येष्टसाधनत्वेन ज्ञानत्वमेव तद्धेतुनिष्ठकृतौ प्रयोजकं लाघवात् । नतु तत्र साध्यांशस्येष्टसाधनत्वज्ञाने परोक्षत्वमपि । गौरवात् । एवञ्चेश्वरस्यापि क्षित्यादिरूपसाध्यांशस्य स्वेष्टसाधनताज्ञानमपरोक्षरूपमस्तीति[१] तद्धेतूपादानपरमाण्वादिकृतिर्युक्तेति न नित्यानुमित्यापत्तिदोष इति भावः ॥

ನಮ್ಮ ಪ್ರತ್ಯಕ್ಷವು ಇಂದ್ರಿಯಜನ್ಯವಾದರೂ ಈಶ್ವರನಿಗೆ ನಿತ್ಯವಾದ ಪ್ರತ್ಯಕ್ಷವು ಇರುವಂತೆ ಅನುಮಿತಿಯು ಲಿಂಗಜನ್ಯವಾದರೂ ಈಶ್ವರನಿಗೆ ನಿತ್ಯವಾದ ಅನುಮಿತಿಯು ಇರಬೇಕಾದೀತು. ಇದು ಮೂಲದಲ್ಲಿ ಹೇಳಿರುವ ತರ್ಕ.

ಸಾಧ್ಯಾಂಶದ (ಕಾರ್ಯದ) ಜ್ಞಾನಮಾತ್ರ ಕಾರಣ, ಅಪರೋಕ್ಷಜ್ಞಾನವಲ್ಲ. ಇದನ್ನು ಹೀಗೆ ಸಮರ್ಥಿಸಬೇಕು— ಘಟ–ಪಟಾದಿರೂಪವಾದ ಕೃತಿಸಾಧ್ಯವಾದ ವಸ್ತುಗಳು ಇಷ್ಟಸಾಧನ, ಎಂಬ

१. जगत एव तदिच्छाविषयत्वेन स्वेष्टसाधनताज्ञानसत्वात्– मणि ।

**जन्यत्वदर्शनादीश्वरे अनुमितिरपि स्यात्'' इत्यादिना मण्युक्त-तर्कपराहतिशङ्कोत्तरे अनुवदति—नचेत्यादिना ।**

ಇದುವರೆಗೆ ಈಶ್ವರಸಾಧಕಾನುಮಾನದಲ್ಲಿ ಅಪ್ರಯೋಜಕತ್ವ ಮತ್ತು ಸಾಧ್ಯವೈಕಲ್ಯಗಳನ್ನು ಪರಿಹರಿಸಲಾಯಿತು. ಮುಂದೆ, ಮಣಿಯಲ್ಲಿ (ಪು.31) ಹೇಳಿರುವ, ತರ್ಕಪರಾಹತಿ ಶಂಕೆ ಮತ್ತು ಅದಕ್ಕೆ ಪರಿಹಾರವನ್ನು ಮೂಲದಲ್ಲಿ ಹೇಳಲಾಗಿದೆ. ''ಯದಿ ಕ್ಷಿತ್ಯಾದಿಕಂ ಕರ್ತೃಜನ್ಯಂ ಸ್ಯಾತ್ ತರ್ಹಿ ಕ್ಷಿತ್ಯಾದಿಕರ್ತುಃ ನಿತ್ಯಪ್ರತ್ಯಕ್ಷವತ್ ನಿತ್ಯಾನುಮಿತಿರಪಿ ಸ್ಯಾತ್'' ಎಂದು ತರ್ಕಪರಾಹತಿ.

**नच घटे सिद्धविषयकसाक्षात्कारजन्यत्ववत् असिद्धविषयकपरोक्ष-ज्ञानजन्यत्वस्यापि दर्शनादीश्वरस्य नित्यप्रत्यक्षवन्नित्यानुमितिः स्यादिति वाच्यम् । सिद्धपरमाण्वादिविषयकपरोक्षज्ञाने सत्यप्यपरोक्षत्वव्यतिरेकेण कृतिव्यतिरेकस्येव साध्यांशज्ञाने सत्यपि परोक्षत्वव्यतिरेकेण कृतिव्यतिरेकस्यादर्शनात् ।।**

ಘಟವು ಸಿದ್ಧವಾದ ಕಪಾಲದ ಅಪರೋಕ್ಷ ಜ್ಞಾನದಿಂದ ಜನ್ಯವಾದಂತೆ ಅಸಿದ್ಧವಾದ ಘಟವಿಷಯಕವಾದ ಇಷ್ಟಸಾಧನತಾನುಮಿತಿಯಿಂದಲೂ ಜನ್ಯವಾಗಿದೆ. ಇಷ್ಟಸಾಧನತಾನುಮಿತಿ ಬರದಿದ್ದರೆ ಚಿಕೀರ್ಷಾವೇ ಹುಟ್ಟುವುದಿಲ್ಲ. ಇದಕ್ಕೆ ಅನುಗುಣವಾಗಿ ಕ್ಷಿತ್ಯಾದಿಕಾರ್ಯಗಳೂ ಅನುಮಿತಿಯಿಂದ ಜನ್ಯವಾಗಬೇಕು. ಆಗ ಕ್ಷಿತ್ಯಾದಿ ಕರ್ತನಾದ ಈಶ್ವರನಿಗೆ ಪರೋಕ್ಷಜ್ಞಾನವೂ ಇದೆ, ಎನ್ನಬೇಕಾಗುತ್ತದೆ. ನಮ್ಮ ಪ್ರತ್ಯಕ್ಷವು ಇಂದ್ರಿಯಜನ್ಯವಾದರೂ ಈಶ್ವರನ ಉಪಾದಾನವಿಷಯಕ ಪ್ರತ್ಯಕ್ಷವು ನಿತ್ಯ ಎನ್ನುವಂತೆ ನಮ್ಮ ಅನುಮಿತಿಯು ಲಿಂಗಜನ್ಯವಾದರೂ ಈಶ್ವರನ ಅನುಮಿತಿಯು ನಿತ್ಯ ಎಂದು ಅಂಗೀಕರಿಸಬೇಕಾದೀತು. ಇದು ಆಕ್ಷೇಪ.

ಪರಿಹಾರ ಹೀಗೆ—ಉಪಾದಾನದ ಅಪರೋಕ್ಷಜ್ಞಾನವೇ ಕಾರ್ಯಹೇತುವಾದಂತೆ ಕೃತಿಸಾಧ್ಯವಾದ ಘಟಾದಿಕಾರ್ಯಗಳ ಪರೋಕ್ಷಜ್ಞಾನವೇ ಕಾರ್ಯಹೇತು, ಎಂಬ ನಿರ್ಬಂಧವಿಲ್ಲ. ಅವುಗಳ ಜ್ಞಾನಮಾತ್ರ ಕಾರ್ಯಹೇತು. ಆ ಜ್ಞಾನ ಮನುಷ್ಯರಿಗೆ ಪರೋಕ್ಷರೂಪವಾದರೂ ಈಶ್ವರನಿಗೆ ಅಪರೋಕ್ಷರೂಪವಾಗಿದೆ. ಆದ್ದರಿಂದ ಅವನಿಗೆ ನಿತ್ಯಪರೋಕ್ಷಜ್ಞಾನದ ಅಗತ್ಯವಿಲ್ಲ.

ಈ ವ್ಯತ್ಯಾಸಕ್ಕೆ ಕಾರಣ–ದ್ವ್ಯಣುಕಕ್ಕೆ ಪರಮಾಣು ಉಪಾದಾನ. ಅದರ ಪರೋಕ್ಷಜ್ಞಾನ ನಮಗಿದೆ. ಆದರೂ, ಪರಮಾಣುಗಳಿಂದ ದ್ವ್ಯಣುಕವನ್ನು ಮಾಡುವುದಕ್ಕೆ ನಮಗಾಗುವುದಿಲ್ಲ. ಹೀಗೆ ಉಪಾದಾನ–ವಿಷಯಕಜ್ಞಾನದಲ್ಲಿ ಅಪರೋಕ್ಷತ್ವವು ಇಲ್ಲದಿರುವುದರಿಂದ ತದ್ವಿಷಯವಾದ ಅಸ್ಮದಾದಿಕೃತಿ ವ್ಯತಿರೇಕವು ದೃಷ್ಟವಾಗಿದೆ. ಇದರಂತೆ, ಸಾಧ್ಯವಾದ ಘಟಾದಿಕಾರ್ಯವಿಷಯಕ

ಜ್ಞಾನದಲ್ಲಿ ಪರೋಕ್ಷತ್ವವ್ಯತಿರೇಕೇಣ ಕಾರ್ಯವ್ಯತಿರೇಕವು ದೃಷ್ಟವಲ್ಲ. ಆದ್ದರಿಂದ ಸಾಧ್ಯವಾದ ಘಟಾದಿಕಾರ್ಯಗಳ ಜ್ಞಾನವಷ್ಟೆ ಕಾರಣ. ಅದರಲ್ಲಿ ಪರೋಕ್ಷತ್ವವು ಇರಬೇಕೆಂದಿಲ್ಲ. ಈಶ್ವರನಿಗೆ ಕಾರ್ಯದ ಅಪರೋಕ್ಷಜ್ಞಾನವಿರುವುದರಿಂದ ಅದೇ ಕಾರ್ಯಕ್ಕೆ ಕಾರಣವಾಗುತ್ತದೆ.

## ನ್ಯಾಯದೀಪ

ईश्वरे जन्यज्ञानाभावाल्लिङ्गजन्यज्ञानं कथं स्यादित्यत आह–**नित्येति** । प्रत्यक्षस्येन्द्रियजन्यत्वेऽपि नित्यप्रत्यक्षवदनुमितेः लिङ्गजन्यत्वेऽपि नित्यानुमितिः स्यादित्यर्थः । अनुमितेरनित्यत्वे आदिकालीनद्व्यणुकाद्यजननात् तदविनाभूतशरीरेन्द्रियाभावापाताच्चेति भावः । **अपरोक्षत्वेति** । तस्मिन्=ज्ञान इत्यर्थः । **कृतीति** । परमाणुगोचरकृतीत्यर्थः । **साध्यांशेति** । घटपटादिरूपसाध्यांशस्येष्टसाधनत्वेनानुमितिरूपपरोक्षज्ञाने सति तद्विषयककपालादिनिष्ठकृतेर्दर्शनवत् साध्यांशस्येष्टसाधनत्वेनापरोक्षज्ञाने असति साध्यविषयिण्यास्तद्धेतुनिष्ठायाः कृतेः व्यतिरेकस्य काप्यदर्शनेन साध्यांशस्येष्टसाधनत्वेन ज्ञानत्वमेव तद्धेतुनिष्ठकृतौ प्रयोजकं लाघवात् । नतु तत्र साध्यांशस्येष्टसाधनत्वज्ञाने परोक्षत्वमपि । गौरवात् । एवञ्चेश्वरस्यापि क्षित्यादिरूपसाध्यांशस्य स्वेष्टसाधनताज्ञानमपरोक्षरूपमस्तीति[1] तद्धेतूपादानपरमाण्वादिकृतिर्युक्तेति न नित्यानुमित्यापत्तिदोष इति भावः ।।

ನಮ್ಮ ಪ್ರತ್ಯಕ್ಷವು ಇಂದ್ರಿಯಜನ್ಯವಾದರೂ ಈಶ್ವರನಿಗೆ ನಿತ್ಯವಾದ ಪ್ರತ್ಯಕ್ಷವು ಇರುವಂತೆ ಅನುಮಿತಿಯು ಲಿಂಗಜನ್ಯವಾದರೂ ಈಶ್ವರನಿಗೆ ನಿತ್ಯವಾದ ಅನುಮಿತಿಯು ಇರಬೇಕಾದೀತು. ಇದು ಮೂಲದಲ್ಲಿ ಹೇಳಿರುವ ತರ್ಕ.

ಸಾಧ್ಯಾಂಶದ (ಕಾರ್ಯದ) ಜ್ಞಾನಮಾತ್ರ ಕಾರಣ. ಅಪರೋಕ್ಷಜ್ಞಾನವಲ್ಲ. ಇದನ್ನು ಹೀಗೆ ಸಮರ್ಥಿಸಬೇಕು— ಘಟ–ಪಟಾದಿರೂಪವಾದ ಕೃತಿಸಾಧ್ಯವಾದ ವಸ್ತುಗಳು ಇಷ್ಟಸಾಧನ, ಎಂಬ

१. जगत एव तदिच्छाविषयत्वेन स्वेष्टसाधनताज्ञानसत्वात्– मणि ।

ಅನುಮಿತಿರೂಪವಾದ ಪರೋಕ್ಷಜ್ಞಾನವು ಕುಲಾಲಾದಿಗಳಿಗೆ ಇದ್ದಾಗ ಘಟೋದ್ದೇಶ್ಯಕವಾದ ಕೃತಿಯು ಕಪಾಲದಲ್ಲಿ (ವಿಷಯತಾಸಂಬಂಧೇನ) ಇರುವುದು ಕಂಡಿದೆ. ಇದರಂತೆ, ಕೃತಿಸಾಧ್ಯವಾದ ವಸ್ತುಗಳ ಇಷ್ಟಸಾಧನತ್ವಪ್ರಕಾರಕ-ಅಪರೋಕ್ಷಜ್ಞಾನವು ಇಲ್ಲದೇ ಇದ್ದಾಗ ಕೃತಿಸಾಧ್ಯವಾದ ಘಟಾದಿ ವಿಷಯಕವಾದ ಕೃತಿಯ ಅಭಾವವು ಎಲ್ಲೂ ಕಂಡಿಲ್ಲ. ಏಕೆಂದರೆ, ಲೋಕದಲ್ಲಿ ಯಾರಿಗೂ ಕೃತಿಸಾಧ್ಯವಸ್ತುವಿನ ಇಷ್ಟಸಾಧನತಾಪ್ರತ್ಯಕ್ಷವೇ ಇಲ್ಲ. ಆದ್ದರಿಂದ ಕೃತಿಸಾಧ್ಯಾಂಶವಿಷಯಕ ಇಷ್ಟಸಾಧನತಾಜ್ಞಾನವು ಜ್ಞಾನತ್ವೇನೈವ ಕೃತಿಗೆ ಪ್ರಯೋಜಕ. ಪರೋಕ್ಷಜ್ಞಾನತ್ವೇನ ಅಲ್ಲ. ಹಾಗೆ ಹೇಳುವುದು ಗೌರವ. ಈಗ ಈಶ್ವರನಿಗೂ ಕ್ಷಿತ್ಯಾದಿಕಾರ್ಯಗಳ ಅಪರೋಕ್ಷಜ್ಞಾನವು ಇದೆಯಾದ ಕಾರಣ ಆ ಕಾರ್ಯಕ್ಕೆ ಕಾರಣವಾದ ಪರಮಾಣುಗಳ ಕೃತಿಯು ಯುಕ್ತವಾಗಿದೆ. [1]

## ಅವತಾರಿಕೆ

**एवं कृतेरपरोक्षज्ञानपूर्वकत्वे व्यभिचारमुद्धृत्य तत्प्रसङ्गागतमतिप्रसङ्गं च निरस्येदानीं कृतेश्चिकीर्षापूर्वकत्वे व्यभिचारचोद्योत्तरे मण्युक्ते एवाह—ननु द्वेषेति ।**

ಇದುವರೆಗೆ ಕೃತಿಯು ಅಪರೋಕ್ಷಜ್ಞಾನದ್ವಾರಾ ಕಾರಣ ಎಂದಾಗ ಮನಸ್ಸಿನ ಕ್ರಿಯೆಯಲ್ಲಿ ವ್ಯಭಿಚಾರವನ್ನೂ ಈಶ್ವರನಿಗೆ ನಿತ್ಯಾನುಮಿತಿಯೂ ಇರಬೇಕಾದೀತು, ಎಂಬ ಅತಿಪ್ರಸಂಗವನ್ನೂ ಪರಿಹರಿಸಲಾಗಿದೆ. ಮುಂದಿನ ಗ್ರಂಥದಲ್ಲಿ, ಕೃತಿಯು ಚಿಕೀರ್ಷಾದ್ವಾರಾ ಕಾರಣ, ಎನ್ನುವುದಕ್ಕೆ ವ್ಯಭಿಚಾರವನ್ನೂ ಅದಕ್ಕೆ ಪರಿಹಾರವನ್ನೂ ಮಣಿಗ್ರಂಥದಲ್ಲಿ ಹೇಳಿರುವಂತೆಯೇ ಹೇಳಲಾಗಿದೆ—

**ननु द्वेषयोनिकृतिसाध्ये चिकीर्षाभावाद् व्यभिचारः । नच तत्रापि भगवतश्चिकीर्षा, हेतुत्वेन कल्प्या । एवंहि द्वेषयोनिकृतिसाध्यदृष्टान्तेन क्षित्यादेरपि द्वेषवज्जन्यत्वापातेन नित्यद्वेषापत्तेरिति चेन्न । तत्रापि**

१. स्वसुख-दुःखाभावादि-साधनानुमितेर्हि हेतुत्वं घटादौ गृहीतम्। नच भगवति शरीरादृष्टाभावेन सुखमस्ति। अतः न क्षित्यादौ न तथानुमितिः यथार्था सम्भवति । न च तादृशानुमितेः अनुमित्यन्तरस्य वा अनुमितित्वेन घटादौ प्रवृत्तिविषय-प्रत्यक्षवत् हेतुत्वं गृहीतं इति नेश्वरे अनुमितिः । (मणि. पु.३१)

अस्ति च भगवति स्वेष्टसाधनताज्ञानं प्रत्यक्षरूपं, विश्वगोचरत्वात् तत्प्रत्यक्षस्येति भावः। (आलोकव्या. पु.३१)

**द्वेष्याभावस्यैवेष्टत्वेन तत्साधनत्वेन ज्ञाने चिकीर्षाया एव सम्भवेन भिन्नविषयकद्वेषस्याहेतुत्वात् ।।**

ರಾಗದಿಂದ ಕೃತಿ ಹುಟ್ಟುವಂತೆ ದ್ವೇಷದಿಂದಲೂ ಕೃತಿಯು ಹುಟ್ಟುತ್ತದೆ. ಕ್ರೂರಪ್ರಾಣಿಗಳಿಂದ, ಶತ್ರುಗಳಿಂದ ತೊಂದರೆಯಾದಾಗ ಅದರಿಂದಾಗುವ ದುಃಖದ ನಿವೃತ್ತಿಗಾಗಿ ಪ್ರಯತ್ನ ಮಾಡಲಾಗುತ್ತದೆ. ಅಂತಹ ಸಂದರ್ಭಲ್ಲಿ ಇಷ್ಟಸಾಧನತಾಜ್ಞಾನರೂಪವಾದ ಕಾರಣವು ಇಲ್ಲದಿರುವುದರಿಂದ ಚಿಕೀರ್ಷಾ ಹುಟ್ಟುವುದಿಲ್ಲ. ದ್ವೇಷದಿಂದಲೇ ಕೃತಿಯು ಹುಟ್ಟುತ್ತದೆ. ಹೀಗೆ ಚಿಕೀರ್ಷಾದ್ವಾರಾ ಕೃತಿಸಾಧ್ಯತ್ವವು ದುಃಖಾಭಾವದಲ್ಲಿ ಇಲ್ಲ. ಕಾರ್ಯತ್ವ ಇದೆ. ವ್ಯಭಿಚಾರ ಬಂತು.

**ಆಕ್ಷೇಪ**—ಅಲ್ಲಿ ಜೀವನಿಗೆ ಚಿಕೀರ್ಷಾ ಇಲ್ಲದಿದ್ದರೂ ಸರ್ವಕರ್ತನಾದ ಪರಮಾತ್ಮನಿಗೆ ಚಿಕೀರ್ಷಾ ಇದೆ. ಆದ್ದರಿಂದ ವ್ಯಭಿಚಾರವಿಲ್ಲ.

**ಸಮಾಧಾನ**—ಹೀಗೆ ವ್ಯಭಿಚಾರವನ್ನು ಪರಿಹರಿಸಿದರೂ ಅನಿಷ್ಟಪ್ರಸಂಗವು ಇದ್ದೇ ಇದೆ-ದ್ವೇಷಮೂಲಕ-ಕೃತಿಸಾಧ್ಯವಾದ ಕಾರ್ಯವನ್ನು ದೃಷ್ಟಾಂತವನ್ನಾಗಿ ಕೊಟ್ಟು ಕ್ಷಿತ್ಯಾದಿಗಳೂ ಅದರಂತೆ ದ್ವೇಷವುಳ್ಳಪುರುಷನಿಂದ ಜನ್ಯವಾಗಿವೆ, ಎಂದೂ ಸಾಧಿಸಬಹುದು. ಇದರಿಂದಾಗಿ, ಚಿಕೀರ್ಷಾ ಮೂಲಕ ಕೃತಿಜನ್ಯತ್ವವನ್ನು ಕ್ಷಿತ್ಯಾದಿಗಳಲ್ಲಿ ಸಾಧಿಸಿದಾಗ ನಿತ್ಯೇಚ್ಛಾದಿಗುಣಗಳು ಈಶ್ವರನಿಗೆ ಸಿದ್ಧವಾಗುವಂತೆ ದ್ವೇಷಮೂಲಕ-ಕೃತಿಜನ್ಯತ್ವ ಇರುವುದರಿಂದ ಈಶ್ವರನಲ್ಲಿ ನಿತ್ಯದ್ವೇಷವೂ ಸಿದ್ಧವಾದೀತು.[1]

ಈ ಪೂರ್ವಪಕ್ಷವು ಸರಿಯಲ್ಲ. ದ್ವೇಷದಿಂದ ಕಾರ್ಯ ಮಾಡುವಾಗಲೂ ಚಿಕೀರ್ಷಾ ಇದ್ದೇ ಇರುತ್ತದೆ. ದುಃಖದಲ್ಲಿ ದ್ವೇಷ ಇರುವುದರಿಂದ ದುಃಖಾಭಾವವು ಇಷ್ಟ. ಅಂತಹ ದುಃಖಾಭಾವ ಸಾಧನವು (ದ್ವೇಷ್ಯಾಭಾವಸಾಧನವಾದುದರಿಂದ) ಇಷ್ಟಸಾಧನವೇ ಆಗಿದೆ. ಅದರಲ್ಲಿ ಇಷ್ಟಸಾಧನತಾಜ್ಞಾನದಿಂದ ಚಿಕೀರ್ಷಾ ಹುಟ್ಟುತ್ತದೆ. ಅದರಂತೆ, ಶತ್ರುಗಳಲ್ಲಿ ದ್ವೇಷ ಇರುವುದರಿಂದ ತದ್ವಧವು ಇಷ್ಟವಾಗಿದೆ. ವಧಸಾಧನದಲ್ಲಿ ಇಷ್ಟಸಾಧನತಾಜ್ಞಾನ. ಆದರಿಂದ ಇಚ್ಛಾ-ಪ್ರಯತ್ನ ಗಳಾಗುತ್ತವೆ. ಹೀಗೆ ಅಲ್ಲೂ ಚಿಕೀರ್ಷಾದ್ವಾರಾ ಜ್ಞಾನವೇ ಕಾರ್ಯಜನಕವಾಗಿದೆ, ವ್ಯಭಿಚಾರವಿಲ್ಲ. ದ್ವೇಷವು ನಿವೃತ್ತಿಗೆ ಮಾತ್ರ ಕಾರಣ, ಪ್ರವೃತ್ತಿಗಲ್ಲ.

---

१. ननु द्वेषजन्यकृतिसाध्ये चिकीर्षाविरहात् व्यभिचारः । तद्दृष्टान्तेन क्षित्यादौ द्वेषसाध्यत्वात् ईश्वरे द्वेषोऽपि भवेत् । (मणि. पु.३१)

ननु चिकीर्षापदं कृतजनकजातीयगुणपरम् इत्यत आह-तद्दृष्टान्तेनेति । (अलोकः)

**ಹೀಗೆ ಮಣಿವ್ಯಾಖ್ಯಾನವಾದ ಆಲೋಕದಲ್ಲಿ ದ್ವೇಷಯೋನಿಕೃತಿಯಲ್ಲಿ ವ್ಯಭಿಚಾರವನ್ನು ಬೇರೆಯೇ ರೀತಿಯಲ್ಲಿ ಪರಿಹರಿಸಲಾಗಿದೆ.**

ಅಲ್ಲಿ ದ್ವೇಷವೇ ಪ್ರಯತ್ನಕ್ಕೆ ಕಾರಣ, ಎನ್ನುವುದು ಯುಕ್ತವೂ ಅಲ್ಲ. ಏಕೆಂದರೆ, ದ್ವೇಷಕ್ಕೆ ವಿಷಯವಾದುದು ದುಃಖ, ಅಥವಾ ಶತ್ರುಗಳು. ಕೃತಿಗೆ ವಿಷಯವಾದುದು ದುಃಖ ಅಥವಾ ಶತ್ರುಗಳ ನಾಶ. ಹೀಗೆ ದ್ವೇಷ ಮತ್ತು ಕೃತಿಗಳು ಭಿನ್ನವಿಷಯಕಗಳಾದುದರಿಂದ ಕೃತಿಗೆ ದ್ವೇಷವು ಕಾರಣವಲ್ಲ. ಚಿಕೀರ್ಷಾವೇ ಕಾರಣ.

## ನ್ಯಾಯದೀಪ

द्वेषकारणकदुःखनिवृत्त्यनुकूलकृतिसाध्ये दुःखाभावादावित्यर्थः । तत्रेश्वरीयचिकीर्षाकल्पनेन व्यभिचाराभावेऽप्यनिष्टप्रसङ्गस्तु स्यादित्याह —**एवंहीति** । तत्र द्वेषयोनित्वमेव कृतेर्नास्ति, येन तद्दृष्टान्तेन क्षित्यादावपि द्वेषवजन्यत्वं स्यादित्याह—**तत्रापीति** । दुःखाभावसाधनेऽपि तत्साधनत्वेन=द्वेष्याभावसाधनत्वेन ज्ञाने सति साधनगोचरचिकीर्षाया एव संभवेनेत्यर्थः । **भिन्नेति** । शत्रुविषयकद्वेषस्य तद्वधसाधनगोचरकृतेश्च भिन्नविषयत्वेन द्वेष्याभावसाधनकृतौ शत्रुविषयकद्वेषस्याहेतुत्वादित्यर्थः ।।

ದ್ವೇಷವೇ ಕಾರಣವಾಗಿರುವ ಕೃತಿ ಎಂದರೆ ಶತ್ರುಗಳಿಂದಾಗುವ ದುಃಖದ ನಿವೃತ್ತಿಗೆ ಬೇಕಾದ ಕೃತಿ. ಅದು ಚಿಕೀರ್ಷಾಜನ್ಯವಲ್ಲ. ಅದಕ್ಕೆ ದ್ವೇಷವೇ ಹೇತು. (ಇದು ಪೂರ್ವಪಕ್ಷಿಯ ಅಭಿಪ್ರಾಯ.)

ಅಲ್ಲಿ ಈಶ್ವರೀಯ ಚಿಕೀರ್ಷಾವು ಕಾರಣ, ಎಂದು ಹೇಳಿ ವ್ಯಭಿಚಾರವನ್ನು ಪರಿಹಾರ ಮಾಡಿದರೂ ಅನಿಷ್ಟಪ್ರಸಂಗವು ಅನಿವಾರ್ಯ ಎಂದು 'ಏವಂ ಹಿ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

'ತತ್ರಾಪಿ' ಎಂಬ ಉತ್ತರವನ್ನು ಹೇಳುವ ವಾಕ್ಯದ ಅಭಿಪ್ರಾಯ ಹೀಗೆ– ತತ್ರಾಪಿ ಎಂದರೆ ಶತ್ರುಜನ್ಯದುಃಖದ ಅಭಾವಕ್ಕೆ ಸಾಧನದಲ್ಲೂ ತತ್ಸಾಧನತ್ವೇನ=ದ್ವೇಷ್ಯಾಭಾವಸಾಧನತ್ವೇನ 'ಇದು ದ್ವೇಷ್ಯವಾದ ದುಃಖದ ಅಭಾವಕ್ಕೆ ಸಾಧನವಾಗಿದೆ' ಎಂಬ ಜ್ಞಾನವು ಬಂದಾಗಲೇ ಆ ಸಾಧನದ ಬಗ್ಗೆ ಚಿಕೀರ್ಷಾ ಹುಟ್ಟುತ್ತದೆ. ಹೀಗೆ ಅಲ್ಲೂ ಚಿಕೀರ್ಷಾಮೂಲಕವೇ ಕೃತಿಯಾಗಿದೆ, ದ್ವೇಷಮೂಲಕವಲ್ಲ.

ದ್ವೇಷ ಮತ್ತು ಕೃತಿಗಳು ಭಿನ್ನವಿಷಯಕ ಎಂದು ಮೂಲದಲ್ಲಿದೆ. ಅದನ್ನು ಹೀಗೆ ತಿಳಿಯಬೇಕು– ದ್ವೇಷವು ಶತ್ರುವಿಷಯಕವಾಗಿದೆ. ಕೃತಿಯು ಶತ್ರುವಧಸಾಧನ ವಿಷಯಕವಾಗಿದೆ. ಏಕೆಂದರೆ, ಶತ್ರುವಿನ ಮೇಲಿನ ದ್ವೇಷದಿಂದ ಅವನನ್ನು ಕೊಲ್ಲುವ ಸಾಧನದ ಬಗ್ಗೆ ನಾವು ಪ್ರವೃತ್ತಿಮಾಡುತ್ತೇವೆ. ಹೀಗೆ ಅವೆರಡು ಭಿನ್ನವಿಷಯಕಗಳಾದುದರಿಂದ ಒಂದಕ್ಕೆ ಇನ್ನೊಂದು ಕಾರಣವಲ್ಲ.

## ಅವತಾರಿಕೆ

**यदि द्वेषो न कृतिहेतुस्तर्हि द्वेषोऽलीक एव भवेदित्याशङ्क्य प्रत्यक्षेण सिद्धिमाह—नचैवमिति ।**

ದ್ವೇಷವು ಕೃತಿಗೆ ಕಾರಣವಲ್ಲವೆಂದಾದರೆ ಪ್ರಮಾಣವಿಲ್ಲದಿರುವುದರಿಂದ ದ್ವೇಷ ಎಂಬ ಗುಣವೇ ಇಲ್ಲವೆಂದಾದೀತು, ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ, ದ್ವೇಷವು ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ, ಎಂದು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**नचैवं प्रवृत्तियत्नातिरिक्तस्य क्रियान्यतिरेकानुगुणस्य द्वेषप्रयोज्यस्य निवृत्तियत्नस्याभावाद् द्वेषे मानाभावः । द्वेष्मीत्यबाधितानुभवात् ।।**

ದ್ವೇಷವು ಪ್ರವೃತ್ತಿಗೆ ಕಾರಣವಲ್ಲವೆಂದಾದಲ್ಲಿ ದ್ವೇಷ ಎಂಬ ಗುಣಕ್ಕೆ ಪ್ರಮಾಣವೇ ಇಲ್ಲವೆಂದಾದೀತು. ಪ್ರವೃತ್ತಿ, ನಿವೃತ್ತಿ ಎಂದು ಯತ್ನಗಳು ಎರಡು ವಿಧ. ಪ್ರವೃತ್ತಿಗೆ ಇಷ್ಟಸಾಧನತಾಜ್ಞಾನಜನ್ಯವಾದ ಚಿಕೀರ್ಷಾವು ಕಾರಣ. ನಿವೃತ್ತಿಗೆ ದ್ವೇಷವು ಕಾರಣ. ಹೀಗೆ, ನಿವೃತ್ತಿಸಾಧನತ್ವೇನ ದ್ವೇಷವು ಸಿದ್ಧವಾಗುತ್ತದೆ. ಆದರೆ, ಹಿಂದೆ ಹೇಳಿದಂತೆ, ಶರೀರಕ್ರಿಯಾ–ಅಭಾವಕ್ಕೆ ಕಾರಣವಾದ, ದ್ವೇಷದಿಂದಾಗುವ, ನಿವೃತ್ತಿರೂಪಯತ್ನವೇ ಇಲ್ಲ. ಪ್ರವೃತ್ತ್ಯಭಾವವೇ ನಿವೃತ್ತಿ. ಅಂದಮೇಲೆ ದ್ವೇಷಕ್ಕೆ ಪ್ರಮಾಣವೇ ಇಲ್ಲ.

ಇದು ಸರಿಯಲ್ಲ. ಅನುಮಾನವು ಪ್ರಮಾಣವಲ್ಲದಿದ್ದರೂ 'ಅಹಂ ಏನಂ ದ್ವೇಷ್ಮಿ'' ಎಂಬ ಅನುಭವವೇ ದ್ವೇಷಕ್ಕೆ ಪ್ರಮಾಣ.

## ನ್ಯಾಯದೀಪ

एवं=द्वेषस्य प्रवृत्तिरूपसाधनगोचरकृतावहेतुत्वे, द्वेषविषये मानाभाव इत्यन्वयः । दुःखसाधनादौ निवृत्तिरूपप्रयत्नं प्रति भिन्नविषयस्यापि द्वेषस्यैव हेतुत्वाद् द्वेषे निवृत्तिरूपकार्यमेव मानमित्यत उक्तम्— **प्रवृत्तीति ।** प्रवृत्तिरूपप्रयत्नेत्यर्थः । **क्रियेति ।** अङ्गचेष्टादिरूप-कार्येत्यर्थः । **अभावादिति ।** दुःखादिकार्याभावानुकूलस्य दुःखगोचर-द्वेषजन्यस्य निवृत्तिरूप-प्रयत्नस्याभावादित्यर्थः । प्रवृत्तिरूपो निवृत्ति-रूपश्चेति यत्नद्वैविध्यं यदि स्यात् तदा प्रवृत्तिप्रयत्नश्चिकीर्षाद्वारेष्ट-

साधनताज्ञानसाध्यः । निवृत्तियत्नस्तु द्वेषसाध्य इति द्वेषः प्रामाणिकः स्यात् । नचैवम् । प्रवृत्तिरूपप्रयत्नाभावस्यैव निवृत्तित्वात् ।

नच निवृत्तिरूपयत्नाभाव एव प्रवृत्तिरिति वैपरीत्यं शङ्क्यम् । सुषुप्तिदशायां निवृत्तिविरहसत्त्वेन प्रवृत्तिसाध्यचेष्टादिकार्याद्यापत्तेः ।

नच तदा निवृत्तिविरह एव नेति युक्तम् । तदा दुःखसाधनत्वज्ञानविरहेण तन्निमित्तद्वेषस्य निवृत्तिहेतोरभावेन निवृत्तेरभावात् ।

नचैवं प्रवृत्तियत्नो रागान्निवृत्तिस्तु द्वेषादिति कुसुमाञ्जल्युक्तिविरोधः । तन्मते तथात्वेऽपि मणिकृन्मते तदभावात् । अन्यथा ''कुतस्तर्हि द्वेषः । शत्रून् द्वेष्मीत्यबाधितप्रत्यक्षात्''इति मण्युक्तिविरोधात् ।

एतेन, यत्तु कुसुमाञ्जलिवाक्यानुरोधेन कुत इत्यादिमणिवाक्यस्य पक्षधरीयं क्लेशेनार्थवर्णनं तत्तु मणिकृदभिप्रायाज्ञानमूलमिति विभावितं ध्येयम् ॥

ಮೂಲದಲ್ಲಿ ಏವಂ, ಎಂದರೆ ದ್ವೇಷವು ಪ್ರವೃತ್ತ್ಯಾತ್ಮಕವಾದ, ದ್ವೇಷಸಾಧನವಿಷಯಕ ಯತ್ನಕ್ಕೆ ಕಾರಣವಲ್ಲವೆಂದಾದರೆ ಎಂದರ್ಥ. ಇದಕ್ಕೆ ಕೊನೆಯಲ್ಲಿರುವ ಮಾನಾಭಾವಃ, ಎಂಬ ಶಬ್ದದೊಂದಿಗೆ ಅನ್ವಯ.

ದುಃಖಸಾಧನವಾದ ಕಂಟಕಾದಿ ವಸ್ತುಗಳಿಂದ ನಿವೃತ್ತಿಯಾಗಬೇಕಾದರೆ ದ್ವೇಷವೇ ಕಾರಣ. ಹಿಂದೆ ಹೇಳಿದಂತೆ ಅದು ಭಿನ್ನವಿಷಯಕವಾದರೂ ಕಾರಣವಾಗುತ್ತದೆ. ಆದ್ದರಿಂದ ನಿವೃತ್ತಿರೂಪವಾದ ಕಾರ್ಯವೇ ದ್ವೇಷಕ್ಕೆ ಪ್ರಮಾಣ. ಈ ಆಕ್ಷೇಪವನ್ನು ಪ್ರವೃತ್ತಿ, ಇತ್ಯಾದಿಮೂಲದಲ್ಲಿ ನಿರಾಕರಿಸಲಾಗಿದೆ.

ನಿವೃತ್ತಿಯತ್ನಸ್ಯಾಭಾವಾತ್, ಎನ್ನುವ ವಾಕ್ಯದ ಅಭಿಪ್ರಾಯ ಹೀಗೆ— ದುಃಖವಿಷಯಕ ದ್ವೇಷದಿಂದಾಗಿ ದುಃಖಕಾರಣದಿಂದ ನಾವು ನಿವೃತ್ತರಾಗುತ್ತೇವೆ. ಈ ನಿವೃತ್ತಿಯತ್ನದಿಂದ ದುಃಖಾಭಾವರೂಪವಾದ ಕಾರ್ಯವು ಸಿದ್ಧವಾಗುತ್ತದೆ. ದ್ವೇಷಸಾಧ್ಯವಾದ ಇಂತಹ ನಿವೃತ್ತಿಯತ್ನವೇ ಇಲ್ಲವೆಂದಾದರೆ ದ್ವೇಷಕ್ಕೆ ಪ್ರಮಾಣವೇ ಇಲ್ಲವೆಂದಾಯಿತು.

ಪ್ರಯತ್ನ ಎರಡುವಿಧ— ಪ್ರವೃತ್ತಿರೂಪವಾದುದು ಮತ್ತು ನಿವೃತ್ತಿರೂಪವಾದುದು. ಅವುಗಳಲ್ಲಿ ಪ್ರವೃತ್ತಿಗೆ ಚಿಕೀರ್ಷಾದ್ವಾರಾ ಇಷ್ಟಸಾಧನತಾಜ್ಞಾನವು ಕಾರಣ. 'ಭೋಜನಮ್

ಇಷ್ಟಸಾಧನಂ' ಎಂಬ ಜ್ಞಾನದಿಂದ ಚಿಕೀರ್ಷಾ ಹುಟ್ಟುತ್ತದೆ. ಆದರಿಂದ ಪ್ರವೃತ್ತಿಯಾಗುತ್ತದೆ. ನಿವೃತ್ತಿಗೆ ದ್ವೇಷವು ಕಾರಣ. ದುಃಖದಲ್ಲಿ ದ್ವೇಷದಿಂದಾಗಿ ದುಃಖಸಾಧನದಿಂದ ನಿವೃತ್ತಿಯಾಗುತ್ತದೆ. ಈ ವ್ಯವಸ್ಥೆಯನ್ನು ಒಪ್ಪಿದರೆ ನಿವೃತ್ತಿರೂಪವಾದ ಕಾರ್ಯವೇ ದ್ವೇಷಕ್ಕೆ ಪ್ರಮಾಣವಾಗುತ್ತದೆ. ಆದರೆ, ನಿವೃತ್ತಿ ಎಂಬ ಪ್ರತ್ಯೇಕ ಯತ್ನವೇ ಇಲ್ಲ. ಪ್ರವೃತ್ತಿಯ ಅಭಾವವೇ ನಿವೃತ್ತಿ. ಹೀಗಾಗಿ, ದ್ವೇಷ ಮೂಲಕ ಕೃತಿಯೇ ಇಲ್ಲ. ಆದ್ದರಿಂದ ದ್ವೇಷಕ್ಕೆ ಪ್ರಮಾಣವಿಲ್ಲ, ಎಂದು ಪೂರ್ವಪಕ್ಷ.

ಪ್ರವೃತ್ತ್ಯಭಾವವೇ ನಿವೃತ್ತಿ ಎಂದೇಕೆ ಹೇಳಬೇಕು? ನಿವೃತ್ತ್ಯಭಾವವೇ ಪ್ರವೃತ್ತಿ ಎಂದೇಕೆ ಹೇಳಬಾರದು? ಹೀಗೆ ವೈಪರೀತ್ಯಶಂಕೆಯನ್ನು ಮಾಡಬಾರದು. ಸುಷುಪ್ತಿಕಾಲದಲ್ಲಿ ಅನಿಷ್ಟ ಸಾಧನತಾಜ್ಞಾನವು ಇಲ್ಲವಾದುದರಿಂದ ದ್ವೇಷವಿಲ್ಲ. ದ್ವೇಷ ಇಲ್ಲದಿರುವುದರಿಂದ ನಿವೃತ್ತಿಯೂ ಇಲ್ಲ. ನಿವೃತ್ತ್ಯಭಾವವೇ ಪ್ರವೃತ್ತಿಯಾದಲ್ಲಿ ಸುಷುಪ್ತಿಕಾಲದಲ್ಲಿ ಪ್ರವೃತ್ತಿಯಾದೀತು. ಆದರಿಂದಾಗಿ ಶರೀರಕ್ರಿಯೆಯೂ ಆದೀತು.

ಕುಸುಮಾಂಜಲಿಯಲ್ಲಿ ಪ್ರವೃತ್ತಿಯೂ ಯತ್ನವಿಶೇಷ, ನಿವೃತ್ತಿಯೂ ಯತ್ನವಿಶೇಷ, ಪ್ರವೃತ್ತಿಯ ಅಭಾವ ನಿವೃತ್ತಿಯಲ್ಲ, ಎಂದು ಹೇಳಲಾಗಿದೆ. ಆದರೆ, ಮಣಿಕಾರನ ಸಿದ್ಧಾಂತ ಅದಲ್ಲ. "ಕುತಸ್ತರ್ಹಿ ದ್ವೇಷಃ? ಶತ್ರೂನ್ ದ್ವೇಷ್ಮಿ ಇತಿ ಅಬಾಧಿತಪ್ರತ್ಯಕ್ಷಾತ್" (ಮ.ಪು.32) ಎಂದು ಮಣಿವಾಕ್ಯವಿದೆ. "ನಿವೃತ್ತಿಯೇ ಇಲ್ಲವಾದರೆ ದ್ವೇಷಕ್ಕೇನು ಪ್ರಮಾಣ? ಅನುಭವವೇ ಪ್ರಮಾಣ" ಇದು ಮಣಿವಾಕ್ಯದ ಅರ್ಥ. ಇದರಿಂದ ನಿವೃತ್ತಿಯತ್ನವು ಮಣಿಕಾರನಿಗೆ ಸಮ್ಮತವಲ್ಲ, ಎಂದು ತಿಳಿಯುತ್ತದೆ.

ಪಕ್ಷಧರಮಿಶ್ರರು ಮಣಿವ್ಯಾಖ್ಯಾನದವಾದ ಆಲೋಕದಲ್ಲಿ, ಕುಸುಮಾಂಜಲಿಯಲ್ಲಿ ಹೇಳಿರುವಂತೆ ಪ್ರವೃತ್ತಿ-ನಿವೃತ್ತಿಗಳೆರಡೂ ಪ್ರಯತ್ನವಿಶೇಷಗಳು ಎಂದು ಪರಿಗಣಿಸಿ ಈ ಮಣಿವಾಕ್ಯವನ್ನು ಕ್ಲೇಷದಿಂದ ವ್ಯಾಖ್ಯಾನಿಸಿದ್ದಾರೆ—"ನ ಚ ಪ್ರವೃತ್ತಿವಿರಹ ಏವ ನಿವೃತ್ತಿಃ, ವೈಪರೀತ್ಯಾಪತ್ತೇಃ। ತದುಕ್ತಂ ಕುಸುಮಾಂಜಲೌ–ಪ್ರವೃತ್ತಿಯತ್ನೋ ರಾಗಾತ್, ನಿವೃತ್ತಿಸ್ತು ದ್ವೇಷಾತ್' ಇತಿ। ..ನ ಚೈವಂ ಕಥಂ ವ್ಯಭಿಚಾರೋದ್ಧಾರಃ? ನಿವೃತ್ತೇಃ ಕ್ರಿಯಾವಿರಹಹೇತುತ್ವೇನ, ಪ್ರವೃತ್ತಿಸಾಧ್ಯತಾನಿಯಮೇನ ಚ ಕಾರ್ಯಾಣಾಂ ಚಿಕೀರ್ಷಾಜನ್ಯತ್ವನಿಯಮಾತ್।

ನನ್ವೇವಂ "ಕುತಃ?" ಇತ್ಯಾದಿ ಗ್ರಂಥಃ ಕಥಮ್? ಇತ್ಥಮ್— ಕುತಸ್ತರ್ಹಿ ದ್ವೇಷಃ ಸ್ವೀಕ್ರೀಯತೇ? ಕಾರಣಾಂತರಮೇವ ನಿವೃತ್ತೇಃ ಸ್ವೀಕ್ರಿಯತಾಮ್, ಇತ್ಯಾಕ್ಷೇಪೇ "ಶತ್ರುಂ ದ್ವೇಷ್ಮಿ" ಇತ್ಯಬಾಧಿತಾನುವ್ಯವಸಾಯಸಾಕ್ಷಿಕೇ ತತ್ರ, ನ ತತೋಽನ್ಯತ್ ಕಾರಣಮ್ ಕಲ್ಪ್ಯಮ್, ಇತಿ ಪರಿಹಾರೇ ತದಭಿಪ್ರಾಯಾತ್।"

'ನಿವೃತ್ತಿ'ಎಂಬ ಯತ್ನವೇ ಇಲ್ಲ. ಪ್ರವೃತ್ತ್ಯಭಾವವೇ ನಿವೃತ್ತಿ. ಎಲ್ಲಾ ಪ್ರವೃತ್ತಿಯೂ ಚಿಕೀರ್ಷಾದ್ವಾರಾ ಜ್ಞಾನಸಾಧ್ಯ. ಆದ್ದರಿಂದ ದ್ವೇಷಯೋನಿಯತ್ನಸಾಧ್ಯದಲ್ಲಿ ವ್ಯಭಿಚಾರವಿಲ್ಲ, ಎಂದು

ತರ್ಕತಾಂಡವ ರೀತ್ಯಾ ಮಣಿಯ ಅಭಿಪ್ರಾಯ. ರುಚಿದತ್ತಮಿಶ್ರರು ಮಣಿವ್ಯಾಖ್ಯಾನ ಪ್ರಕಾಶದಲ್ಲಿ ಇದೇ ಅಭಿಪ್ರಾಯವನ್ನು ತಿಳಿಸಿದ್ದಾರೆ– **''ವಸ್ತುತಸ್ತು ಪ್ರವೃತ್ತಿವಿರಹ ಏವ ನಿವೃತ್ತಿಃ। ನ ಚ ವೈಪರೀತ್ಯಮ್। ಸುಷುಪ್ತಿದಶಾಯಾಮಪಿ ಪ್ರವೃತ್ತಿವಿರಹಸ್ಯಸತ್ತ್ವೇನ ಪ್ರವೃತ್ತಿಕಾರ್ಯ–ಚೇಷ್ಟಾದಿ ಕಾರ್ಯಾಪತ್ತೇಃ॥''**

ಆದರೆ ಪಕ್ಷಧರಮಿಶ್ರರು ಆಲೋಕವ್ಯಾಖ್ಯಾನದಲ್ಲಿ ಕುಸುಮಾಂಜಲಿಯಲ್ಲಿ ಹೇಳಿದಂತೆ ನಿವೃತ್ತಿಯೂ ಒಂದು ಯತ್ನ ಎಂದು ಅಂಗೀಕರಿಸಿ ಮಣಿವಾಕ್ಯವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ— ನಿವೃತ್ತಿಯು ಯತ್ನವಾದರೆ ಚಿಕೀರ್ಷಾದ್ವಾರಾ ಜ್ಞಾನಸಾಧ್ಯತ್ವವು ನಿವೃತ್ತಿಜನ್ಯವಾದ ಕಾರ್ಯದಲ್ಲಿ ಇಲ್ಲ, ಎಂದು ಪೂರ್ವಪಕ್ಷಿಯು ಹೇಳಿರುವ ವ್ಯಭಿಚಾರದ ಪರಿಹಾರ ಹೇಗೆ? ಹೀಗೆ—ನಿವೃತ್ತಿಯು ಕ್ರಿಯಾವಿರಹಕ್ಕೆ ಕಾರಣವಾದುದರಿಂದ ಅದರಿಂದ ಜನ್ಯವಾದ ಕಾರ್ಯವೇ ಇಲ್ಲ. ಕಾರ್ಯವು ನಿಯಮೇನ ಪ್ರವೃತ್ತಿಸಾಧ್ಯ. ಅದರಲ್ಲಿ ಚಿಕೀರ್ಷಾದ್ವಾರಾ ಜ್ಞಾನಸಾಧ್ಯತ್ವ ಇದೆ. ಆದ್ದರಿಂದ ವ್ಯಭಿಚಾರವಿಲ್ಲ.

ಹೀಗೆ ಮಣಿಗ್ರಂಥಕ್ಕೆ ಅರ್ಥವನ್ನು ಹೇಳಿದರೆ ದ್ವೇಷಸಾಧ್ಯವಾದ ಯತ್ನವನ್ನು ನಿರಾಕರಿಸಿದಂತೆ ಆಗಿಲ್ಲವಾದ ಕಾರಣ ''ಕುತಸ್ತರ್ಹಿ ದ್ವೇಷಸಿದ್ಧಿಃ?'' ಎಂಬ ಗ್ರಂಥಕ್ಕೆ ಸಂಗತಿ ಇಲ್ಲವೆಂದಾದೀತು, ಎಂದರೆ, ಅದರ ಅಭಿಪ್ರಾಯ ಹೀಗೆ— ದ್ವೇಷಸಾಧ್ಯವಾದ (ಯತ್ನವಿದ್ದರೂ ಅದರಿಂದಾಗುವ) ಕಾರ್ಯವೇ ಇಲ್ಲವೆಂದಾದರೆ ದ್ವೇಷ ಎಂಬ ಗುಣವಾದರೂ ಏಕೆ ಬೇಕು? ನಿವೃತ್ತಿಗೆ ಇನ್ನೇನಾದರೂ ಕಾರಣಾಂತರಗಳನ್ನು ಹೇಳಿದರಾಯ್ತು, ಎಂಬ ಆಕ್ಷೇಪ ಬಂದಾಗ 'ಕುತಃ ತರ್ಹಿ' ಎಂಬ ಮಣಿವಾಕ್ಯವು ಸಮಾಧಾನ ಹೇಳುತ್ತದೆ. ದ್ವೇಷವು ಅಬಾಧಿತಾನುವ್ಯವಸಾಯದಿಂದ ಸಿದ್ಧವಾಗಿದೆ. ಆದ್ದರಿಂದ ಅದೇ ನಿವೃತ್ತಿಗೆ ಕಾರಣ, ಎಂದು ಅದರ ಅಭಿಪ್ರಾಯ.

ಹೀಗೆ ರುಚಿದತ್ತರು ಮಾಡಿದ ವ್ಯಾಖ್ಯಾನವು ಕ್ಲಿಷ್ಟವಾದುದು, ಅದು ಮಣಿಕಾರನ ಅಭಿಪ್ರಾಯವನ್ನು ಸರಿಯಾಗಿ ತಿಳಿಯದೇ ಮಾಡಿರುವ ವ್ಯಾಖ್ಯಾನ, ಎಂದು ರಾಯರು ಮಾಡಿರುವ ವಿಮರ್ಶೆ.

## ಅವತಾರಿಕೆ

**एवं कृतेरपरोक्षज्ञानचिकीर्षापूर्वकत्वं व्यभिचारनिरासेन समर्थ्य ''स्यादेतत्, घटादौ कृतिसाध्यता हस्तादिव्यापारद्वारैव नतु साक्षात्'' इत्यादिना मण्युक्तबाधशङ्का–तत्समाधी आह—ननु तथापीत्यादिना ।**

ಇದುವರೆಗೆ ಕೃತಿಯು ಅಪರೋಕ್ಷಜ್ಞಾನ ಮತ್ತು ಚಿಕೀರ್ಷಾಗಳಿಂದ ಜನ್ಯವಾಗಿರುತ್ತದೆ, ಎನ್ನುವುದಕ್ಕೆ ವ್ಯಭಿಚಾರವನ್ನು ಪರಿಹರಿಸಿ ದೃಢಪಡಿಸಲಾಗಿದೆ. ಮುಂದೆ ಈಶ್ವರಾನುಮಾನಕ್ಕೆ

ಮಣಿಯಲ್ಲಿ ಹೇಳಿರುವ ಬಾಧದೋಷದ ಆಶಂಕೆಯನ್ನೂ ಅದಕ್ಕೆ ಸಮಾಧಾನವನ್ನೂ ಮೂಲದಲ್ಲಿ ತಿಳಿಸಲಾಗಿದೆ.

ಮಣಿಯಲ್ಲಿ ಹೀಗಿದೆ— 'ಘಟವು ಕುಲಾಲನ ಕೃತಿಯಿಂದ ನೇರವಾಗಿ ಸಾಧ್ಯವಲ್ಲ. ಹಸ್ತಾದಿ ಚೇಷ್ಟಾಮೂಲಕವಾಗಿಯೇ ಕೃತಿಯು ಘಟಕ್ಕೆ ಕಾರಣವಾಗಿದೆ. ಆದರೆ ಕ್ಷಿತ್ಯಾದಿಗಳಿಗೆ ಶರೀರ-ಅದರ ವ್ಯಾಪಾರಗಳು ಕಾರಣ ಎನ್ನುವುದು ಅನುಪಲಬ್ಧಿಬಾಧಿತವಾಗಿವೆ'' ಎಂದು. (ಪು.40)

**ननु तथापि घटादौ चेष्टाव्यापारककृतेरेव हेतुत्वावधारणात् क्षित्यादौ च चेष्टाया योग्यानुपलब्धिबाधितत्वात् कृतेरहेतुत्वम् । नचैकस्मिन् घटे पितापुत्रयोरिव चेष्टाकृत्योः स्वातन्त्र्येण हेतुता । घटानुकूलचेष्टाश्रयसन्निहितस्य तदनुकूलकृतिमतो निगडनिश्चलदेहत्वेन चेष्टारहितस्यापि पुंसस्तद्धेतुत्वापत्तेः ।**

ಆದರೂ ಈಶ್ವರಾನುಮಾನವು ದುಷ್ಟವಾಗಿದೆ—ಘಟಾದಿ ಕಾರ್ಯಗಳಿಗೆ ಆತ್ಮನಿಷ್ಠವಾದ ಕೃತಿಯು ಶರೀರದಲ್ಲಿ ಕ್ರಿಯೆಯನ್ನು (ಚೇಷ್ಟಾ) ಉಂಟುಮಾಡಿ ಆ ಮೂಲಕ ಕಾರಣವಾಗಿದೆ. ಚೇಷ್ಟಾವ್ಯಾಪಾರಕ ಕೃತಿಯೇ ಘಟಕಾರಣ. ಆದರೆ ಪಕ್ಷವಾದ ಕ್ಷಿತ್ಯಾದಿಗಳಿಗೆ ಕಾರಣವಾದ ಶರೀರವ್ಯಾಪಾರವನ್ನು ಯಾರೂ ನೋಡಿಲ್ಲವಾದ್ದರಿಂದ ಅದು ಅನುಪಲಬ್ಧಿಬಾಧಿತವಾಗಿದೆ. ಆದ್ದರಿಂದ ಅದಕ್ಕೆ ಕೃತಿಯು ಹೇತುವೇ ಅಲ್ಲ. ಅದರಲ್ಲಿ ಕೃತಿಜನ್ಯತ್ವರೂಪ ಸಾಧ್ಯವು ಇಲ್ಲ.

**ಆಕ್ಷೇಪ**—ಕೃತಿಯು ಚೇಷ್ಟಾದ್ವಾರಾ ಕಾರಣವಲ್ಲ. ಕೃತಿ ಮತ್ತು ಚೇಷ್ಟೆಗಳು ತಂದೆ ಮತ್ತು ಮಕ್ಕಳು ಸೇರಿ ಘಟವನ್ನು ಮಾಡುವಂತೆ ಸ್ವತಂತ್ರವಾಗಿಯೇ ಕಾರಣಗಳು. ಆದ್ದರಿಂದ ಈಶ್ವರ ಕೃತಿಯಿಂದಲೇ ಕ್ಷಿತ್ಯಾದಿಗಳು ಜನ್ಯವಾಗಬಹುದು.

**ಸಮಾಧಾನ**—ಕೃತಿ-ಚೇಷ್ಟೆಗಳಿಗೆ ಸ್ವಾತಂತ್ರ್ಯೇಣ ಕಾರಣತ್ವವನ್ನು ಹೇಳಲಾಗುವುದಿಲ್ಲ. ಒಬ್ಬ ಕುಲಾಲ ಚೇಷ್ಟಾಪೂರ್ವಕವಾಗಿ ಘಟವನ್ನು ಮಾಡುತ್ತಿರುವಾಗ ಅವನ ಪಕ್ಕದಲ್ಲೇ ಘಟಾನುಕೂಲವಾದ ಪ್ರಯತ್ನ ಇರುವ, ಆದರೆ ನಿಗಡಬಂಧನದಿಂದಾಗಿ ನಿಶ್ಚಲವಾದ ದೇಹವಿರುವ ಮತ್ತೊಬ್ಬನೂ ಘಟಕ್ಕೆ ಕಾರಣನಾಗಬೇಕಾದೀತು. ಚೇಷ್ಟಾದ್ವಾರಾ ಕಾರಣ ಎಂದಾಗ ಈ ಆಪತ್ತಿಗೆ ಅವಕಾಶವಿಲ್ಲ. ನಿಗಡನಿಶ್ಚಲ ದೇಹದ ವ್ಯಕ್ತಿಯಲ್ಲಿ ಪ್ರಯತ್ನ ಇದ್ದರೂ ಅದರಿಂದ ಶರೀರದಲ್ಲಿ ಕ್ರಿಯೆ ಆಗಿಲ್ಲವಾದುದರಿಂದ ಅವನ ಕೃತಿಯು ಘಟಕ್ಕೆ ಕಾರಣವಲ್ಲ.

ಹೀಗೆ, ಕೃತಿಯು ಚೇಷ್ಟಾದ್ವಾರೈವ ಕಾರಣವಾಗಿದೆ. ಕ್ಷಿತ್ಯಾದಿಹೇತುವಾದ ಚೇಷ್ಟಾ ಇಲ್ಲವಾದ ಕಾರಣ ತದನುಕೂಲಕೃತಿಯೂ ಇಲ್ಲ. ಆದ್ದರಿಂದ ಕ್ಷಿತ್ಯಾದಿಗಳಲ್ಲಿ ಬಾಧವನ್ನು ಪರಿಹರಿಸಲಾಗದು.

## न्यायदीप

अप्रयोजकत्व–साध्यवैकल्य–व्यभिचार–नित्यानुमिति–नित्यद्वेषापत्तिरूप– तर्कपराहत्याख्यदोषाणाम् अभावेऽपीत्यर्थः। **चेष्टेति।** अङ्गचेष्टेत्यर्थः। **अहेतुत्वमिति।** तथाच कृतिमज्जन्यत्वं बाधितमिति भावः।

न चेष्टाकृत्योर्द्वारद्वारिभावापन्नतया घटादौ हेतुता। किन्तु प्रत्येकमेव। नचैवं कृतिचेष्टयोः पौर्वापर्यानुपपत्तिः। पितापुत्रयोः पौर्वापर्येऽप्येकत्र घटे द्वयोः स्वातन्त्र्येण हेतुत्ववदुपपत्तेः। तथाच यथोक्तसाध्ये न बाध इति भावेनाशङ्क्य निराह—**नचेति।।**

व्यभिचारान्न प्रत्येकं हेतुरित्याह—**घटेति।**

ತಥಾಪಿ ಎಂದರೆ ಈಶ್ವರಾನುಮಾನಕ್ಕೆ ಅಪ್ರಯೋಜಕತ್ವ–ಸಾಧ್ಯವೈಕಲ್ಯ–ವ್ಯಭಿಚಾರ–ನಿತ್ಯಾನುಮಿತಿ–ನಿತ್ಯದ್ವೇಷ ಇತ್ಯಾದಿ ದೋಷಾಪತ್ತಿರೂಪವಾದ ತರ್ಕಪರಾಹತಿ ಇಲ್ಲವಾದರೂ, ಎಂದರ್ಥ.

ಚೇಷ್ಟಾ ಮತ್ತು ಕೃತಿಗಳಲ್ಲಿ ಕೃತಿಯು ದ್ವಾರಿ, ಚೇಷ್ಟಾ ದ್ವಾರ. ಹೀಗೆ ಅವೆರಡು ದ್ವಾರ–ದ್ವಾರಿಗಳಾಗಿ ಕಾರ್ಯಜನಕಗಳಲ್ಲ. ಅವೆರಡು ಕಪಾಲ–ದಂಡಗಳಂತೆ ಪ್ರತ್ಯೇಕವಾಗಿಯೇ ಘಟಕಾರಣಗಳು. ಹಾಗಾದರೆ, ಕೃತಿಯು ಮೊದಲು, ಆಮೇಲೆ ಚೇಷ್ಟಾ ಎಂಬ ಪೌರ್ವಾಪರ್ಯ ಹೇಗೆ? ಎಂದರೆ, ಸ್ವತಂತ್ರವಾಗಿ ಹೇತುಗಳಾದರೂ ತಂದೆ ಮತ್ತು ಮಗ ಘಟಕ್ಕೆ ಕಾರಣವಾದಂತೆ ಪೌರ್ವಾಪರ್ಯವನ್ನು ಹೇಳಬಹುದು. ಆದ್ದರಿಂದ ಕರ್ತೃಜನ್ಯತ್ವ ಸಾಧ್ಯಕ್ಕೆ ಬಾಧವಿಲ್ಲ. ಇದು ಮೂಲದ 'ನಚ' ಎಂಬ ಆಕ್ಷೇಪದ ಅಭಿಪ್ರಾಯ.

**इति चेत् मैवं। चेष्टाव्यापारककृतित्वेन कारणता न तावत् कार्यमात्रे, क्षित्यादौ व्यभिचारेण त्वयापि तथानभ्युपगमात्।**

**नापि कृतिजन्यत्वावच्छिन्ने। आत्माश्रयेण कृतिजन्यत्वस्य स्वानवच्छेदकत्वात्। घटादौ कार्यविशेषे तथा कारणत्वे च सामान्यविशेषन्यायेन कार्यसामान्ये कृतित्वेनैव हेतुत्वात्।**

ಈ ಆಕ್ಷೇಪ ಸರಿಯಲ್ಲ. ಕೃತಿಯು ಚೇಷ್ಟಾಮೂಲಕ ಕೃತಿತ್ವೇನ ಯಾವುದಕ್ಕೆ ಕಾರಣ? ಕಾರ್ಯಸಾಮಾನ್ಯಕ್ಕಂತೂ ಅಲ್ಲ. ಇದಕ್ಕೆ ಮಿಮಾಂಸಾ ಮತ್ತು ನ್ಯಾಯ ಉಭಯಮತದಲ್ಲೂ ವ್ಯಭಿಚಾರವಿದೆ. ಮೀಮಾಂಸಕರು ನಿರೀಶ್ವರವಾದಿಗಳು. ಅವರು ಕ್ಷಿತ್ಯಾದಿಗಳಿಗೆ ಕೃತಿಯು ಹೇತುವೇ ಅಲ್ಲ ಎನ್ನುತ್ತಾರೆ. ಹೀಗಾಗಿ ಚೇಷ್ಟಾದ್ವಾರಕ ಕೃತಿತ್ವೇನ ಕೃತಿಯು ಹೇತು, ಎನ್ನುವುದು ದೂರತಃ ನಿರಸ್ತ. ನೈಯಾಯಿಕರು ಕೃತಿಜನ್ಯತ್ವವನ್ನು ಅಂಗೀಕರಿಸುತ್ತಾರಾದರೂ ಈಶ್ವರನಿಗೆ ಶರೀರವೇ ಇಲ್ಲದುದರಿಂದ ಈಶ್ವರೀಯ ಕೃತಿಯು ಚೇಷ್ಟಾದ್ವಾರಕಕೃತಿತ್ವೇನ ಕಾರಣ, ಎಂದು ಅವರೂ ಅಂಗೀಕರಿಸುವುದಿಲ್ಲ. ಆದ್ದರಿಂದ ಕಾರ್ಯಸಾಮಾನ್ಯಕ್ಕೆ ಕೃತಿಯು ತೇನ ರೂಪೇಣ ಕಾರಣ, ಎಂದು ಹೇಳಲಾಗದು.

ಇನ್ನು ಕೃತಿಜನ್ಯಕಾರ್ಯಗಳಿಗೆಲ್ಲ ಚೇಷ್ಟಾದ್ವಾರಕ ಕೃತಿಯು ಕಾರಣ, ಎಂದು ಹೇಳಬೇಕು. ಆಗ ಮೀಮಾಂಸಕ ಸಿದ್ಧಾಂತದಂತೆ ಕ್ಷಿತಿಯು ಅಂತಹ ಕಾರ್ಯವಲ್ಲದುದರಿಂದ ವ್ಯಭಿಚಾರವಿಲ್ಲ. ಆದರೆ, ಹೀಗೆ ಹೇಳಿದರೆ ಆತ್ಮಾಶ್ರಯದೋಷ. ಕೃತಿಯು ಸ್ವಜನ್ಯಕಾರ್ಯಕ್ಕೆ ಕಾರಣ, ಎಂದಾಗ ಕೃತಿಜನ್ಯತಾವಚ್ಛೇದಕವಾದುದು ಕೃತಿಜನ್ಯತ್ವ ಎಂದಂತಾಗುತ್ತದೆ. ಅವಚ್ಛೇದ್ಯ-ಅವಚ್ಛೇದಕಗಳಿಗೆ ಐಕ್ಯ ಬರುವುದರಿಂದ ಆತ್ಮಾಶ್ರಯ.

ಘಟರೂಪ ಕಾರ್ಯವಿಶೇಷಕ್ಕೆ ಚೇಷ್ಟಾದ್ವಾರಕ-ಕೃತಿವಿಶೇಷವು ಕಾರಣ, ಎನ್ನವುದಾದಲ್ಲಿ 'ಯದ್ವಿಶೇಷಯೋಃ ಕಾರ್ಯಕಾರಣಭಾವಃ ಅಸತಿ ಬಾಧಕೇ ತತ್ಸಾಮಾನ್ಯಯೋರಪಿ' ಎಂಬ ನ್ಯಾಯದಿಂದ 'ಕಾರ್ಯಸಾಮಾನ್ಯಕ್ಕೆ ಕೃತಿಸಾಮಾನ್ಯವು ಕಾರಣ' ಎಂದು ಸಿದ್ಧವಾಗುತ್ತದೆ. ಅದೃಷ್ಟದ್ವಾರಕ-ಕೃತಿಯು ಕಾರಣ ಎಂದು ಸಿದ್ಧವಾಗುವುದಿಲ್ಲ. ಆದ್ದರಿಂದ ಬಾಧಕ್ಕೆ ಅವಕಾಶವಿಲ್ಲ.

**अत एव चेष्टाजन्यत्व-शरीरजन्यत्वादिरूपोपाधिरपि न । गौरवेण चेष्टात्वादिना रूपेण अकारणत्वेनोपाधेरप्रयोजकत्वात् ।।**

ಕೃತಿತ್ವೇನ ಕೃತಿಜನ್ಯತ್ವವೇ ನ್ಯಾಯಪ್ರಾಪ್ತವಾದುದರಿಂದಲೇ ಈ ಅನುಮಾನಕ್ಕೆ ಚೇಷ್ಟಾಜನ್ಯತ್ವ ಅಥವಾ ಶರೀರಜನ್ಯತ್ವವು ಉಪಾಧಿಯೂ ಇಲ್ಲ. ಚೇಷ್ಟಾತ್ವ-ಶರೀರತ್ವರೂಪಧರ್ಮಗಳು ಗುರುಧರ್ಮಗಳು. ಅವುಗಳಿಗಿಂತ ಕೃತಿತ್ವಧರ್ಮವು ಲಘು. ಆದ್ದರಿಂದ ಗುರುಧರ್ಮರೂಪೇಣ ಚೇಷ್ಟಾ-ಶರೀರಾದಿಗಳು ಕಾರಣಗಳಲ್ಲ. ಹೀಗೆ, ಕಾರ್ಯಕಾರಣಭಂಗರೂಪ ಬಾಧಕತರ್ಕ ಇಲ್ಲದಿರುವುದರಿಂದ ಆ ಎರಡು ಉಪಾಧಿಗಳು ಅಪ್ರಯೋಜಕಗಳಾಗಿವೆ.

## ನ್ಯಾಯದೀಪ

**किं कार्यमात्रे, कृतिजन्यकार्यमात्रे वा, घटादिकार्यविशेषे वेति हृदि विकल्प्याद्यद्वयं निरस्यान्ते त्विष्टसिद्ध्या न बाध इत्याह—**

**चेष्टेत्यादिना ।** **त्वयाऽपीति ।** निरीश्वरवादिनापि । न केवलमशरीरेश्वरवादिना मयेत्यर्थः । **अवच्छिन्न इति ।** कार्यमात्र इत्यनुकर्षः । **सामान्येति ।** यद्विशेषयोः कार्यकारणभावः बाधकाभावे तत्सामान्ययोरपीति न्यायेन घटादिरूपकार्यविशेषत्वेन चेष्टाद्वारककृतित्वेन कार्यकारणभावे, व्यभिचाररूपबाधकाभावेन कार्यत्वेन कृतित्वेन कार्यकारणभावकल्पनपक्षेऽपि केवलकृतेरेव हेतुत्वादित्यर्थः । **अत एवेति।** कृतित्वेन कृतिजन्यत्वस्य न्यायप्राप्तत्वादेवेत्यर्थः । अनित्यज्ञानादिमज्जन्यत्वादिरादिपदार्थः । **नेति ।** न भवतीत्यर्थः । **चेष्टात्वादिनेति ।** शरीरत्वादिरादिपदार्थः ।।

ಚೇಷ್ಟಾದ್ವಾರಕಕೃತಿತ್ವೇನ ಕೃತಿಯು, ಕಾರ್ಯಸಾಮಾನ್ಯಕ್ಕೆ ಕಾರಣವೋ, ಕೃತಿಜನ್ಯವಾದ ಕಾರ್ಯಸಾಮಾನ್ಯಕ್ಕೋ ಅಥವಾ ಘಟಾದಿಕಾರ್ಯವಿಶೇಷಕ್ಕೆ ಕಾರಣವೋ? ಈ ಮೂರು ವಿಕಲ್ಪಗಳನ್ನು ಮೂಲಕಾರರು ಮನಸ್ಸಿನಲ್ಲಿ ಮಾಡಿಕೊಂಡಿದ್ದಾರೆ. ಇವುಗಳಲ್ಲಿ ಮೊದಲ ಎರಡು ಪಕ್ಷಗಳನ್ನು ನಿರಾಕರಿಸಿ ಮೂರನೆಯದು ಇಷ್ಟಸಾಧಕವಾದುದರಿಂದ ಬಾಧದೋಷ ಇಲ್ಲ, ಎಂದು ''ಚೇಷ್ಟಾ'' ಇತ್ಯಾದಿಯಾಗಿ ಮೂಲದಲ್ಲಿ ಹೇಳಲಾಗಿದೆ.

ಮೂಲದಲ್ಲಿ 'ಸಾಮಾನ್ಯವಿಶೇಷನ್ಯಾಯ' ಎಂದರೆ, 'ಯದ್ವಿಶೇಷಯೋಃ' ಇತ್ಯಾದಿನ್ಯಾಯ. ಘಟಾದಿರೂಪಕಾರ್ಯವಿಶೇಷಕ್ಕೂ ಚೇಷ್ಟಾದ್ವಾರಕಕೃತಿವಿಶೇಷಕ್ಕೂ ಕಾರ್ಯಕಾರಣಭಾವ. ಇದರಿಂದ ಕಾರ್ಯಸಾಮಾನ್ಯಕ್ಕೂ ಕೃತಿಸಾಮಾನ್ಯಕ್ಕೂ ಕಾರ್ಯಕಾರಣಭಾವು ಸಿದ್ಧವಾಗುತ್ತದೆ.

## ಅವತಾರಿಕೆ

'स्यादेतत् । कर्ता शरीर्येव, ज्ञानमनित्यमेव इत्यादिप्राथमिकव्याप्तिग्रहप्रत्यक्षविरोधात्' इत्यादिनोक्तशङ्कोत्तरे निष्कृष्यानुवदति—**नन्वित्यादिना ।**

ಮಣಿಯಲ್ಲಿ (ಪು.37) 'ಸ್ಯಾದೇತತ್' ಎಂದು ಆರಂಭಿಸಿ, ಕರ್ತೃವು ಶರೀರವುಳ್ಳವನೇ ಆಗಿರುತ್ತಾನೆ. ಅವನಿಗಿರುವ ಜ್ಞಾನವೂ ಅನಿತ್ಯವೇ ಆಗಿರುತ್ತದೆ. ಹೀಗೆ ಪ್ರಾಥಮಿಕ–ವ್ಯಾಪ್ತಿಪ್ರತ್ಯಕ್ಷಕ್ಕೆ ವಿರುದ್ಧವಾದುದರಿಂದ ನಿತ್ಯಜ್ಞಾನಾದಿಗಳುಳ್ಳ, ಸರ್ವಜ್ಞನಾದ, ಶರೀರವಿಲ್ಲದ ಕ್ಷಿತ್ಯಾದಿಕರ್ತೃ

ಅನುಮಾನದಿಂದ ಸಿದ್ಧವಾಗುವುದಿಲ್ಲ, ಎಂದು ಪೂರ್ವಪಕ್ಷಮಾಡಿ ಸಮಾಧಾನಿಸಲಾಗಿದೆ. ಅದನ್ನು ಮೂಲದಲ್ಲಿ 'ನನು' ಎಂದು ಅನುವಾದ ಮಾಡಲಾಗಿದೆ.

**नन्वथापि ज्ञानमनित्यमेव,कर्ता शरीर्येवेत्यादिव्याप्तिबाध इति चेन्न । ज्ञानत्वादेरनित्यत्वादिना कार्यकारणभावादेरभावेन व्याप्तेरेवाभावात् । कार्यकृत्योश्च कार्यकारणभावात् । अन्यथाऽवयवो महानेवेत्यादिव्याप्त्या परमाणुरपि न सिध्येत् ॥**

ಇಷ್ಟಾದರೂ ಅನುಮಾನದಿಂದ ಸರ್ವಜ್ಞನಾದ, ಶರೀರವಿಲ್ಲದ ಕರ್ತೃವು ಸಿದ್ಧವಾಗುವುದಿಲ್ಲ. ಜ್ಞಾನಗಳೆಲ್ಲವೂ ಅನಿತ್ಯವಾಗಿವೆ, ಕರ್ತೃವಾದವನು ಶರೀರಿಯೇ ಆಗಿರುತ್ತಾನೆ, ಈ ವ್ಯಾಪ್ತಿಗೆ ವಿರುದ್ಧವಾದುದರಿಂದ, ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಜ್ಞಾನತ್ವಕ್ಕೂ ಅನಿತ್ಯತ್ವಕ್ಕೂ ಕಾರ್ಯಕಾರಣಭಾವ ಇಲ್ಲ. ಅದರಂತೆ, ಕರ್ತೃತ್ವಕ್ಕೂ ಶರೀರಿತ್ವಕ್ಕೂ ಕಾರ್ಯಕಾರಣಭಾವ ಇಲ್ಲ. ಆದ್ದರಿಂದ ಕ್ಷಿತ್ಯಾದಿಕರ್ತೃವಿಗೆ ಸಿದ್ಧವಾಗುವ ಜ್ಞಾನವು ಅನಿತ್ಯ ಎಂದು ಅನುಮಾನ ಮಾಡಿದರೆ 'ಹೇತುರಸ್ತು ಸಾಧ್ಯಂ ಮಾಸ್ತು' ಎಂದು ಅಪ್ರಯೋಜಕಶಂಕೆಯನ್ನು ಮಾಡಬಹುದು. ಇದರಂತೆ, ಕ್ಷಿತ್ಯಾದಿಕರ್ತಾ ಶರೀರೀ, ಕರ್ತೃತ್ವಾತ್, ಎಂದು ಅನುಮಾನ ಮಾಡುವುದೂ ಸರಿಯಲ್ಲ. ಅಲ್ಲೂ ಅಪ್ರಯೋಜಕತಾ ಶಂಕೆ ಇದೆ. ಕಾರ್ಯ-ಕಾರಣಭಾವ ಇದ್ದರೆ ಈ ಅಪ್ರಯೋಜಕತಾಶಂಕೆಯನ್ನು ನಿರಾಸಮಾಡಿ, ವ್ಯಾಪ್ತಿಯನ್ನು ನಿರ್ಧರಿಸಬಹುದಿತ್ತು. ಅನುಕೂಲತರ್ಕ ಇಲ್ಲದಿದ್ದರೂ ಸಹಚಾರ ದರ್ಶನಮಾತ್ರದಿಂದ ವ್ಯಾಪ್ತಿಯು ನಿರ್ಧುಷ್ಟವಾಗುವುದಾದಲ್ಲಿ 'ಅವಯವಗಳೆಲ್ಲವೂ ಮಹತ್ವ ಗುಣವುಳ್ಳವುಗಳೇ ಆಗಿರುತ್ತವೆ' ಎಂಬ ವ್ಯಾಪ್ತಿಯಿಂದಾಗಿ ಅದಕ್ಕೆ ವಿರುದ್ಧವಾದ ಪರಮಾಣುವೂ ಸಿದ್ಧವಾಗಲಿಕ್ಕಿಲ್ಲ.[1]

## ನ್ಯಾಯದೀಪ

**अन्यथेति ।** व्याप्तिप्रयोजककार्यकारणभावस्य साध्येन विना

१. ''स्यादेतत्, अशरीरी नित्यज्ञानादिमान् सर्वज्ञः कर्ता पक्षे विवक्षितः । घटादौ च कार्यत्वस्य तद्विपरीतकर्तृ-सहचारदर्शनात् विशेषविरुद्धमिति चेन्न । हेतोः विवक्षितसाध्यविपरीत-सहचारमात्रस्य अदूषकत्वात् । अन्यथा अनुमानमात्रोच्छेदप्रसङ्गात् । न चानित्यज्ञानासर्वज्ञशरीरकर्तृत्वेन समं कार्यत्वस्य व्याप्तिरस्ति, येन विपरीतसाधने विरुद्धत्वं स्यात् । तादृशव्याप्तिश्च त्वया मया वा नाङ्गीक्रियते । अङ्कुरादौ योग्यानुपलम्भेन शरीरिकर्तृकत्वाभावात् ।'' (मणि.पु.३८)

**हेतोरनवस्थितत्वादेरनुकूलतर्कस्याभावेऽपि व्याप्त्यभ्युपगम इत्यर्थः। 'द्व्यणुकं स्वन्यूनपरिमाणद्रव्यारब्धं, कार्यत्वाद् घटवत्'इत्याद्यनुमानेन परमाणुसिद्धिर्न स्यात्। 'योऽवयवः स महान्, यथा त्र्यणुकादिः। अवयवश्चायं परमाणुः' इत्यनेन बाधादिति स्यादित्यर्थः ।।**

ಅನ್ಯಥಾ ಎಂದರೆ, ವ್ಯಾಪ್ತಿಗೆ ಪ್ರಯೋಜಕವಾದುದು ಹೇತು—ಸಾಧ್ಯಗಳ ಕಾರ್ಯಕಾರಣಭಾವ. ಅದಿದ್ದಾಗ ಸಾಧ್ಯವಿಲ್ಲದಿದ್ದರೂ ಹೇತು ಇರಲಿ, ಎಂಬ ಶಂಕೆಯನ್ನು 'ಸಾಧ್ಯವು ಕಾರಣ, ಹೇತುವು ಕಾರ್ಯವಾದುದರಿಂದ ವ್ಯಾಹತ' ಎಂದು ನಿರಾಕರಿಸಿ ವ್ಯಾಪ್ತಿಯನ್ನು ದೃಢಪಡಿಸಬಹುದು. ಇಂತಹ ಕಾರ್ಯಕಾರಣಭಾವರೂಪವಾದ ಅನುಕೂಲತರ್ಕವು ಇಲ್ಲದಿದ್ದರೂ ವ್ಯಾಪ್ತಿಯು ನಿರ್ಧಾರವಾಗುವುವಾದರೆ, ಎಂದರ್ಥ.

ಪರಮಾಣುಸಾಧಕವಾದ ಅನುಮಾನ ಹೀಗೆ—ದ್ವ್ಯಣುಕವು ತನಗಿಂತಲೂ ಕಡಿಮೆ ಪರಿಮಾಣವುಳ್ಳ ದ್ರವ್ಯದಿಂದ ಹುಟ್ಟಿದೆ, ಕಾರ್ಯವಾದುದರಿಂದ, ಘಟದಂತೆ, ಎಂದು. ಈ ಅನುಮಾನದಿಂದ ಪರಮಾಣುವು ಸಿದ್ಧವಾಗಲಿಕ್ಕಿಲ್ಲ. ಇದಕ್ಕೆ ಬಾಧ ಇದೆ— ಯಾವುದು ಅವಯವವೋ ಅದು ಮಹತ್ತಾಗಿರುತ್ತದೆ. ಉದಾಹರಣೆಗೆ ತ್ರ್ಯಣುಕ. ಪರಮಾಣುವೂ ಅವಯವವಾಗಿದೆ. ಆದ್ದರಿಂದ ಅದೂ ಮಹತ್ತಾಗಿರಬೇಕು, ಎಂದು.

## ಅವತಾರಿಕೆ

**नन्वथापि 'क्षित्यादिकं नोक्तसाध्यवत्। अदृष्टाद्वारकानित्यज्ञाना जन्यत्वात् घटवत्' इति सत्प्रतिपक्षत्वम्। असिद्धिनिरासाय हेतो-रदृष्टाद्वारकेत्याद्युक्तिरित्यत आह—अत एवेति।**

ಆದರೂ ಈಶ್ವರಾನುಮಾನ ಸರಿಯಲ್ಲ. ಸತ್‌ಪ್ರತಿಪಕ್ಷದೋಷವಿದೆ. ಕ್ಷಿತ್ಯಾದಿಗಳು ಸಕರ್ತೃಕಗಳಲ್ಲ, ಅದೃಷ್ಟಾದ್ವಾರಕವಾದ, ಅನಿತ್ಯಜ್ಞಾನದಿಂದ ಅಜನ್ಯವಾಗಿರುವುದರಿಂದ, ಎಂದು ಪ್ರತಿಪಕ್ಷಾನುಮಾನ. ಜನ್ಯವಾದ ಘಟಾದಿಗಳು ಅದೃಷ್ಟದ ಅಪೇಕ್ಷೆ ಇಲ್ಲದೆ ಕುಲಾಲಾದಿಗಳ ಅನಿತ್ಯಜ್ಞಾನಾದಿಗಳಿಂದ ಜನ್ಯವಾಗಿವೆ. ಆದರೆ, ಕ್ಷಿತ್ಯಾದಿಗಳು ಯಾವಜೀವರಿಂದಲೂ ಜನ್ಯಗಳಲ್ಲವಾದ ಕಾರಣ ಅನಿತ್ಯಜ್ಞಾನದಿಂದ ಜನ್ಯವಾಗಿಲ್ಲ. ಆದ್ದರಿಂದ, ಅವುಗಳು ಕರ್ತೃಜನ್ಯವಾಗಿಲ್ಲ, ಎಂದು ಅನುಮಾನದ ಅಭಿಪ್ರಾಯ.

ಕ್ಷಿತ್ಯಾದಿಗಳೂ ಅದೃಷ್ಟದ್ವಾರಾ ಹಪಿರಾದಿ ಗೋಚರವಾದ ಜೀವರ ಅನಿತ್ಯಜ್ಞಾನದಿಂದ

ಜನ್ಯವಾಗಿವೆ. ಅಸಿದ್ಧಿಬರುತ್ತಿತ್ತು. ಆದರ ಪರಿಹಾರಕ್ಕಾಗಿ ಅದೃಷ್ಟಾದ್ವಾರಕ ಎಂದು ಹೇತುವಿನಲ್ಲಿ ವಿಶೇಷಣವನ್ನು ಕೊಡಲಾಗಿದೆ. ಹೀಗೆ, ಸತ್‌ಪ್ರತಿಪಕ್ಷದೋಷವನ್ನು ಆಶಂಕೆ ಮಾಡಿ 'ಅತಏವ' ಎಂದು ಪರಿಹಾರ ಮಾಡಲಾಗಿದೆ.

**अत एवादृष्टाद्वारकानित्यज्ञानाजन्यत्वादिना सत्प्रतिपक्षत्वमपि निरस्तम् । अप्रयोजकत्वात् । अजन्यत्वस्यैव हेतुत्वसम्भवेन व्याप्तिग्रहानौपयिकविशेषणान्तरवैयर्थ्याच ।।**

ಅದೃಷ್ಟಾದ್ವಾರಕ-ಅನಿತ್ಯಜ್ಞಾನ-ಅಜನ್ಯತ್ವ ಹೇತುವಿನಿಂದ ಕ್ಷಿತ್ಯಾದಿಗಳು ಕರ್ತೃವಿನಿಂದ ಅಜನ್ಯ ಎಂದೂ ಸಾಧನೆ ಮಾಡಬಹುದಾದ್ದರಿಂದ ಈಶ್ವರಸಾಧಕಾನುಮಾನವು ಸತ್‌ಪ್ರತಿಪಕ್ಷದೋಷ ದುಷ್ಟವಾಗಿದೆ, ಎಂಬ ಆಕ್ಷೇಪವೂ ಸರಿಯಲ್ಲ. ಏಕೆಂದರೆ, ಈ ಹೇತುವು ಕರ್ತಜನ್ಯತ್ವಸಾಧನೆಗೆ ಪ್ರಯೋಜಕವಾಗಿಲ್ಲ.

ಅಷ್ಟೇ ಅಲ್ಲ, ಕರ್ತಜನ್ಯತ್ವಕ್ಕೆ ಅಜನ್ಯತ್ವವೇ ಪ್ರಯೋಜಕವೆಂದು ಆಕಾಶಾದಿ ನಿತ್ಯಪದಾರ್ಥ ಗಳಲ್ಲಿ ಕಂಡಿದೆ. ಆದ್ದರಿಂದ ಅಜನ್ಯತ್ವದಲ್ಲಿ ಕೊಟ್ಟಿರುವ ಇತರ ವಿಶೇಷಣಗಳು, ಹೇತುವಿನಲ್ಲಿ ವ್ಯಾಪ್ತಿಗ್ರಹಕ್ಕೆ ಉಪಯೋಗಿಗಳಲ್ಲ. ಆದ್ದರಿಂದ, ಆ ವಿಶೇಷಣಗಳು ವ್ಯರ್ಥವಾಗಿವೆ. ವ್ಯರ್ಥವಿಶೇಷಣಘಟಿತವಾದ ಹೇತುವಿನಲ್ಲಿ ವ್ಯಾಪ್ತಿ ಇಲ್ಲ. ವ್ಯಾಪ್ಯತ್ವಾಸಿದ್ಧಿದೋಷ.

## ನ್ಯಾಯದೀಪ

**तदेव व्यनक्ति— अप्रयोजकत्वादिति ।।**

ಮೂಲದಲ್ಲಿ 'ಅತ ಏವ' ಎಂದು ಹೇಳಿರುವ ಕಾರಣವನ್ನೇ ಅಪ್ರಯೋಜಕತ್ವಾತ್, ಎಂದು ವಿವರಿಸಲಾಗಿದೆ.

## ಅವತಾರಿಕೆ

**नन्वेवमयोग्यस्य साधने 'शशो विषाणवान् पशुत्वाद् गोवत्' इति शशशृङ्गसिद्धिरपि स्यादित्यत आह—अत एवेति ।**

ಕ್ಷಿತ್ಯಾದಿಗಳಿಗೆ ಒಬ್ಬ ಕರ್ತೃ ಇರುವುದನ್ನು ಯಾರೂ ನೋಡಿಲ್ಲವಾದುದರಿಂದ ಅಂತಹ ಒಬ್ಬ ಕರ್ತೃ ಪ್ರಮಿತಿಯೋಗ್ಯನಲ್ಲ. ಅದನ್ನೂ ಸಾಧನೆ ಮಾಡುವುದಾದಲ್ಲಿ ಹಸುಗಳಿಗೆ ಕೋಡು ಇರುವಂತೆ ಮೊಲಕ್ಕೂ ಕೋಡನ್ನು ಸಾಧನೆ ಮಾಡಬೇಕಾದೀತು. ಈ ಆಕ್ಷೇಪಕ್ಕೆ ಮುಂದಿನ ಗ್ರಂಥ ಉತ್ತರವಾಗಿದೆ.

**अत एव शशशृङ्गप्रतिबन्द्यपि निरस्ता । तत्रानुकूलतर्काभावात् ।**

ಅಪ್ರಯೋಜಕವಾದ ಕಾರಣದಿಂದಲೇ ಈಶ್ವರನಂತೆ ಶಶಶೃಂಗವೂ ಸಿದ್ಧವಾಗಲಿ, ಎಂಬ ಪ್ರತಿಬಂದಿಯೂ ಸರಿಯಲ್ಲ. "ಶಶಃ ಶೃಂಗವಾನ್, ಪಶುತ್ವಾತ್, ಗೋವತ್" ಎಂಬ ಅನುಮಾನ ಅಪ್ರಯೋಜಕವಾದುದರಿಂದ.

## ನ್ಯಾಯದೀಪ

अप्रयोजकत्वादेवेत्यर्थः । तदेव व्यनक्ति—**अनुकूलेति** ।।

ಅತ ಏವ ಎಂದರೆ ಅಪ್ರಯೋಜಕತ್ವದಿಂದಾಗಿಯೇ ಎಂದು ಅರ್ಥ.

## ಅವತಾರಿಕೆ

नन्वेवं कर्तृमात्रसिद्धावपि तदेकत्वं कुतः सिद्धमित्यत आह—**कर्त्रैक्यं त्विति** । तदेव शङ्कोत्तराभ्यां व्यनक्ति–**नन्वित्यादिना** ।

ಈ ಅನುಮಾನದಿಂದ ವಿಶ್ವಕರ್ತನು ಸಿದ್ಧವಾದರೂ ಅವನು ಅದ್ವಿತೀಯ ಎಂದು ಸಿದ್ಧವಾಗುವುದು ಹೇಗೆ? ಅದಕ್ಕೆ ಮುಂದಿನ ಗ್ರಂಥದಲ್ಲಿ ಉತ್ತರವಿದೆ.

**कर्त्रैक्यं तु लाघवात् ।**

**नन्वनुमितेर्व्यापकांशे व्यापकतावच्छेदकमात्रप्रकारकत्वात् इहापि व्यापकः कर्ता व्यापकतावच्छेदककर्तृत्वेन सिध्येत् । एकत्वेन कथं सेत्स्यतीति चेन्मैवं । अनुमितिसामग्रीमहिम्ना तथात्वेऽपि लाघवतर्कसहकार रूपप्रमाणसामग्रीमहिम्ना ऐक्यस्य प्रकारत्वोपपत्तेः ।**

**तच्च क्षित्याद्युपादानगोचरं ज्ञानादिकं लाघवादेकं नित्यं चेति विषयसंकोचकाभावात् कपालघटादिगत-रूपगुरुत्वादावीश्वरस्यैव कर्तृत्वेन रूपाद्युपादानभूत–कपालादिगोचरत्वावश्यंभावाच्च सर्वविषयकमेवेति ।।**

ಈ ಅನುಮಾನದಿಂದ "ಕರ್ತೃಗಳು ಅನೇಕರಾದರೆ ಗೌರವ, ಒಬ್ಬನೆ ಆದರೆ ಲಾಘವ" ಎಂಬ ಲಾಘವ ತರ್ಕದಿಂದ ವಿಶ್ವಕ್ಕೆ ಒಬ್ಬನೇ ಕರ್ತೃವೆಂದು ಸಿದ್ಧವಾಗುತ್ತದೆ.

**ಆಕ್ಷೇಪ**—ಲಾಘವಾತ್ ಕರ್ತೃ ಒಬ್ಬನೆಂದು ಸಿದ್ಧವಾಗುತ್ತಾನೆ, ಎನ್ನುವುದು ಅನುಮಾನದ ಸ್ವಭಾವಕ್ಕೆ ವಿರುದ್ಧವಾದುದು. ಅನುಮಿತಿಯಲ್ಲಿ ವ್ಯಾಪಕವು (ಸಾಧ್ಯವು) ವ್ಯಾಪಕತಾವಚ್ಛೇದಕರೂಪೇಣೈವ ಭಾಸವಾಗುತ್ತದೆ. ಪ್ರಕೃತದಲ್ಲಿ, ಕಾರ್ಯತ್ವಕ್ಕೆ ವ್ಯಾಪಕ ಕರ್ತೃ. ಅವನು ಕರ್ತೃತ್ವೇನ ರೂಪೇಣ ಭಾಸಮಾನನಾಗುತ್ತಾನೆ, ಏಕತ್ವೇನ ಸಿದ್ಧವಾಗುವುದು ಹೇಗೆ?

**ಸಮಾಧಾನ**—ಅನುಮಿತಿಸಾಮಗ್ರೀ ಪ್ರಯುಕ್ತವಾಗಿ ಏಕತ್ವವು ತೋರುವುದಲ್ಲ, ಕಿಂತು ಲಾಘವತರ್ಕಸಹಕಾರದಿಂದ ಏಕತ್ವವು ಕರ್ತೃವಿನಲ್ಲಿ ತೋರುತ್ತದೆ.[1]

ಕರ್ತೃ ಒಬ್ಬನೇ, ಎಂದು ಸಿದ್ಧವಾದಂತೆ, ಆ ಕರ್ತೃವಿಗೆ ಇರುವ ಜ್ಞಾನ–ಇಚ್ಛಾಕೃತಿಗಳೂ ಒಂದು ಮತ್ತು ನಿತ್ಯವೆಂದೂ ಸಿದ್ಧವಾಗುತ್ತದೆ. ಅದಕ್ಕೂ ಲಾಘವತರ್ಕವೇ ಸಹಕಾರಿ. ಆ ಜ್ಞಾನಾದಿಗಳಿಗೆ ಇಂತಹುದೇ ನಿರ್ದಿಷ್ಟವಾದುದು ವಿಷಯ, ಎಂದು ಸಂಕೋಚಮಾಡಲು ಕಾರಣವಿಲ್ಲವಾದುದರಿಂದ ಸಕಲವಿಷಯಕತ್ವವೂ ಸಿದ್ಧವಾಗುತ್ತದೆ. ಅಷ್ಟೇ ಅಲ್ಲ, ಕಪಾಲದ ರೂಪಕ್ಕೆ ಕಪಾಲ ಸಮವಾಯಿಕಾರಣ, ಘಟರೂಪಕ್ಕೆ ಘಟವು ಸಮವಾಯಿಕಾರಣ. ಅವುಗಳ ಜ್ಞಾನ ಕುಲಾಲನಿಗೆ ಇದ್ದರೂ ಅವನು ರೂಪಾದಿಗಳಿಗೆ ಕರ್ತೃವಲ್ಲ, ಈಶ್ವರನೇ ಕರ್ತೃ. ಆದ್ದರಿಂದ ಈಶ್ವರನಿಗೂ ಘಟ–ಕಪಾಲಾದಿಗಳ ಜ್ಞಾನ ಇದೆ, ಎಂದು ಹೇಳಲೇಬೇಕು. ಹೀಗೂ ಈಶ್ವರನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ.

## ನ್ಯಾಯದೀಪ

**अस्तु कर्तैकः। तद्गतज्ञानादेरेकत्वादिसिद्धिः कथमित्यत आह— तच्चेति। ज्ञानादिकमित्यन्वयः ॥**

ಕರ್ತೃ ಒಬ್ಬನೇ ಎಂದು ಸಿದ್ಧವಾಗಲಿ. ಆದರೆ ಜ್ಞಾನಾದಿಗಳಿಗೆ ಏಕತ್ವ–ನಿತ್ಯತ್ವಗಳು ಹೇಗೆ ಸಿದ್ಧವಾಗುತ್ತವೆ? ಅದನ್ನು 'ತಚ್ಚ' ಎಂಬ ವಾಕ್ಯದಲ್ಲಿ ತಿಳಿಸಲಾಗಿದೆ.

---

१. यत्र प्रमाणे लघु–गुरुविषयता सम्भवति तत्र लाघवसहकारिता । एवं लाघवम्, एवं गौरवमिति ज्ञानानन्तरं बाधकं विना लघूनामेव कारणत्व-कार्यत्व–प्रवृत्तिनिमित्तत्व–शब्दशक्यत्वानां ज्ञानदर्शनात् । (मणि. पु.७८)

लाघवज्ञानम् अनुमितौ सहकारीभूय स्वविषयीकृतम् अर्थं अर्पयति । (आलोकः)

**'ಕರ್ತೃ ಇದ್ದಾನೆ' ಎಂಬ ಜ್ಞಾನ ಬಂದಾಗ ಅವನಲ್ಲಿ ಏಕತ್ವ ಮತ್ತು ಅನೇಕತ್ವಗಳು ಪ್ರಸಕ್ತವಾಗುತ್ತವೆ. ಅನೇಕತ್ವವು ಗೌರವಾತ್ ನಿವೃತ್ತಿಯಾಗಿ ಲಾಘವಾತ್ ಏಕತ್ವವು ಅನುಮಿತಿಯಲ್ಲಿ ತೋರುತ್ತದೆ.**

# ಸಕರ್ತೃಕತ್ವಾನುಮಾನ ನಿರಾಸ

## ಅವತಾರಿಕೆ

एवमनूदितमनुमानं दूषयितुं प्रतिजानीते—**अत्रोच्यत इति** । ''हेतुविरोधो द्विविधः, असिद्धिरव्याप्तिश्च'' इति भगवत्पादोक्त्या हेतुदोषयोरसिद्धिव्याप्त्यभावयोर्मध्ये असिद्धेरेव प्राथम्यात् परैरप्यसिद्धविरुद्धेत्यादिप्राचां निर्देशेनासिद्धेः प्राथम्योपगमाच्च, समवेतत्वे सतीत्यादिनाभिमतकार्यत्वहेतोरसिद्धिं तावत् ''किञ्चानुपलब्धप्राक्कोटिषु कार्यत्वं कुतः सिद्धम्'' इत्यादिना तत्वनिर्णयटीकोक्तां प्रपञ्चयति—**अनुपलब्धेति** ।

ಹೀಗೆ ಇದುವರೆಗೆ ಪರೋಕ್ತಾನುಮಾನವನ್ನು ನಿರಾಕರಿಸಲು ಅತ್ರೋಚ್ಯತೇ' ಎಂದು ಪ್ರತಿಜ್ಞೆ ಮಾಡಲಾಗಿದೆ.

ಶ್ರೀಮದಾಚಾರ್ಯರು ಪ್ರಮಾಣಲಕ್ಷಣದಲ್ಲಿ ಹೀಗೆ ಹೇಳಿದ್ದಾರೆ— ಅಸಿದ್ಧಿ, ಅವ್ಯಾಪ್ತಿ ಎಂದು ಹೇತುವಿರೋಧವು ಎರಡು ವಿಧವಾಗಿದೆ, ಎಂದು. ಇಲ್ಲಿ ಅಸಿದ್ಧಿಯನ್ನೇ ಮೊದಲು ಹೇಳಿದ್ದಾರೆ. ಪ್ರಾಚೀನ ನೈಯಾಯಿಕರೂ ಹೇತ್ವಾಭಾಸಗಳನ್ನು ವಿಭಾಗಮಾಡುವಾಗ–ಅಸಿದ್ಧ–ವಿರುದ್ಧ–ಎಂದೇ ಹೇಳಿರುವುದರಿಂದಲೂ ಅಸಿದ್ಧಿದೋಷವನ್ನೇ ಮೊದಲು ಹೇಳಲಾಗಿದೆ. 'ಸಮವೇತತ್ವೇ ಸತಿ ಕಾರ್ಯತ್ವಾತ್' ಎಂಬ ಹೇತುವಿನಲ್ಲಿ ಕಾರ್ಯತ್ವಾಂಶಕ್ಕೆ ಅಸಿದ್ಧಿಯನ್ನು ಹೇಳಿದ್ದಾರೆ. ಇದನ್ನು ತತ್ತ್ವನಿರ್ಣಯದಲ್ಲಿ 'ಕಿಂಚಾನುಪಲಬ್ಧಪ್ರಾಕ್ಕೋಟಿಷು ಕಾರ್ಯತ್ವಂ ಕುತಃ ಸಿದ್ಧಮ್' ಎಂದು ಹೇಳಿದ್ದಾರೆ. ಅದನ್ನೇ ಇಲ್ಲಿ ವಿವರಿಸಲಾಗಿದೆ.

## ಅಸಿದ್ಧಿದೋಷ

**अत्रोच्यते । अनुपलब्धप्राक्कोटिषु भूभूधरादिषु कार्यत्वमेव कुतः ? सावयवत्वादिति चेत् । सावयवत्वं सांशत्वं चेद् गनादौ व्यभिचारि । गगनादेः परमाणोश्च संयोगित्वेन सांशत्वसिद्धेः । विस्तृतं चैतदन्यत्र ।**

**द्रव्यारब्धद्रव्यत्वं चेदकार्यत्ववादिनं प्रत्यसिद्धम् । द्रव्यसमवेतद्रव्यत्वं चेत् जात्यादेरिवाकार्यत्वेनाप्युपपत्त्या अप्रयोजकता । मध्यमपरिमाणत्वं**

**चेत् तदाप्यप्रयोजकतैव । गगनप्रदेशस्येव सांशत्वेनैव तदुपपत्तेः । अवयवनैरपेक्ष्येणैव मध्यमीभूतपरिमाणाश्रयत्वमात्रेण द्रव्यस्य मध्यमपरिमाणत्वोपपत्तेश्च ।**

**भूम्यादेरुपलभ्यमाना भागास्तु नारम्भकरूपा अवयवाः । किन्तु गगनस्य प्रदेशभेदा इव, कालस्य क्षणादय इव चांशा एव सन्तु ।**

**अत एव भूमेः खननादिना पूर्वावयवविनाशेनावयव्यन्तरोत्पत्तेः कार्यत्वं सिद्धमिति निरस्तम् । क्षणादिनाशेन कालस्यापि तत्प्रसङ्गात्। खनकादेरेव भूम्यादिकर्तृत्वोपपत्तेश्च । प्रत्यभिज्ञाविरोधाच्च । क्षणभङ्गापाताच्च ।**

**तदुक्तं भगवत्पादैः "विपर्ययेणाप्यनुमातुं शक्यत्वात्" इति । अस्मदाद्यनुपलभ्यमानप्राक्कोटित्वेन हेतुना गगनादिदृष्टान्तेनाकार्यत्वस्याप्यनुमातुं शक्यत्वादित्यर्थः ॥**

ಈಶ್ವರಾನುಮಾನದಲ್ಲಿ ಕ್ಷಿತ್ಯಾದಿಗಳು ಪಕ್ಷ. ಅದರಲ್ಲಿ ಕಾರ್ಯತ್ವಹೇತು ಇರಬೇಕು. ಘಟವು ಮೊದಲು ಇರುವುದಿಲ್ಲ, ಆಮೇಲೆ ಹುಟ್ಟುತ್ತದೆ. ಅವುಗಳ ಪ್ರಾಗಭಾವವು ಪ್ರತ್ಯಕ್ಷ. ಇದರಂತೆ, ಕ್ಷಿತ್ಯಾದಿಗಳಲ್ಲಿ ಸೇರಿದ ಈ ಭೂಮಿ, ಪರ್ವತಗಳ ಪ್ರಾಗಭಾವವನ್ನು ಯಾರೂ ನೋಡಿಲ್ಲ. ಹೀಗಿರುವಾಗ ಪ್ರಾಗಭಾವಪ್ರತಿಯೋಗಿತ್ವರೂಪವಾದ ಕಾರ್ಯತ್ವವು ಅವುಗಳಲ್ಲಿ ಯಾವ ಪ್ರಮಾಣದಿಂದ ಸಿದ್ಧವಾಗಿದೆ? ಸಾವಯವತ್ವರೂಪಹೇತುವಿನಿಂದ ಕಾರ್ಯತ್ವವನ್ನು ಅನುಮಾನ ಮಾಡಿ ತಿಳಿಯಬೇಕು, ಎಂದರೆ, ಸಾವಯವತ್ವ ಎಂದರೇನು?

1. ಸಾಂಶತ್ವವೆಂದಾದರೆ, ಗಗನದಲ್ಲಿ ವ್ಯಭಿಚಾರ. ಗಗನಕ್ಕೆ ಅಂಶಗಳಿವೆ. ಆದರೆ, ಅದು ಕಾರ್ಯವಲ್ಲ. ಗಗನ, ಪರಮಾಣು ಇವುಗಳಲ್ಲಿ ಸಂಯೋಗವಿರುವುದರಿಂದ, ಸಂಯೋಗವು ಅಂಶವೃತ್ತಿಯಾದುದರಿಂದ ಅವುಗಳಿಗೂ ಅಂಶವಿದೆ ಎಂದು ತಿಳಿಯಬಹುದು. ಇದನ್ನು ಅನುವ್ಯಾಖ್ಯಾನ–ಸುಧಾಗ್ರಂಥಗಳಲ್ಲಿ ವಿವರಿಸಲಾಗಿದೆ.

2. ಸಾವಯವತ್ವವೆಂದರೆ ದ್ರವ್ಯದಿಂದ ಹುಟ್ಟಿದ ದ್ರವ್ಯ ಎಂದರ್ಥ. ಕಪಾಲದಿಂದ ಘಟ, ತಂತುಗಳಿಂದ ಪಟ. ಹೀಗೆ ಎಂದರೆ, ಭೂಭೂಧರಾದಿಗಳು ಕಾರ್ಯವೇ ಅಲ್ಲ ಎಂದು ಪೂರ್ವಪಕ್ಷ

ಮಾಡುವವರು ಅವುಗಳು ದ್ರವ್ಯದಿಂದ ಹುಟ್ಟಿವೆ, ಎಂದೂ ಒಪ್ಪುವುದಿಲ್ಲ. ಹೀಗಿದ್ದ ಮೇಲೆ ಆ ಹೇತುವಿನಿಂದ ಕಾರ್ಯತ್ವವನ್ನು ಸಾಧನೆ ಮಾಡಲಾಗದು.

3. ದ್ರವ್ಯಸಮವೇತ–ದ್ರವ್ಯವಾಗಿರುವುದೇ ಸಾವಯವತ್ವ ಎನ್ನುವುದೂ ಯುಕ್ತವಲ್ಲ. ಈ ಹೇತು ಕಾರ್ಯತ್ವಪ್ರಯೋಜಕವಾಗುವುದಿಲ್ಲ. ಜಾತಿ, ಸಂಖ್ಯಾ, ಪರಿಮಾಣಗಳು ದ್ರವ್ಯಸಮವೇತಗಳಾಗಿದ್ದರೂ ಕಾರ್ಯಗಳಲ್ಲ. ಅದರಂತೆ, ದ್ರವ್ಯದಲ್ಲಿ ಸಮವೇತವಾದ ದ್ರವ್ಯವೂ ಕಾರ್ಯವಾಗಬೇಕಾಗಿಲ್ಲ.

4. ಮಧ್ಯಮಪರಿಮಾಣವು ಯಾವ ದ್ರವ್ಯದಲ್ಲಿಯೋ ಅದು ಸಾವಯವ. ಇದೂ ಕಾರ್ಯತ್ವಪ್ರಯೋಜಕವಲ್ಲ. ಗಗನದ ಗೇಣುಪ್ರದೇಶದಲ್ಲಿ ಮಧ್ಯಮಪರಿಮಾಣ ಇದೆ. ಅದು ಸಾಂಶವಾದುದರಿಂದಲೇ ಅದಕ್ಕೆ ಆ ಪರಿಮಾಣವಿದೆ. ಅದಕ್ಕಾಗಿ ಅದು ಕಾರ್ಯವಾಗಬೇಕಿಲ್ಲ.

ಅಷ್ಟೇ ಅಲ್ಲ, ಮಧ್ಯಮಪರಿಮಾಣತ್ವವು ದ್ರವ್ಯದಲ್ಲಿ ಇರಬೇಕಾದರೆ ಅದರಲ್ಲಿ ಅಣುತ್ವ–ಪರಮಮಹತ್ವಪರಿಮಾಣಗಳು ಇಲ್ಲದಿದ್ದರೆ ಸರಿ. ಸಾವಯವತ್ವ ಬರಬೇಕಿಲ್ಲ. ಆದ್ದರಿಂದ ಮಧ್ಯಮಪರಿಮಾಣತ್ವವೇ ಸಾವಯವತ್ವವಲ್ಲ. ಅವಯವದ ಅಪೇಕ್ಷೆಯೇ ಇಲ್ಲದೆ ಮಧ್ಯಮ ಪರಿಮಾಣವು ದ್ರವ್ಯದಲ್ಲಿ ಇರಬಹುದು.

**ಆಕ್ಷೇಪ**—ಭೂಮ್ಯಾದಿಗಳಲ್ಲಿ ಅವಯವಗಳು ಇಲ್ಲದಿದ್ದರೂ ಮಧ್ಯಮಪರಿಮಾಣ ಇದೆ, ಎನ್ನುವುದು ಹೇಗೆ? ಅವುಗಳ ಅವಯವಗಳು ಪ್ರತ್ಯಕ್ಷಸಿದ್ಧವಾಗಿದೆಯಲ್ಲವೇ?

**ಉತ್ತರ**—ಆಕಾಶದಲ್ಲಿ ಪ್ರದೇಶಭೇದವಿದ್ದಮಾತ್ರಕ್ಕೆ ಆ ಪ್ರದೇಶಗಳು ಆಕಾಶದ ಅವಯವಗಳಲ್ಲ, ಅಂಶಗಳು ಮಾತ್ರ. ಅಂಶಕ್ಕೂ ಅವಯವಕ್ಕೂ ವ್ಯತ್ಯಾಸವಿದೆ. ಅವಯವಗಳು ಜನಕವಾಗಿರುತ್ತವೆ. ಅಂಶಗಳು ಜನಕಗಳಲ್ಲ. ತಂತುಗಳು ಪಟದ ಅವಯವಗಳು, ಆದೇ ಪಟದ ಒಂದು ಗೇಣುಭಾಗ ಪಟದ ಅಂಶ.

ಇದರಂತೆ, ಕಾಲದ ಕ್ಷಣ–ದಿನಾದಿಭಾಗಗಳು ಕಾಲಾಯವಗಳಲ್ಲ, ಕಾಲದ ಅಂಶಗಳು. ಇದರಂತೆ, ಪೃಥಿವ್ಯಾದಿಗಳಲ್ಲಿ ಕಾಣುವ ಭಾಗಗಳೂ ಪೃಥಿವಿಯ ಅಂಶಗಳೇ ಆಗಿರಬಹುದು, ಅವಯವಗಳೇ ಆಗಿರಬೇಕಿಲ್ಲ.

ಭಾಗಗಳು ಅಂಶಗಳಾಗಬಹುದಾದ್ದರಿಂದಲೇ ಈ ಸಮರ್ಥನೆಯೂ ಸರಿಯಲ್ಲ–ಭೂಮಿಯನ್ನು ಅಗೆಯುವುದರಿಂದ ಅಥವಾ ವಾಯುವಿನ ಆಘಾತದಿಂದ ಅವಯವಾಪಗಮವಾಗುತ್ತದೆ. ಇದರಿಂದಾಗಿ ಮೊದಲಿದ್ದ ಪೃಥಿವಿಯು ನಾಶವಾಗಿ ಹೊಸದಾದ ಖಂಡಪೃಥಿವೀ ಹುಟ್ಟುತ್ತದೆ. ಹೀಗೆ ಪೃಥಿವಿಯ ಉತ್ಪತ್ತಿಯು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಭೂಮ್ಯಾದಿಗಳಲ್ಲಿ ಕಾರ್ಯತ್ವವು ಪ್ರತ್ಯಕ್ಷಸಿದ್ಧವಾಗಿದೆ, ಎಂದು.

ಇದು ಯುಕ್ತವಲ್ಲ. ಹೀಗೆ ಹೇಳಿದರೆ, ಕ್ಷಣ–ದಿನಾದಿಗಳು ಕಾಲದ ಅಂಶಗಳು. ಮೊದಲ

ಕ್ಷಣಾದಿಗಳು ನಾಶವಾಗಿ ಹೊಸ ಕ್ಷಣಾದಿಗಳು ಬಂದಮಾತ್ರದಿಂದ ಕಾಲಕ್ಕೂ ಕಾರ್ಯತ್ವವು ಬರಬೇಕಾದೀತು. ಅಲ್ಲದೆ, ಹೀಗೆ ಹೇಳಿದರೆ ಅಗೆಯುವವನು ಭೂಮಿಗೆ ನಾಶಕನೆಂದೂ ತುಂಬುವವನು ಭೂಮಿಗೆ ಕರ್ತನೆಂದೂ ಹೇಳಬೇಕಾದೀತು. ಇದರಿಂದ ಈಶ್ವರಾನುಮಾನಕ್ಕೆ ಅಂಶತಃ ಸಿದ್ಧಸಾಧನತಾದೋಷ.

ಅವಯವಾಪಗಮದಿಂದ ನಾಶ, ಆಗಮದಿಂದ ಉತ್ಪತ್ತಿ ಎನ್ನುವುದಾದರೆ ಇಂತಹ ಅಪಗಮ–ಉಪಗಮಗಳು ಗಾಳಿಯ ಆಘಾತದಿಂದ ಸರ್ವದಾ ಆಗುತ್ತಿರುವುದರಿಂದ 'ಸೇಯಂ ಪೃಥಿವೀ' ಎಂಬ ಪ್ರತ್ಯಭಿಜ್ಞಾದ ವಿರೋಧ ಬರುತ್ತದೆ. ಬೌದ್ಧರಂತೆ ಕ್ಷಣಿಕತ್ವವನ್ನೂ ಅಂಗೀಕರಿಸಬೇಕಾದೀತು.

ಈ ಅಸಿದ್ಧಿದೋಷವನ್ನು ಈಶ್ವರಾನುಮಾನ ನಿರಾಸ ಪ್ರಸಂಗದಲ್ಲಿ ತತ್ತ್ವನಿರ್ಣಯದಲ್ಲಿ ಆಚಾರ್ಯರು ಹೀಗೆ ಹೇಳಿದ್ದಾರೆ— 'ಅನುಮಾನದಿಂದಲೂ ಈಶ್ವರಸಿದ್ಧಿಯಾಗುವುದಿಲ್ಲ. ವಿಪರೀತವಾಗಿಯೂ ಅನುಮಾನ ಮಾಡಲು ಸಾಧ್ಯವಿದೆ' ಎಂದು. ಇದನ್ನು ಪ್ರಕೃತಕ್ಕೆ ಹೀಗೆ ಅನ್ವಯಿಸಿಕೊಳ್ಳಬೇಕು—ಭೂಭೂಧರಾದಿಗಳ ಪ್ರಾಗಭಾವವು ನಮಗೆ ಉಪಲಬ್ಧವಾಗಿಲ್ಲದಿರುವ ಕಾರಣದಿಂದ ಗಗನದಂತೆ ಭೂಮ್ಯಾದಿಗಳೂ ಕಾರ್ಯಗಳೇ ಅಲ್ಲ, ಎಂದೂ ಅನುಮಾನ ಮಾಡುವುದು ಸಾಧ್ಯ, ಎಂದು.

## ನ್ಯಾಯದೀಪ

प्राक्कोटिः=प्रागभावः । ननु, क्षित्यादिकं कार्यं सावयवत्वाद् घटवत्, इत्यनुमानात् तत्सिद्धिः । नच सावयवत्वेनैवोक्तरूपकृति-मज्जन्यत्वं साध्यतां, किं मध्ये कार्यत्वसाधनेनेति वाच्यम् । पूर्वोक्तरीत्या कृतिजन्यत्वे कार्यत्वस्येव सावयवत्वस्यानुकूलतर्काभावात्, कार्यत्व-रूपसाध्येन हेतूच्छित्यादिरूपानुकूलतर्काभावादिति भावेनाशङ्कते— **सावयवत्वादिति चेदिति ।।**

''तर्ह्येवमाकाशादीनामपि कार्यत्वप्रसङ्गात्'' इत्यादिशास्त्र-योनिसूत्रसुधोक्तिं हृदि कृत्वाह—**गगनादौ व्यभिचारीति ।** तदेव व्यनक्ति—**गगनेति ।** गगनादिः सांशः संयोगित्वात् घटवत् । न-चाप्रयोजको हेतुः । तस्य 'इह पक्षी नेह पक्षी' इत्यबाधितप्रतीत्या

**गगनादौ व्याप्यवृत्तित्वायोगेन स्वात्यन्ताभावसामानाधिकरण्यरूपाव्याप्यवृत्तित्वस्य चैकत्र विरोधेनैकदेशरूपांशवृत्तित्वस्यैव वाच्यत्वात् । नचांशस्यौपाधिकत्वेनोपपत्तिः । उपाधिसंयोगस्यापि गगनादौ सर्वत्र व्याप्यवृत्तित्वायोगेनैकदेशरूपांशवृत्तित्वस्यैव वाच्यत्वात् । तस्याप्यौपाधिकत्वेऽनवस्थाद्यापातेन स्वाभाविकांशव्यतिरेकेण संयोगित्वस्यैवानुपपत्तेरिति भावः ।।**

ಕ್ಷಿತ್ಯಾದಿಗಳು ಕಾರ್ಯವಸ್ತುಗಳು ಎನ್ನುವುದಕ್ಕೆ ಅನುಮಾನವೇ ಪ್ರಮಾಣ. ಅನುಮಾನದ ಅಭಿಪ್ರಾಯ ಹೀಗೆ—ಕ್ಷಿತ್ಯಾದಿಗಳಿಗೆ ಅವಯವಗಳು ಇರುವುದರಿಂದಾಗಿ ಘಟಾದಿಗಳಂತೆ ಅವುಗಳೂ ಕಾರ್ಯವಾಗಿವೆ, ಎಂದು.

**ಆಕ್ಷೇಪ**—ಸಾವಯವತ್ವದಿಂದ ಕಾರ್ಯತ್ವವನ್ನು ಸಾಧಿಸಿ ಅದರಿಂದ ಸಕರ್ತೃಕತ್ವವನ್ನು ಸಾಧಿಸುವುದಕ್ಕಿಂತ ಸಾವಯವತ್ವದಿಂದಲೇ ಸಕರ್ತೃಕತ್ವವನ್ನು ಸಾಧಿಸಬಹುದಲ್ಲವೇ? ಮಧ್ಯದಲ್ಲಿ ಕಾರ್ಯತ್ವವನ್ನೇಕೆ ತರಬೇಕು?

**ಸಮಾಧಾನ**—ಹಿಂದೆ ಕಾರ್ಯಕ್ಕೂ ಕರ್ತೃವಿಗೂ ಕಾರ್ಯ-ಕಾರಣಭಾವವಿರುವುದರಿಂದಾಗಿ ಕೃತಿಮಜ್ಜನ್ಯತ್ವಕ್ಕೆ ಕಾರ್ಯತ್ವವು ಪ್ರಯೋಜಕವಾಗಿರುವುದರಿಂದ ಅಲ್ಲಿ ಅನುಕೂಲತರ್ಕ ಇದೆ. ಆದರೆ, ಸಾವಯವತ್ವರೂಪಹೇತುವಿಗೆ ಇಂತಹ ಅನುಕೂಲತರ್ಕವಿಲ್ಲ. ಆದ್ದರಿಂದ ಅದನ್ನು ಹೇತುಮಾಡಿದರೆ ಅಪ್ರಯೋಜಕತ್ವಶಂಕೆಗೆ ಅವಕಾಶವಿದೆ.

ಸಾಂಶತ್ವರೂಪ ಸಾವಯವತ್ವದಿಂದ ಕಾರ್ಯತ್ವವನ್ನು ಸಾಧಿಸಬಹುದು, ಎಂದು ತಾರ್ಕಿಕರ ಸಮಾಧಾನ ಸರಿಯಲ್ಲ. ಆ ಅನುಮಾನ ಅಪ್ರಯೋಜಕ. ಕಾರ್ಯತ್ವಂ ಮಾಸ್ತು, ಸಾವಯವತ್ವಂ ಅಸ್ತು, ಎಂದು ಶಂಕೆ ಮಾಡಿದಾಗ ಯದಿ ಕಾರ್ಯತ್ವಂ ನ ಸ್ಯಾತ್, ತರ್ಹಿ ಸಾವಯವತ್ವಮಪಿ ನ ಸ್ಯಾತ್, ಎಂಬ ಹೇತೂಚ್ಛಿತ್ತಿರೂಪವಾದ ಬಾಧಕತರ್ಕವಿಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ''ಗಗನಾದೌ ವ್ಯಭಿಚಾರಿ'' ಎಂದು ಮೂಲದಲ್ಲಿ ಹೇಳಲಾಗಿದೆ.

ಗಗನವೂ ಸಾಂಶ ಎಂದು ಅನುಮಾನದಿಂದ ಸಾಧಿಸಬಹುದು-ಗಗನಾದಿಗಳಲ್ಲಿ ಸಂಯೋಗವು ಇರುವುದರಿಂದ ಘಟದಂತೆ ಅಂಶಗಳೂ ಇವೆ. ಈ ಹೇತು ಅಪ್ರಯೋಜಕವಲ್ಲ. ಏಕೆಂದರೆ, 'ಇಹ ಪಕ್ಷೀ' ಎಂಬ ಪ್ರತ್ಯಕ್ಷದಿಂದ ಗಗನದಲ್ಲಿ ಸಂಯೋಗವೂ ಪ್ರತ್ಯಕ್ಷ, 'ನೇಹ ಪಕ್ಷೀ' ಎಂಬ ಪ್ರತ್ಯಕ್ಷದಿಂದ ಸಂಯೋಗಾಭಾವವೂ ಪ್ರತ್ಯಕ್ಷ. ಸಂಯೋಗವು ವ್ಯಾಪ್ಯವೃತ್ತಿಯಾಗಲು ಸಾಧ್ಯವಿಲ್ಲ. ಅವ್ಯಾಪ್ಯವೃತ್ತಿತ್ವವನ್ನು ಹೇಳಬೇಕಾದರೆ ಸಂಯೋಗವು ಸ್ವಾತ್ಯಂತಾಭಾವಸಮಾನಾಧಿಕರಣವಾಗಿರಬೇಕು.

ಆದರೆ ಒಂದೇ ಅಧಿಕರಣದಲ್ಲಿ ಭಾವಾಭಾವಗಳು ಇರುವುದು ವಿರುದ್ಧ. ಅದರ ಪರಿಹಾರಕ್ಕಾಗಿ ಅಂಶಭೇದೇನ ಅವೆರಡಕ್ಕೂ ಅವಿರೋಧವನ್ನು ಹೇಳುವುದು ಅನಿವಾರ್ಯ. ಹೀಗೆ, ಆಕಾಶಕ್ಕೆ ಸಾಂಶತ್ವವು ಸಿದ್ಧವಾಗುತ್ತದೆ.

**ಆಕ್ಷೇಪ**—ಆಕಾಶದಲ್ಲಿ ಅಂಶಗಳಿವೆ. ಆದರೆ ಅವು ಸ್ವಾಭಾವಿಕಗಳಲ್ಲ, ಉಪಾಧಿಕೃತ. ಆದ್ದರಿಂದ ಔಪಾಧಿಕ.

**ಸಮಾಧಾನ**—ಅಖಂಡಾಕಾಶದಲ್ಲಿ ಉಪಾಧಿಯು ಅಂಶವನ್ನು ಉಂಟುಮಾಡಬೇಕಾದರೂ ಆ ಉಪಾಧಿಸಂಯೋಗವೂ ವ್ಯಾಪ್ಯವೃತ್ತಿಯಾಗಲು ಸಾಧ್ಯವಿಲ್ಲವಾದುದರಿಂದ ಪ್ರದೇಶವೃತ್ತಿ ಎಂದೇ ಹೇಳಬೇಕು. ಆಗ ಮತ್ತೆ ಸ್ವಾಭಾವಿಕಾಂಶವು ಅನಿವಾರ್ಯ. ಆ ಅಂಶವೂ ಮತ್ತೊಂದು ಉಪಾಧಿಯಿಂದಾಗಿದೆ ಎಂದರೆ ಅನವಸ್ಥಾ. ಹೀಗೆ ಸ್ವಾಭಾವಿಕವಾದ ಅಂಶವಿಲ್ಲದಿದ್ದರೆ ಆಕಾಶಕ್ಕೆ ಸಂಯೋಗಿತ್ವವೇ ಇರಲಾರದು.

## ನ್ಯಾಯದೀಪ

**नन्वेवं गगनकालपरमाण्वादेरपि संयोगित्वेन सांशत्वे तुल्यन्यायतयांशस्यापि संयोगित्वेन सांशत्वं, तदंशस्याप्येवमिति परमाण्वंशस्याप्यानन्त्यं स्यात् । तथाच गगनपरमाण्वोस्तुल्यपरिमाणतापत्तिः ।**

**किंच परमाणोरपि न्यूनपरिमाणकांशस्य सत्त्वे 'यतः परमणुर्नास्ति स परमाणुः' इति परमणुत्वव्याघातः । अपिचोपादानादिरूपावयवातिरिक्तांशसत्त्वे मानाभावात्, तद्रूपांशवत्त्वस्य गगनादावप्यभ्युपगमेऽनित्यत्वापत्तेश्चेत्यत आह— विस्तृतं चैतदन्यत्रेति ।।**

''अतः सर्वपदार्थानां भागाः सन्त्येव सर्वदा ।
सर्वदिक्ष्वभिसंबन्धादविभागः पराणुता ।।''

इत्याद्यनुव्याख्यासुधयोर्वैशेषिकाधिकरणे विस्तृतमित्यर्थः । सर्षपो यावंतं देशमवष्टभ्य वर्तमानो दृश्यते तावत्येवानधिकतदवयवपरंपरा । गगनेऽप्येवमित्यङ्गीकारे तुल्यपरिमाणतानापत्तेः । 'यतः स्वावयवं

**विना स्वतन्त्रमनवयवरूपमपकृष्टपरिमाणं नास्ति स परमाणुः' इत्युक्तेर्व्याघाताभावादित्याद्युक्तेरिति भावः। तथोपादानातिरिक्तांशसत्त्वादिकं चोपाधिखण्डनटीकाभावप्रकाशिकायां विस्तृतमित्यर्थः ॥**

ಸಂಯೋಗವಿರುವ ಕಾರಣದಿಂದಾಗಿ ಗಗನಾದಿಗಳಿಗೆ ಸಾಂಶತ್ವವನ್ನು ಸಾಧಿಸಿದರೆ ಮೂರು ದೋಷಗಳು ಬರುತ್ತವೆ—

1. ಸಂಯೋಗಿತ್ವ ಇರುವುದರಿಂದ ಗಗನ-ಕಾಲಗಳೂ ಸಾಂಶಗಳಾದರೆ, ಆ ಗಗನಾದಿಗಳ ಪರಮಾಣುಗಳಲ್ಲೂ ಸಂಯೋಗವಿರುವುದರಿಂದ ತುಲ್ಯನ್ಯಾಯೇನ ಅವುಗಳಲ್ಲೂ ಅಂಶವಿರಬೇಕು. ಆ ಅಂಶಗಳಿಗೂ ಅಂಶವಿರಬೇಕು. ಹೀಗೆ ಹೇಳುತ್ತಾಹೋದರೆ ಪರಮಾಣ್ವಂಶಗಳಿಗೂ ಆನಂತ್ಯ ಬರಬೇಕಾದೀತು. ಗಗನದಂತೆ ಪರಮಾಣುವೂ ಅನಂತಾಂಶವಾದರೆ ಅವೆರಡಕ್ಕೆ ಪರಿಮಾಣದಲ್ಲಿ ವ್ಯತ್ಯಾಸ ಇರಬಾರದು.

2. ಅಷ್ಟೇ ಅಲ್ಲ. ಪರಮಾಣುವಿಗಿಂತಲೂ ಚಿಕ್ಕದಾದ ಅದರ ಅವಯವ ಇದ್ದಲ್ಲಿ ಪರಮಾಣು ಪರಮ-ಅಣುವೆನಿಸಲಿಕ್ಕಿಲ್ಲ. ಏಕೆಂದರೆ, ಯಾವುದಕ್ಕಿಂತ ಗಾತ್ರದಲ್ಲಿ ಚಿಕ್ಕದು ಇಲ್ಲವೋ ಅದೇ ಪರಮಾಣು. ಪರಮಾಣುವಿಗೂ ಅಂಶವಿದ್ದಲ್ಲಿ ಇಂತಹ ಪರಮಾಣುತ್ವವು ಸಿದ್ಧವಾಗಲಿಕ್ಕಿಲ್ಲ.

3. ಇನ್ನೊಂದು ದೋಷ—ಪಟದ ಅವಯವ ತಂತು. ಅದು ಪಟಕ್ಕೆ ಉಪಾದಾನಕಾರಣ. ಇಂತಹ ಉಪಾದಾನಾವಯವಾತಿರಿಕ್ತವಾದ ಅಂಶವು ಇಲ್ಲ. ಗಗನವು ಸಾಂಶವೆಂದರೆ ಅದಕ್ಕೂ ಉಪಾದಾನಕಾರಣವಾದ ಅಂಶಗಳಿವೆ, ಎಂದೇ ಅರ್ಥ. ಆಗ ಗಗನವೂ ಅನಿತ್ಯವೆಂದಂತೆಯೇ ಆಯಿತು.

ಈ ಮೂರು ಆಕ್ಷೇಪಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮೂಲದಲ್ಲಿ 'ವಿಸ್ಕೃತಂ ಚೈತತ್' ಎಂದು ಹೇಳಲಾಗಿದೆ. ಈ ಎಲ್ಲ ಆಕ್ಷೇಪಗಳಿಗೆ ಪರಿಹಾರವು ಅನುವ್ಯಾಖ್ಯಾನದಲ್ಲಿ ಇದೆ, ಎಂದರ್ಥ.

ಅನುವ್ಯಾಖ್ಯಾನದ ಅರ್ಥ ಹೀಗೆ— ಎಲ್ಲ ವಸ್ತುಗಳಿಗೂ ಸರ್ವದಾ ಭಾಗಗಳು ಇದ್ದೇ ಇವೆ. ಏಕೆಂದರೆ, ಪ್ರತಿಯೊಂದು ವಸ್ತುವಿಗೂ ದಶದಿಕ್ಕುಗಳ ಸಂಬಂಧವಿದೆ. ಆದ್ದರಿಂದ ಹತ್ತು ಭಾಗಗಳು ಇದ್ದೇ ಇರಬೇಕು. ಪರಮಾಣು ಎಂದರೆ ನಿರಂಶ ಎಂದು ಅರ್ಥವಲ್ಲ. ಅಂಶಗಳಿದ್ದರೂ ಆ ಅಂಶಗಳನ್ನು ವಿಭಾಗಮಾಡಲು ಬರುವುದಿಲ್ಲ, ಎಂದಿಷ್ಟೇ ಅರ್ಥ. (ಅನುವ್ಯಾಖ್ಯಾನದ ಈ ಶ್ಲೋಕ ವೈಶೇಷಿಕಾಧಿಕರಣದಲ್ಲಿ ಇದೆ)

1. ತುಲ್ಯಪರಿಮಾಣತಾಪತ್ತಿಯನ್ನು ಹೀಗೆ ಪರಿಹರಿಸಬೇಕು— ಒಂದು ಸಾಸಿವೆಕಾಳು ಎಷ್ಟು ಪ್ರದೇಶವನ್ನು ಆಕ್ರಮಿಸಿಕೊಂಡಿದೆಯೋ ಅಷ್ಟೇ ಪ್ರದೇಶದಲ್ಲಿ ಅದರ ಅನಂತ-ಅವಯವಗಳೂ ಇವೆ. ಅನಂತ ಅವಯಗಳು ಇದ್ದಮಾತ್ರಕ್ಕೆ ಸರ್ಷಪವೂ ಆಕಾಶದಷ್ಟು ಗಾತ್ರವಾಗವುದಿಲ್ಲ. ಆದ್ದರಿಂದ ತುಲ್ಯಗಾತ್ರ ಬರಲಿ, ಎಂಬ ಆಪತ್ತಿ ಸರಿಯಲ್ಲ.

2. ವ್ಯಾಘಾತವೂ ಇಲ್ಲ— ತನಗಿಂತ ಗಾತ್ರದಲ್ಲಿ ಚಿಕ್ಕವಸ್ತು ಇಲ್ಲದಿರುವ ಅಣು ಪರಮಾಣು ಎಂದು ಅರ್ಥವಲ್ಲ. ಯಾವುದಕ್ಕೆ ತನ್ನ ಅವಯವವನ್ನು ಬಿಟ್ಟು ಸ್ವತಂತ್ರವಾದ ಅಂದರೆ, ಅವಯವತ್ವಾವಸ್ಥಾನಾಪನ್ನವಾದ, ಅಪಕೃಷ್ಟಪರಿಮಾಣವುಳ್ಳ ಅಚೇತನ ವಸ್ತುವು ಇಲ್ಲವೊ ಅದೇ ಪರಮಾಣು. ತಾರ್ಕಿಕರು ಹೇಳುವ ತ್ರ್ಯಣುಕದ ಷಷ್ಠಾಂಶ ಪರಮಾಣು. ಅದರ ಅವಯವ ಭೂತಸೂಕ್ಷ್ಮ. ಅದು ಪ್ರಲಯಕಾಲದಲ್ಲಿ ಸ್ವತಂತ್ರವಾಗಿ ಇರುತ್ತದೆ. ಅದರ ಅವಯವಗಳು ಅದಕ್ಕಿಂತಲೂ ಗಾತ್ರದಲ್ಲಿ ಕಿರಿದಾಗಿದ್ದರೂ ಅವು ಪರಸ್ಪರ ಅಂಟಿಕೊಂಡೇ ಇರುತ್ತವೆ, ಸ್ವತಂತ್ರವಾಗಿ ಇರುವುದಿಲ್ಲ. ಹೀಗೆ, ಪರಮಾಣುವಿಗೆ ತನ್ನ ಅವಯವವಾದ ಭೂತಸೂಕ್ಷ್ಮಕ್ಕಿಂತ ಚಿಕ್ಕದಾದ, ಅವಯವತ್ವಾವಸ್ಥೆಯಲ್ಲಿ ಇರದ ಅಚೇತನವಸ್ತು ಇನ್ನೊಂದಿಲ್ಲ. ಅದೇ ಪರಮಾಣು. ಹೀಗೆ ಪರಮಾಣುವಿಗೆ ಲಕ್ಷಣ ಹೇಳಿದಾಗ ವ್ಯಾಘಾತಪ್ರಸಂಗ ಇಲ್ಲ.

3. ಇನ್ನು ಅಂಶವು ಉಪಾದನವೇ ಆಗಿರಬೇಕು, ಎಂಬ ನಿರ್ಬಂಧವೂ ಸರಿಯಲ್ಲ. ಉಪಾದಾನವಲ್ಲದ ಅಂಶವೂ ಇದೆ, ಎಂದು ಉಪಾಧಿಖಂಡನ ಟಿಪ್ಪಣಿ 'ಭಾವಪ್ರಕಾಶಿಕಾ'ದಲ್ಲಿ ಹೇಳಲಾಗಿದೆ. ಆದ್ದರಿಂದ ಆಕಾಶವು ಅನಿತ್ಯವಾಗಲಿ ಎಂಬ ಆಪತ್ತಿಯೂ ಇಲ್ಲ.[1]

## ನ್ಯಾಯದೀಪ

**जात्यादेरिवेति ।** अद्रव्यस्य जातेरेकत्वसङ्ख्यापरिमाणादेर्द्रव्यसमवेतत्वेऽप्यकार्यत्वं यथा तथा द्रव्यसमेतद्रव्यस्याप्यकार्यत्वमस्तु । विपक्षे बाधकाभावादिति भावः । **गगनप्रदेशस्येवेति ।** यथा, इह पक्षीत्यादिप्रतीत्या पक्ष्याद्याधारप्रदेशस्य मध्यमपरिमाणत्वेऽपि तस्य प्रदेशस्याप्युक्तदिशाऽनेकांशयुतत्वं तथा क्षित्यादेरवयवारब्धत्वरूपकार्यत्वाभावेऽपि गगनवत् पूर्वोत्तरावधिशून्यानन्तांशयुतत्वाभावेन अनेकांशयुतपरमाणुतोऽनेकांशयुतत्वेन च तदुभयपरिमाणान्यपरिमाणरूप-मध्यमपरिमाणत्वस्योपपत्तेरित्यर्थः ।

परिमाणस्यावयवोपचयहेतुकत्वमुपेत्योक्तम् । वस्तुतस्तदेव

1. 'ಭಾವಪ್ರಕಾಶಿಕಾ' ಉಪಲಬ್ಧವಿಲ್ಲ. ಮಂದಾರಮಂಜರಿಯಲ್ಲಿ ಹೀಗಿದೆ—
पटावयव–तन्त्वतिरिक्तानां हस्त-वितस्त्याद्यवच्छेद्यानाम् अंशानाम् अनुभवात् ॥
("एकदेशेऽनवस्था स्यात्" ಎಂಬ ಮೂಲದ ಟೀಕಾಟಿಪ್ಪಣಿ)

**मास्त्वित्याह—अवयवेति । यथा परमाण्वादावयवनैरपेक्ष्येणैवाणुपरिमाणं महत्परिमाणं च तथा मध्यमपरिमाणमस्तु । प्रदीपगुणे प्रभायां दर्शनात् । नच प्रभा न गुणोऽपितु द्रव्यमिति युक्तम् । 'गुणाद्वाऽऽलोकवत्' इतिसूत्रभाष्यटीकाचन्द्रिकासु तदनुविधानादिना गुणत्वसमर्थनादिति भावः ।।**

ದ್ರವ್ಯಭಿನ್ನವಾಗಿರುವ ಘಟತ್ವಾದಿ ಜಾತಿಗಳು, ಏಕತ್ವಸಂಖ್ಯಾ ಮತ್ತು ಪರಿಮಾಣಾದಿ ಗುಣಗಳು ದ್ರವ್ಯಸಮವೇತಗಳಾದರೂ ಅಕಾರ್ಯಗಳು(ನಿತ್ಯಗಳು) ಹೇಗೋ ಅದರಂತೆಯೇ ದ್ರವ್ಯದಲ್ಲಿ ಸಮವೇತವಾದ ದ್ರವ್ಯವೂ ಕಾರ್ಯವೇ ಏಕಾಗಬೇಕು? ಅಕಾರ್ಯವೇ ಆಗಬಹುದು. ಹಾಗಾದರೆ ಬಾಧಕವೇನೂ ಇಲ್ಲ. ಆದ್ದರಿಂದ ದ್ರವ್ಯಸಮವೇತದ್ರವ್ಯತ್ವರೂಪಸಾವಯವತ್ವವು ಕಾರ್ಯತ್ವಕ್ಕೆ ಪ್ರಯೋಜಕವಾಗುವುದಿಲ್ಲ.

ಮೂಲದಲ್ಲಿ ಮಧ್ಯಮ ಪರಿಮಾಣತ್ವವು ಕಾರ್ಯತ್ವಪ್ರಯೋಜಕವಲ್ಲ ಎನ್ನುವುದಕ್ಕೆ ಗಗನದ ಪ್ರದೇಶಭಾಗವನ್ನು ದೃಷ್ಟಾಂತವನ್ನಾಗಿ ಕೊಡಲಾಗಿದೆ. 'ಇಹ ಪಕ್ಷೀ' ಎಂಬ ಅಬಾಧಿತಪ್ರತೀತಿಯಿಂದ ಗಗನಪ್ರದೇಶವು ಸಿದ್ಧವಾಗುತ್ತದೆ. ಈ ಪ್ರದೇಶವು ಅನೇಕಾಂಶೋಪೇತವಾದರೂ ಮಧ್ಯಮ ಪರಿಮಾಣವುಳ್ಳದ್ದಾಗಿದೆ. ಅದು ಗಗನಕ್ಕಿಂತ ಚಿಕ್ಕದು, ಪರಮಾಣುವಿಗಿಂತ ದೊಡ್ಡದು. ಹೀಗೆ ಅದರಲ್ಲಿ ಮಧ್ಯಮಪರಿಮಾಣವಿದೆ. ಅದರಂತೆ, ಕ್ಷಿತ್ಯಾದಿಗಳೂ ಆಕಾಶದಂತೆ ಪೂರ್ವೋತ್ತರಾವಧಿಶೂನ್ಯವಾದ ಅನಂತಾಂಶವುಳ್ಳದ್ದಲ್ಲ. ಆದರೂ ಅನೇಕಾಂಶವುಳ್ಳ ಪರಮಾಣುಗಳಿಗಿಂತಲೂ ಹೆಚ್ಚು ಅಂಶಗಳುಳ್ಳದ್ದು. ಹೀಗೆ, ಅಣು–ಮಹದ್ವಸ್ತುಗಳ ಮಧ್ಯದಲ್ಲಿರುವುದರಿಂದ ಮಧ್ಯಮಪರಿಮಾಣತ್ವವು ಇರುವುದಕ್ಕೆ ತೊಂದರೆ ಏನೂ ಇಲ್ಲ. ಅದಕ್ಕಾಗಿ, ಅವಯವಜನ್ಯತ್ವರೂಪವಾದ ಕಾರ್ಯತ್ವವು ಇರಬೇಕಾಗಿಲ್ಲ. ಆದ್ದರಿಂದ ಈ ಹೇತುವೂ ಅಪ್ರಯೋಜಕ.

ಈ ಪರಿಹಾರವನ್ನು ಅವಯವಗಳ ಉಪಚಯವು ಪರಿಮಾಣಕ್ಕೆ ಹೇತು ಎಂದು ಒಪ್ಪಿ ಹೇಳಲಾಗಿದೆ. ವಸ್ತುತಸ್ತು ಮಧ್ಯಮ ಪರಿಮಾಣವಿದ್ದರೆ ಆ ದ್ರವ್ಯಕ್ಕೆ ಅವಯವವೇ ಇರಬೇಕಾಗಿ ಇಲ್ಲ, ಇನ್ನು ಅಯವಾರಬ್ಧತ್ವ ದೂರತೋಪಾಸ್ತ. ಹೇಗೆ ಪರಮಾಣುಗಳಿಗೆ ತಾರ್ಕಿಕರು ಹೇಳುವಂತೆ ಅವಯವಗಳು ಇಲ್ಲದಿದ್ದರೂ ಅಣುತ್ವ ಪರಿಮಾಣವು ಇದೆಯೋ, ಗಗನಕ್ಕೂ ಅವಯವಗಳಿಲ್ಲದಿದ್ದರೂ ಪರಮಮಹತ್ವಪರಿಮಾಣವು ಇದೆಯೋ ಅದರಂತೆ ಕ್ಷಿತ್ಯಾದಿಗಳಿಗೂ ಅವಯವವೇ ಇಲ್ಲದಿದ್ದರೂ ಮಧ್ಯಮ ಪರಿಮಾಣವು ಇರಬಹುದು. ಅವಯವಗಳು ಇಲ್ಲದೆಯೂ ಮಧ್ಯಮ ಪರಿಮಾಣವು ದೀಪದ ಗುಣವಾದ ಪ್ರಭೆಯಲ್ಲಿ ಇದೆ. ಅದು ಗುಣವಾದುದರಿಂದ ಅದಕ್ಕೆ ಅವಯವಗಳಿಲ್ಲ. ಆದರೂ ಅದು ಕೊಠಡಿಯಷ್ಟು ವಿಸ್ತಾರವಾಗಿದೆ.

ಪ್ರಭೆಯು ಗುಣವೇ ಅಲ್ಲ, ದೀಪದ ಅವಯವಗಳಾದುದರಿಂದ ದ್ರವ್ಯ, ಎನ್ನುವ ವಾದವನ್ನು 'ಗುಣಾದ್ವಾಲೋಕವತ್' (2-3.26) ಸೂತ್ರಭಾಷ್ಯಟೀಕಾ ಮತ್ತು ಚಂದ್ರಿಕಾ ಗ್ರಂಥದಲ್ಲಿ ಸಮರ್ಥಿಸಲಾಗಿದೆ. ಪ್ರಭೆಯು ದೀಪವನ್ನು ಅನುಸರಿಸಿಕೊಂಡೇ ಇರುವುದರಿಂದ ಅದು ಗುಣ, ಎಂದು ಅಲ್ಲಿ ಕಾರಣವನ್ನು ಕೊಡಲಾಗಿದೆ.[1]

## ನ್ಯಾಯದೀಪ

अवयवनैरपेक्ष्येणेत्याद्युक्तप्रमेये प्रत्यक्षवाधमाशङ्क्य निराह— **भूम्यादेरिति ।** नन्वाकाशप्रदेशानां विनाशादृष्टेर्भूम्यवयवानां तद्दृष्टेः वैषम्यमित्यत आह–**कालस्येति ।** प्रदेशभेद-क्षणलवादीनामौपाधिकत्वे भूम्यवयवानामपि तथात्वमस्त्विति भावः । **पूर्वावयवीति ।** नोदनाभिघातादिनाऽवयवक्रियाद्वारा परमाणुपर्यन्तम् असमवायिकारणसंयोगनाशेन पूर्वद्रव्यनाशे सति पुनरदृष्टाधीनपरमाणुसंयोगद्वारा खण्डक्षित्यादिकार्योत्पत्तेः पीलुपाकप्रक्रियासिद्धत्वात् कार्यत्वं सिद्धमित्यर्थः ।

नचैवं खण्डक्षित्यादौ कार्यत्वसिद्धावप्यखण्डक्षित्यादौ न सिद्धमिति भागासिद्धिरिति वाच्यम् । नाशेन तत्रापि तदनुमानादिति भावः ।।

ಅವಯವದ ಅಪೇಕ್ಷೆಯೇ ಇಲ್ಲದೆ ಮಧ್ಯಮಪರಿಮಾಣವು ಪೃಥಿವಿಯಲ್ಲಿ ಇರಬಹುದು, ಎಂಬ ವಿಷಯದಲ್ಲಿ ಪ್ರತ್ಯಕ್ಷಬಾಧವನ್ನು ಶಂಕಿಸಿ 'ಭೂಮ್ಯಾದೇಃ' ಎಂದು ಮೂಲದಲ್ಲಿ ಸಮಾಧಾನ

---

१. यथालोकस्य प्रकाशगुणेन व्याप्तिः ज्योतीरूपेणाव्याप्तिः एवं चिद्गुणेन व्याप्तिः जीवरूपेणाव्याप्तिरिति वा । (भाष्यम्)

ननु आलोकस्य द्रव्यत्वात् कथं गुणत्वमुच्यते इति । मैवम् । तद्द्रव्यत्वे मानाभावात् । रूपित्वं मानमिति चेन्न । तेन घटादिरूपस्यैव प्रतीयमानत्वात् । नहि व्योम्नि वर्तमानस्य प्रकाशस्य रूपं गृह्यये । ...तर्हि कुतः तद्गुणत्वम् इति चेन्न । तदनुविधानादिनैव इति ब्रूमः । (तत्त्वप्र.)

लोके माणिक्यप्रभादौ तद्गुणत्वव्यवहारः, 'तेजोबलैश्वर्य... गुणैकराशिः'' इति स्मार्तः तेजसि गुणत्वव्यवहारश्च गुणत्वे प्रमाणम् । (चन्द्रिका)

ಹೇಳಲಾಗಿದೆ. ಭೂಮ್ಯಾದಿಗಳಲ್ಲಿ ನಮಗೆ ಕಾಣುವ ಭಾಗಗಳು ಕಪಾಲಗಳಂತೆ ಜನಕವಾದ ಅವಯವಗಳಲ್ಲ, ಆಕಾಶದ ಭಾಗಗಳಂತೆ ಅಂಶಗಳು ಮಾತ್ರ, ಆದ್ದರಿಂದ ಪ್ರತ್ಯಕ್ಷಬಾಧ ಇಲ್ಲ, ಎಂದು ಅರ್ಥ.

ಭೂಮಿಯ ಅವಯವಕ್ಕೆ ಆಕಾಶಪ್ರವೇಶದ ಸಾಮ್ಯವು ಸರಿಯಲ್ಲ. ಏಕೆಂದರೆ, ಆಕಾಶಪ್ರದೇಶಗಳಿಗೆ ನಾಶವು ಕಂಡಿಲ್ಲ, ಆದರೆ, ಭೂಮಿಯ ಅವಯವಗಳು ನಾಶವಾಗುವುದು ಪ್ರತ್ಯಕ್ಷದೃಷ್ಟವಾಗಿದೆ. ಆದ್ದರಿಂದ ಆಕಾಶಭಾಗಗಳು ಆರಂಭಕವಾಗದಿದ್ದರೂ ಭೂಮಿಯ ಅವಯವಗಳು ಆರಂಭಕಗಳಾಗಬಹುದು, ಎಂಬ ಆಕ್ಷೇಪ ಬಂದರೆ, ಮೂಲದಲ್ಲಿ ಕಾಲದ ದೃಷ್ಟಾಂತವನ್ನು ಕೊಡಲಾಗಿದೆ. ಕ್ಷಣ-ದಿನಾದಿಕಾಲಾಂಶಗಳೂ ಅನಿತ್ಯವೇ ಆಗಿವೆ. ಆದರೂ ನಿತ್ಯವಾದ ಕಾಲಕ್ಕೆ ಅವುಗಳು ಆರಂಭಕಗಳಲ್ಲ.

ಅಲ್ಲೂ ಒಂದು ವ್ಯತ್ಯಾಸವಿದೆ-ಕ್ಷಣಾದಿಗಳು ಕಾಲದ ಸ್ವಾಭಾವಿಕಾಂಶಗಳಲ್ಲ, ಔಪಾಧಿ-ಕಾಂಶಗಳು, ಎನ್ನುವುದಾದಲ್ಲಿ ಪೃಥಿಯ ಅಂಶಗಳೂ ಔಪಾಧಿಕಗಳೇ ಆಗಲಿ, ಎಂದು ಮೂಲದ ಅಭಿಪ್ರಾಯ.

ಪೃಥಿಯಲ್ಲಿ ಉತ್ಪತ್ತಿ-ನಾಶಗಳು ಸಿದ್ಧವಾಗಿವೆ, ಎಂದೂ ಮೂಲದಲ್ಲಿದೆ. ಅದು ತಾರ್ಕಿಕರ 'ಪೀಲುಪಾಕವಾದ' ಪ್ರಕ್ರಿಯೆಯಂತೆ ಹೀಗೆ—ವಾಯ್ವಾದಿಗಳ ಅಭಿಘಾತ ಅಥವಾ ನೋದನ ಸಂಯೋಗದಿಂದ ಪೃಥಿವೀಪರಮಾಣುಗಳಲ್ಲಿ ಕ್ರಿಯೆ ಹುಟ್ಟಿ ಅದರಿಂದ ಪರಮಾಣುದ್ವಯ ಸಂಯೋಗವು ನಾಶವಾಗುತ್ತದೆ. ಅಸಮವಾಯಿಕಾರಣನಾಶದಿಂದ ದ್ವ್ಯಣುಕನಾಶ, ಹೀಗೆ ಪೃಥಿವೀನಾಶ. ಮತ್ತೆ ದ್ವ್ಯಣುಕಾದಿ ಕ್ರಮೇಣ ಉತ್ಪತ್ತಿ. ಕೆಲವು ಅಣುಗಳು ಹಾರಿಹೋಗಿ ಮತ್ತೆ ಹುಟ್ಟಿದ ಈ ಖಂಡಪೃಥಿವಿಗೆ ಬೇಕಾದ ಪರಮಾಣು ಕ್ರಿಯೆಗೆ ಜೀವರ ಭೋಗಾದೃಷ್ಟವೇ ಕಾರಣ.

ಖಂಡಪೃಥಿವಿಯಲ್ಲಿ ಈ ರೀತಿಯಿಂದ ಕಾರ್ಯತ್ವವು ಪ್ರತ್ಯಕ್ಷದಿಂದ ಸಿದ್ಧವಾದರೂ ಮಹಾಪೃಥಿವಿಯಲ್ಲಿ ಸಿದ್ಧವಾಗದಿರುವುದರಿಂದ ಕಾರ್ಯತ್ವಹೇತುವು ಭಾಗಾಸಿದ್ಧ ಎಂದರೆ, ಅಲ್ಲೂ ಪ್ರತ್ಯಕ್ಷಸಿದ್ಧವಾದ ವಿನಾಶದಿಂದ ಉತ್ಪತ್ತಿಯನ್ನು (ಕಾರ್ಯತ್ವವನ್ನು) ಅನುಮಾನ ಮಾಡಬೇಕು.

## ನ್ಯಾಯದೀಪ

अत एवेत्युक्तं व्यनक्ति—**क्षणादीति** । नच क्षणादीनामौपाधिकत्वात् तत्रोपाधिनाश एवेति युक्तम् । विशेषणनाशे विशिष्टस्य नाशात् । अंशानामौपाधिकत्वस्योपाधिखण्डनादौ निरासेन स्वाभाविकत्वाच्चेति भावः ।

खननादिना क्षितिनाशोत्पत्त्यङ्गीकारोऽयुक्त एवेति भावेनाह— **खनकादेरिति** । तथाचांशतःसिद्धसाधनता स्यादिति भावः ।

यदत्रोक्तं मणौ "तत्र क्षितिनाश एव कर्तृत्वं नतु खण्डक्षितौ । अवस्थितिसंयोगेभ्य एव तदुत्पत्तेः" इति । तन्न । तथात्वे खण्डक्षितिनाशेऽप्यकर्तृत्वापातात् । अनुभवविरोधस्योभयत्र तुल्यत्वात् ।

एकदेशनाशकर्तृत्वे त्वखण्डक्षित्युत्पत्तिरेव नेति कुतः कार्यत्वं क्षित्यादेरिति भावेनाह—**प्रत्यभिज्ञेति** । **क्षणेति** । प्रतिक्षणं क्षित्यादौ वाय्वाद्यभिघातादिनैकैकावयवापगमेन प्रतिक्षणं तदपगमनिमित्तनाशोत्पत्त्योरुपेयत्वादिति भावः ॥

ಕ್ಷಣನಾಶವಾದಾಗ ಕಾಲವೂ ನಾಶವಾಗಬೇಕಾದೀತು, ಎನ್ನುವ ಮೂಲದಲ್ಲಿ ಮಾಡಿರುವ ಆಕ್ಷೇಪವು ಸರಿಯಲ್ಲ, ಕ್ಷಣಾದಿಗಳು ಔಪಾಧಿಕವಾದುದರಿಂದ ಅಲ್ಲಿ ಉಪಾಧಿಮಾತ್ರವೇ ನಾಶವಾಗುತ್ತದೆ. (ಕಾಲಾಂಶಕ್ಕೆ ನಾಶವಿಲ್ಲ.) ಈ ಆಕ್ಷೇಪ ಸರಿಯಲ್ಲ—ಉಪಾಧಿವಿಶಿಷ್ಟ ಕಾಲಾಂಶವೇ ಕ್ಷಣ. ವಿಶೇಷಣವಾದ ಉಪಾಧಿಗೆ ನಾಶಬಂದಾಗ ತದ್ವಿಶಿಷ್ಟವಾದ ಕ್ಷಣವೂ ನಾಶವಾಗುತ್ತದೆ. ವಸ್ತುತಃ ಅಂಶಗಳು ಔಪಾಧಿಕಗಳಲ್ಲ, ಸ್ವಾಭಾವಿಕ. ಉಪಾಧಿಯು ವಿದ್ಯಮಾನಾಂಶಕ್ಕೆ ಜ್ಞಾಪಕವೇ ಹೊರತು, ಅವಿದ್ಯಮಾನಕ್ಕೆ ಕಾರಕವಲ್ಲ, ಎಂದು ಉಪಾಧಿಖಂಡನದಲ್ಲಿ ನಿರಾಕರಿಸಿರುವುದರಿಂದ ಕ್ಷಣಾದ್ಯಂಶಗಳು ಸ್ವಾಭಾವಿಕವೇ ಆಗಿವೆ. ಅವುಗಳಿಗೆ ನಾಶವಿದೆ.

ಹಿಂದೆ ಖನನಾದಿಗಳಿಂದ ಪೃಥಿವಿಗೆ ನಾಶವು ಕಂಡಿದೆ, ಎಂದು ತಾರ್ಕಿಕರು ಹೇಳಿರುವುದೂ ಯುಕ್ತವಲ್ಲ, ಎಂದು 'ಖನಕಾದೇಃ' ಎಂಬ ಮೂಲದಲ್ಲಿ ಹೇಳಲಾಗಿದೆ. ಆ ಮೂಲದಲ್ಲಿ ಹೇಳಲಾದ ದೋಷ— ಖನಕನೇ ಖಂಡಕ್ಷಿತಿಗೆ ಕರ್ತನಾದುದರಿಂದ ಅಂಶತಃ ಸಿದ್ಧಸಾಧನತಾದೋಷ.

ಈ ಸಿದ್ಧಸಾಧನತಾವನ್ನು ಹೇಳಿ ಮಣಿಗ್ರಂಥದಲ್ಲಿ ಪರಿಹರಿಸಲಾಗಿದೆ— ಖನನಾದಿಗಳಿಂದ ಅವಯವವಿಭಾಗಾತ್ ಮಹಾಪೃಥಿವೀ ನಾಶವಾಗಿ ಖಂಡಪೃಥಿಯ ಉತ್ಪತ್ತಿಗೆ ಖನಕಾದಿಜೀವರೇ ಕರ್ತೃಗಳು. ಸಮುದ್ರಕ್ಕೆ ಜಲಪ್ರಕ್ಷೇಪಮಾಡಿದಾಗ ಮಹಾಸಮುದ್ರ ಉತ್ಪತ್ತಿಯೂ ನಮ್ಮಿಂದಲೇ ಆಗುತ್ತದೆ. ಕೈ ಅಲುಗಾಡಿಸಿದಾಗ ಪರಮಾಣುಗಳು ಒಂದಕ್ಕೊಂದು ಸಂಯೋಗವಾಗಿ ದ್ವ್ಯಣುಕವು ಉತ್ಪತ್ತಿಯಾದಾಗ ಅದಕ್ಕೂ ನಾವೇ ಕರ್ತೃಗಳು. ಆದ್ದರಿಂದ ಅಂಶೇ ಸಿದ್ಧಸಾಧನತಾ.

ಇದಕ್ಕೆ ಮಣಿಕಾರನ ಪರಿಹಾರ—ಅಗೆಯುವವನು ಮಹಾಪೃಥಿಯ ನಾಶಕ್ಕಷ್ಟೇ ಕರ್ತೃ, ಖಂಡಪೃಥಿವಿಯ ಉತ್ಪತ್ತಿಗಲ್ಲ. ಅಗೆದು ಹಾಕಿ ಉಳಿದ ಅವಯವಗಳ ಸಂಯೋಗಗಳಿಂದಲೇ

ಖಂಡಪೃಥಿವೀ ಉತ್ಪತ್ತಿಯಾಗಿದೆ. ಆದಕ್ಕೆ ಈಶನೇ ಕರ್ತೃ. ಜೀವನಿಗೆ ಆ ಖಂಡಪೃಥಿವಿಗೆ ಕಾರಣವಾದ ಉಪಾದಾನಗಳ ಜ್ಞಾನವಿಲ್ಲ. ಆದ್ದರಿಂದಲೇ ಹಸ್ತಚಾಲನೆಯಿಂದ ಹುಟ್ಟಿದ ದ್ವ್ಯಣುಕಕ್ಕೂ ನಾವು ಕರ್ತೃಗಳಲ್ಲ. ಇನ್ನು ಜಲಪ್ರಕ್ಷೇಪದಿಂದ ಹುಟ್ಟಿದ ಮಹಾಸಮುದ್ರಕ್ಕೆ ನಾವೇ ಕರ್ತೃಗಳಾದರೂ ಅದು ಪಕ್ಷಕೋಟಿಯಲ್ಲಿ ಸೇರಿಲ್ಲ, ಘಟಾದಿಗಳಂತೆ ಅದೂ ಸಪಕ್ಷ. ಇದು ಮಣಿಗ್ರಂಥದಲ್ಲಿ ಹೇಳಿರುವ ವಿಷಯ.

ಇದು ಸರಿಯಲ್ಲ. ಹೀಗಾದರೆ ಅಖಂಡ ಕ್ಷಿತಿನಾಶಕ್ಕೂ ಜೀವನು ಕರ್ತೃವಾಗಲಾರ. ಅದರ ಉಪಾದಾನಗಳ ಪರಿಚಯವೂ ಜೀವನಿಗಿಲ್ಲ. ನಾಶಕ್ಕೆ ಜೀವನೇ ಕರ್ತೃವೆಂದು ಪ್ರತ್ಯಕ್ಷವೆನ್ನುವುದಾದಲ್ಲಿ ಖಂಡಕ್ಷಿತಿಯ ಉತ್ಪತ್ತಿಗೂ ಅವನೇ ಕರ್ತನೆಂದೂ ಪ್ರತ್ಯಕ್ಷ ಸಿದ್ಧವಾಗಿದೆ. ಅನುಭವದ ವಿರೋಧವು ಎರಡಕ್ಕೂ ಸಮಾನ.

ಖನಕನು ಕ್ಷಿತಿಯ ಒಂದು ಭಾಗವನ್ನು ಮಾತ್ರ ನಾಶಮಾಡುತ್ತಾನೆ, ಅಖಂಡ ಕ್ಷಿತಿಗೆ ನಾಶಕನಲ್ಲ, ಎನ್ನುವುದಾದಲ್ಲಿ ಅಖಂಡಕ್ಷಿತಿಗೆ ನಾಶವಿಲ್ಲದುದರಿಂದ ಉತ್ಪತ್ತಿಯನ್ನೂ ಅನುಮಾನ ಮಾಡಲಾಗದು. ಕಾರ್ಯತ್ವಹೇತುವು ಅಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದ ಮೂಲದಲ್ಲಿ ಪ್ರತ್ಯಭಿಜ್ಞಾವಿರೋಧವನ್ನು ಹೇಳಲಾಗಿದೆ. ಮಹಾಪೃಥಿವಿಯ ನಾಶವು ಐಕ್ಯಪ್ರತ್ಯಭಿಜ್ಞಾಕ್ಕೆ ವಿರುದ್ಧ. ಆದ್ದರಿಂದ, ಆದಕ್ಕೆ ನಾಶವಿಲ್ಲ, ಅದರಿಂದಾಗಿಯೇ ಉತ್ಪತ್ತಿ ಇಲ್ಲ, ಎಂದು ಆ ವಾಕ್ಯದ ಅಭಿಪ್ರಾಯ.

## ನ್ಯಾಯದೀಪ

**एवं सावयवत्वं सांशत्वादिरूपेण विकल्प्य व्यभिचारासिद्ध्यन्यथासिद्धय उक्ताः । अस्तु सावयवत्वं यत्किञ्चित् । अथापि तर्कपराहतिः। सावयवत्वात् क्षित्यादिकं कार्यं चेत् अनुपलब्धप्राक्कोटित्वादकार्यमपि स्याद् गगनवत् इति भावेन तत्संवादोक्त्या व्यनक्ति—तदिति । क्षित्यादौ कार्यत्वानुमानं तर्कपराहतमित्येतत् ''नचानुमानात् तत्सिद्धिः विपर्ययेणाप्यनुमातुं शक्यत्वात्'' इति तत्वनिर्णये उक्तमित्यर्थः ।**

**प्रकृतोपयोगितया तद्वाक्यार्थमाह—अस्मदिति । पूर्ववाक्यस्य तु सावयवत्वानुमानात् क्षित्यादौ कार्यत्वसिद्धिरिति नच वाच्यमित्यर्थ इति भावः । एतेन कार्यत्वास्यासिद्ध्युक्तिपरटीका मूलारूढेति दर्शितम् ।।**

ಇದುವರೆಗೆ ಸಾವಯವತ್ವವೆಂದರೇನು, ಎಂದು ಅನೇಕ ವಿಕಲ್ಪಗಳನ್ನು ಮಾಡಿ ಆ ವಿಕಲ್ಪಗಳಿಗೆ ವ್ಯಭಿಚಾರ-ಅಸಿದ್ಧಿ-ಅನ್ಯಥಾಸಿದ್ಧಿದೋಷಗಳನ್ನು ಹೇಳಲಾಗಿದೆ. ಪ್ರಕೃತ, ಕಾರ್ಯತ್ವವು ಏನೇ ಆಗಿರಲಿ. ಕಾರ್ಯತ್ವಸಾಧಕಾನುಮಾನಕ್ಕೆ ತರ್ಕವಿರೋಧವಿದೆ. ಹೇಗೆಂದರೆ, ಸಾವಯವವಾದ ಕಾರಣ ಕ್ಷಿತ್ಯಾದಿಗಳು ಕಾರ್ಯವಾಗುವುದಾದಲ್ಲಿ ಅವುಗಳ ಪ್ರಾಗಭಾವವು ಅನುಪಲಬ್ಧವಾದುದರಿಂದ, ಗಗನದಂತೆ, ಅಕಾರ್ಯವೂ ಆಗಬಹುದು. ಈ ತರ್ಕವಿರೋಧವನ್ನು ಆಚಾರ್ಯರ ವಾಕ್ಯದ ಸಂವಾದವನ್ನು ತೋರಿಸಿ ''ತದುಕ್ತಂ'' ಎಂಬ ಮೂಲದಲ್ಲಿ ಸ್ಪಷ್ಟಪಡಿಸಲಾಗಿದೆ. ಆ ಮೂಲದ ಅರ್ಥ-ಕ್ಷಿತ್ಯಾದಿಗಳಲ್ಲಿ ಕಾರ್ಯತ್ವವನ್ನು ಸಾಧಿಸುವ ಅನುಮಾನವು ತರ್ಕದಿಂದ ಪರಾಹತವಾಗಿದೆ, ಎನ್ನುವುದನ್ನು ಆಚಾರ್ಯರು ತತ್ತ್ವನಿರ್ಣಯದ ''ನ ಚಾನುಮಾನಾತ್'' ಎಂಬ ವಾಕ್ಯದಲ್ಲಿ ಹೇಳಿದ್ದಾರೆ, ಎಂದು.

ತತ್ತ್ವನಿರ್ಣಯದ ಆ ವಾಕ್ಯಕ್ಕೆ ಇನ್ನೊಂದು ಅರ್ಥವನ್ನು ಟೀಕೆಯಲ್ಲಿ ಹೇಳಲಾಗಿದೆ. ಅದೇ ವಾಕ್ಯಕ್ಕೆ ಪ್ರಕೃತಸಂಗತವಾಗುವ ಅರ್ಥಾಂತರವನ್ನು ಮೂಲದಲ್ಲಿ ಹೇಳಲಾಗಿದೆ. ನಿರ್ಣಯದಲ್ಲಿರುವ ''ವಿಪರ್ಯಯೇಣಾಪಿ'' ಎಂಬ ವಾಕ್ಯಕ್ಕಿಂತ ಪೂರ್ವವಾಕ್ಯ- 'ನ ಚಾನುಮಾನಾತ್ ತತ್ಸಿದ್ಧಿಃ' ಎಂದಿದೆ. ಅದರ ಅರ್ಥ—ಸಾವಯವತ್ವಹೇತುವಿನಿಂದ ಕ್ಷಿತ್ಯಾದಿಗಳಿಗೆ ಕಾರ್ಯತ್ವವು ಸಿದ್ಧವಾಗುತ್ತದೆ, ಎಂದು ಹೇಳಬಾರದು, ಎಂದು.

ತತ್ತ್ವನಿರ್ಣಯಟೀಕಾದಲ್ಲಿ 'ಕಾಯತ್ವಂ ಕುತಃ ಸಿದ್ಧಮ್' ಎಂದು ಈಶ್ವರಸಾಧಕಾನುಮಾನಕ್ಕೆ ಅಸಿದ್ಧಿದೋಷವನ್ನು ಹೇಳಲಾಗಿದೆ. ಅದು ತರ್ಕತಾಂಡದಲ್ಲಿ ಹೇಳಿರುವ ಈ ಹೊಸ ಅರ್ಥದಿಂದ ಮೂಲಾರೂಢವಾದಂತಾಗಿದೆ.

## ಅವತಾರಿಕೆ

**ननु सावयवत्वकार्यत्वयोर्घटादिषु भूयः सहचारदर्शनात् प्राक्कोटिरप्यस्ति क्षित्यादेरित्यनुमीयत इत्यसिद्धो हेतुरिति चेत्; तत् किमन्यथानुपपत्तिरूपानुकूलतर्कसहितं सहचारदर्शनं, केवलं वा। नाद्यः। अन्यथोपपत्तेरुक्तत्वात्। नान्त्यः। अतिप्रसङ्गादित्याह—किं चेति।**

'ಪ್ರಾಕ್ಕೋಟಿಯು' ಅನುಪಲಬ್ಧವಾದುದರಿಂದ ಕ್ಷಿತ್ಯಾದಿಗಳು ಕಾರ್ಯವಲ್ಲ, ಎಂದು ಸಾಧಿಸುವುದು ಸರಿಯಲ್ಲ. ಕ್ಷಿತ್ಯಾದಿಗಳ ಪ್ರಾಕ್ಕೋಟಿಯನ್ನು ಅನುಮಾನ ಮಾಡಬಹುದು. ಸಾವಯವತ್ವ ಹೇತುವಿಗೂ ಕಾರ್ಯತ್ವಕ್ಕೂ ಘಟಾದಿ ಅನೇಕ ವಸ್ತುಗಳಲ್ಲಿ ಸಹಚಾರವು ದೃಷ್ಟವಾಗಿದೆ.

ಅಂತಹ ಸಾವಯವತ್ವ ಹೇತುವಿನಿಂದಲೇ ಪ್ರಾಕ್ಕೋಟಿಯನ್ನೂ ಅನುಮಾನಮಾಡಬೇಕು. ಆದ್ದರಿಂದ ಅಕಾರ್ಯತ್ವಸಾಧಕವಾದ ಪ್ರತಿಪಕ್ಷಾನುಮಾನದ ಹೇತುವು ಅಸಿದ್ಧ.

ಹೀಗೆ ಹೇಳುವುದು ಯುಕ್ತವಲ್ಲ. ಅನ್ಯಥಾನುಪಪತ್ತಿರೂಪವಾದ ಅನುಕೂಲತರ್ಕಸಹಿತವಾದ ಸಹಚಾರದರ್ಶನದಿಂದ ವ್ಯಾಪ್ತಿಯು ನಿರ್ಧಾರಿತವಾಗುವುದೋ, ಕೇವಲ ಸಹಚಾರದರ್ಶನ ಮಾತ್ರದಿಂದಲೋ? ಮೊದಲನೆಯಪಕ್ಷವು ಸರಿಯಲ್ಲ. ಹಿಂದೆ ಹೇಳಿದಂತೆ, ಗಗನಾದಿಗಳಲ್ಲಿರುವಂತೆ ಕಾರ್ಯತ್ವಂ ಅನ್ಯಥೈವ ಸಾಂಶತ್ವರೂಪ ಸಾವಯವತ್ವವು ಉಪಪನ್ನವಾಗುತ್ತದೆ. ಅನ್ಯಥಾನುಪಪತ್ತಿ ಇಲ್ಲ. ಎರಡನೆಯಪಕ್ಷವೂ ಸರಿಯಲ್ಲ. ಹಾಗೆ ಹೇಳಿದರೆ ಅತಿಪ್ರಸಂಗ ಇದೆ, ಎಂದು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किंच घटादौ दर्शनमात्रेण भूभूधरादेः सावयवत्वेन कार्यत्वानुमाने रूपादौ दर्शनमात्रेण परमाण्वादेः सावयवत्वविपर्ययेण निरवयवत्वेन कार्यत्वानुमानं किं न स्यात् ।**

**एतदप्युक्तम् ''विपर्ययेणेति'' ॥**

ಘಟಾದಿಗಳಲ್ಲಿ ಸಾವಯವತ್ವದ ಜೊತೆಯಲ್ಲಿ ಕಾರ್ಯತ್ವವೂ ಕಂಡಿದೆ ಎನ್ನುವ ಮಾತ್ರದಿಂದ ಭೂ-ಭೂಧರಾದಿಗಳಲ್ಲೂ ಸಾವಯವತ್ವವನ್ನು ಹೇತುಮಾಡಿ ಕಾರ್ಯತ್ವವನ್ನು ಸಾಧನೆ ಮಾಡುವುದಾದಲ್ಲಿ ನಿರವಯತ್ವಹೇತುವಿನಿಂದ ಪರಮಾಣುಗಳಿಗೂ ಕಾರ್ಯತ್ವವನ್ನು ಸಾಧಿಸಬಹುದು. ರೂಪಾದಿಗುಣಗಳಲ್ಲಿ ನಿರವಯವತ್ವಕ್ಕೂ ಕಾರ್ಯತ್ವಕ್ಕೂ ಸಹಚಾರ ಕಂಡಿದೆ. ಆದ್ದರಿಂದ 'ಪರಮಾಣುಃ ಕಾರ್ಯಃ, ನಿರವಯವತ್ವಾತ್, ರೂಪವತ್' ಎಂಬ ಅನುಮಾನ ಮಾಡಿ ಪರಮಾಣುಗಳಿಗೂ ಕಾರ್ಯತ್ವವನ್ನು ಸಾಧನೆ ಮಾಡಬೇಕಾದ ಪ್ರಸಂಗ ಬಂದೀತು. ಸಾವಯವವಾದ ಘಟಾದಿಗಳು ಕಾರ್ಯವಾಗಿ ಕಂಡಂತೆ ನಿರವಯವವಾದ ರೂಪಾದಿಗಳೂ ಕಾರ್ಯವಾಗಿವೆ.

ಇದನ್ನೂ ತತ್ತ್ವನಿರ್ಣಯದ 'ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್' ಎಂಬ ಆಚಾರ್ಯರ ವಾಕ್ಯವೇ ಹೇಳುತ್ತದೆ. ಸಾವಯವತ್ವವಿಪರ್ಯವಾದ ನಿರವಯವತ್ವಹೇತುವಿನಿಂದಲೂ ಕಾರ್ಯತ್ವವನ್ನು ಸಾಧಿಸಲು ಶಕ್ಯವಿದೆ, ಎಂದು.

## ನ್ಯಾಯದೀಪ

मूलवाक्यं विवृण्वन्नेवाह—**सावयवत्वविपर्ययेणेति** । फलितमाह—**निरवयवत्वेनेति** ॥

**नच गगनादौ व्यभिचारः शङ्क्यः। कार्यातिरिक्तस्य सर्वस्यापि विप्रतिपत्त्या पक्षत्वात्। अत एव परमाण्वादेरित्युक्तिः। नच परमाणुकालाकाशादेः कार्यत्वे कारणान्तरमपि तस्योपेयम्, तस्याप्येवमित्यनवस्थापत्त्यादिदोष इति वाच्यम्। बीजाङ्कुरवदुपपत्तेः। प्रलयस्य च निरीश्वरवादिनोऽसंमतेः। निरवयवमध्ये कस्यचिदकार्यस्य, कस्यचित् कार्यस्योपगमवत् कस्यचित् सावयवस्यैवाकार्यस्याभ्युपेयत्वाच्च। निरवयवं द्रव्यमकार्यमेवेति चेत् निरवयवं वस्तु कार्यमेव रूपादिवदित्युपपत्तेः।**

**नन्ववयवाभावे तत्समवेतत्वरूपकार्यत्वं बाधितमिति चेत्; रूपादिवदेवोपपत्तेः। द्रव्यस्यायं नियम इति चेत् तस्यैव निरस्यत्वात्। समवायस्याग्रे निरसिष्यमाणत्वेन परिणामत्वेनैव कार्यत्वोपपत्तेश्चेत्यादि ज्ञेयमिति भावः। एतदपीति। निरवयवत्वेन परमाण्वादेः कार्यत्वानुमानमित्यर्थः॥**

ತತ್ತ್ವನಿರ್ಣಯದ 'ವಿಪರ್ಯಯೇಣಾಪಿ' ಎಂಬ ಶಬ್ದದ ವಿವರಣೆ ಮೂಲದಲ್ಲಿ ಸಾವಯವತ್ವವಿಪರ್ಯಯೇಣ, ಎಂದು. ಅದರ ಫಲಿತಾರ್ಥ–'ನಿರವಯವತ್ವೇನ' ಎಂದು.

**ಆಕ್ಷೇಪ**—ನಿರವಯವತ್ವಹೇತುವಿನಿಂದ ಕಾರ್ಯತ್ವವನ್ನು ಸಾಧನೆ ಮಾಡಿದರೆ ಗಗನದಲ್ಲಿ ವ್ಯಭಿಚಾರಬರುತ್ತದೆ. ತಾರ್ಕಿಕರ ಮತದಂತೆ ಗಗನವೂ ನಿರವಯವ. ಆದರೆ, ಅದು ಕಾರ್ಯವಲ್ಲ.

**ಸಮಾಧಾನ**—ಕಾರ್ಯವಲ್ಲದ, ವಿಪ್ರತಿಪನ್ನವಾದ ಎಲ್ಲವೂ ಪಕ್ಷಕೋಟಿಯಲ್ಲಿ ಸೇರಿದೆ. ಗಗನವೂ ಪಕ್ಷಪ್ರವಿಷ್ಟ. ಅಲ್ಲಿ ವ್ಯಭಿಚಾರವು ದೋಷವಲ್ಲ. ಅದಕ್ಕಾಗಿಯೇ ಮೂಲದಲ್ಲಿ 'ಪರಮಾಣ್ವಾದೇಃ' ಎಂದು ಆದಿಪದವಿದೆ.

**ಆಕ್ಷೇಪ**—ಪರಮಾಣು–ಕಾಲ–ಆಕಾಶಗಳೆಲ್ಲವೂ ಕಾರ್ಯಗಳಾದರೆ ಅವುಗಳಿಗೆ ಕಾರಣವಾದ ವಸ್ತ್ವಂತರಗಳನ್ನು ಹೇಳಬೇಕು. ಅವುಗಳೂ ನಿರವಯವವಾದರೆ ಮತ್ತೆ ಕಾರ್ಯಗಳಾಗುತ್ತವೆ. ಅದಕ್ಕೆ ಮತ್ತೊಂದು ಕಾರಣ, ಅದಕ್ಕೂ ಕಾರ್ಯತ್ವ, ಹೀಗೆ ಅನವಸ್ಥಾದೋಷ ಬರುತ್ತದೆ.

**ಸಮಾಧಾನ**—ಬಂದರೇನಂತೆ. ವೃಕ್ಷ–ಬೀಜಪರಂಪರೆಯಂತೆ ಈ ಅನವಸ್ಥಾ ದೋಷವೇ

**ಆಕ್ಷೇಪ**—ಭೂ-ಭೂಧರಾದಿಗಳು ಅಕಾರ್ಯಗಳಾದರೆ, ಅವುಗಳಿಗೆ ನಾಶವಿಲ್ಲವಾದುದ ರಿಂದ ಪ್ರಲಯವೇ ಇಲ್ಲವಾದೀತು.

**ಸಮಾಧಾನ**—ಈಶ್ವರಾನುಮಾನಕ್ಕೆ ಮೀಮಾಂಸಕರು ಪ್ರತಿಪಕ್ಷಿಗಳು. ಅವರಿಗೆ ಈ ಆಪತ್ತಿ ಇಷ್ಟವೇ. ಅವರು ಪ್ರಲಯವು ಇಲ್ಲವೆಂದೇ ಅಂಗೀಕರಿಸುತ್ತಾರೆ.[1]

ಅಥವಾ, ನಿರವಯವವಾದ ರೂಪಾದಿಗಳು ಕಾರ್ಯಗಳು, ಪರಮಾಣು-ಆಕಾಶಾದಿಗಳು ಅಕಾರ್ಯಗಳು ಎಂದು ನೈಯಾಯಿಕರು ವಿಭಾಗ ಮಾಡಿದ್ದಾರೆ. ಇದರಂತೆ, ಸಾವಯವ ವಸ್ತುಗಳಲ್ಲೂ ಕೆಲವು ಕಾರ್ಯಗಳು, ಕೆಲವು ಅಕಾರ್ಯಗಳು ಎಂದು ಎರಡು ಗುಂಪನ್ನು ಮಾಡಿದರಾಯ್ತು. ಘಟಾದಿಗಳು ಕಾರ್ಯಗಳು, ಭೂಭೂಧರಾದಿಗಳು ಅಕಾರ್ಯಗಳು, ಎಂದೂ ಹೇಳಬಹುದು.

**ಆಕ್ಷೇಪ**—ನಿರವಯವವಾದ ದ್ರವ್ಯವು ಅಕಾರ್ಯವೇ ಆಗಿರುತ್ತದೆ. ಆದ್ದರಿಂದ ಆಕಾಶಾದಿಗಳಿಗೆ ರೂಪದಂತೆ ನಿರವಯವತ್ವದಿಂದ ಕಾರ್ಯತ್ವವನ್ನು ಸಾಧಿಸಲಾಗದು.

**ಸಮಾಧಾನ**—ನಿರವಯವಯವವಾದ ವಸ್ತುವು ರೂಪಾದಿಗಳಂತೆ ಕಾರ್ಯವೇ ಆಗಿರುತ್ತದೆ. ಗಗನವೂ ನಿರವಯವವಾದ ಕಾರಣ, ಕಾರ್ಯವೇ ಆಗಬೇಕು. ಹೀಗೂ ಹೇಳಬಹುದು.

**ಆಕ್ಷೇಪ**—ನಿರವಯವ ವಸ್ತುವು ಕಾರ್ಯವಾಗಲು ಸಾಧ್ಯವಿಲ್ಲ, ಕಾರ್ಯವಸ್ತುವು ಅವಯವಸಮುವೇತವಾಗಿರಬೇಕು. ಅವಯವವೇ ಇಲ್ಲದ ವಸ್ತುವಿಗೆ ಅವಯವಸಮವೇತತ್ವರೂಪ ಕಾರ್ಯತ್ವವು ಬಾಧಿತ.

**ಸಮಾಧಾನ**—ಹೀಗೇನೂ ನಿಯಮವಿಲ್ಲ. ರೂಪವು ನಿರವಯವವಾಗಿದೆ. ಆದ್ದರಿಂದಲೇ ಅದು ಅವಯವಸಮವೇತವಾಗಿಲ್ಲ. ಆದರೂ ಅದು ಕಾರ್ಯವೆನಿಸಿದೆ.

**ಆಕ್ಷೇಪ**—ದ್ರವ್ಯದಲ್ಲಿ ಮಾತ್ರ ಈ ನಿಯಮ. ಕಾರ್ಯದ್ರವ್ಯವು ಅವಯವಸಮವೇತ ವಾಗಿರಬೇಕು, ಎಂದು. ರೂಪ ಗುಣ. ಅದಕ್ಕೆ ಈ ನಿಯಮ ಅನ್ವಯಿಸುವುದಿಲ್ಲ.

**ಸಮಾಧಾನ**—ಇದೇ ಪ್ರಕೃತದಲ್ಲಿ ವಿವಾದಾಸ್ಪದವಾದ ವಿಷಯ. ನಿರವಯವವಾದ ರೂಪದಂತೆ ನಿರವಯವ ದ್ರವ್ಯವೂ ಕಾರ್ಯವಾಗಲಿ, ಎಂದು ಆಕ್ಷೇಪಿಸುವ ಪೂರ್ವಪಕ್ಷಿಯು ಕಾರ್ಯದ್ರವ್ಯವು ಅವಯವಸಮವೇತವೇ ಆಗಿರುತ್ತದೆ, ಎಂಬ ನಿಯಮವನ್ನೇ ಆಕ್ಷೇಪಿಸುತ್ತಾನೆ. ಅದನ್ನು ಅವನು ಅಂಗೀಕರಿಸುವುದಿಲ್ಲ.

---

1. **ನ್ಯಾಯದೀಪದ ಮುದ್ರಿತಪಾಠ— ''ಪ್ರಲಯಸ್ಯ ಚ ನಿರೀಶ್ವರವಾದಿನೋ ಸಮ್ಮತೇಃ'' ಎಂದಿದೆ. ಇದನ್ನು ಸಂದರ್ಭಕ್ಕೆ ಅನುಗುಣವಾಗಿ ''ಅಸಮ್ಮತೇಃ'' ಎಂದು ಪದಚ್ಛೇದ ಮಾಡಲಾಗಿದೆ. ಮೀಮಾಂಸಕರು ಪ್ರಲಯವನ್ನು ಅಂಗೀಕರಿಸುವುದಿಲ್ಲ.**

प्रलयेऽपि प्रमाणं नः सर्वोच्छेदात्मके नहि ।। (कुमारिल-श्लोकवार्तिक-तर्कपादः ।)

ಮುಂದೆ ಸಮವಾಯವೇ ಇಲ್ಲವೆಂದು ಸಾಧನೆ ಮಾಡುವುದರಿಂದ 'ಪರಿಣಾಮತ್ವಂ ಕಾರ್ಯತ್ವಂ' ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ ಅವಯವಸಮವೇತತ್ವಂ ಕಾರ್ಯತ್ವಂ, ಎನ್ನುವುದು ಸರಿಯಲ್ಲ.

ಮೂಲದಲ್ಲಿ ಹೇಳಿರುವ ವಿಷಯಗಳೊಂದಿಗೆ ಈ ಎಲ್ಲ ವಿಷಯಗಳನ್ನೂ ತಿಳಿಯಬೇಕು.

## ಅಪ್ರಯೋಜಕತ್ವಶಂಕೆ

### ಅವತಾರಿಕೆ

एवं कार्यत्वस्यासिद्धिमुक्त्वा व्याप्त्यभावोपपादनाय ''कारणाभावप्रयुक्तत्वात् कार्याभावस्य'' इत्यादिना टीकोक्तमनुकूलतर्काभावं प्रपञ्चयंस्तदपि मूलारूढं दर्शयति—**किंचेत्यादिना एतदप्युक्तमित्यन्तेन ।**

ಇದುವರೆಗೆ ಈಶ್ವರಸಾಧಕಾನುಮಾನದಲ್ಲಿ ಅಸಿದ್ಧಿದೋಷವನ್ನು ಹೇಳಲಾಗಿದೆ. ಮುಂದಿನ ಗ್ರಂಥದಲ್ಲಿ ಕಾರ್ಯತ್ವಹೇತುವಿನಲ್ಲಿ ವ್ಯಾಪ್ತಿ ಇಲ್ಲ, ಎಂದು ಸಮರ್ಥಿಸುವುದಕ್ಕಾಗಿ ಅನುಕೂಲತರ್ಕ ಇಲ್ಲ, ಎಂದು ವಿವರಿಸಿ, ಅದನ್ನೂ ಆಚಾರ್ಯರ ವಾಕ್ಯದಲ್ಲೇ ಹೇಳಲಾಗಿದೆ ಎಂದು ತೋರಿಸುತ್ತಾರೆ.

ಇದನ್ನು ತತ್ತ್ವನಿರ್ಣಯಟೀಕೆಯಲ್ಲಿ ಈಶ್ವರಾನುಮಾನನಿರಾಸ ಸಂದರ್ಭದಲ್ಲಿ ಹೀಗೆ ಹೇಳಲಾಗಿದೆ– ''ಭೂಭೂಧರಾದಿಗಳಿಗೆ ಕರ್ತೃವೇ ಇಲ್ಲದಿದ್ದರೆ ಅಂತಹ ಕಾರ್ಯವಸ್ತುಗಳೇ ಇಲ್ಲವೆಂವಾದೀತು, ಎಂದು ನೈಯಾಯಿಕರು ಬಾಧಕ ತರ್ಕವನ್ನು ಹೇಳುವಂತಿಲ್ಲ. ಕಾರ್ಯಾಭಾವಕ್ಕೆ ಕರ್ತೃವಿನ ಅಭಾವವು ಪ್ರಯೋಜಕವಲ್ಲ. ಕಾರಣಸಾಮಾನ್ಯಾಭಾವವೇ ಪ್ರಯೋಜಕ. ಕರ್ತೃ ಕಾರಣವಿಶೇಷ. ತದಭಾವಾತ್ ಕಾರ್ಯಾಭಾವವನ್ನು ಆಪಾದಿಸಿದರೆ, ಕರ್ಮರೂಪಕಾರಕ ವಿಶೇಷಾಭಾವಾತ್ ಆಸನ–ಶಯನಾದಿಕಾರ್ಯಗಳೂ ಇಲ್ಲವೆನ್ನಬೇಕಾದೀತು. ಕರ್ಮವು ಸಾರ್ವತ್ರಿಕವಲ್ಲ, ಕರ್ತೃ ಸಾರ್ವತ್ರಿಕ ಎಂಬ ವಿಶೇಷ ಭೂಭೂಧರಾದಿಗಳಿಗೆ ಕರ್ತೃಸಿದ್ಧವಾದ ಮೇಲೆ ನಿರ್ಣಯಿಸಬಹುದಾದ ವಿಷಯ''.

**किञ्च, कर्त्रभावेऽपि कार्यत्वस्य सकारणकत्वमात्रेणोपपन्नत्वेनाप्रयोजकता । अन्यथा कर्मादिकारकविशेषाभावेन आसनशयनादिकार्यं न स्यात् ।**

**ಆಕ್ಷೇಪ**—ಭೂ-ಭೂಧರಾದಿಗಳು ಅಕಾರ್ಯಗಳಾದರೆ, ಅವುಗಳಿಗೆ ನಾಶವಿಲ್ಲವಾದುದರಿಂದ ಪ್ರಲಯವೇ ಇಲ್ಲವಾದೀತು.

**ಸಮಾಧಾನ**—ಈಶ್ವರಾನುಮಾನಕ್ಕೆ ಮೀಮಾಂಸಕರು ಪ್ರತಿಪಕ್ಷಿಗಳು. ಅವರಿಗೆ ಈ ಆಪತ್ತಿ ಇಷ್ಟವೇ. ಅವರು ಪ್ರಲಯವು ಇಲ್ಲವೆಂದೇ ಅಂಗೀಕರಿಸುತ್ತಾರೆ.[1]

ಅಥವಾ, ನಿರವಯವವಾದ ರೂಪಾದಿಗಳು ಕಾರ್ಯಗಳು, ಪರಮಾಣು-ಆಕಾಶಾದಿಗಳು ಅಕಾರ್ಯಗಳು ಎಂದು ನೈಯಾಯಿಕರು ವಿಭಾಗ ಮಾಡಿದ್ದಾರೆ. ಇದರಂತೆ, ಸಾವಯವ ವಸ್ತುಗಳಲ್ಲೂ ಕೆಲವು ಕಾರ್ಯಗಳು, ಕೆಲವು ಅಕಾರ್ಯಗಳು ಎಂದು ಎರಡು ಗುಂಪನ್ನು ಮಾಡಿದರಾಯ್ತು. ಘಟಾದಿಗಳು ಕಾರ್ಯಗಳು, ಭೂಭೂಧರಾದಿಗಳು ಅಕಾರ್ಯಗಳು, ಎಂದೂ ಹೇಳಬಹುದು.

**ಆಕ್ಷೇಪ**—ನಿರವಯವವಾದ ದ್ರವ್ಯವು ಅಕಾರ್ಯವೇ ಆಗಿರುತ್ತದೆ. ಆದ್ದರಿಂದ ಆಕಾಶಾದಿಗಳಿಗೆ ರೂಪದಂತೆ ನಿರವಯವತ್ವದಿಂದ ಕಾರ್ಯತ್ವವನ್ನು ಸಾಧಿಸಲಾಗದು.

**ಸಮಾಧಾನ**—ನಿರವಯವಯವವಾದ ವಸ್ತುವು ರೂಪಾದಿಗಳಂತೆ ಕಾರ್ಯವೇ ಆಗಿರುತ್ತದೆ. ಗಗನವೂ ನಿರವಯವವಾದ ಕಾರಣ, ಕಾರ್ಯವೇ ಆಗಬೇಕು. ಹೀಗೂ ಹೇಳಬಹುದು.

**ಆಕ್ಷೇಪ**—ನಿರವಯವ ವಸ್ತುವು ಕಾರ್ಯವಾಗಲು ಸಾಧ್ಯವಿಲ್ಲ, ಕಾರ್ಯವಸ್ತುವು ಅವಯವಸಮವೇತವಾಗಿರಬೇಕು. ಅವಯವವೇ ಇಲ್ಲದ ವಸ್ತುವಿಗೆ ಅವಯವಸಮವೇತತ್ವರೂಪ ಕಾರ್ಯತ್ವವು ಬಾಧಿತ.

**ಸಮಾಧಾನ**—ಹೀಗೇನೂ ನಿಯಮವಿಲ್ಲ. ರೂಪವು ನಿರವಯವವಾಗಿದೆ. ಆದ್ದರಿಂದಲೇ ಅದು ಅವಯವಸಮವೇತವಾಗಿಲ್ಲ. ಆದರೂ ಅದು ಕಾರ್ಯವೆನಿಸಿದೆ.

**ಆಕ್ಷೇಪ**—ದ್ರವ್ಯದಲ್ಲಿ ಮಾತ್ರ ಈ ನಿಯಮ. ಕಾರ್ಯದ್ರವ್ಯವು ಅವಯವಸಮವೇತವಾಗಿರಬೇಕು, ಎಂದು. ರೂಪ ಗುಣ. ಅದಕ್ಕೆ ಈ ನಿಯಮ ಅನ್ವಯಿಸುವುದಿಲ್ಲ.

**ಸಮಾಧಾನ**—ಇದೇ ಪ್ರಕೃತದಲ್ಲಿ ವಿವಾದಾಸ್ಪದವಾದ ವಿಷಯ. ನಿರವಯವವಾದ ರೂಪದಂತೆ ನಿರವಯವ ದ್ರವ್ಯವೂ ಕಾರ್ಯವಾಗಲಿ, ಎಂದು ಆಕ್ಷೇಪಿಸುವ ಪೂರ್ವಪಕ್ಷಿಯು ಕಾರ್ಯದ್ರವ್ಯವು ಅವಯವಸಮವೇತವೇ ಆಗಿರುತ್ತದೆ, ಎಂಬ ನಿಯಮವನ್ನೇ ಆಕ್ಷೇಪಿಸುತ್ತಾನೆ. ಅದನ್ನು ಅವನು ಅಂಗೀಕರಿಸುವುದಿಲ್ಲ.

---

1. **ನ್ಯಾಯದೀಪದ ಮುದ್ರಿತಪಾಠ— "ಪ್ರಲಯಸ್ಯ ಚ ನಿರೀಶ್ವರವಾದಿನೋ ಸಮ್ಮತೇಃ" ಎಂದಿದೆ. ಇದನ್ನು ಸಂದರ್ಭಕ್ಕೆ ಅನುಗುಣವಾಗಿ "ಅಸಮ್ಮತೇಃ" ಎಂದು ಪದಚ್ಛೇದ ಮಾಡಲಾಗಿದೆ. ಮೀಮಾಂಸಕರು ಪ್ರಲಯವನ್ನು ಅಂಗೀಕರಿಸುವುದಿಲ್ಲ.**

प्रलयेऽपि प्रमाणं नः सर्वोच्छेदात्मके नहि ।। (कुमारिल-श्लोकवार्तिक-तर्कपादः ।)

ಮುಂದೆ ಸಮವಾಯವೇ ಇಲ್ಲವೆಂದು ಸಾಧನೆ ಮಾಡುವುದರಿಂದ 'ಪರಿಣಾಮತ್ವಂ ಕಾರ್ಯತ್ವಂ' ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ ಅವಯವಸಮವೇತತ್ವಂ ಕಾರ್ಯತ್ವಂ, ಎನ್ನುವುದು ಸರಿಯಲ್ಲ.

ಮೂಲದಲ್ಲಿ ಹೇಳಿರುವ ವಿಷಯಗಳೊಂದಿಗೆ ಈ ಎಲ್ಲ ವಿಷಯಗಳನ್ನೂ ತಿಳಿಯಬೇಕು.

## ಅಪ್ರಯೋಜಕತ್ವಶಂಕೆ

### ಅವತಾರಿಕೆ

**एवं कार्यत्वस्यासिद्धिमुक्त्वा व्याप्त्यभावोपपादनाय ''कारणाभाव-प्रयुक्तत्वात् कार्याभावस्य'' इत्यादिना टीकोक्तमनुकूलतर्काभावं प्रपञ्चयंस्तदपि मूलारूढं दर्शयति—किंचेत्यादिना एतदप्युक्तमित्य-न्तेन ।**

ಇದುವರೆಗೆ ಈಶ್ವರಸಾಧಕಾನುಮಾನದಲ್ಲಿ ಅಸಿದ್ಧಿದೋಷವನ್ನು ಹೇಳಲಾಗಿದೆ. ಮುಂದಿನ ಗ್ರಂಥದಲ್ಲಿ ಕಾರ್ಯತ್ವಹೇತುವಿನಲ್ಲಿ ವ್ಯಾಪ್ತಿ ಇಲ್ಲ, ಎಂದು ಸಮರ್ಥಿಸುವುದಕ್ಕಾಗಿ ಅನುಕೂಲತರ್ಕ ಇಲ್ಲ, ಎಂದು ವಿವರಿಸಿ, ಅದನ್ನೂ ಆಚಾರ್ಯರ ವಾಕ್ಯದಲ್ಲೇ ಹೇಳಲಾಗಿದೆ ಎಂದು ತೋರಿಸುತ್ತಾರೆ.

ಇದನ್ನು ತತ್ತ್ವನಿರ್ಣಯಟೀಕೆಯಲ್ಲಿ ಈಶ್ವರಾನುಮಾನನಿರಾಸ ಸಂದರ್ಭದಲ್ಲಿ ಹೀಗೆ ಹೇಳಲಾಗಿದೆ– ''ಭೂಭೂಧರಾದಿಗಳಿಗೆ ಕರ್ತೃವೇ ಇಲ್ಲದಿದ್ದರೆ ಅಂತಹ ಕಾರ್ಯವಸ್ತುಗಳೇ ಇಲ್ಲವೆಂದಾದೀತು, ಎಂದು ನೈಯಾಯಿಕರು ಬಾಧಕ ತರ್ಕವನ್ನು ಹೇಳುವಂತಿಲ್ಲ. ಕಾರ್ಯಾಭಾವಕ್ಕೆ ಕರ್ತೃವಿನ ಅಭಾವವು ಪ್ರಯೋಜಕವಲ್ಲ. ಕಾರಣಸಾಮಾನ್ಯಾಭಾವವೇ ಪ್ರಯೋಜಕ. ಕರ್ತೃ ಕಾರಣವಿಶೇಷ. ತದಭಾವಾತ್ ಕಾರ್ಯಾಭಾವವನ್ನು ಆಪಾದಿಸಿದರೆ, ಕರ್ಮರೂಪಕಾರಕ ವಿಶೇಷಾಭಾವಾತ್ ಆಸನ–ಶಯನಾದಿಕಾರ್ಯಗಳೂ ಇಲ್ಲವೆನ್ನಬೇಕಾದೀತು. ಕರ್ಮವು ಸಾರ್ವತ್ರಿಕವಲ್ಲ, ಕರ್ತೃ ಸಾರ್ವತ್ರಿಕ ಎಂಬ ವಿಶೇಷ ಭೂಭೂಧರಾದಿಗಳಿಗೆ ಕರ್ತೃಸಿದ್ಧವಾದ ಮೇಲೆ ನಿರ್ಣಯಿಸಬಹುದಾದ ವಿಷಯ''.

**किञ्च, कर्त्रभावेऽपि कार्यत्वस्य सकारणकत्वमात्रेणोपपन्नत्वेना-प्रयोजकता । अन्यथा कर्मादिकारकविशेषाभावेन आसनशयनादिकार्यं न स्यात् ।**

**कर्मादिकं न सार्वत्रिकम् । कर्ता तु सार्वत्रिक इति चेन्न । तस्यैवाद्याप्यसिद्धेः । घटादौ दर्शनं तु सकर्तृकत्वस्येव शरीर-धर्माधर्म-सुखदुःख-स्वप्रयोजनापेक्षादिमज्जन्यत्वादेरप्यस्ति ।**

**एतदप्युक्तं ''विपर्ययेणेति'' । परानङ्गीकृतशरीरजन्यत्वादिनेत्यर्थः ।।**

ಕಾರ್ಯವಾದ ಮಾತ್ರಕ್ಕೆ ಕರ್ತೃ ಇರಲೇಬೇಕೆಂದಿಲ್ಲ. ಕರ್ತೃ ಇಲ್ಲದೇ ಹೋದರೂ ಇತರ ಕಾರಣಗಳಿಂದ ಕಾರ್ಯವು ಹುಟ್ಟಬಹುದು. ಆದ್ದರಿಂದ ಕ್ಷಿತ್ಯಾದಿಗಳು ಕಾರ್ಯವಾಗಿರುವುದರಿಂದ ಅವುಗಳಿಗೆ ಕರ್ತನಿದ್ದಾನೆ, ಎಂದು ಸಾಧಿಸಲು ಸಾಧ್ಯವಿಲ್ಲ. ಕಾರ್ಯತ್ವವು ಸಕರ್ತೃಕತ್ವಕ್ಕೆ ಪ್ರಯೋಜಕವಲ್ಲ. ಕಾರ್ಯವಾದುದರಿಂದ ಆ ಕಾರ್ಯವು ಸಕಾರಣಕವಾಗಿದೆ, ಎಂದಿಷ್ಟೇ ಹೇಳಬಹುದು.

ಕರ್ತೃ ಇಲ್ಲದಿರುವುದರಿಂದ ಕಾರ್ಯವೂ ಇರಲಾರದು ಎನ್ನುವುದಾದರೆ ಕರ್ಮವು ಇಲ್ಲದಿರುವುದರಿಂದ ಅಕರ್ಮಕವಾದ ಆಸನ–ಶಯನಾದಿ ಕ್ರಿಯೆಗಳೂ ಇಲ್ಲದಾಗಬೇಕಾದೀತು. ಕರ್ತೃವಿನಂತೆ ಕರ್ಮವೂ ಒಂದು ಕಾರಕವಿಶೇಷವಾಗಿದೆ. ಕರ್ತೃರೂಪಕಾರಕವಿಲ್ಲದೆ ಕಾರ್ಯ ವಾಗುವುದಿಲ್ಲ ಎನ್ನುವುದಾದಲ್ಲಿ ಕರ್ಮರೂಪಕಾರಕವಿಶೇಷವಿಲ್ಲದಿರುವುದರಿಂದಲೂ ಯಾವ ಕಾರ್ಯವೂ ಆಗುವುದಿಲ್ಲ, ಎಂದಾಗಬೇಕಾದೀತು.

**ಆಕ್ಷೇಪ**—ಕರ್ತೃವಿಗೂ ಕರ್ಮಕ್ಕೂ ವ್ಯತ್ಯಾಸವಿದೆ. ಕರ್ಮವು ಸಾರ್ವತ್ರಿಕವಲ್ಲ. (ಎಲ್ಲ ಕ್ರಿಯೆಗೂ ಬೇಕಾಗಿಲ್ಲ.) ಕರ್ತೃ ಸಾರ್ವತ್ರಿಕ. ಹೀಗಾಗಿ ಕರ್ತೃವಿಲ್ಲದೆ ಕಾರ್ಯ ಆಗಲಾರದು, ಎಂದು ಹೇಳಬಹುದು.

**ಸಮಾಧಾನ**—ಈ ವಿಶೇಷ ಇನ್ನೂ ಸಿದ್ಧವಾಗಿಲ್ಲ. ನಿರೀಶ್ವರವಾದಿಗಳು ಕ್ಷಿತ್ಯಾದಿಗಳಿಗೆ ಕರ್ತೃವಿಲ್ಲ ವಿನ್ನುತ್ತಾರೆ. ಅಂತಹವರು ಕರ್ತೃ ಸಾರ್ವತ್ರಿಕ ಎಂದು ಹೇಗೆ ಅಂಗೀಕರಿಸಿಯಾರು?

**ಆಕ್ಷೇಪ**—ಕ್ಷಿತ್ಯಾದಿಗಳು ವಿವಾದಾಸ್ಪದಗಳು. ಅವುಗಳನ್ನು ಬಿಟ್ಟರೆ ಉಳಿದೆಲ್ಲ ಕಾರ್ಯಗಳಿಗೂ ಕರ್ತೃ ಸಾಮಾನ್ಯವಾಗಿ ಕಾರಣನಾಗಿದ್ದಾನೆ. ಇದರಿಂದಾಗಿ ಕರ್ತೃ ಸಾರ್ವತ್ರಿಕ ಎಂದು ತಿಳಿಯಬಹುದು.

**ಸಮಾಧಾನ**—ಅಷ್ಟರಿಂದಲೇ ತೀರ್ಮಾನಿಸುವುದಾದರೆ ಶರೀರ–ಪುಣ್ಯಪಾಪ–ಸುಖ–ದುಃಖ–ಪ್ರಯೋಜನಾಪೇಕ್ಷೆ ಈ ಗುಣವುಳ್ಳವನಿಂದಲೇ ಎಲ್ಲಾ ಕಾರ್ಯಗಳೂ ಹುಟ್ಟಿರುವುದೂ ಕಂಡಿದೆಯಾದ್ದರಿಂದ ಅಂತಹ ಕರ್ತನೂ ಸಾರ್ವತ್ರಿಕ ಎಂದಾದೀತು. ಇದರಿಂದ ಕ್ಷಿತ್ಯಾದಿಕರ್ತನೂ ನಮ್ಮಂತೆ ಶರೀರಾದಿಧರ್ಮವುಳ್ಳವನೇ ಆದಾನು.

ಇದನ್ನೂ ಆಚಾರ್ಯರು "ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್' ಎಂಬ ವಾಕ್ಯದಲ್ಲಿ ಹೇಳಿದ್ದಾರೆ. ವಿಪರ್ಯಯ ಎಂದರೆ–ತಾರ್ಕಿಕರು, ಅಶರೀರಿಯಾದ ಈಶ್ವರನಿಂದ ಜನ್ಯ ಎಂದು ಹೇಳುವುದಕ್ಕೆ ವಿರುದ್ಧವಾಗಿ ಸಶರೀರನಾದ ಈಶನಿಂದ ಜನ್ಯ ಎಂದಾದೀತು, ಎಂದು ಭಾವ.

## ನ್ಯಾಯದೀಪ

**अन्यथेति ।** कर्तृरूपकारकविशेषाभावेन कार्याभाव इत्यर्थः । **आसनेति ।** 'आस उपवेशने' आस्ते, 'शीङ् स्वप्ने' शेते, 'भा दीप्तौ' भाति, इत्यादेरकर्मकत्वात् आसनादिकार्यं कर्म-संप्रदाना-पादानकार-कहीनमिति कार्यं न स्यादित्यर्थः ।

विपर्ययेणेत्यस्य पराङ्गीकृतवैपरीत्येनेत्यर्थमुपेत्याह—**परानङ्गी-कृतेति ।** तथाच कार्यत्वस्य शरीरसुखदुःखादिमज्जन्यत्वादिना सह भावदर्शनेऽपि यथा तत्र कार्यत्वमप्रयोजकं तथा सकर्तृकत्वेऽपीति भावः । अस्मिन् पक्षे ''नचानुमानात् तत्सिद्धिः'' इति पूर्ववाक्यस्य 'कार्यत्वानुमानात् सकर्तृकत्वसिद्धिरिति न च' इत्यर्थो ध्येयः ।।

ಆಸಧಾತು, ಶೀಙ್‌ಧಾತು, ಭಾಧಾತು ಇತ್ಯಾದಿ ಧಾತುವಾಚ್ಯ ಕ್ರಿಯೆಗಳು ಅಕರ್ಮಕಗಳು. ಆದ್ದರಿಂದ ಆ ಕ್ರಿಯೆಗಳಿಗೆ ಕರ್ಮ–ಸಂಪ್ರದಾನ–ಅಪಾದಾನಾದಿ ಕಾರಕಗಳು ಇಲ್ಲ. ಆದರಿಂದಾಗಿ ಆ ಕ್ರಿಯೆಗಳು ಕಾರ್ಯಗಳಾಗಲಿಕ್ಕಿಲ್ಲ.

ಕಾರ್ಯತ್ವಕ್ಕೆ ಶರೀರ–ಸುಖ–ದುಃಖಾದಿಮತ್–ಪುರುಷಜನ್ಯತ್ವದೊಂದಿಗೆ ಸಹಚಾರ ಕಂಡಿದ್ದರೂ ಅದಕ್ಕೆ ಕಾರ್ಯತ್ವವು ಹೇಗೆ ಅಪ್ರಯೋಜಕವೋ ಅದರಂತೆ, ಸಕರ್ತೃಕತ್ವದೊಂದಿಗೆ ಸಹಚಾರದರ್ಶನವಿದ್ದರೂ ಅದಕ್ಕೆ ಕಾರ್ಯತ್ವವು ಪ್ರಯೋಜಕವಲ್ಲ.

ಈ ಪಕ್ಷದಲ್ಲಿ "ವಿಪರ್ಯಯೇಣಾಪಿ" ಎಂಬ ಆಚಾರ್ಯರ ಪೂರ್ವವಾಕ್ಯವಾದ "ನ ಚಾನುಮಾನಾತ್ ತತ್ಸಿದ್ಧಿಃ" ಎಂಬ ವಾಕ್ಯಕ್ಕೆ ಹೀಗೆ ಅರ್ಥ–ಕಾರ್ಯತ್ವಾನುಮಾನದಿಂದ ಸಕರ್ತೃಕತ್ವ ಸಿದ್ಧಿಯಾಗುವುದಿಲ್ಲ, ಎಂದು. (ಹಿಂದೆ ಅದೇ ವಾಕ್ಯಕ್ಕೆ ಕಾರ್ಯತ್ವಾನುಮಾನದಿಂದ ಈಶ್ವರ ಸಿದ್ಧಿಯಾಗುವುದಿಲ್ಲ, ಎಂದು.)

## ಅವತಾರಿಕೆ

**ननु लोके सकर्मकाकर्मकादिकार्यं दृष्टम्, इत्यस्तु कर्मादिहीनमपि कार्यम् । कर्तृहीनन्तु न दृष्टम् । किन्तु कर्तृमदेव । क्षित्यादि तु विप्रतिपन्नम् । नच शरीरादिमत्कर्तृकमपि दृष्टमित्युक्तमिति वाच्यम् । कृतिं विना कार्यत्वानुपपत्तिवत् शरीरादिकं विना तदनुपपत्तेरभावात् । कार्यत्वं हि कृतिकर्मत्वम् । 'ऋहलोर्ण्यत्'इति ण्यत्प्रत्ययान्तस्य करोतेस्तदर्थत्वात् । नच कार्यशब्दो रूढः ।**

**''भवेतां यदि वृक्षस्य वाजिकर्णौ कथञ्चन ।**
**अदृष्टां समुदायस्य कः शक्तिं जातु कल्पयेत्'' ॥**

**इति प्रोक्षण्यधिकरणवार्तिकोक्तरीत्या अवयवार्थसम्भवे समुदायशक्तिकल्पनानुपपत्तेः । अन्यथा प्रोक्षण्यादिशब्दोप्युदकविशेषे रूढ इति स्यादित्यतो, अस्तु नाम कार्यत्वं कर्तृजन्यत्वे प्रयोजकं, तथापि त्वदुक्तविशिष्टसाध्ये त्वप्रयोजकमेवेत्याह—किञ्चेत्यादिना ।**

ಹಿಂದೆ ಮಾಡಿರುವ, ಕರ್ಮಾಭಾವಾತ್ ಆಸನಾದಿಕ್ರಿಯೆಗಳೂ ಇಲ್ಲವೆಂದಾದೀತು, ಎಂಬ ಆಪತ್ತಿ ಸರಿಯಲ್ಲ. ಲೋಕದಲ್ಲಿ ಸಕರ್ಮಕ ಮತ್ತು ಅಕರ್ಮಕ ಎಂದು ಕಾರ್ಯವು ಎರಡು ವಿಧವಾಗಿ ಕಂಡಿದೆ. ಆದ್ದರಿಂದ ಕರ್ಮಾದಿಕಾರಕ ರಹಿತವಾದರೂ ಕಾರ್ಯವು ಇರಬಹುದು. ಆದರೆ, ಹೀಗೆ ಕರ್ತೃರಹಿತವಾದ ಕಾರ್ಯವು ಕಂಡಿಲ್ಲ. ಎಲ್ಲ ಕಾರ್ಯಗಳಿಗೂ ಕರ್ತೃ ಇದ್ದೇ ಇರುತ್ತಾನೆ. ಇನ್ನು ಕ್ಷಿತ್ಯಾದಿ ಕಾರ್ಯಗಳು ಸಕರ್ತೃವೋ ಅಕರ್ತೃಕವೋ ಎಂದು ವಿವಾದಗ್ರಸ್ತವಾಗಿವೆ. ಅದನ್ನು ಬಿಟ್ಟು ಇತರ ಯಾವ ಕಾರ್ಯವೂ ಕರ್ತೃ ಇಲ್ಲದೆ ಹುಟ್ಟುವುದಿಲ್ಲ.

ಇದಕ್ಕೆ ಹಿಂದೆ ಹೀಗೆ ಆಕ್ಷೇಪವನ್ನು ಮಾಡಲಾಗಿದೆ—ಎಲ್ಲ ಕಾರ್ಯಗಳೂ ಶರೀರಾದಿಮತ್ ಕರ್ತೃಕಗಳಾಗಿ ಕಂಡಿವೆ. ಆದ್ದರಿಂದ ಕ್ಷಿತಿಕರ್ತನಾದ ಈಶ್ವರನೂ ಶರೀರಿಯಾಗಲಿ, ಎಂದು. ಆದರೆ, ಅದು ಸರಿಯಲ್ಲ. ಕೃತಿ ಇಲ್ಲದೆ ಕಾರ್ಯವು ಹುಟ್ಟುವುದು ಅಸಾಧ್ಯವಾದಂತೆ ಶರೀರವಿಲ್ಲದೆ ಕಾರ್ಯದ ಅಸಾಧ್ಯತೆ ಇಲ್ಲ. ಕಾರ್ಯವಾಗಬೇಕಾದರೆ ಪ್ರಯತ್ನಬೇಕು, ಶರೀರದ ಅಗತ್ಯವಿಲ್ಲ. ಕಾರ್ಯಶಬ್ದವು ಯತ್ನಾರ್ಥಕ ಕೃಧಾತುವಿಗೆ ಣ್ಯತ್ ಪ್ರತ್ಯಯ ಬಂದು ನಿಷ್ಪನ್ನವಾಗಿದೆ. ಕೃತಿಸಾಧ್ಯ ಎಂದೇ ಅದರ ಅರ್ಥ. ಆದ್ದರಿಂದ ಕಾರ್ಯವಾಗಬೇಕಾದರೆ ಕೃತಿಬೇಕು, ಅದಕ್ಕಾಗಿ ಕರ್ತೃಬೇಕು.

ಕಾರ್ಯಶಬ್ದವು ಶರೀರಿಯಲ್ಲಿ 'ರೂಢ' ಎನ್ನಬಾರದು. 'ಪ್ರೋಕ್ಷಣ್ಯಧಿಕರಣದಲ್ಲಿ' ಪ್ರೋಕ್ಷಣೀಶಬ್ದವು 'ಸಂಸ್ಕೃತ' ಜಲದಲ್ಲಿ ರೂಢವೋ 'ಉಕ್ಷಸೇಚನೇ' ಧಾತುವಿನಿಂದ ನಿಷ್ಪನ್ನವಾದ "ಸೇಚನ ಸಾಧನ" ಎಂಬ ಅರ್ಥದ ಯೌಗಿಕಶಬ್ದವೋ ಎಂದು ಶಂಕೆ ಮಾಡಿ, ಯಾವಶಬ್ದಕ್ಕೆ ಅವಯವಾರ್ಥವನ್ನೇ ಹೇಳಬಹುದೋ ಅಂತಹ ಶಬ್ದಕ್ಕೆ ರೂಢಿಯನ್ನು ಕಲ್ಪಿಸಬಾರದು, ಎಂದು ಸಿದ್ಧಾಂತಮಾಡಲಾಗಿದೆ. ಹೀಗಿದ್ದರೂ ಕಾರ್ಯಶಬ್ದವನ್ನು ರೂಢವೆಂದು ಕಲ್ಪಿಸುವುದಾದಲ್ಲಿ 'ಪ್ರೋಕ್ಷಣೀ' ಶಬ್ದವೂ ಶಾಸ್ತ್ರ ಸಂಸ್ಕೃತ ಜಲದಲ್ಲಿ ರೂಢವೆಂದಾದೀತು. ಆ ಅಧಿಕರಣದ ವಾರ್ತಿಕದಲ್ಲಿ ಉಲ್ಲೇಖಿಸಿದ ಶ್ಲೋಕದ ಅರ್ಥ ಹೀಗೆ— 'ವಾಜಕರ್ಣ' ಎಂದು ವೃಕ್ಷವಿಶೇಷದ ಹೆಸರು. ಆದರೆ ಮರಕ್ಕೆಂದೂ ಕುದುರೆಯ ಕರ್ಣಾದಿಗಳು ಇರಲು ಸಾಧ್ಯವೇ ಇಲ್ಲ. ಹೀಗಾಗಿ ಆ ಶಬ್ದಕ್ಕೆ ಸಮುದಾಯ ಶಕ್ತಿಯನ್ನು ಹೇಳುವುದು ಅನಿವಾರ್ಯ. ಇಂತಹ ಅನಿವಾರ್ಯತೆ ಇಲ್ಲದಿರುವಾಗ ಅಕ್ಲೃಪ್ತವಾದ ಸಮುದಾಯ ಶಕ್ತಿಯನ್ನು (ರೂಢಿಯನ್ನು) ಯಾರು ಕಲ್ಪಿಸುತ್ತಾರೆ? ಎಂದು.

ಹೀಗೆ, ಕಾರ್ಯಶಬ್ದವು ಯೌಗಿಕವಾದ್ದರಿಂದ ಕಾರ್ಯತ್ವವು ಕರ್ತೃಜನ್ಯತ್ವಕ್ಕೆ ಪ್ರಯೋಜಕ ವಾಗುತ್ತದೆ. ಶರೀರಜನ್ಯತ್ವಕ್ಕೆ ಪ್ರಯೋಜಕವಾಗುವುದಿಲ್ಲ. ಹೀಗೆ ತಾರ್ಕಿಕರು ವಾದ ಮಾಡಬಹುದು. ಇದನ್ನು ಕಥಂಚಿತ್ ಒಪ್ಪಿಕೊಂಡರೂ ಪರೋಕ್ತವಾದ 'ಸ್ವಜನ್ಯ' ಇತ್ಯಾದಿ ಸಾಧ್ಯಕ್ಕೆ ಅದು ಪ್ರಯೋಜಕವಾಗುವುದಿಲ್ಲ, ಎಂದು "ಕಿಂಚ" ಎಂಬ ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किञ्च, अस्तु कृतेः कार्यसामान्यं प्रति हेतुत्वम् । तथापि त्वदुक्तस्वजन्ये-त्यादिबहुविशेषणविशिष्टकृतित्वेन न । किन्तु तद्विपरीतेन लघुना कृतित्वेनैव ।।**

ನೈಯಾಯಿಕರು ಹೇಳುವ, ಕಾರ್ಯಸಾಮಾನ್ಯಕ್ಕೆ ಕೃತಿಯು ಕಾರಣ, ಎಂಬ ಕಾರ್ಯಕಾರಣಭಾವವನ್ನೇ ಒಪ್ಪೋಣ. ಆದರೂ ಪ್ರಕೃತಾನುಮಾನದಲ್ಲಿ ಕೃತಿಜನ್ಯತ್ವಮಾತ್ರ ಸಾಧ್ಯವಲ್ಲ. 'ಸ್ವಜನ್ಯ' ಇತ್ಯಾದಿ ಅನೇಕ ವಿಶೇಷಣ ವಿಶಿಷ್ಟವಾದ ಕೃತಿ ಜನ್ಯತ್ವವು ಸಾಧ್ಯ. ಆದರೆ, ತಾದೃಶಕೃತಿತ್ವವು ಗುರುಧರ್ಮವಾದುದರಿಂದ ತೇನ ರೂಪೇಣ ಕೃತಿಯು ಕಾರಣವಾಗುವುದಿಲ್ಲ. ಹೊರತು, ಲಘುವಾದ ಕೃತಿತ್ವೇನೈವ ಕೃತಿಯು ಕಾರಣ.[1]

**नचैवं कपालगोचरकृत्यभावेऽपि पटगोचरकृत्या घटोत्पत्तिः**

1. **ವಸ್ತುತಸ್ತು ಕರ್ತೃಜನ್ಯತ್ವವು ಸಾಧ್ಯ, ಎಂದು ಮಣಿಕಾರನ ಮತ. ಆದರೆ, 'ಅನ್ಯೇತು' ಎಂದು ಮತಾಂತರವನ್ನು ಉಲ್ಲೇಖಿಸಿ ಕೃತ್ಯಾದಿಜನ್ಯತ್ವವೂ ಸಾಧ್ಯ, ಎಂದು ಅವನು ಹೇಳಿದ್ದಾನೆ—**

एवं ज्ञानेच्छाकृतिजन्यत्वमेव साध्यम्, तदाश्रयत्वमेव ईश्वरस्य कर्तृत्वम् ।। (मणि:.२९)

**शङ्क्या। घटरूपकार्यविशेषं प्रति कपालगोचरकृतिरूपविशेषस्य हेतुतया तद्रहितायाः सामान्यसामग्र्याः कार्याजनकत्वात् ॥**

ಕೃತಿಯಷ್ಟೇ ಕಾರ್ಯಕ್ಕೆ ಕಾರಣವಾದರೆ ಪಟವಿಷಯಕವಾದ ಕೃತಿಯಿಂದ ಕಪಾಲವಿಷಯಕವಾದ ಕೃತಿ ಇಲ್ಲದೆಯೂ ಘಟವು ಹುಟ್ಟಲಿ. ಹೀಗೆ ಆಶಂಕೆ ಮಾಡಬಾರದು. ಅದು ಸಾಮಾನ್ಯಕಾರ್ಯಕಾರಣಭಾವ. ವಿಶೇಷಕಾರ್ಯಕಾರಣಭಾವ ''ಘಟಕಾರ್ಯಕ್ಕೆ ಕಪಾಲವಿಷಯಕ ಕೃತಿಯು ಕಾರಣ'' ಎಂದು. ಇಂತಹ ವಿಶೇಷಸಾಮಗ್ರೀ ಇಲ್ಲದಿರುವ ಪ್ರಯುಕ್ತ ಸಾಮಾನ್ಯವಾದ ಕೃತಿರೂಪವಾದ ಕಾರಣವಿದ್ದರೂ ಘಟವು ಹುಟ್ಟುವುದಿಲ್ಲ.

**नचैवं प्रकृतेऽपि क्षित्युपादानगोचरकृतिरूपकारणविशेषः कल्प्यत इति वाच्यम् । त्वया कल्प्यमानकृतिविपरीतायाः क्लृप्तायाः क्षितिजनकादृष्टजनककृतेरेवेह विशेषकारणत्वात् ॥**

**नच कपालगोचरकृतिव्यतिरेकेण घटव्यतिरेक इव क्षित्युपादानगोचरकृतिव्यतिरेकेण क्षितिव्यतिरेको दृष्टः । येन सापि हेतुः स्यात्। घटादौ दर्शनमात्रेण तत्कल्पने च त्वदुक्तचेष्टानिरपेक्षकृतिविपरीता चेष्टाद्वारककृतिरेव कल्प्या स्यात् ॥**

**ಆಕ್ಷೇಪ**—ಹೇಗೆ ಘಟಕ್ಕೆ ಕಪಾಲವಿಷಯಕಕೃತಿಯು ಕಾರಣವೋ ಅದಕ್ಕಿಂತ ಕ್ಷಿತ್ಯಾದಿ ಕಾರ್ಯವಿಶೇಷಗಳಿಗೆ ತದುಪಾದಾನವಿಷಯಕಕೃತಿವಿಶೇಷವು ಕಾರಣ, ಎಂದು ಕಲ್ಪಿಸಬೇಕು. ತದಾಶ್ರಯತಯಾ ಈಶ್ವರಸಿದ್ಧಿಯಾಗುತ್ತದೆ.

**ಸಮಾಧಾನ**—ಇಂತಹ ಕೃತಿವಿಶೇಷವನ್ನು ಏಕೆ ಕಲ್ಪಿಸಬೇಕು? ಅದಕ್ಕಿಂತ ಸಿದ್ಧವಾದ ಕ್ಷಿತ್ಯಾದಿಜನಕವಾದ ಅದೃಷ್ಟವೇನಿದೆಯೋ ತಜ್ಜನಕವಾದ ಜೀವೀಯ ಕೃತಿಯು ಕ್ಲೃಪ್ತವಾಗಿದೆ. ಅದೇ ಕ್ಷಿತ್ಯಾದಿಕಾರ್ಯವಿಶೇಷಗಳಿಗೆ ಕಾರಣ, ಎಂದು ಕಲ್ಪಿಸಬಹುದು. ಘಟಕ್ಕೆ ಮಾತ್ರ, ಅದೃಷ್ಟದ್ವಾರಕ ಕೃತಿವಿಶೇಷಮಾತ್ರ ಸಾಲದು. ಕಪಾಲವಿಷಯಕವಾದ ಕುಲಾಲನ ಕೃತಿ ಇಲ್ಲದೆ ಘಟವು ಹುಟ್ಟುವುದಿಲ್ಲ, ಎನ್ನುವುದು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ, ಘಟಕ್ಕೆ ಕಪಾಲವಿಷಯಕವಾದ ಕುಲಾಲನ ಕೃತಿಯೂ ಕಾರಣ. ಆದರೆ, ಇದರಂತೆ ಕ್ಷಿತ್ಯುಪಾದಾನಕೃತಿವ್ಯತಿರೇಕೇಣ ಕ್ಷಿತಿವ್ಯತಿರೇಕವು ಕಂಡಿಲ್ಲ. ಹಾಗೆ ಕಂಡಿದ್ದರೆ ಅಂತಹ ಕೃತಿವಿಶೇಷವೂ ಕಾರಣ, ಎಂದು ಕಲ್ಪಿಸಬಹುದಿತ್ತು. ಆದರಿಂದ ಈಶ್ವರಸಿದ್ಧಿಯಾಗಬಹುದಿತ್ತು.

ಘಟಾದಿಗಳಲ್ಲಿ ಉಪಾದಾನವಿಷಯ-ಕೃತಿವ್ಯತಿರೇಕೇಣ ಕಾರ್ಯವ್ಯತಿರೇಕವು ಕಂಡಿರುವುದರಿಂದ ಕ್ಷಿತ್ಯಾದಿಗಳಿಗೂ ಅಂತಹ ಕೃತಿವಿಶೇಷವೇ ಕಾರಣ, ಎಂದು ಕಲ್ಪಿಸುವುದಾದಲ್ಲಿ ಘಟಾದಿಗಳಲ್ಲಿ ಕಂಡಂತೆಯೇ ಚೇಷ್ಟಾದ್ವಾರಕ ಕೃತಿಯನ್ನೇ ಕಲ್ಪಿಸಬೇಕು. ಇದರಿಂದ, ಚೇಷ್ಟಾನಿರಪೇಕ್ಷಕೃತಿಯು ಸಿದ್ಧವಾಗುವುದಿಲ್ಲ. ಆದರಿಂದಾಗಿ ಈಶ್ವರನಿಗೆ ಚೇಷ್ಟಾಕಾರಣವಾದ ಶರೀರವೂ ಸಿದ್ಧವಾದೀತು.

**एवञ्च कृतेः कारणतावच्छेदककृतित्वेनैव जनकता साध्यते चेत् अस्मदादिकृत्या सिद्धसाधनम् । तन्निवृत्यर्थं स्वजन्येत्यादिविशेषणोपादानेऽप्रयोजकता । तेन रूपेण कृतेरकारणत्वात् ।।**

ಹೀಗೆ, ಕೃತಿಗೆ ಕೃತಿತ್ವೇನೈವ ಕಾರಣತ್ವವನ್ನು ಅಂಗೀಕರಿಸಿ ಕೃತಿಜನ್ಯತ್ವವನ್ನು ಸಾಧನೆಮಾಡಿದರೆ ಅದೃಷ್ಟದ್ವಾರಕವಾದ ಜೀವೀಯ ಕೃತಿಯಿಂದ ಸಿದ್ಧಸಾಧನತಾದೋಷ. ಅದರ ಪರಿಹಾರಕ್ಕಾಗಿ ಸ್ವಜನ್ಯೇತ್ಯಾದಿ ಗುರುರೂಪೇಣ ಕೃತಿಜನ್ಯತ್ವವನ್ನು ಸಾಧನೆಮಾಡಿದರೆ ಅನುಮಾನದ ಹೇತು ಅಪ್ರಯೋಜಕವಾಗುತ್ತದೆ. ಏಕೆಂದರೆ, ತೇನ ರೂಪೇಣ ಕೃತಿಯು ಕಾರ್ಯಪ್ರಯೋಜಕವಲ್ಲ. ಆದ್ದರಿಂದ ಈಶ್ವರಾನುಮಾನವು ಸಾಧಕವಲ್ಲ.

## ನ್ಯಾಯದೀಪ

ज्ञान-चिकीर्षा-कृतिनां प्रत्येकमेव हेतुतया साध्यत्रयोपगमेन मिलितानामहेतुत्वात् कृतेरित्येवोक्तं, नतु ज्ञानादेरिति । एवमग्रेऽपि । **तदिति** । हेतुत्वमित्यर्थः ।

एतदपि दूषणं मूलारूढमिति भावेन कार्यत्वानुमानात् स्वजन्या-दृष्टप्रागभावव्याप्य-प्रागभावप्रतियोगिभिन्नोपादानगोचरापरोक्षज्ञान-चिकीर्षाकृतिमज्जन्यत्वादिसिद्धिः नच, इति पूर्ववाक्यार्थमुपेत्य विपर्ययेणेत्युत्तरवाक्यस्थविपर्ययशब्दार्थं वदन्नेवाह—**तद्विपरीतेनेति** । **कार्यविशेषं प्रतीति** । यत्सामान्यन्यायादिति भावः ।।

ವಸ್ತುತಃ, ಜ್ಞಾನ-ಚಿಕೀರ್ಷಾ-ಕೃತಿಮಜ್ಜನ್ಯಂ, ಎಂದು ವಿಶಿಷ್ಟವಾದ ಸಾಧ್ಯವನ್ನೇ ಹಿಂದೆ ತೋರಿಸಲಾಗಿದೆ. ಆದರೆ, ಕಾರ್ಯಕ್ಕೆ ಜ್ಞಾನ, ಚಿಕೀರ್ಷಾ, ಕೃತಿಗಳು ಸ್ವತಂತ್ರವಾಗಿಯೇ ಕಾರಣಗಳು.

ಪೂರ್ವಪೂರ್ವಗಳು ಉತ್ತರೋತ್ತರಕ್ಕೆ ಕಾರಣಗಳಲ್ಲ. ಆದ್ದರಿಂದ ಕೃತಿಜನ್ಯತ್ವವು ಪ್ರತ್ಯೇಕ ಸಾಧ್ಯ. ಅದಕ್ಕಾಗಿ ಮೂಲದಲ್ಲಿ ''ಕೃತೇಃ ಕಾರ್ಯಸಾಮಾನ್ಯಂ ಪ್ರತಿ ಹೇತುತ್ವಂ'' ಎಂದು ಕೃತಿಯನ್ನು ಮಾತ್ರ ಹೇಳಲಾಗಿದೆ. ಜ್ಞಾನಾದಿಗಳನ್ನು ಹೇಳಲಾಗಿಲ್ಲ.

ಕೃತಿತ್ವೇನ ಕೃತಿಯು ಹೇತು, ಪರೋಕ್ತವಾದ ಗುರುಭೂತಕೃತಿತ್ವೇನ ಹೇತುವಲ್ಲ, ಎಂದು ಮೂಲದಲ್ಲಿ ಹೇಳಿರುವ ದೋಷವೂ ''ನ ಚ ಅನುಮಾನಾತ್'' ಇತ್ಯಾದಿ ಆಚಾರ್ಯರ ವಾಕ್ಯದ ವಿವರಣೆ ಎಂದು ತಿಳಿಸಲು ''ಕಿಂತು ತದ್ವಿಪರೀತೇನ'' ಎಂಬ ಮೂಲದ ಶಬ್ದವಿದೆ. ಆಗ ಆಚಾರ್ಯರ ವಾಕ್ಯದ ಪ್ರಕೃತವಿವಕ್ಷಿತಾರ್ಥ ಹೀಗೆ ಆಗುತ್ತದೆ—ಅನುಮಾನಾತ್=ಕಾರ್ಯತ್ವಾನುಮಾನದಿಂದ ''ಸ್ವಜನ್ಯಾದೃಷ್ಟ...'' ಇತ್ಯಾದಿ ''ನ ತತ್ಸಿದ್ಧಿಃ''=ಸಾಧ್ಯಸಿದ್ಧಿಯು ಆಗುವುದಿಲ್ಲ. ವಿಪರ್ಯಯೇಣಾಪಿ =ಪರೋಕ್ತ ಗುರುರೂಪಕ್ಕೆ ವಿರುದ್ಧವಾದ ಲಘುವಾದ ಕೃತಿತ್ವೇನ ರೂಪೇಣಾಪಿ ಕೃತಿಜನ್ಯತ್ವವನ್ನು ಅನುಮಾತುಂ ಶಕ್ಯತ್ವಾತ್=ಅನುಮಾನ ಮಾಡಲು ಸಾಧ್ಯವಿದೆ, ಎಂದು.

## ನ್ಯಾಯದೀಪ

नचानुमानात् तत्सिद्धिरिति पूर्ववाक्यस्थ-तत्सिद्धिशब्दार्थं विवृण्वन्नेव शङ्कामनूद्य निराह—**नचैवमिति। प्रकृतेऽपीति ।** क्षित्यादावपीत्यर्थः ।

उत्तरवाक्यस्थविपर्ययशब्दार्थं वदन्नेव हेतुमाह—**त्वयेत्यादिना । क्षितिजनकादृष्टेति ।** हविरादिगोचरजीवकृतेरेवेत्यर्थः । अदृष्टस्य यज्ञादिसत्कर्मजन्यत्वात् ।

नन्वेवं घटादावपि तज्जनकादृष्टजनककृतेरेव हेतुत्वमस्तु । नतु कपालगोचरकृतेः अविशेषादित्यत आह—**नचेति । येन सापीति ।** क्षितिजनकादृष्टजनकहविरादिगोचरजीवकृतिव्यतिरेकेण क्षित्यादिव्यतिरेकस्तु ''कार्यमात्रेऽदृष्टं हेतुः'' इति वदतस्तवापि संमत इति तादृशकृतिस्तु स्यादेव हेतुरिति भावः । उक्तं च सुधायाम् ''अदृष्टवतां जीवात्मनामेव कर्तृत्वोपपत्तेः'' इति शास्त्रयोनिसूत्रे ।।

''ನ ಚಾನುಮಾನಾತ್ ತತ್ಸಿದ್ಧಿಃ' ಎಂಬ ಆಚಾರ್ಯರ ವಾಕ್ಯದಲ್ಲಿರುವ ಸಿದ್ಧಿಶಬ್ದದ ಪ್ರಕೃತಸಂಗತವಾದ ಅರ್ಥವನ್ನು ಹೇಳುತ್ತಲೇ ಆ ವಾಕ್ಯದಲ್ಲಿ ವಿವಕ್ಷಿತವಾದ ಶಂಕೆಯನ್ನು 'ನ ಚೈವಂ'

ಎಂದು ಮೂಲದಲ್ಲಿ ಹೇಳಲಾಗಿದೆ. ಈ ಅನುಮಾನಾತ್=ಕಾರ್ಯತ್ವಾನುಮಾನದಿಂದ, ತತ್ಸಿದ್ಧಿಃ=ಕ್ಷಿತ್ಯುಪಾದಾನಗೋಚರ–ಕೃತಿಮಜ್ಜನ್ಯತ್ವದ ಸಿದ್ಧಿಯು ನ=ಆಗುವುದಿಲ್ಲ, ಎಂದು.

ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್, ಎಂಬ ಆಚಾರ್ಯರ ಮುಂದಿನ ವಾಕ್ಯದಲ್ಲಿರುವ ವಿಪರ್ಯಯಶಬ್ದಕ್ಕೆ ಪ್ರಕೃತವಿವಕ್ಷಿತಾರ್ಥವನ್ನು ಹೇಳಿ ಉಕ್ತಸಾಧ್ಯಾಸಿದ್ಧಿಗೆ ಹೇತುವನ್ನು 'ತ್ವಯಾ' ಇತ್ಯಾದಿ ಮೂಲವಾಕ್ಯದಲ್ಲಿ ಹೇಳಲಾಗಿದೆ. ಉಪಾದಾನವಿಷಯಕವಾದ ಈಶ್ವರೀಯ ಕೃತಿಜನ್ಯತ್ವಕ್ಕೆ ವಿಪರೀತವಾಗಿ ಅದೃಷ್ಟದ್ವಾರಕ–ಅಸ್ಮದಾದಿಕೃತಿಜನ್ಯತ್ವವನ್ನು ಸಾಧನೆ ಮಾಡಬಹುದು, ಎಂದು ಆಚಾರ್ಯರ ವಾಕ್ಯದ ಅರ್ಥ.

ಯದ್ಯಪಿ ಕ್ಷಿತಿಜನಕವಾದ ಅದೃಷ್ಟಕ್ಕೆ ಕಾರಣವಾದ ಯಜ್ಞದ ಹವಿರಾದಿವಿಷಯಕವಾದ ಜೀವೀಯ–ಕೃತಿವ್ಯತಿರೇಕೇಣ ಕಿತ್ಯಾದಿಕಾರ್ಯವ್ಯತಿರೇಕವೂ ದೃಷ್ಟವಾಗಿಲ್ಲ. ಆದ್ದರಿಂದ ಉಪಾದಾನಗೋಚರಕೃತಿಯು ಕಾರಣವಲ್ಲ, ಎಂದಂತೆ ಜೀವೀಯಕೃತಿಯೂ ಕಾರಣವಲ್ಲ, ಸಿದ್ಧಸಾಧನತಾ ಹೇಗೆ? ಎಂದು ಪ್ರಶ್ನಿಸಬಹುದು. ಆದರೆ, ''ಕಾರ್ಯಮಾತ್ರೇ ಅದೃಷ್ಟಂ ಹೇತುಃ' ಎಂದು ನೈಯಾಯಿಕರೂ ಒಪ್ಪಿರುವುದರಿಂದ ಅದೃಷ್ಟದ್ವಾರಕ ಕೃತಿಗೆ ಹೇತುತ್ವವು ಉಭಯಸಮ್ಮತ. ಉಪಾದಾನವಿಷಯಕ–ಕೃತಿಗೆ ಕಾರಣತ್ವವು ಅನ್ಯತರಾಸಮ್ಮತ.

ಇದನ್ನು ನ್ಯಾಯಸುಧಾದ ಶಾಸ್ತ್ರಯೋನಿತ್ವಾತ್, ಎಂಬ ಸೂತ್ರವ್ಯಾಖ್ಯಾನದಲ್ಲಿ ಜನ್ಮಾದಿಕಾರಣತ್ವವು ಶಾಸ್ತ್ರೈಕಸಮಧಿಗಮ್ಯ, ಎಂದು ಹೇಳುವಾಗ ''ಅದೃಷ್ಟವುಳ್ಳ ಜೀವಾತ್ಮರೇ ಕ್ಷಿತ್ಯಾದಿಗಳಿಗೂ ಕರ್ತೃಗಳಾಗಬಹುದು'' ಎಂದು ಹೇಳಲಾಗಿದೆ.

## ನ್ಯಾಯದೀಪ

नन्वेवं, नेदं सकर्तृकत्वम् । तथात्वे भोजकादृष्टद्वारा भोक्तृकृतिजन्ये घटादौ भोक्तृकर्तृकत्वव्यवहारापत्तेः । उक्तं च मणौ ''अत एव घट-भोक्ता न तत्कर्ता व्यवह्रियत'' इति इति चेन्न । अदृष्टाद्वार-कघटाद्युपादानगोचरापरोक्षज्ञानचिकीर्षाकृतिमतोऽपि तदनुकूलाङ्गचेष्टा-हीनस्य कर्तृत्वाव्यवहारात्, तदनुकूलचेष्टावत्येव तद्व्यवहारात्, त्वदुक्तचेष्टानिरपेक्षकृतिमजन्यत्वेऽपि सकर्तृकत्वव्यवहारानापत्येव सकर्तृकत्वविवादापरिहारेणार्थान्तरतापत्तेः । शरीरचेष्टादिहीनेऽपि क्षित्यादिकर्तरि कर्तृत्वं पारिभाषिकं चेत् अदृष्टद्वारा क्षित्यादिजनककृतिमत्यपि कर्तृत्वं पारिभाषिकमेवास्त्विति भावः ।।

ಜೀವನೇ ಅದೃಷ್ಟದ್ವಾರಾ ಕ್ಷಿತ್ಯಾದಿಗಳಿಗೆ ಕರ್ತಾ ಎಂದು ಹೇಳುವುದು ಸರಿಯಲ್ಲ. ಹೀಗೆ ಹೇಳಿದರೆ ಘಟವನ್ನು ತೆಗೆದುಕೊಂಡು ಅನುಭವಿಸುವವರ ಕೃತಿಯಿಂದ ಭೋಜಕಾದೃಷ್ಟದ್ವಾರಾ ಜನ್ಯವಾದ ಘಟವು ಭೋಕ್ತೃಕರ್ತೃಕ ಎಂದೂ ಹೇಳಬೇಕಾದೀತು. ಇದನ್ನು ಮಣಿಗ್ರಂಥದಲ್ಲಿ ಹೀಗೆ ಹೇಳಲಾಗಿದೆ.(ಪು.19)—ಅತಏವ=ಭೋಕ್ತೃವು ಕರ್ತೃ ಎಂದು ಲೋಕಪ್ರಸಿದ್ಧಿ ಇಲ್ಲದಿರುವುದರಿಂದ ಭೋಕ್ತೃವು ಕರ್ತಾ, ಎಂಬ ವ್ಯವಹಾರವಿಲ್ಲ, ಆದ್ದರಿಂದ, ಭೋಕ್ತೃವಿನ ಕೃತಿಯೇ ಕ್ಷಿತ್ಯಾದಿಗಳಿಗೆ ವಿಶೇಷಕಾರಣ, ಎಂದು ಹೇಳಿ ಸಾಧ್ಯಪರ್ಯವಸಾನವನ್ನು ಮೂಲದಲ್ಲಿ ಮಾಡಿದ್ದು ಸರಿಯಲ್ಲ.

ಈ ಆಕ್ಷೇಪಕ್ಕೆ ಹೀಗೆ ಪರಿಹಾರ—ಅದೃಷ್ಟ ಎಂಬ ದ್ವಾರ ಇಲ್ಲದೆಯೂ ಸಾಕ್ಷಾತ್ತಾಗಿ ಘಟಾದ್ಯುಪಾದಾನವಿಷಯಕವಾದ ಕೃತಿ ಇದ್ದರೂ ತದನುಕೂಲ ಶರೀರವ್ಯಾಪಾರ ಇಲ್ಲದವನನ್ನು ಘಟಕರ್ತಾ ಎಂದು ಹೇಳುವುದಿಲ್ಲ, ಕಿಂತು, ತದನುಕೂಲವಾದ ಅಂಗಚೇಷ್ಟಾದಿಗಳು ಯಾರಿಗಿದೆಯೋ ಅವನೇ ಘಟಕರ್ತಾ. ಆದರೆ, ಕ್ಷಿತ್ಯಾದಿಕರ್ತನಾದ ಈಶ್ವರನಿಗೆ ತದನುಕೂಲವಾದ ಶರೀರಚೇಷ್ಟಾ ಇಲ್ಲ, ಆದ್ದರಿಂದ ಅವನನ್ನು ಕರ್ತೃವೆಂದು ಹೇಳಲು ಬರುವುದಿಲ್ಲ, ಹೀಗಾಗಿ, ಕ್ಷಿತ್ಯಾದಿಗಳು ಸಕರ್ತೃಕ ಎಂಬ ವ್ಯವಹಾರ ಬರಲು ಸಾಧ್ಯವಿಲ್ಲ. ಹೀಗೆ ಈ ಅನುಮಾನದಿಂದ ಈಶ್ವರಸಿದ್ಧನಾದರೂ ಮೀಮಾಂಸಕರ ಜೊತೆಗೆ ಸಕರ್ತೃಕತ್ವವಿವಾದವು ಬಗೆಹರಿಯುವುದಿಲ್ಲ. ಆದ್ದರಿಂದ ಅರ್ಥಾಂತರತಾ ದೋಷ.

ಶರೀರವ್ಯಾಪಾರವು ಇಲ್ಲದಿದ್ದರೂ ಕ್ಷಿತ್ಯಾದಿಜನಕವಾದ ಕೃತಿ ಇರುವುದರಿಂದ ಈಶ್ವರನಿಗೆ ಪಾರಿಭಾಷಿಕವಾದ ಕರ್ತೃತ್ವವು ಇದೆ, ಎಂದು ಪರಿಹಾರ ಹೇಳುವುದಾದಲ್ಲಿ ಪ್ರಕೃತದಲ್ಲೂ ಅದೃಷ್ಟದ್ವಾರಾ ಕ್ಷಿತ್ಯಾದಿಜನಕವಾದ ಕೃತಿ ಇರುವ ಭೋಕ್ತೃವಿನಲ್ಲೂ ಪಾರಿಭಾಷಿಕವಾದ ಕರ್ತೃತ್ವವೇ ಬರಲಿ. ತಾವತಾಪಿ ಅನುಮಾನಕ್ಕೆ ಸಿದ್ಧಸಾಧನತಾದೋಷ ಬಂದೇ ಬರುತ್ತದೆ.

## ನ್ಯಾಯದೀಪ

**ननु घटादावुपादानकृतिव्यतिरेकेण घटादिव्यतिरेकदृष्ट्या तादृशकृतिमति कुलाले मुख्यकर्तृत्वोपपत्तेः इहापि क्षित्याद्युपादानकृतिमान् मुख्य एव कर्ता स्यादित्यत आह—घटादाविति । नचानुमानात् तत्सिद्धिरिति पूर्ववाक्यार्थानुवादो—घटादौ दर्शनमात्रेण तत्कल्पने चेति । स्वोपादानगोचरकृतिकल्पने चेत्यर्थः । क्षित्यादाविति योज्यम् । उत्तरवाक्यस्थविपर्ययशब्दार्थं वदन्नेवापायमाह—त्वदुक्तेति ।**

ಕ್ಷಿತ್ಯಾದಿಗಳಲ್ಲಿ ಕೃತಿವ್ಯತಿರೇಕೇಣ ಕಾರ್ಯವ್ಯತಿರೇಕವು ದೃಷ್ಟವಾಗಿರದಿದ್ದರೂ ಘಟಾದಿಗಳಲ್ಲಿ ಕಪಾಲರೂಪ ಉಪಾದಾನ ವಿಷಯಕವಾದ ಕೃತಿವ್ಯತಿರೇಕೇಣ ಕಾರ್ಯವ್ಯತಿರೇಕವು ದೃಷ್ಟವಾದುದರಿಂದ ತಾದೃಶಕೃತ್ಯಾಶ್ರಯನಾದ ಕುಲಾಲಾದಿಗಳನ್ನು ಕರ್ತೃ ಎಂದು ಹೇಳುವಂತೆ ಪ್ರಕೃತದಲ್ಲೂ ಕ್ಷಿತ್ಯಾದಿಉಪಾದಾನವಿಷಯಕವಾದ ಕೃತಿ ಇರುವ ವ್ಯಕ್ತಿಯು ಮುಖ್ಯಕರ್ತನೇ ಆಗುತ್ತಾನೆ ಎಂದು ತಾರ್ಕಿಕರ ಪೂರ್ವಪಕ್ಷ. ಇದಕ್ಕೆ ಪರಿಹಾರ 'ಘಟಾದೌ' ಎಂಬ ಮೂಲದಲ್ಲಿದೆ.

'ಘಟಾದೌ ದರ್ಶನಮಾತ್ರೇಣ ತತ್ ಕಲ್ಪನೇ' ಎಂದು 'ನ ಚ ಅನುಮಾನಾತ್ ತತ್ಸಿದ್ಧಿಃ' ಎಂಬ ಆಚಾರ್ಯರ ವಾಕ್ಯದ ಅರ್ಥವನ್ನು ಅನುವಾದ ಮಾಡಲಾಗಿದೆ. 'ವಿಪರ್ಯಯೇಣಾಪಿ' ಎಂಬ ವಾಕ್ಯದ ಅರ್ಥವನ್ನು-'ತ್ವದುಕ್ತ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**चेष्टाद्वारककृतिरेवेति ।।** ननूक्तमत्र घटादौ कार्यविशेषे चेष्टाद्वारककृतिदृष्टावपि यत्सामान्यविशेषन्यायेन कार्यसामान्ये कृतित्वेन हेतुत्वादिति चेन्न । क्लृप्तया क्षितिजनकादृष्टजनककृत्यैवोपपत्तावक्लृप्तकृतिकल्पनस्यैव बाधकत्वेन बाधकाभाव इत्यस्यासिद्धेरिति भावः ।।

ಚೇಷ್ಟಾದ್ವಾರಕಕೃತಿಯೇ ಕಾರಣವಾಗಲಿ, ಎಂಬ ಆಪಾದನೆಗೆ ಹಿಂದೆಯೇ ಸಮಾಧಾನವನ್ನು ಹೇಳಲಾಗಿದೆ—ಘಟಪಟಾದಿಕಾರ್ಯವಿಶೇಷಕ್ಕೆ ಚೇಷ್ಟಾ-ಅದ್ವಾರಕಕುಲಾಲಾದಿಕೃತಿ ಕಾರಣ. ಇದರಿಂದಾಗಿ 'ಯದ್ವಿಶೇಷಯೋಃ' ಎಂಬ ನಿಯಮದಂತೆ ಸಾಮಾನ್ಯಕಾರ್ಯಕಾರಣಭಾವ ಸಿದ್ಧವಾಗುತ್ತದೆ. ಕಾರ್ಯಸಾಮಾನ್ಯಕ್ಕೆ ಕೃತಿತ್ವೇನ ಕೃತಿಯು ಕಾರಣ, ಎಂದು. ಆದ್ದರಿಂದ, ಕೃತಿಜನ್ಯತ್ವ ಮಾತ್ರವೇ ಕ್ಷಿತ್ಯಾದಿಗಳಲ್ಲಿ ಸಿದ್ಧವಾಗುತ್ತದೆ, ಎಂದು.

ಇದು ತಪ್ಪು. 'ಯದ್ವಿಶೇಷಯೋಃ' ಎಂಬ ನ್ಯಾಯದಲ್ಲಿ 'ಅಸತಿ ಬಾಧಕೇ' ಎಂದಿದೆ. ಪ್ರಕೃತದಲ್ಲಿ ಸಾಮಾನ್ಯಕಾರ್ಯಕಾರಣಭಾವಕ್ಕೆ ಬಾಧಕ ಇದೆ. ಕ್ಷಿತ್ಯಾದಿಗಳಿಗೆ ಕಾರಣವಾದ ಅದೃಷ್ಟದ್ವಾರಕ ಕೃತಿಯು ಕ್ಲೃಪ್ತವಾಗಿರುವಾಗ ಅದೃಷ್ಟವಾದ ಉಪಾದಾನವಿಷಯಕವಾದ ಕೃತಿಕಲ್ಪನಾಗೌರವವೇ ಬಾಧಕ. ಆದ್ದರಿಂದ ಸಾಮಾನ್ಯಕಾರ್ಯಕಾರಣಭಾವವೇ ಸಿದ್ಧವಾಗುವುದಿಲ್ಲ.

## ನ್ಯಾಯದೀಪ

छलोत्तरत्वनिरासायानुमानदोषं निष्कृष्याह—**एवश्चेति** । दर्शनमात्रस्यातिप्रसञ्जकत्वे सतीत्यर्थः। **अकारणत्वादिति** । घटादौ दर्शनमात्रस्य

**शरीरचेष्टाद्यतिप्रसञ्जकत्वात् यत्सामान्यविशेषन्यायस्य अक्लृप्ताने- कादृष्टकल्पनाप्रसङ्गबाधितत्वेनाग्रे दूष्यत्वेन चानवतारादिति भावः ।।**

ಇದುವರೆಗೆ ಹೇಳಿರುವದೋಷ ಛಲೋತ್ತರ, ಎಂಬ ನಿಗ್ರಹಸ್ಥಾನಯುಕ್ತವಾಗಿದೆ. ವಾದಿಯು ತನಗೆ ಅಭಿಪ್ರೇತವಾದ ಅರ್ಥದಲ್ಲಿ ಒಂದು ಶಬ್ದವನ್ನು ಪ್ರಯೋಗಮಾಡಿದರೆ ಅದಕ್ಕೆ ಅರ್ಥಾಂತರವನ್ನು ಮಾಡಿ ದೋಷ ಹೇಳುವುದೇ ಛಲೋತ್ತರ. ಪ್ರಕೃತದಲ್ಲಿ ಉಪಾದಾನವಿಷಯಕ ಕೃತಿಜನ್ಯತ್ವವನ್ನು ನೈಯಾಯಿಕರು ಸಾಧನೆ ಮಾಡಿದರೆ, ಕೃತಿಜನ್ಯತ್ವವು ಸಾಧ್ಯ, ಎಂದು ಪರಿಗಣಿಸಿ ಅದೃಷ್ಟದ್ವಾರಕ ಕೃತಿಜನ್ಯತ್ವವನ್ನು ಪಕ್ಷದಲ್ಲಿ ಹೇಳಿ ಸಾಧ್ಯಪರ್ಯವಸಾನ ಮಾಡಲಾಗಿದೆ. ಇದು ಛಲೋತ್ತರ. ಇದರ ಪರಿಹಾರಕ್ಕಾಗಿ, ಹೀಗೆ ವಾದಿಯು ಸಾಧಿಸಿದರೆ ಈ ದೋಷ, ಎಂದು ನಿಷ್ಕರ್ಷೆ ಮಾಡಿ 'ಏವಂ ಚ' ಎಂಬ ಮೂಲದಲ್ಲಿ ಹೇಳಲಾಗಿದೆ. ಕೃತಿತ್ವೇನ ಕೃತಿಜನ್ಯತ್ವವನ್ನು ಸಾಧನೆ ಮಾಡಿದರೆ ಮಾತ್ರ ಅದೃಷ್ಟದ್ವಾರಕ ಅಸ್ಮದಾದಿಕೃತಿಜನ್ಯತ್ವವಿರುವುದರಿಂದ ಸಿದ್ಧಸಾಧನತಾವನ್ನು ಹೇಳಲಾಗಿದೆ. ಆದ್ದರಿಂದ ಛಲೋತ್ತರವಲ್ಲ.

'ಏವಂ ಚ' ಎಂದರೆ ಘಟಾದಿಗಳಲ್ಲಿ ದರ್ಶನಮಾತ್ರದಿಂದ ವಿಶೇಷಕೃತಿಜನ್ಯತ್ವವನ್ನು ಸಾಧನೆ ಮಾಡಿದರೆ ತುಲ್ಯಯುಕ್ತ್ಯಾ ಚೇಷ್ಟಾಜನ್ಯತ್ವವನ್ನೂ ಅಂಗೀಕರಿಸಬೇಕಾದೀತು, ಎಂಬ ಅತಿಪ್ರಸಂಗ ವಿರುವುದರಿಂದ ಎಂದರ್ಥ.

'ಅಕಾರಣತ್ವಾತ್' ಎಂದಿರುವ ಅಭಿಪ್ರಾಯ ಹೀಗೆ—ಘಟಾದಿಗಳಲ್ಲಿ ಕಂಡಿರುವ ಮಾತ್ರದಿಂದ ಉಪಾದಾನವಿಷಯಕ-ಕೃತಿಜನ್ಯತ್ವವನ್ನು ಸಾಧನೆಮಾಡಿದರೆ ತುಲ್ಯಯುಕ್ತ್ಯಾ ಚೇಷ್ಟಾ ಜನ್ಯತ್ವವೂ ಸಿದ್ಧವಾದೀತು. ''ಯದ್ ವಿಶೇಷಯೋಃ'' ಇತ್ಯಾದಿ ನ್ಯಾಯವನ್ನು ಅನುಸರಿಸುವುದಕ್ಕೆ ಪ್ರಕೃತದಲ್ಲಿ ಅಕ್ಲೃಪ್ತವಾದ ಅನೇಕ ಅದೃಷ್ಟವಿಷಯಗಳನ್ನು ಕಲ್ಪನೆ ಮಾಡಬೇಕಾದ ಬಾಧಕವಿದೆ. ಮುಂದೆ ಆ ನ್ಯಾಯದ ನಿರಾಕರಣೆಯನ್ನೂ ಮಾಡಲಾಗಿದೆ. ಆದ್ದರಿಂದ 'ಯದ್ವಿಶೇಷಯೋಃ' ಎಂಬ ನ್ಯಾಯವನ್ನು ಅವಲಂಬಿಸಿ 'ಸ್ವಜನ್ಯ' ಇತ್ಯಾದಿ ಪರೋಕ್ತರೂಪೇಣ ಕೃತಿಯು ಕಾರಣವಲ್ಲ.

## ಅವತಾರಿಕೆ

**नन्वस्तु तर्हि उपादानगोचरेत्याद्येव साध्यमित्यतः 'कार्यसामान्यं हि कारणसामान्यायत्तम्' इति टीकां हृदि कृत्वा पराभिमतसाध्यं निराह —किंचोपादानेत्यादिना ।**

'ಸ್ವಜನ್ಯಾದೃಷ್ಟ' ಇತ್ಯಾದಿ ಸಾಧ್ಯಾಂಶವನ್ನು ಸೇರಿಸಿರುವ ಕೃತಿತ್ವವು ಗುರುಭೂತವಾಗುವು ದಾದಲ್ಲಿ ಅದನ್ನು ಬಿಟ್ಟು ಉಪಾದಾನಗೋಚರಕೃತಿಜನ್ಯ, ಎಂದಿಷ್ಟೇ ಸಾಧ್ಯವನ್ನಾಗಿ ಮಾಡಿ

ಈಶ್ವರನನ್ನು ಸಾಧನೆ ಮಾಡೋಣ ಎಂದರೆ ಅದಕ್ಕೂ 'ಕಿಂಚ' ಎಂದು ಮೂಲದಲ್ಲಿ ದೋಷವನ್ನು ಹೇಳಲಾಗಿದೆ. ಆ ಮೂಲಕ್ಕೂ 'ಕಾರ್ಯಸಾಮಾನ್ಯಂ ಚ' ಎಂಬ ಶಾಸ್ತ್ರಯೋನಿತ್ವಾಧಿಕರಣ ಸುಧಾವಾಕ್ಯವೇ ಆಧಾರ.

**किञ्च, उपादानशब्दो यदि यत्किंचिदुपादानपरः तदा शब्दफूत्कारादौ सिद्धसाधनम् । तस्यापि यत्किंचित्प्रत्युपादानभूतमृदङ्गादिगोचरास्मदादिनिष्ठज्ञानादिजन्यत्वात् । यदितु सर्वलोकसिद्धव्युत्पत्त्यनुसारेण समभिव्याहृतपरः तदोपादानशब्दार्थीभूतसमवायिकारणे लाघवात् समवायिकारणभागत्यागेन क्षित्यादिकं प्रति त्वदुक्तविपरीत क्षित्यादिकारणगोचरकृतित्वेनैव कारणत्वग्रहात् तथाभूतकारणसाधनेऽपि सिद्धसाधनमेव । क्षितिजनकादृष्टजनकज्ञानादेरदृष्टद्वारा क्षितिजनकहविरादिविषयत्वात् । नच हविरादि क्षितिं प्रति प्रयोजकमेव, नतु कारणमिति वाच्यम् । तत्रापि कारणशरीरप्रविष्टानन्यथासिद्धभागत्यागेन त्वदुक्तविपरीतनियतपूर्ववर्त्तिरूप-प्रयोजकगोचरकृतित्वेनैव हेतुत्वेऽतिलाघवात् ।**

ಇನ್ನೊಂದು ದೋಷವಿದೆ—ಸಾಧ್ಯಘಟಕವಾದ ಉಪಾದಾನ ಪದಕ್ಕೆ "ಯಾವುದಾದರೊಂದಕ್ಕೆ ಉಪಾದಾನ" ಎಂದು ಅರ್ಥವಾದರೆ ಶಬ್ದ ಮತ್ತು ಫೂತ್ಕಾರದಲ್ಲಿ ಸಿದ್ಧಸಾಧನತಾ. ಮೃದಂಗಾದಿಗಳನ್ನು ಬಡಿದಾಗ ಶಬ್ದ ಹುಟ್ಟುತ್ತದೆ. ಮೃದಂಗವಿಷಯಕ ಪ್ರಯತ್ನದಿಂದ ಅದು ಜನ್ಯ. ಮೃದಂಗವು ಸ್ವಗತರೂಪಕ್ಕೆ ಉಪಾದಾನವಾಗಿದೆ. ಹೀಗೆ, ಶಬ್ದವು ಮೃದಂಗವಿಷಯಕವಾದ ಮೃದಂಗವಾದಕನ ಕೃತಿಯಿಂದ ಜನ್ಯ ಎಂದು ಸಿದ್ಧವಾಗಿದೆ. ಅದೂ ಪಕ್ಷದಲ್ಲಿ ಸೇರಿರುವುದರಿಂದ ಅಂಶೇ ಸಿದ್ಧಸಾಧನತಾ. ಅದರಂತೆ, ಫೂತ್ಕಾರವು ತಾಲ್ವಾದಿಸ್ಥಾನ ವಿಷಯಕ ಅಸ್ಮದಾದಿ ಯತ್ನಜನ್ಯವಾಗಿದೆ.

ವಸ್ತುತಃ, ಲೋಕಸಿದ್ಧವಾದ ವ್ಯುತ್ಪತ್ತಿಗೆ ಅನುಸಾರವಾಗಿ ಸಾಪೇಕ್ಷವಾದ ಉಪಾದಾನಪದಕ್ಕೆ ಸಮಭಿವ್ಯಾಹೃತೋಪಾದಾನ ಎಂದೇ ಅರ್ಥ. ಈ ಅರ್ಥವನ್ನು ಮಾಡಿದಾಗ ಹಿಂದೆ ಹೇಳಿರುವ ಸಿದ್ಧಸಾಧನತಾ ಇಲ್ಲ. ಏಕೆಂದರೆ, ಶಬ್ದಕ್ಕೆ ಉಪಾದಾನವಾದುದು ಆಕಾಶ. ತದ್ಗೋಚರವಾದ ಮೃದಂಗವಾದಕನ ಕೃತಿ ಇಲ್ಲ. ಸಿದ್ಧಸಾಧನತಾ ಪರಿಹಾರವಾಗುತ್ತದೆ. ಆದರೂ ಉಪಾದಾನಪದಕ್ಕೆ ಸಮವಾಯಿಕಾರಣ, ಎಂದರ್ಥ. ಅದರಲ್ಲಿ ಸಮವಾಯಿ ಎಂಬ ಅಂಶವನ್ನು ಬಿಟ್ಟರೆ

**शरीरचेष्टाद्यतिप्रसञ्जकत्वात् यत्सामान्यविशेषन्यायस्य अक्लृप्ताने-कादृष्टकल्पनाप्रसङ्गबाधितत्वेनाग्रे दूष्यत्वेन चानवतारादिति भावः ॥**

ಇದುವರೆಗೆ ಹೇಳಿರುವದೋಷ ಛಲೋತ್ತರ, ಎಂಬ ನಿಗ್ರಹಸ್ಥಾನಯುಕ್ತವಾಗಿದೆ. ವಾದಿಯು ತನಗೆ ಅಭಿಪ್ರೇತವಾದ ಅರ್ಥದಲ್ಲಿ ಒಂದು ಶಬ್ದವನ್ನು ಪ್ರಯೋಗಮಾಡಿದರೆ ಅದಕ್ಕೆ ಅರ್ಥಾಂತರವನ್ನು ಮಾಡಿ ದೋಷ ಹೇಳುವುದೇ ಛಲೋತ್ತರ. ಪ್ರಕೃತದಲ್ಲಿ ಉಪಾದಾನವಿಷಯಕ ಕೃತಿಜನ್ಯತ್ವವನ್ನು ನೈಯಾಯಿಕರು ಸಾಧನೆ ಮಾಡಿದರೆ, ಕೃತಿಜನ್ಯತ್ವವು ಸಾಧ್ಯ, ಎಂದು ಪರಿಗಣಿಸಿ ಅದೃಷ್ಟದ್ವಾರಕ ಕೃತಿಜನ್ಯತ್ವವನ್ನು ಪಕ್ಷದಲ್ಲಿ ಹೇಳಿ ಸಾಧ್ಯಪರ್ಯವಸಾನ ಮಾಡಲಾಗಿದೆ. ಇದು ಛಲೋತ್ತರ. ಇದರ ಪರಿಹಾರಕ್ಕಾಗಿ, ಹೀಗೆ ವಾದಿಯು ಸಾಧಿಸಿದರೆ ಈ ದೋಷ, ಎಂದು ನಿಷ್ಕರ್ಷೆ ಮಾಡಿ 'ಏವಂ ಚ' ಎಂಬ ಮೂಲದಲ್ಲಿ ಹೇಳಲಾಗಿದೆ. ಕೃತಿತ್ವೇನ ಕೃತಿಜನ್ಯತ್ವವನ್ನು ಸಾಧನೆ ಮಾಡಿದರೆ ಮಾತ್ರ ಅದೃಷ್ಟದ್ವಾರಕ ಅಸ್ಮದಾದಿಕೃತಿಜನ್ಯತ್ವವಿರುವುದರಿಂದ ಸಿದ್ಧಸಾಧನತಾವನ್ನು ಹೇಳಲಾಗಿದೆ. ಆದ್ದರಿಂದ ಛಲೋತ್ತರವಲ್ಲ.

'ಏವಂ ಚ' ಎಂದರೆ ಘಟಾದಿಗಳಲ್ಲಿ ದರ್ಶನಮಾತ್ರದಿಂದ ವಿಶೇಷಕೃತಿಜನ್ಯತ್ವವನ್ನು ಸಾಧನೆ ಮಾಡಿದರೆ ತುಲ್ಯಯುಕ್ತ್ಯಾ ಚೇಷ್ಟಾಜನ್ಯತ್ವವನ್ನೂ ಅಂಗೀಕರಿಸಬೇಕಾದೀತು, ಎಂಬ ಅತಿಪ್ರಸಂಗ ವಿರುವುದರಿಂದ ಎಂದರ್ಥ.

'ಅಕಾರಣತ್ವಾತ್' ಎಂದಿರುವ ಅಭಿಪ್ರಾಯ ಹೀಗೆ—ಘಟಾದಿಗಳಲ್ಲಿ ಕಂಡಿರುವ ಮಾತ್ರದಿಂದ ಉಪಾದಾನವಿಷಯಕ–ಕೃತಿಜನ್ಯತ್ವವನ್ನು ಸಾಧನೆಮಾಡಿದರೆ ತುಲ್ಯಯುಕ್ತ್ಯಾ ಚೇಷ್ಟಾಜನ್ಯತ್ವವೂ ಸಿದ್ಧವಾದೀತು. ''ಯದ್ ವಿಶೇಷಯೋಃ'' ಇತ್ಯಾದಿ ನ್ಯಾಯವನ್ನು ಅನುಸರಿಸುವುದಕ್ಕೆ ಪ್ರಕೃತದಲ್ಲಿ ಅಕ್ಲೃಪ್ತವಾದ ಅನೇಕ ಅದೃಷ್ಟವಿಷಯಗಳನ್ನು ಕಲ್ಪನೆ ಮಾಡಬೇಕಾದ ಬಾಧಕವಿದೆ. ಮುಂದೆ ಆ ನ್ಯಾಯದ ನಿರಾಕರಣೆಯನ್ನೂ ಮಾಡಲಾಗಿದೆ. ಆದ್ದರಿಂದ 'ಯದ್ವಿಶೇಷಯೋಃ' ಎಂಬ ನ್ಯಾಯವನ್ನು ಅವಲಂಬಿಸಿ 'ಸ್ವಜನ್ಯ' ಇತ್ಯಾದಿ ಪರೋಕ್ತರೂಪೇಣ ಕೃತಿಯು ಕಾರಣವಲ್ಲ.

## ಅವತಾರಿಕೆ

**नन्वस्तु तर्हि उपादानगोचरेत्याद्येव साध्यमित्यतः 'कार्यसामान्यं हि कारणसामान्यायत्तम्' इति टीकां हृदि कृत्वा पराभिमतसाध्यं निराह —किंचोपादानेत्यादिना ।**

'ಸ್ವಜನ್ಯಾದೃಷ್ಟ' ಇತ್ಯಾದಿ ಸಾಧ್ಯಾಂಶವನ್ನು ಸೇರಿಸಿರುವ ಕೃತಿತ್ವವು ಗುರುಭೂತವಾಗುವು ದಾದಲ್ಲಿ ಅದನ್ನು ಬಿಟ್ಟು ಉಪಾದಾನಗೋಚರಕೃತಿಜನ್ಯ, ಎಂದಿಷ್ಟೇ ಸಾಧ್ಯವನ್ನಾಗಿ ಮಾಡಿ

ಈಶ್ವರನನ್ನು ಸಾಧನೆ ಮಾಡೋಣ ಎಂದರೆ ಅದಕ್ಕೂ 'ಕಿಂಚ' ಎಂದು ಮೂಲದಲ್ಲಿ ದೋಷವನ್ನು ಹೇಳಲಾಗಿದೆ. ಆ ಮೂಲಕ್ಕೂ 'ಕಾರ್ಯಸಾಮಾನ್ಯಂ ಚ' ಎಂಬ ಶಾಸ್ತ್ರಯೋನಿತ್ವಾಧಿಕರಣ ಸುಧಾವಾಕ್ಯವೇ ಆಧಾರ.

**किंञ्च, उपादानशब्दो यदि यत्किंञ्चिदुपादानपरः तदा शब्दफूत्कारादौ सिद्धसाधनम् । तस्यापि यत्किंञ्चित्प्रत्युपादानभूतमृदङ्गादिगोचरास्मदादिनिष्ठज्ञानादिजन्यत्वात् । यदितु सर्वलोकसिद्धव्युत्पत्त्यनुसारेण समभिव्याहृतपरः तदोपादानशब्दार्थीभूतसमवायिकारणे लाघवात् समवायिकारणभागत्यागेन क्षित्यादिकं प्रति त्वदुक्तविपरीत क्षित्यादिकारणगोचरकृतित्वेनैव कारणत्वग्रहात् तथाभूतकारणसाधनेऽपि सिद्धसाधनमेव । क्षितिजनकादृष्टजनकज्ञानादेरदृष्टद्वारा क्षितिजनकहविरादिविषयत्वात् । नच हविरादि क्षितिं प्रति प्रयोजकमेव, नतु कारणमिति वाच्यम् । तत्रापि कारणशरीरप्रविष्टानन्यथासिद्धभागत्यागेन त्वदुक्तविपरीतनियतपूर्ववर्त्तिरूप-प्रयोजकगोचरकृतित्वेनैव हेतुत्वेऽतिलाघवात् ।**

ಇನ್ನೊಂದು ದೋಷವಿದೆ—ಸಾಧ್ಯಘಟಕವಾದ ಉಪಾದಾನ ಪದಕ್ಕೆ ''ಯಾವುದಾದರೊಂದಕ್ಕೆ ಉಪಾದಾನ'' ಎಂದು ಅರ್ಥವಾದರೆ ಶಬ್ದ ಮತ್ತು ಫೂತ್ಕಾರದಲ್ಲಿ ಸಿದ್ಧಸಾಧನತಾ. ಮೃದಂಗಾದಿಗಳನ್ನು ಬಡಿದಾಗ ಶಬ್ದ ಹುಟ್ಟುತ್ತದೆ. ಮೃದಂಗವಿಷಯಕ ಪ್ರಯತ್ನದಿಂದ ಅದು ಜನ್ಯ. ಮೃದಂಗವು ಸ್ವಗತರೂಪಕ್ಕೆ ಉಪಾದಾನವಾಗಿದೆ. ಹೀಗೆ, ಶಬ್ದವು ಮೃದಂಗವಿಷಯಕವಾದ ಮೃದಂಗವಾದಕನ ಕೃತಿಯಿಂದ ಜನ್ಯ ಎಂದು ಸಿದ್ಧವಾಗಿದೆ. ಅದೂ ಪಕ್ಷದಲ್ಲಿ ಸೇರಿರುವುದರಿಂದ ಅಂಶೇ ಸಿದ್ಧಸಾಧನತಾ. ಅದರಂತೆ, ಫೂತ್ಕಾರವು ತಾಲ್ವಾದಿಸ್ಥಾನ ವಿಷಯಕ ಅಸ್ಮದಾದಿ ಯತ್ನಜನ್ಯವಾಗಿದೆ.

ವಸ್ತುತಃ, ಲೋಕಸಿದ್ಧವಾದ ವ್ಯುತ್ಪತ್ತಿಗೆ ಅನುಸಾರವಾಗಿ ಸಾಪೇಕ್ಷವಾದ ಉಪಾದಾನಪದಕ್ಕೆ ಸಮಭಿವ್ಯಾಹೃತೋಪಾದಾನ ಎಂದೇ ಅರ್ಥ. ಈ ಅರ್ಥವನ್ನು ಮಾಡಿದಾಗ ಹಿಂದೆ ಹೇಳಿರುವ ಸಿದ್ಧಸಾಧನತಾ ಇಲ್ಲ. ಏಕೆಂದರೆ, ಶಬ್ದಕ್ಕೆ ಉಪಾದಾನವಾದುದು ಆಕಾಶ. ತದ್ಗೋಚರವಾದ ಮೃದಂಗವಾದಕನ ಕೃತಿ ಇಲ್ಲ. ಸಿದ್ಧಸಾಧನತಾ ಪರಿಹಾರವಾಗುತ್ತದೆ. ಆದರೂ ಉಪಾದಾನಪದಕ್ಕೆ ಸಮವಾಯಿಕಾರಣ, ಎಂದರ್ಥ. ಅದರಲ್ಲಿ ಸಮವಾಯಿ ಎಂಬ ಅಂಶವನ್ನು ಬಿಟ್ಟರೆ

ಕಾರಣಗೋಚರಕೃತಿತ್ವೇನ ಕೃತಿಯು ಕ್ಷಿತ್ಯಾದಿಗಳಿಗೆ ಕಾರಣ ಎಂದಾಗುತ್ತದೆ. ಘಟಾದಿಗಳಿಗೆ, ಲಾಘವಾತ್ ಕಾರಣವಿಷಯಕಕೃತಿಯೇ ಕಾರಣ. ಆಗ ಮತ್ತೆ ಸಿದ್ಧಸಾಧನತಾದೋಷ. ಹೇಗೆಂದರೆ, ಕ್ಷಿತ್ಯಾದಿಗಳಿಗೆ ಕಾರಣವಾದುದು ಭೋಜಕಾದೃಷ್ಟ. ಅದಕ್ಕೆ ಜನಕಗಳಾದ, ಭೋಕ್ತೃವಿನಲ್ಲಿರುವ ಹವಿರಾದಿವಿಷಯಕಗಳಾದ ಜ್ಞಾನ-ಇಚ್ಛಾ-ಕೃತಿಗಳು ಅದೃಷ್ಟದ್ವಾರಾ ಕ್ಷಿತ್ಯಾದಿಕಾರ್ಯಗಳಿಗೆ ಕಾರಣವಾಗಿದೆ.

**ಆಕ್ಷೇಪ**—ಹವಿರಾದಿಗಳು ಕ್ಷಿತಿಗೆ ಪ್ರಯೋಜಕಗಳು ಮಾತ್ರ. ಜನಕಗಳಲ್ಲ. ಆದ್ದರಿಂದ ಹವಿರಾದಿವಿಷಯಕ-ಜ್ಞಾನಾದಿಗಳು ಕ್ಷಿತಿಕಾರಣವಿಷಯಕಗಳಲ್ಲ.

**ಸಮಾಧಾನ**—ಹವಿರಾದಿಗಳು ಕ್ಷಿತಿಗೆ ನಿಯತಪೂರ್ವವರ್ತಿಗಳಾದರೂ ಅನ್ಯಥಾಸಿದ್ಧ ಗಳಾದುದರಿಂದ ಕಾರಣಗಳಲ್ಲ, ಎನ್ನಬೇಕು. ಆದರೆ, ಕಾರಣತಾಶರೀರದಲ್ಲೂ ಲಾಘವಾತ್ ನಿಯತಪೂರ್ವವೃತ್ತಿತ್ವಾಂಶವನ್ನು ಮಾತ್ರ ಪರಿಗ್ರಹಿಸಿ ಅನನ್ಯಥಾಸಿದ್ಧತ್ವಾಂಶವನ್ನು ಪರಿತ್ಯಾಗ ಮಾಡಬಹುದು. ಆಗ ಕಾರ್ಯಪ್ರಯೋಜಕವಿಷಯಕ-ಜ್ಞಾನಾದಿಜನ್ಯತ್ವಂ, ಎಂದು ಸಾಧ್ಯದ ಸ್ವರೂಪವಾಗುತ್ತದೆ. ಕೃತಿಗೆ ಪರೋಕ್ತವಾದ ಕಾರಣವಿಷಯಕಕೃತಿತ್ವೇನ ಜನಕತ್ವವನ್ನು ಹೇಳುವುದಕ್ಕಿಂತಲೂ ಪ್ರಯೋಜಕವಿಷಯಕಕೃತಿತ್ವೇನ ಜನಕತ್ವವನ್ನು ಹೇಳುವುದು ಲಾಘವ. ಆದ್ದರಿಂದ ಹವಿರಾದಿವಿಷಯಕ ಜೀವಕೃತಿಜನ್ಯತ್ವವು ಸಿದ್ಧವಾದುದರಿಂದ ಸಿದ್ಧಸಾಧನತಾ.

(ಇಲ್ಲಿ 'ನಚಾನುಮಾನಾತ್ ತತ್ಸಿದ್ಧಿಃ, ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್' ಎಂಬ ಆಚಾರ್ಯರ ವಾಕ್ಯದ ವಿವರಣೆಯ ರೂಪದಲ್ಲಿ ಎರಡು ಅಂಶಗಳನ್ನು ಹೇಳಲಾಗಿದೆ—

1. ಉಪಾದಾನಗೋಚರಕೃತಿತ್ವೇನ ಕೃತಿಜನ್ಯತ್ವಾನುಮಾನದಿಂದ ನ ತತ್ಸಿದ್ಧಿಃ=ಈಶ್ವರ ಸಿದ್ಧಿಯಲ್ಲ. ವಿಪರ್ಯಯೇಣಾಪಿ=(ತ್ವದುಕ್ತವಿಪರೀತ...ಮೂಲ) ಅವನು ಹೇಳಿದ್ದ ಉಪಾದಾನ ಗೋಚರಕೃತಿತ್ವಕ್ಕಿಂತ ವಿಪರೀತವಾದ ಕಾರಣಗೋಚರಕೃತಿತ್ವೇನ ಕೃತಿಕಾರ್ಯಗಳಿಗೆ ಕಾರ್ಯ-ಕಾರಣ ಭಾವಗ್ರಹದಿಂದ ಕಾರಣಗೋಚರಕೃತಿಜನ್ಯತ್ವವನ್ನೇ ಸಾಧನೆ ಮಾಡಬಹುದು.

2. ಅಥವಾ, ಕಾರಣ-ಶಬ್ದಾರ್ಥವಾದ ಅನನ್ಯಥಾಸಿದ್ಧ-ನಿಯತಪೂರ್ವವರ್ತಿ-ಗೋಚರ ಕೃತಿಜನ್ಯತ್ವಕ್ಕೆ ವಿಪರೀತವಾದ ನಿಯತಪೂರ್ವವೃತ್ತಿರೂಪ-ಪ್ರಯೋಜಕವಿಷಯಕಕೃತಿಜನ್ಯತ್ವವನ್ನೇ ಸಾಧನೆ ಮಾಡಬಹುದು, ಎಂದು.)

## ನ್ಯಾಯದೀಪ

**सिद्धेति ।** अंशतः सिद्धसाधनमित्यर्थः । नच तत्र ज्ञानेच्छयोर्न कारणत्वम् । किंतु कृतिमात्रस्यैव । मिलितानां तेषां

स्वविषयसमवेतकार्यं प्रत्येव जनकत्वादिति वाच्यम् । ज्ञानादिघटितं साध्यत्रयमेवेदमिति मणिकृदभिमतत्वेनोक्तदोषापरिहारात् ।

यदत्रोक्तं ठक्कुरादौ, उपादानगोचरत्वेन यस्य ज्ञानादेर्जनकत्वं तादृशज्ञानादिजन्यत्वं साध्यम् । तेन च रूपेण स्वविषयसमवेतकार्यप्रत्येव जनकत्वान्न दोषः । स्वजन्यादृष्टेत्यादिविशेषणं तु काली(कार्य)रूपेऽशतःसिद्धसाधनतावारणायेति । तन्न। वक्ष्यमाणदिशा लाघवेन कारणगोचरज्ञानादित्वेन जनकतयोक्तरूपेण जनकत्वस्य काप्यकल्पनात् ।।

**ಆಕ್ಷೇಪ**—ಶಬ್ದದಲ್ಲಿ ಹಿಂದೆ ಹೇಳಿದ ಸಿದ್ಧಸಾಧನತಾ ಇಲ್ಲ. ಶಬ್ದಕ್ಕೆ ಮೃದಂಗವಿಷಯಕಕೃತಿ ಮಾತ್ರಕಾರಣ. ತದ್ವಿಷಯಕ ಜ್ಞಾನೇಚ್ಛೆಗಳು ಕಾರಣಗಳಲ್ಲ. ಜ್ಞಾನೇಚ್ಛಾಕೃತಿಗಳು ಸ್ವವಿಷಯ ಸಮವೇತವಾದ ಕಾರ್ಯಕ್ಕೆ ಮಾತ್ರ ಕಾರಣಗಳು. (ಜ್ಞಾನಾದೀನಾಂ ತ್ರಯಾಣಾಂ ಸ್ವವಿಷಯ ಸಮವೇತಕಾರ್ಯಂ ಪ್ರತ್ಯೇವ ಜನಕತ್ವಾವಧಾರಣೇನ...। ಮಣಿ.25) ಉದಾಹರಣೆಗೆ, ಜ್ಞಾನಾದಿವಿಷಯವಾದುದು ಕಪಾಲ. ತತ್‌ಸಮವೇತಕಾರ್ಯ ಘಟ. ಅದಕ್ಕೆ ಮಾತ್ರ ಅವು ಮೂರು ಮಿಳಿತವಾಗಿ ಕಾರಣಗಳು. ಪ್ರಕೃತದಲ್ಲಿ ಶಬ್ದವು ಕೃತಿವಿಷಯವಾದ ಮೃದಂಗದಲ್ಲಿ ಸಮವೇತವಾದ ಕಾರ್ಯವಲ್ಲ. ಆದ್ದರಿಂದ ಅದಕ್ಕೆ ಅವು ಮೂರು ಕಾರಣಗಳಲ್ಲ. ಕೃತಿಮಾತ್ರ ಕಾರಣ. ಹೀಗೆ, ಶಬ್ದದಲ್ಲಿ ತ್ರಿತಯಜನ್ಯತ್ವವು ಇಲ್ಲ, ಸಿದ್ಧಸಾಧನತಾ ಹೇಗೆ?

**ಸಮಾಧಾನ**—ಮಣಿಗ್ರಂಥದಲ್ಲಿ ಜ್ಞಾನಾದಿ ತ್ರಿತಯಜನ್ಯತ್ವವನ್ನು ಸಾಧ್ಯವೆಂದು ಹೇಳಿಲ್ಲ. ('ಯತಃ ಏಕೈಕವ್ಯತಿರೇಕಾತ್ ಕಾರ್ಯವ್ಯತಿರೇಕಃ, ಅತಃ ಕಾರ್ಯತ್ವಾತ್ ಏಕೈಕಂ ಸಿದ್ಧ್ಯತ್ ತ್ರಯಮಪಿ ಸಿದ್ಧ್ಯತಿ, ಅರ್ಥಸ್ತು ಸಮಾಜಃ। ಮಣಿ.ಪು.37) ಆದ್ದರಿಂದ ಜ್ಞಾನಾದಿ ಏಕೈಕಜನ್ಯತ್ವವೇ ಸಾಧ್ಯ. ಶಬ್ದದಲ್ಲಿ ಅವುಗಳಲ್ಲಿ ಒಂದಾದ ಕೃತಿಜನ್ಯತ್ವವು ಇದೆ. ಸಿದ್ಧಸಾಧನತಾ ಅಪರಿಹಾರ್ಯ.

ಗೋಪೀನಾಥಠಕ್ಕುರರು ಹೀಗೆ ಹೇಳುತ್ತಾರೆ— ಉಪಾದಾನವಿಷಯಕತ್ವೇನ ಯಾವ ಜ್ಞಾನಾದಿಗಳು ಜನಕವೋ ತಾದೃಶಜ್ಞಾನಾದಿಜನ್ಯತ್ವವು ಸಾಧ್ಯ. ತೇನರೂಪೇಣ ಜ್ಞಾನಾದಿಗಳು ಸ್ವಸಮವೇತಕಾರ್ಯಕ್ಕೆ ಮಾತ್ರ ಜನಕ. ಶಬ್ದಕ್ಕೆ ಮೃದಂಗವು ಉಪಾದಾನವಲ್ಲ. ಆದ್ದರಿಂದ ಮೃದಂಗವಿಷಯಕ-ಕೃತಿಜನ್ಯತ್ವವು ಶಬ್ದದಲ್ಲಿ ಇದೆ, ಎಂದು ಸಿದ್ಧಸಾಧನತಾದೋಷ ಇಲ್ಲ. ಹೀಗೆ ಹೇಳಿದಾಗ ಸಾಧ್ಯದಲ್ಲಿ ಕೃತಿಗೆ ಸ್ವಜನ್ಯಾದೃಷ್ಟಪ್ರಾಗಭಾವೇತ್ಯಾದಿ ವಿಶೇಷಣದ ಅಗತ್ಯವಿಲ್ಲ. ಜೀವೀಯಕೃತಿಯು ಉಪಾದಾನಗೋಚರವಲ್ಲದಿರುವುದರಿಂದಲೇ ವಾರಣೆಯಾಗುತ್ತದೆ. ಆದರೂ

ಕಾಲೀರೂಪದಲ್ಲಿ ಅಂಶತಃ ಸಿದ್ಧಸಾಧನತಾವಾರಣೆಗಾಗಿ ಆ ವಿಶೇಷಣ ಬೇಕು. 'ಕಾಲಿ'ಯ ತಪಃ ಕೃತಿಯೂ ರೂಪಾಂತರಕ್ಕೆ ಸಮವಾಯಿಕಾರಣವಾದ ಶರೀರವಿಷಯಕವಾಗಿದೆ. ತಜ್ಜನ್ಯತ್ವವು ರೂಪದಲ್ಲಿ ಸಿದ್ಧವಾದುದರಿಂದ ಸಿದ್ಧಸಾಧನತಾ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ಆ ವಿಶೇಷಣ, ಎಂದು.

ಇದೂ ಸರಿಯಲ್ಲ. ಮುಂದೆ ಹೇಳಿದಂತೆ ಉಪಾದಾನಾಂಶವನ್ನು ಬಿಟ್ಟು ಕಾರಣಗೋಚರ ಜ್ಞಾನತ್ವಾದಿನಾ ಜ್ಞಾನಾದಿಗಳಿಗೆ ಜನಕತ್ವವೇ ಕ್ಲೃಪ್ತ. ಉಪಾದಾನಗೋಚರ ಜ್ಞಾನತ್ವಾದಿನಾ ಅಲ್ಲ. ಆದ್ದರಿಂದ ಮೂಲದಲ್ಲಿ ಶಬ್ದದಲ್ಲಿ ಸಿದ್ಧಸಾಧನತಾ ಹೇಳಿರುವುದು ಯುಕ್ತವಾಗಿದೆ.

## ನ್ಯಾಯದೀಪ

**यत्कींश्चिदिति ।** स्वगतरूपादिकं प्रतीत्यर्थः । मृदङ्गादीत्यादिपदेन ताल्वादिग्रहः। **उपादानशब्दार्थीभूतेत्यादि ।** वेदान्तिमत इव परिणामिकारणानङ्गीकारात् समवायिकारणेत्युक्तम् । स्वोक्तदोषं मूलारूढं दर्शयितुं नचानुमानात् तत्सिद्धिरिति पूर्ववाक्यस्य 'क्षित्याद्युपादानगोचरज्ञानादित्वेन तज्जन्यत्वसिद्धिर्नच' इत्यर्थमुपेत्योत्तरवाक्यस्थविपर्ययशब्दार्थमाह–**त्वदुक्तेति । कारणत्वग्रहादिति ।** घटादौ लाघवेन घटादिकारणगोचरकृतित्वेनैव कारणताग्रहात् क्षित्यादावपि तथैव कारणत्वकल्पनादित्यर्थः ।

अस्तु तथैवोपादानपदं कारणमात्रपरम् । तावतापीश्वरसिद्धेरित्यत आह—**तथाभूतेति ।** क्षित्यादिकारणगोचरकृतित्वेन रूपेण कृतिरूपकारणसाधनेऽपीत्यर्थः । उक्तरूपज्ञानवज्जन्यं, चिकीर्षावज्जन्यमित्यत्राप्येवं दोषो ध्येय इति भावेन कृतिमात्रस्य प्राग्व्यवहारेऽपि ज्ञानादेरित्युक्तम् । नचैतदर्थमेव स्वजन्यादृष्टेत्यादि विशेषणमुक्तमिति वाच्यम् । तत्पक्षेऽप्रयोजकत्वदोषस्य हेतावुक्तत्वादिति भावः । **प्रयोजकमेवेति ।** घटे कुलालपितृवदिति भावः । मूलारूढताप्रदर्शनाय त्वदुक्तविपरीतेत्युक्तिः । एवमग्रेऽपि–**प्रयोजकगोचरेति ।** त्वदुक्तेत्यर्थः।।

ತರ್ಕತಾಂಡವಕಾರರು ತಾವು ಹೇಳಿರುವ ದೋಷವನ್ನು ಆಚಾರ್ಯರ ವಾಕ್ಯಾರೂಢವನ್ನಾಗಿ ಮಾಡುವುದಕ್ಕಾಗಿ ''ತ್ವದುಕ್ತವಿಪರೀತ'' ಎಂಬ ಶಬ್ದವನ್ನು ಬಳಸಿದ್ದಾರೆ. ''ನ ಚಾನುಮಾನಾತ್ ತತ್ಸಿದ್ಧಿಃ। ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್'' ಎಂದು ಆಚಾರ್ಯರ ವಾಕ್ಯ. ಪ್ರಕೃತದಲ್ಲಿ ಪೂರ್ವವಾಕ್ಯದ ಅರ್ಥ ಹೀಗೆ– ಅನುಮಾನದಿಂದ ತತ್ಸಿದ್ಧಿಃ=ಉಪಾದಾನ ಗೋಚರಜ್ಞಾನತ್ವಾದಿನಾ ಜ್ಞಾನಾದಿಜನ್ಯತ್ವಸಿದ್ಧಿಯು ನಚ=ಆಗುವುದಿಲ್ಲ, ಎಂದು. ಉತ್ತರವಾಕ್ಯದ ಅರ್ಥವನ್ನು 'ವಿಪರ್ಯಯೇಣಾಪಿ' ಎಂಬ ಮೂಲದಲ್ಲಿ ತೋರಿಸಲಾಗಿದೆ.

ಈ ಹಿಂದೆ 'ಕೃತಿಜನ್ಯತ್ವ' ಎಂದು ಸಾಧ್ಯವನ್ನು ಉಲ್ಲೇಖಿಸಿ ಇಲ್ಲಿ 'ಕ್ಷಿತಿಜನಕಾದೃಷ್ಟ ಜನಕಜ್ಞಾನದೇಃ'' ಎಂದು ಜ್ಞಾನವನ್ನು ಉಲ್ಲೇಖಿಸಲಾಗಿದೆ. ಕೃತಿಮಜ್ಜನ್ಯತ್ವಕ್ಕೆ ಹೇಳಿದಂತೆಯೇ ಉಕ್ತರೂಪಜ್ಞಾನವಜ್ಜನ್ಯತ್ವಕ್ಕೂ, ಚಿಕೀರ್ಷಾವಜ್ಜನ್ಯತ್ವಕ್ಕೂ ಇದೇರೀತಿ ದೋಷವನ್ನು ತಿಳಿಯಬೇಕು. ಈ ಉದ್ದೇಶದಿಂದ ಸಾಧ್ಯಾಂತರವನ್ನು ಉಲ್ಲೇಖಿಸಲಾಗಿದೆ.

ಹೀಗೆ ಅದೃಷ್ಟದ್ವಾರಕ ಕೃತಿಯನ್ನು ವ್ಯಾವೃತ್ತಿಗೊಳಿಸುವುದಕ್ಕಾಗಿಯೇ ಸಾಧ್ಯದದಲ್ಲಿ 'ಸ್ವಜನ್ಯಾದೃಷ್ಟಪ್ರಾಗಭಾವ' ಇತ್ಯಾದಿ ವಿಶೇಷಣವನ್ನು ಸೇರಿಸಲಾಗಿದೆ. ಆದ್ದರಿಂದ ಅದೃಷ್ಟದ್ವಾರಕವಾದ ಜೀವೀಯಕೃತಿಯನ್ನು ಪರಿಗ್ರಹಿಸಿ ಸಿದ್ಧಸಾಧನತಾ ಹೇಳಿರುವುದು ಹೇಗೆ ಸರಿ? ಎಂದರೆ, ಅದಕ್ಕೆ ಹೀಗೆ ಸಮಾಧಾನ— ಅಂತಹ ವಿಶಿಷ್ಟ ಕೃತಿಜನ್ಯತ್ವಸಾಧನೆ ಮಾಡುವಲ್ಲಿ ಹೇತು ಪ್ರಯೋಜಕವಾಗುವುದಿಲ್ಲ. ಇದನ್ನು ಹಿಂದೆಯೇ ಹೇಳಲಾಗಿದೆ.

## ಅವತಾರಿಕೆ

**ननु यदुक्तं क्षित्याद्युपादानगोचरकृतिव्यतिरेकेण क्षितिव्यतिरेको न दृष्टः। येन साऽपि हेतुरिति; तन्न। विशेषयोरन्वयादिदृष्ट्या सामान्ययोरपि तत्कल्पनादित्यत आह—यच्चोक्तमिति।**

ಹಿಂದೆ, ಕ್ಷಿತ್ಯಾದ್ಯುಪಾದಾನವಿಷಯಕವಾದ ಕೃತಿಯು ಅಸಿದ್ಧವಾದುದರಿಂದ, ತದ್‌ವ್ಯತಿರೇಕೇಣ ಕಾರ್ಯವ್ಯತಿರೇಕವು ಕಂಡಿಲ್ಲ. ಆದುದರಿಂದ ಕೃತಿತ್ವೇನೈವ ಕೃತಿಯು ಕಾರಣ. ತಥಾಚ ಜೀವಕೃತಿಜನ್ಯತ್ವ ಸಿದ್ಧವಾದುದರಿಂದ ಸಿದ್ಧಸಾಧನತಾ (ಪು.238)ಎಂದು. ಅದು ಸರಿಯಲ್ಲ. ಕುಲಾಲನ ಉಪಾದಾನಗೋಚರಕೃತಿಗೂ ಘಟಾದಿಕಾರ್ಯಕ್ಕೂ ಅನ್ವಯ ವ್ಯತಿರೇಕಗಳು ಕಂಡಿರುವುದರಿಂದ ಉಪಾದಾನಗೋಚರಕೃತಿಸಾಮಾನ್ಯ-ಕಾರ್ಯಸಾಮಾನ್ಯಗಳಿಗೂ ಅದೇ ರೀತಿಯ ಕಾರಣತ್ವವನ್ನು ಕಲ್ಪಿಸಬೇಕು. ಏವಂಚ ಜೀವೀಯಕೃತಿಯು ಉಪಾದಾನಗೋಚರವಲ್ಲ ವಾದುದರಿಂದ ಸಿದ್ಧಸಾಧನತಾ ಇಲ್ಲ. ಈ ಆಕ್ಷೇಪವನ್ನು ಅನುವಾದಿಸಿ ಅದಕ್ಕೆ ದೋಷವನ್ನು 'ಯಚ್ಚೋಕ್ತಂ' ಎಂಬ ಗ್ರಂಥದಲ್ಲಿ ಹೇಳಲಾಗಿದೆ.

## ಕೃತಿ–ಕಾರ್ಯಗಳಿಗೆ ಕಾರ್ಯಕಾರಣಭಾವ ವಿಶೇಷ

**यच्चोक्तं, विशेषयोरन्वयव्यतिरेकेण वा कारणत्वेन वा सामान्ययोरपि कारणत्वमिति । तत्र न तावदाद्यः । अन्वयव्यतिरेकयोस्त्वदुक्तविपरीते स्वसमानप्रकारककार्यकारणभावग्रहे एव सामर्थ्यस्य क्लृप्तत्वात् । अधिकसामर्थ्यकल्पनायां च बीजाभावात् ।**

**नापि द्वितीयः । विमते सामान्ये कार्यकारणभावापन्ने, बाधकं विना कार्यकारणभावापन्नविशेषसम्बन्धित्वात् । धूमवह्निसामान्यवत्, इत्यत्र व्यतिरेकावच्छेदकरूपवत्त्वस्यैवोपाधित्वात् । नच साधनव्यापकता । त्वत्पक्षे कृतित्वस्य देशतः कालतश्च व्यतिरेकरहितेश्वरकृतिवृत्तित्वेन व्यतिरेकानवच्छेदकत्वात् ।**

ಘಟ ಮತ್ತು ಕುಲಾಲಕೃತಿಗಳಿಗೆ ಅನ್ವಯ–ವ್ಯತಿರೇಕಗಳಿಂದ ಅಥವಾ ಅವೆರಡಕ್ಕೆ ಕಾರ್ಯಕಾರಣಭಾವದಿಂದ ಕಾರ್ಯ ಮತ್ತು ಕೃತಿಸಾಮಾನ್ಯಗಳಿಗೂ ಕಾರ್ಯ–ಕಾರಣಭಾವವು ಸಿದ್ಧವಾಗುತ್ತದೆ, ಎಂದು ಹಿಂದೆ (ಪು.185) ಹೇಳಲಾಗಿದೆ. ಇಲ್ಲಿ ಸಾಮಾನ್ಯಕಾರ್ಯ–ಕಾರಣಭಾವಕ್ಕೆ ಎರಡು ನಿಮಿತ್ತಗಳನ್ನು ಹೇಳಬಹುದಾಗಿದೆ.

1. ವಿಶೇಷಗಳಿಗಿರುವ ಅನ್ವಯವ್ಯತಿರೇಕ 2.ವಿಶೇಷಗಳಿಗೆ ಕಾರ್ಯ–ಕಾರಣಭಾವ. ಮೊದಲನೆಯ ಪಕ್ಷ ಸರಿಯಲ್ಲ– ಘಟತ್ವ–ಕುಲಾಲಕೃತಿತ್ವರೂಪವಿಶೇಷಧರ್ಮಾವಚ್ಛಿನ್ನಗಳಿಗೆ ಅನ್ವಯ ವ್ಯತಿರೇಕಗಳಿಂದ ಕಾರ್ಯತ್ವಾವಚ್ಛಿನ್ನ–ಕೃತಿತ್ವಾವಚ್ಛಿನ್ನಗಳ ಸಾಮಾನ್ಯಕಾರ್ಯಕಾರಣಭಾವವು ಸಿದ್ಧವಾಗುತ್ತದೆ, ಎಂದು ತಾರ್ಕಿಕರು ಹೇಳುವುದಕ್ಕೆ ವಿಪರೀತವಾಗಿ (ವಿಪರ್ಯಯೇಣ) ಘಟತ್ವ–ಕುಲಾಲಕೃತಿತ್ವಾವಚ್ಛಿನ್ನಗಳಿಗೆ ಕಾರ್ಯಕಾರಣಭಾವವೇ ಸಿದ್ಧವಾಗುತ್ತದೆ. ಆ ಅನ್ವಯ–ವ್ಯತಿರೇಕಗಳ ಸಾಮರ್ಥ್ಯ ಅಷ್ಟಕ್ಕೇ ಸೀಮಿತವಾದುದು. ಇದಕ್ಕಿಂತಲೂ ಹೆಚ್ಚಿನ ಸಾಮರ್ಥ್ಯವನ್ನು ಅಂದರೆ, ಕಾರ್ಯ–ಕೃತಿಸಾಮಾನ್ಯ ಕಾರ್ಯಕೃತಿಸಾಮಾನ್ಯಗಳಿಗೆ ಕಾರ್ಯ–ಕಾರಣಭಾವವನ್ನು ಸಾಧಿಸುವ ಸಾಮರ್ಥ್ಯವನ್ನು ಅದಕ್ಕೆ ಕಲ್ಪಿಸಲಾಗದು.

ಎರಡನೆಯ ಪಕ್ಷವೂ ಸರಿಯಲ್ಲ—ಆ ಪಕ್ಷದಲ್ಲಿ ಹೀಗೆ ಸಾಧಿಸಬೇಕು—ವಿಮತವಾದ ಕಾರ್ಯತ್ವ–ಕೃತಿತ್ವರೂಪಸಾಮಾನ್ಯಧರ್ಮಾವಚ್ಛಿನ್ನಗಳು ಕಾರ್ಯಕಾರಣಭಾವಾಪನ್ನಗಳಾಗಿವೆ. ಬಾಧಕವಿಲ್ಲದಿರುವಾಗ, ಕಾರ್ಯ–ಕಾರಣಭಾವಾಪನ್ನವಾದ ವಿಶೇಷಧರ್ಮಾವಚ್ಛಿನ್ನ–ಸಂಬಂಧಿಗಳಾದುದರಿಂದ. ಇದಕ್ಕೆ ಉದಾಹರಣೆ, ಧೂಮವಹ್ನಿ ಸಾಮಾನ್ಯಗಳು. ಮಹಾನಸೀಯವಹ್ನಿ

ಧೂಮಗಳಿಗೆ ಕಾರ್ಯ–ಕಾರಣಭಾವದಿಂದಾಗಿ ವಹ್ನಿಸಾಮಾನ್ಯ–ಧೂಮಸಾಮಾನ್ಯಗಳಿಗೆ ಕಾರ್ಯ–ಕಾರಣಭಾವವು ತಿಳಿಯುತ್ತದೆ. ಅದರಂತೆ ಪ್ರಕೃತದಲ್ಲಿ, ಇದು ಅನುಮಾನ ಮಾಡಬಹುದಾದ ಕ್ರಮ.

ಆದರೆ ಈ ಅನುಮಾನಕ್ಕೆ ವ್ಯತಿರೇಕಾವಚ್ಛೇದಕರೂಪವತ್ತ್ವವು ಉಪಾಧಿ. ವಹ್ನಿ–ಧೂಮಗಳ ಕಾರ್ಯ–ಕಾರಣಭಾವಕ್ಕೆ ನಿಮಿತ್ತವಾದುದು ''ಯತ್ರ ವಹ್ನ್ಯಭಾವಃ ತತ್ರ ದೂಮಾಭಾವಃ'' ಎಂಬ ವ್ಯತಿರೇಕಗ್ರಹ. ಇಂತಹ ವ್ಯತಿರೇಕಕ್ಕೆ(ಅಭಾವಕ್ಕೆ) ಅವಚ್ಛೇದಕವಾಗಿರುವ ಧರ್ಮಗಳು ವಹ್ನಿತ್ವ ಮತ್ತು ಧೂಮತ್ವಧರ್ಮಗಳು. ತದವಚ್ಛಿನ್ನವಾಗಿವೆ ವಹ್ನಿ–ದೂಮಗಳು. ಆದ್ದರಿಂದ ಅವೆರಡಕ್ಕೂ ಕಾರ್ಯ–ಕಾರಣಭಾವ ಇದೆ. ಆದರೆ, ಪ್ರಕೃತ, ಯತ್ರ ಅಥವಾ ಯದಾ ಕಾರ್ಯಾಭಾವಃ ತತ್ರ ಅಥವಾ ತದಾ ಕೃತ್ಯಭಾವಃ, ಎಂಬ ವ್ಯತಿರೇಕ ಇಲ್ಲ. ಕಾರ್ಯಸಾಮಾನ್ಯಕ್ಕೆ ಕಾರಣವಾದ ಈಶ್ವರೀಯ ಕೃತಿಯು ನಿತ್ಯವಾದುದರಿಂದ ದೇಶತಃ ಕಾಲತಃ ತದಭಾವವು ಅಪ್ರಸಿದ್ಧವಾಗಿದೆ. ಹೀಗಾಗಿ, ಕೃತಿತ್ವವು ವ್ಯತಿರೇಕಾವಚ್ಛೇದಕವಲ್ಲ. ಇದರಿಂದ ಕೃತಿಯು ವ್ಯತಿರೇಕಾವಚ್ಛೇದಕರೂಪಾವಚ್ಛಿನ್ನವಾಗಿಲ್ಲ. ಆದ್ದರಿಂದ, ಕೃತಿಸಾಮಾನ್ಯ–ಕಾರ್ಯಸಾಮಾನ್ಯಗಳಿಗೆ ಕಾರ್ಯ–ಕಾರಣಭಾವ ಇಲ್ಲ.

ವ್ಯತಿರೇಕಾವಚ್ಛೇದಕರೂಪವತ್ತ್ವರೂಪ ಉಪಾಧಿಯು ಸಾಧ್ಯವ್ಯಾಪಕ ಮತ್ತು ಸಾಧನಾವ್ಯಾಪಕವಾಗಿದೆ. ಎಲ್ಲಿ ಸಾಮಾನ್ಯಗಳಿಗೆ ಕಾರ್ಯ–ಕಾರಣಭಾವ ಇರುತ್ತದೋ ಅಲ್ಲಿ ಆ ಸಾಮಾನ್ಯಗಳೆರಡೂ ವ್ಯತಿರೇಕಾವಚ್ಛೇದಕರೂಪವತ್ತಾಗಿರುತ್ತವೆ. ವಹ್ನಿ–ಧೂಮಗಳೆರಡೂ ವ್ಯತಿರೇಕಾವಚ್ಛೇದಕವಾಗಿರುವ ವಹ್ನಿತ್ವ–ಧೂಮತ್ವರೂಪಧರ್ಮವತ್ತಾಗಿವೆ. ಹೀಗೆ ಸಾಧ್ಯವ್ಯಾಪಕತ್ವವು ಇದೆ. ಸಾಧನವತ್ತಾದ ಪ್ರಕೃತ ಕಾರ್ಯ–ಕೃತಿರೂಪ ಪಕ್ಷದಲ್ಲಿ ಘಟಕವಾದ ಕೃತಿಯ ವ್ಯತಿರೇಕವು ಇಲ್ಲದಿರುವುದರಿಂದ ಕೃತಿತ್ವವು ವ್ಯತಿರೇಕಾವಚ್ಛೇದಕವಲ್ಲ. ಆದ್ದರಿಂದ ಪಕ್ಷದಲ್ಲಿ ಈ ಉಪಾಧಿಯು ಇಲ್ಲ. ಹೀಗೆ ಇದು ಉಪಾಧಿಯಾಗುತ್ತದೆ. ಆದ್ದರಿಂದ ಯದ್ವಿಶೇಷಯೋಃ, ಎಂಬ ನ್ಯಾಯದಿಂದ ಕಾರ್ಯಸಾಮಾನ್ಯಕ್ಕೆ ಕೃತಿಯು ಕಾರಣ, ಎಂದು ಸಿದ್ಧವಾಗುವುದಿಲ್ಲ.

## ನ್ಯಾಯದೀಪ

**यच्चोक्तमिति ।।** 'नन्विदमप्रयोजकम्' इत्यादिशङ्कोत्तररूपपूर्वग्रन्थे (पु.184) इत्यर्थः। **त्वदुक्तविपरीत इति ।** घटकुलालकृत्योरन्वयादिना कार्यसामान्य-कृतिसामान्ययोः कार्यकारणभाव इति यत् त्वदुक्तं । तद्विपरीते घटत्वकुलालकृतित्वरूपान्वयव्यतिरेक-प्रकारसमानप्रकारककार्यकारणभाव एव सामर्थ्यमित्यस्य दण्डघटादौ निर्णीतत्वादित्यर्थः ।।

**बीजेति ।** ननु बाधकाभाव एव बीजमिति चेन्न । तादृश-सामर्थ्यकल्पनायामनेकादृष्टकल्पनस्यैव बाधकत्वात् । घटादावदृष्टस्य हस्तचेष्टानिरपेक्षकृतिजन्यत्वनित्यसर्वविषयज्ञानादिजन्यत्वादेः अनेकस्य कल्प्यत्वात् । क्लृप्तसामर्थ्यमात्रस्वीकारे तु लाघवात् । अन्यथा तन्तुरूपपटरूपयोरन्वयव्यतिरेकाभ्यां कार्यगतरूपसामान्यं प्रति कारणगतरूपसामान्यं, कार्यगतगुणमात्रं प्रति कारणगतगुणमात्रं कारणमिति वा कल्प्यं स्यात् । तत्र यद्यद् बाधकमुपनिपतति तत् सर्वमपि तदनुगुणप्रक्रियाकल्पनया परिहार्यं स्यादिति भावः ।।

ಯದ್ಧರ್ಮಾವಚ್ಛಿನ್ನಗಳಿಗೆ ಅನ್ವಯ–ವ್ಯತಿರೇಕವಿದೆಯೋ ಆ ಅನ್ವಯ–ವ್ಯತಿರೇಕಗಳು ತದ್ಧರ್ಮಾವಚ್ಛಿನ್ನಗಳಿಗೆ ಕಾರ್ಯಕಾರಣಭಾವವನ್ನು ಸಾಧಿಸಲು ಸಮರ್ಥವಾಗುತ್ತವೆ. ಇದು ದಂಡ–ಘಟಗಳ ಅನ್ವಯ–ವ್ಯತಿರೇಕದಲ್ಲಿ ದೃಷ್ಟವಾಗಿದೆ.

ಮೂಲದಲ್ಲಿ 'ಅಧಿಕ ಸಾಮರ್ಥ್ಯಕಲ್ಪನಾಯಾಂ ಬೀಜಾಭಾವಾತ್' ಎಂದಿದೆ. ಇದು ಸರಿಯಲ್ಲ. ಕಾರ್ಯಸಾಮಾನ್ಯ–ಕೃತಿಸಾಮಾನ್ಯಗಳಿಗೆ ಕಾರ್ಯ–ಕಾರಣಕಲ್ಪನೆಗೆ ಬಾಧಕವಿಲ್ಲದಿರುವುದರಿಂದಲೇ ವಿಶೇಷಾನ್ವಯತಿರೇಕಗಳಿಗೆ ಆ ಸಾಮರ್ಥ್ಯವನ್ನು ಕಲ್ಪಿಸಬಹುದು, ಎಂದು ಆಕ್ಷೇಪ.

ಈ ಆಕ್ಷೇಪ ಸರಿಯಲ್ಲ—ಅಂತಹ ಸಾಮರ್ಥ್ಯವನ್ನು ಕಲ್ಪನೆ ಮಾಡುವುದರಿಂದ ಅನೇಕ ಅದೃಷ್ಟವಾದ ವಿಷಯಗಳನ್ನು ಕಲ್ಪನೆಮಾಡಬೇಕಾಗುತ್ತದೆ. ಇದೇ ಬಾಧಕ. ಹೇಗೆಂದರೆ, ಘಟದಲ್ಲಿ ಹಸ್ತಚೇಷ್ಟಾಸಾಪೇಕ್ಷ ಕೃತಿಜನ್ಯತ್ವವು ದೃಷ್ಟವಾಗಿದೆ. ಆದರೆ, ಕಾರ್ಯಸಾಮಾನ್ಯಕ್ಕೆ ಕಾರಣವಾದ ಕೃತಿಯು ತನ್ನಿರಪೇಕ್ಷವಾಗಿದೆ. ತಾದೃಶಕೃತಿಮತ್ತಾದ ಈಶ್ವರನಿಗೆ ಹಸ್ತಾದಿಗಳು ಇಲ್ಲವಾದುದರಿಂದ. ಕಾರ್ಯಸಾಮಾನ್ಯಕ್ಕೆ ಕಾರಣವಾದ ಜ್ಞಾನಾದಿಗಳು ನಿತ್ಯ ಮತ್ತು ಸರ್ವವಿಷಯಕಗಳು. ತಾದೃಶ ಜ್ಞಾನಾದಿಜನ್ಯತ್ವವೂ ಲೋಕಸಿದ್ಧವಲ್ಲ. ಹೀಗೆ ಉಭಯವಿಧವಾದ ಗೌರವದಿಂದಾಗಿ ವಿಶೇಷಾನ್ವಯ ವ್ಯತಿರೇಕಕ್ಕೆ ಲೋಕಸಿದ್ಧವಾದ ಸಾಮರ್ಥ್ಯವನ್ನು ಕಲ್ಪಿಸುವುದೇ ಲಾಘವ.

ಇದಲ್ಲದೆ, ಅಧಿಕಸಾಮರ್ಥ್ಯವನ್ನು ಕಲ್ಪಿಸಿದರೆ ಇನ್ನೊಂದು ಆಪತ್ತಿ ಹೀಗಿದೆ—ತಂತುರೂಪಕ್ಕೂ ಪಟರೂಪಕ್ಕೂ ಅನ್ವಯವ್ಯತಿರೇಕದಿಂದ ಕಾರ್ಯಗತವಾದ ರೂಪಸಾಮಾನ್ಯಕ್ಕೆ ಕಾರಣಗತ ರೂಪಸಾಮಾನ್ಯವು ಕಾರಣ ಎಂದೂ ಕಲ್ಪಿಸಬೇಕಾದೀತು. ಹೀಗಾದರೆ, ಪಾಕದಿಂದಾಗುವ ಪಾರ್ಥಿವಾವಯವಿ–ಗತಗುಣಗಳಿಗೂ ಅವಯವಗತ–ಗುಣಗಳು ಕಾರಣವಾಗಬೇಕಾದೀತು. ಹಾಗಾದರೆ ''ಪಿಠರಪಾಕವಾದವು'' ಸಿದ್ಧವಾಗಲಿಕ್ಕಿಲ್ಲ. ಹೀಗೆ ಸಾಮಾನ್ಯಕಾರ್ಯ–ಕಾರಣ

ಭಾವವನ್ನು ಅನಿವಾರ್ಯವಾಗಿ ಒಪ್ಪಿ ಅದಕ್ಕೆ ಅನುಗುಣವಾದ ಪ್ರಕ್ರಿಯೆಯನ್ನೇ ಅಂದರೆ, ಪೀಲುಪಾಕ ವಾದವನ್ನೇ ಕಲ್ಪಿಸಿ, ಈ ಬಾಧಕವೆಲ್ಲವನ್ನೂ ಪರಿಹರಿಸಬೇಕಾದೀತು.

ಆದ್ದರಿಂದ ವಿಶೇಷಾನ್ವಯವ್ಯತಿರೇಕಗಳಿಗೆ ಲೋಕಸಿದ್ಧಸಾಮರ್ಥ್ಯವನ್ನೇ ಕಲ್ಪಿಸಬೇಕು, ಹೆಚ್ಚಿನ ಸಾಮರ್ಥ್ಯವನ್ನು ಕಲ್ಪಿಸಬಾರದು.

## ನ್ಯಾಯದೀಪ

सामान्ये इति द्विवचनान्तम् । कार्यसामान्य-कृतिसामान्ये इत्यर्थः । **बाधकं विनेति ।** सामान्ये व्यभिचाररूपबाधकं विनेत्यर्थः । यद्धर्मवत्त्वेनोपस्थितयोः विशेषयोः कार्यकारणभावस्तद्धर्मालिङ्गितत्वं तत्संवन्धित्वं ध्येयम् । घटकुलालयोः कार्यकारणभावे कार्यसामान्य-पुरुषसामान्ययोः,प्रमाणवाक्यत्वेन वक्तृवाक्यार्थप्रमात्वेन कार्यत्वादि-कल्पनेऽपि वाक्यसामान्यवक्तृज्ञानसामान्ययोश्च तदभावाद् व्यभिचार-वारणाय बाधकं विनेति । **व्यतिरेकेति ।** अत्र रूपशव्दो धर्मपरः । धूमसामान्यवह्निसामान्ययोः कार्यकारणभावो हि न तादृशधूमविशेष-वह्निविशेषसंवन्धित्वनिबन्धनः । अपितु यत्र वह्न्यभावस्तत्र धूमाभाव इति व्यतिरेकं प्रत्यवच्छेदकभूतवह्नित्वधूमत्वाख्यधर्मवत्त्वनिमित्त एव । कार्यकारणभावापन्न-घटदण्डादिस्थले सर्वत्र तथा दर्शनेन साध्यव्यापकत्वं व्यक्तमिति साधनाव्यापकत्वं व्यनक्ति—**न-चेत्यादिना ॥**

ಮೂಲದಲ್ಲಿ 'ಸಾಮಾನ್ಯೇ' ಎಂದು ದ್ವಿವಚನಾಂತಶಬ್ದ, ಸಪ್ತಮ್ಯಂತವಲ್ಲ. ಕಾರ್ಯಸಾಮಾನ್ಯ ಮತ್ತು ಕಾರಣಸಾಮಾನ್ಯ ಇವೆರಡು ಪಕ್ಷಗಳು. ಈ ಪಕ್ಷಗಳಲ್ಲಿ 'ವಿಶೇಷಸಂಬಂಧಿತ್ವ' ಎಂಬ ಹೇತು ಇದೆ. ಯಾವ್ಯಧರ್ಮವತ್ತಯಾ ಜ್ಞಾತವಾಗಿ ವಿಶೇಷಗಳಿಗೆ ಕಾರ್ಯ-ಕಾರಣಭಾವ ಇದೆಯೋ ತದ್ಧರ್ಮವತ್ತ್ವವೇ ವಿಶೇಷಸಂಬಂಧಿತ್ವ. ಉದಾಹರಣೆಗೆ-ಕಾರ್ಯತ್ವ-ಕೃತಿತ್ವರೂಪಧರ್ಮವತ್ತಯಾ ಜ್ಞಾತವಾದ ಘಟ ಮತ್ತು ಕುಲಾಲಕೃತಿಗಳಿಗೆ ಕಾರ್ಯ-ಕಾರಣಭಾವ ಇದೆ. ಜ್ಞಾತವಾದ ತದ್ಧರ್ಮವತ್ತ್ವವೂ ಕಾರ್ಯ-ಕೃತಿಗಳಿಗೆ ಇದೆ.

ವಿಶೇಷಧರ್ಮಾವಚ್ಛಿನ್ನಗಳಿಗೆ ಕಾರ್ಯ-ಕಾರಣಭಾವವಿದ್ದಾಗ ಬಾಧಕವಿಲ್ಲದಿದ್ದರೆ ಮಾತ್ರ ಸಾಮಾನ್ಯಧರ್ಮಾವಚ್ಛಿನ್ನಗಳಿಗೆ ಕಾರ್ಯ-ಕಾರಣಭಾವವನ್ನು ಕಲ್ಪಿಸಬಹುದು. ಬಾಧಕವಿದ್ದರೆ ಕೈಬಿಡಬೇಕು. ಅದಕ್ಕೆ ಉದಾಹರಣೆ—ಘಟ ಮತ್ತು ಕುಲಾಲರಿಗೆ ಕಾರ್ಯಕಾರಣಭಾವದಿಂದಾಗಿ ''ಕಾರ್ಯಸಾಮಾನ್ಯಂ ಪ್ರತಿ ಪುರುಷಃ ಕಾರಣಮ್'' ಎಂದು ಕಲ್ಪಿಸಬಾರದು. ಅದಕ್ಕೆ ಬಾಧಕವಿದೆ. ಭೂ-ಭೂಧರಾದಿಗಳಿಗೆ ಕಾರಣರಾದ 'ಪುರುಷರು' ಇಲ್ಲ.

ಅದರಂತೆ, ಪ್ರಮಾಣವಾಕ್ಯಕ್ಕೆ ವಕ್ತೃವಿನ ಯಥಾರ್ಥಜ್ಞಾನವು ಕಾರಣ ಎಂಬ ವಿಶೇಷಕಾರ್ಯ-ಕಾರಣಭಾವದಿಂದ ವಾಕ್ಯಸಾಮಾನ್ಯಕ್ಕೆ ವಕ್ತೃಜ್ಞಾನಸಾಮಾನ್ಯವು ಕಾರಣ ಎಂದು ಕಲ್ಪಿಸಬಾರದು. ಶುಕಬಾಲಾದ್ಯುಚ್ಚರಿತವಾಕ್ಯದಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ಬಾಧಕವಿಲ್ಲದಿದ್ದರೆ ಮಾತ್ರ ಈ ನಿಯಮ.

ಮೂಲದಲ್ಲಿ ಹೇಳಿರುವ ಉಪಾಧಿಯೇ ಸಾಧ್ಯಕ್ಕೆ ಪ್ರಯೋಜಕ. ಏಕೆಂದರೆ, ಧೂಮಸಾಮಾನ್ಯಕ್ಕೂ ವಹ್ನಿಸಾಮಾನ್ಯಕ್ಕೂ ಕಾರ್ಯಕಾರಣಭಾವಕ್ಕೆ ''ಯತ್ರ ವಹ್ನ್ಯಭಾವಃ ತತ್ರ ದೂಮಾಭಾವಃ'' ಎಂಬ ವ್ಯತಿರೇಕದಲ್ಲಿ ಅವಚ್ಛೇದಕವಾಗಿರುವ ವಹ್ನಿತ್ವ ಮತ್ತು ಧೂಮತ್ವ ಧರ್ಮಗಳು ವಹ್ನಿ ಮತ್ತು ಧೂಮಗಳಲ್ಲಿ ಇರುವುದೇ, ಪ್ರಯೋಜಕ. ಹೊರತು, ಪರೋಕ್ತವಾದ ದೂಮವಿಶೇಷ-ವಹ್ನಿವಿಶೇಷಸಂಬಂಧಿತ್ವವು ಪ್ರಯೋಜಕವಲ್ಲ. ಕಾರ್ಯ-ಕಾರಣಭಾವವು ನಿರ್ಧಾರವಾಗಿರುವ ದಂಡ ಮತ್ತು ಘಟಾದಿಗಳಲ್ಲಿ ಇದೇ ಪ್ರಯೋಜಕವೆಂದು ಸಿದ್ಧವಾಗಿದೆ. ಆದ್ದರಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವು ತಿಳಿಯುತ್ತದೆ.

## ಅವತಾರಿಕೆ

**व्यतिरेकावच्छेदकरूपवत्त्वस्यैव कारणतायां तन्त्रत्वे शब्दसमवायिकारणतयाऽऽकाशसिद्धिर्न स्यात्। तथा ज्ञानादिसमवायिकारणत्वेन आत्मसिद्धिश्च न स्यात् । परत्वापरत्वकारणतया देशकालसिद्धश्च न स्यात् । तेषां नित्यविभुत्वेन व्यतिरेकावच्छेदकरूपवत्त्वाभावादित्याशङ्क्य निराह–नचैवमिति ।**

ಹಿಂದೆ ಹೇಳಿದಂತೆ ವ್ಯತಿರೇಕಾವಚ್ಛೇದಕರೂಪವತ್ತ್ವವೇ ಕಾರಣತ್ವಕ್ಕೆ ಪ್ರಯೋಜಕವಾದಲ್ಲಿ ಶಬ್ದಸಮವಾಯಿಕಾರಣತಯಾ ಆಕಾಶದ ಸಿದ್ಧಿ ಆಗಲಿಕ್ಕಿಲ್ಲ. ಜ್ಞಾನಾದಿಸಮವಾಯಿಕಾರಣತ್ವೇನ ಆತ್ಮಸಿದ್ಧಿಯಾಗಲಿಕ್ಕಿಲ್ಲ. ಪರತ್ವಾಪರತ್ವಕಾರಣತಯಾ ದಿಕ್-ಕಾಲಗಳ ಸಿದ್ಧಿಯೂ ಆಗಲಿಕ್ಕಿಲ್ಲ. ಈ ಮೂರು ನಿತ್ಯ ಹಾಗೂ ವಿಭುಪದಾರ್ಥಗಳಾದುದರಿಂದ ಅವುಗಳ ವ್ಯತಿರೇಕವೇ ಅಪ್ರಸಿದ್ಧವಾದ

ಕಾರಣ ವ್ಯತಿರೇಕಾವಚ್ಛೇದಕರೂಪವತ್ವವು ಅವುಗಳಲ್ಲಿ ಇಲ್ಲ. ಇದನ್ನು ಮೂಲದ ''ನ ಚೈವಂ'' ಎಂಬ ಗ್ರಂಥದಲ್ಲಿ ನಿರಾಕರಿಸಲಾಗಿದೆ.

**न चैवमाकाशाद्यसिद्धिः । साक्षिणैव तत्सिद्धेः । शब्दादिकारणत्वेन तदसिद्धावपि गुणस्य समवेतत्वव्याप्त्या शब्दसमवायित्वेनैव तत्सिद्धेश्च । निमित्तकारणत्वादिग्रहे 'यत्र यदा न दण्डस्तत्र तदा न घटः' इति संसर्गाभावरूपस्य व्यतिरेकस्य तन्त्रत्वेऽपि समवायिकारणत्वग्रहे 'यत्र समवायिकारणं तत्र न कार्यम्'इत्यन्योन्याभावरूपव्यतिरेकस्यैव तन्त्रत्वेन शब्दसमवायिकारणत्वेनापि तत्सिद्धिसम्भवाच्च।**

**नच समवायिभिन्न इव त्वन्मते कृतिविषयभिन्नः प्रसिद्धः । येन कृतेरप्यन्योन्याभावरूपव्यतिरेकेण कारणता गृह्येत । सर्वस्यापीश्वरकृति-विषयत्वात् । पारिमाण्डल्यस्यापि स्वनिष्ठघटाभावसाक्षात्कारं प्रति संयुक्तसमवेतविशेषणतारूपप्रत्यासत्त्यन्तर्भूततया हेतुत्वेनेश्वरकृति-विषयत्वात् । नच तत्र घटाभावो न प्रत्यक्षः । अभावप्रत्यक्षत्वप्रयोज-कत्वेन त्वदुक्तस्य योग्यप्रतियोगिकत्वादेस्तत्रापि सत्त्वात् । एवं च त्वदुक्तदेशकालापरिच्छिन्न-कृतिजन्यत्वविपरीतपरिच्छिन्न-कृतिजन्यत्वे-नाप्यनुमितिः स्यात् ।।**

ವ್ಯತಿರೇಕಾವಚ್ಛೇದಕರೂಪವತ್ವವೇ ಕಾರಣತ್ವಪ್ರಯೋಜಕ ಎನ್ನುವುದಾದಲ್ಲಿ ಶಬ್ದ-ಸಮವಾಯಿಕಾರಣತಯಾ ಆಕಾಶಾದಿಗಳು ಸಿದ್ಧವಾಗಲಿಕ್ಕಿಲ್ಲ. ಅವುಗಳ ವ್ಯತಿರೇಕವು ಅಪ್ರಸಿದ್ಧವಾದುದರಿಂದ ಆಕಾಶವು ಶಬ್ದಕ್ಕೆ ಕಾರಣ, ಎಂದು ತಿಳಿಯಲಾಗದು, ಎಂದರೆ ಆಕಾಶಾದಿಗಳು ಸಾಕ್ಷೀಂದ್ರಿಯದಿಂದಲೇ ಸಿದ್ಧವಾಗುತ್ತವೆ.

ಅಥವಾ, ಅನುಮಾನದಿಂದಲೂ ಸಿದ್ಧವಾಗಬಹುದು. ಶಬ್ದಕಾರಣತ್ವವನ್ನು ನಿರ್ಧರಿಸಲಾಗದಿದ್ದರೂ ಶಬ್ದಸಮವಾಯಿತ್ವ ಹೇತುವಿನಿಂದ ಆಕಾಶವನ್ನು ಅನುಮಾನ ಮಾಡಬಹುದು. ಶಬ್ದವು ಗುಣವಾದುದರಿಂದ ಅದಕ್ಕೆ ಸಮವಾಯೇನ ಆಧಾರವಾದುದು ಒಂದು ಇರಬೇಕು, ಅದು ಆಕಾಶ, ಎಂದು ಅನುಮಾನಮಾಡಬೇಕಾದರೆ ಕಾರಣತ್ವಜ್ಞಾನದ ಅಗತ್ಯವಿಲ್ಲ.

ಅಥವಾ, ನಿಮಿತ್ತಕಾರಣತ್ವಜ್ಞಾನಕ್ಕೆ 'ಯಾವಾಗ, ಎಲ್ಲಿ ದಂಡ ಇಲ್ಲವೋ ಆಗ, ಅಲ್ಲಿ ಘಟ ಇರುವುದಿಲ್ಲ' ಎಂಬ ಸಂಸರ್ಗಾಭಾವರೂಪವಾದ ವ್ಯತಿರೇಕಜ್ಞಾನವು ಕಾರಣವಾಗಿದೆ. ಸಮವಾಯಿಕಾರಣತ್ವ ನಿಶ್ಚಯಕ್ಕೆ ''ಯಾವುದು ಸಮವಾಯಿಕಾರಣವಲ್ಲವೋ ಅದರಲ್ಲಿ ಕಾರ್ಯವು ಇರುವುದಿಲ್ಲ'' ಎನ್ನುವ ಅನ್ಯೋನ್ಯಾಭಾವರೂಪವಾದ ವ್ಯತಿರೇಕವೇ ಹೇತು. ಇಂತಹ ವ್ಯತಿರೇಕವನ್ನು ಆಕಾಶಾದಿಗಳಲ್ಲೂ ಹೇಳಬಹುದು. ಸಮವಾಯಿಭಿನ್ನದಲ್ಲಿ ಶಬ್ದವು ಇರಲಾರದು. ಅದು ಆಕಾಶದಲ್ಲಿ ಇದೆಯಾದುದರಿಂದ ಆಕಾಶ ಶಬ್ದಕ್ಕೆ ಸಮವಾಯಿಕಾರಣ, ಎಂದು ಹೇಳುವುದಕ್ಕೆ ಬಾಧಕವೇನಿಲ್ಲ.

ಆದರೆ, ಪ್ರಕೃತ ಕೃತಿಗೆ ಕಾರಣತ್ವವನ್ನು ಹೀಗೂ ತಿಳಿಯಲಾಗದು. ಸಮವಾಯಿ ಭಿನ್ನವಾದುದು ಪ್ರಸಿದ್ಧವಾದಂತೆ ಕೃತಿವಿಷಯಭಿನ್ನವಾದುದು ಪ್ರಸಿದ್ಧವಲ್ಲ. ಎಲ್ಲವೂ ಯಾವುದೋ ಒಂದಕ್ಕೆ ಕಾರಣವಾಗಿರುವುದರಿಂದ ಈಶ್ವರಕೃತಿವಿಷಯವೇ ಆಗಿದೆ.

ಪಾರಿಮಾಂಡಲ್ಯವು ಯಾವುದಕ್ಕೂ ಕಾರಣವಲ್ಲ. 'ಪಾರಿಮಾಂಡಲ್ಯಭಿನ್ನಾನಾಂ ಕಾರಣತ್ವಂ' ಎಂದು ನ್ಯಾಯಸಿದ್ಧಾಂತ. ಪಾರಿಮಾಂಡಲ್ಯ ಎಂದರೆ ಪರಮಾಣುಪರಿಮಾಣ. ಅದು ಅಕಾರಣ. ಆದ್ದರಿಂದ, ಈಶ್ವರಕೃತಿವಿಷಯ ಭಿನ್ನವಾಗಿವೆ, ಎನ್ನುವುದೂ ಸರಿಯಲ್ಲ. ಪಾರಿಮಾಂಡಲ್ಯದಲ್ಲಿ ಘಟಾಭಾವದ ಪ್ರತ್ಯಕ್ಷ ಬರಲು ಸನ್ನಿಕರ್ಷ–ಚಕ್ಷುಃ ಸಂಯುಕ್ತ–ಸಮವೇತ–ವಿಶೇಷಣತಾ. ಈ ಸನ್ನಿಕರ್ಷಘಟಕವಾದುದು ಚಕ್ಷುಃಸಂಯುಕ್ತ– ಸಮವೇತವಾದ ಪಾರಿಮಾಂಡಲ್ಯ. ಹೀಗೆ ಪಾರಿಮಾಂಡಲ್ಯವೂ ಸನ್ನಿಕರ್ಷಘಟಕತಯಾ ಕಾರಣವಾಗಿರುವುದರಿಂದ ಅದೂ ಈಶ್ವರಕೃತಿಗೆ ವಿಷಯವಾಗಿದೆ.

ಪಾರಿಮಾಂಡಲ್ಯದಲ್ಲಿ ಘಟಾಭಾವವು ಪ್ರತ್ಯಕ್ಷವೇ ಅಲ್ಲ, ಎನ್ನುವಂತಿಲ್ಲ. ಅಭಾವ ಪ್ರತ್ಯಕ್ಷಕ್ಕೆ ಪ್ರತಿಯೋಗಿಯೋಗ್ಯತ್ವವು ಪ್ರಯೋಜಕ, ಅಧಿಕರಣಯೋಗ್ಯತ್ವವು ಪ್ರಯೋಜಕವಲ್ಲ. ಪ್ರಕೃತಾಭಾವಕ್ಕೆ ಪ್ರತಿಯೋಗಿಯಾದ ಘಟವು ಯೋಗ್ಯವಾಗಿದೆ. ಆದ್ದರಿಂದ ಪಾರಿಮಾಂಡಲ್ಯದಲ್ಲಿ ಘಟಾಭಾವದ ಪ್ರತ್ಯಕ್ಷಬರುವುದಕ್ಕೆ ಬಾಧಕವೇನೂ ಇಲ್ಲ.

ಹೀಗೆ, ಪರೋಕ್ತವಾದ ದೇಶ–ಕಾಲಾಪರಿಚ್ಛಿನ್ನವಾದ (ಸರ್ವದಾ, ಸರ್ವವಿಷಯಕವಾದ) ಕೃತಿಜನ್ಯತ್ವಕ್ಕೆ ವಿಪರ್ಯಯೇಣ=ಪರಿಚ್ಛಿನ್ನ (ಅಸರ್ವವಿಷಯಕ) ಜೀವೀಯಕೃತಿಜನ್ಯತ್ವೇನಾಪಿ ಈಶ್ವರಸಾಧಕಾನುಮಾನದ ಸಾಧ್ಯವನ್ನು ಪಕ್ಷದಲ್ಲಿ ಪರ್ಯವಸಾನ ಮಾಡಬಹುದು. ಆದ್ದರಿಂದ ಕಾರ್ಯತ್ವಹೇತುವು ಅಪ್ರಯೋಜಕ.

## ನ್ಯಾಯದೀಪ

**साक्षिणैवेति ।** आत्मस्वरूपज्ञानरूपेण साक्षिणैवेत्यर्थः । शब्दज्ञान-विधुरजातिबधिरादेरप्याकाशप्रतीत्या शब्दकारणतयैवाकाशधीरिति नियमाभावात् साक्षिणैवेत्युक्तम् । विवृतं चैतत् ।

''सत्यत्वं गगनादेश्च साक्षिप्रत्यक्षसाधितम् ।''

इत्याद्यानुमानिकपादीयानुव्याख्यान-सुधयोर्वादावल्याश्चेति भावः ।

किंच द्रव्यकारणत्ववत् समवायिकारणत्वं विशिष्टं न ग्राह्यम् । किंतु समवायित्वसमानाधिकरणं कारणत्वमेव समवायिकारणत्वम् । तथा च ''उभयग्राहकसमाजादुभयग्रहे अर्थसमाजः'' इति पक्षधराद्युक्तेः केवलसमवायित्वग्राहकोपनिपातेन तन्मात्रस्यापि ग्रहणसम्भवादिति भावेन साक्षिणि विप्रतिपन्नं प्रत्यन्यथाप्याकाशसिद्धिमाह—**शब्देति । समवायित्वेनेति ।** समवायवृत्त्या शब्दाश्रयत्वेनेत्यर्थः । 'शब्दः क्वचिदाश्रितः गुणत्वात्'इति सामान्यतस्तदाश्रयसिद्धौ 'शब्दोऽष्टद्रव्याति-रिक्तद्रव्याश्रितः अष्टद्रव्यवृत्तित्वे बाधकोपपन्नत्वे सत्याश्रितत्वात्' इति सामान्यपरिशेषाभ्यां शब्दादिसमवायित्वेनैव सिद्धिसम्भवादिति भावः ।।

ಆತ್ಮಸ್ವರೂಪಜ್ಞಾನರೂಪವಾದುದು ಸಾಕ್ಷಿ. ಅದರಿಂದಲೇ ಆಕಾಶವು ಸಿದ್ಧವಾಗುತ್ತದೆ. ಅನುಮಾನದಿಂದಲ್ಲ. ಹುಟ್ಟುಕಿವುಡರಿಗೆ ಶಬ್ದಜ್ಞಾನವೇ ಇಲ್ಲ. ಅಂತಹವರಿಗೂ ಆಕಾಶ (ಅವಕಾಶ) ಜ್ಞಾನ ಇದೆ. ಶಬ್ದಾನುಮೇಯವಾದಲ್ಲಿ ಇದು ಸಾಧ್ಯವಿಲ್ಲ. ಈ ವಿಷಯವನ್ನು ಮೂಲದಲ್ಲಿರುವ 'ಸಾಕ್ಷಿಣ್ಯೈವ' ಎಂಬ ಏವಶಬ್ದ ತಿಳಿಸುತ್ತದೆ. ಇದನ್ನು ಆಚಾರ್ಯರು ಆನುಮಾನಿಕಾಧಿಕರಣದ ಅನುವ್ಯಾಖ್ಯಾನದಲ್ಲಿ ಮತ್ತು ಟೀಕಾಚಾರ್ಯರು ಅದೇ ಅಧಿಕರಣದ ಸುಧಾ ಹಾಗೂ ವಾದಾವಲಿಯಲ್ಲಿ ತಿಳಿಸಿದ್ದಾರೆ.

ಕಾರಣತ್ವಗ್ರಹ ಇಲ್ಲದಿದ್ದರೂ ಅನುಮಾನದಿಂದಲೇ ಗಗನವನ್ನು ಸಾಧಿಸಬಹುದು–ದ್ರವ್ಯದಲ್ಲಿ ಕಾರಣತ್ವ ಎಂಬ ಧರ್ಮವು ಅಖಂಡವಾದಂತೆ ಸಮವಾಯಿಕಾರಣತ್ವವು ಅಖಂಡವಲ್ಲ. ಸಮವಾಯಿತ್ವಾಧಿಕರಣ ವೃತ್ತಿಯಾದ ಕಾರಣತ್ವವೇ ಸಮವಾಯಿಕಾರಣತ್ವ. ಇಂತಹ ಕಾರಣತ್ವದಲ್ಲಿ ಸಮವಾಯಿತ್ವಗ್ರಾಹಕವಾದುದು ಬೇರೆ, ಕಾರಣತ್ವಗ್ರಾಹಕವಾದುದು ಬೇರೆ. ಉಭಯಸಾಮಗ್ರೀ ಸೇರಿದಾಗ ''ಸಮವಾಯಿಕಾರಣತ್ವಗ್ರಹ'' ಬರುತ್ತದೆ. ಪ್ರಕೃತ, ಗಗನದಲ್ಲಿ ಕಾರಣತ್ವಗ್ರಾಹಕವಾದ ವ್ಯತಿರೇಕವು ಇಲ್ಲದೇ ಹೋದರೂ ಸಮವಾಯಿತ್ವಗ್ರಾಹಕವು ಇದೆಯಾದ ಕಾರಣ, ಸಾಕ್ಷಿಯ ಬಗ್ಗೆ

ವಿವಾದವಿದ್ದರೂ, ಶಬ್ದಸಮವಾಯಿತ್ವೇನೈವ ಆಕಾಶಸಿದ್ಧಿಯಾಗುತ್ತದೆ. ಇದನ್ನು 'ಶಬ್ದಾದಿಕಾರಣತ್ವೇನ' ಎಂಬ ಮೂಲದಲ್ಲಿ ಹೇಳಿದ್ದಾರೆ.

ಸಮವಾಯಿತ್ವ ಮತ್ತು ಕಾರಣತ್ವಗಳಿಗೆ ಗ್ರಾಹಕಭೇದವನ್ನು 'ಪಕ್ಷಧರಮಿಶ್ರರು' ಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ— "ಉಭಯಗ್ರಾಹಕಸಮಾಜಾತ್ ಉಭಯಗ್ರಹೇ ಅರ್ಥಃ ಸಮಾಜಃ" ಸಮವಾಯಿತ್ವಗ್ರಾಹಕಸಾಮಗ್ರೀ ಮತ್ತು ಕಾರಣತ್ವಗ್ರಾಹಕಸಾಮಗ್ರೀ ಎರಡೂ ಸೇರಿದಾಗ ಸಮವಾಯಿತ್ವ ಮತ್ತು ಕಾರಣತ್ವದ ಜ್ಞಾನವು ಬರುವ ಮೂಲಕ ಅರ್ಥತಃ ಸಮವಾಯಿಕಾರಣತ್ವ ಗ್ರಹವಾಗುತ್ತದೆ, ಎಂದು.

ಶಬ್ದಸಮವಾಯಿತಯಾ ತಾರ್ಕಿಕಮತದಲ್ಲಿ ಆಕಾಶವನ್ನು ಸಾಧಿಸುವ ಅನುಮಾನ ಹೀಗೆ— ಶಬ್ದವು ಗುಣವಾದುದರಿಂದ ಅದಕ್ಕೊಂದು ಆಶ್ರಯವಿದೆ, ಎಂದು ಸಾಮಾನ್ಯತಃ ಆಶ್ರಯಸಿದ್ಧಿ. ಆಮೇಲೆ ಪರಿಶೇಷಾನುಮಾನ ಹೀಗೆ— ಶಬ್ದವು ಪೃಥಿವ್ಯಾದಿ ಎಂಟು ದ್ರವ್ಯಗಳಲ್ಲಿ ಆಶ್ರಿತವಾಗಿದೆ ಎನ್ನುವುದಕ್ಕೆ ಬಾಧಕವಿದೆ, ಆದರೂ ಅದಕ್ಕೊಂದು ಆಶ್ರಯವಿದೆ. ಆದ್ದರಿಂದ ಶಬ್ದಾಶ್ರಯವಾದುದು ನವಮದ್ರವ್ಯ. ಅದೇ ಆಕಾಶ, ಎಂದು. ಹೀಗೆ, ಸಾಮಾನ್ಯಸಿದ್ಧಿ ಮತ್ತು ಪರಿಶೇಷಗಳಿಂದ ಆಕಾಶವು ಸಿದ್ಧವಾಗುತ್ತದೆ.

## ನ್ಯಾಯದೀಪ

समवायिकारणत्वं विशिष्टमेव ग्राह्यमिति मतेऽपि तेन रूपेणाकाशसिद्धिप्रकारं मण्युक्तमेव[1] दर्शयति—**निमित्तेति ।** आदिपदेन व्याप्यसमवायिकारणत्वग्रहः । **संसर्गाभावरूपस्येति ।** निमित्तकारणकार्ययोराश्रयाश्रयिभावाभावात् संसर्गाभावस्य तन्त्रत्वमिति भावः ।

नन्वेवं चेदीश्वरकृतिसिद्धिरप्येवमस्तु । यन्न कृतिविषयः न तत्र कार्यमित्यन्योन्याभावरूपव्यतिरेकेणैव कृतिकार्ययोः कार्यकारणत्वग्रहसम्भवेन क्षितिरूपकार्यानुकूलकृतिसिद्धिरित्यत आह—**नचेति । सर्वस्यापीति ।** ईश्वरकृतेः कारणमात्रविषयकत्वात् सर्वस्यापि यत्किञ्चित् प्रति कारणत्वादिति भावः ।।

१. समवायिकारणत्वग्रहे हि तत्संसर्गाभावः अप्रयोजकः। निमित्तमात्र–साधारणत्वात् । किंतु, यत् समवायि तत्र कार्यं, यन्न समवायि तत्र न, इति अन्योन्याभावमादाय कार्यं समवायिजन्यमिति व्याप्तिग्रहसंभवात् । (ईश्वरानु.पु.३४)

ಸಮವಾಯಿಕಾರಣತ್ವವನ್ನು ಹಿಂದೆ ಹೇಳಿದಂತೆ ಸಖಂಡವನ್ನಾಗಿ ಪರಿಗಣಿಸದೆ ವಿಶಿಷ್ಟವಾಗಿ ಅಖಂಡವೆಂದು ಪರಿಗಣಿಸಿದರೂ ಶಬ್ದಸಮವಾಯಿಕಾರಣತ್ವೇನೈವ ಆಕಾಶವು ಸಿದ್ಧವಾಗುತ್ತದೆ, ಎಂದು ಮಣಿಗ್ರಂಥದಲ್ಲೇ ಹೇಳಲಾಗಿದೆ. ಅದನ್ನು 'ನಿಮಿತ್ತ' ಎಂದು ಮೂಲದಲ್ಲಿ ತೋರಿಸಲಾಗಿದೆ. ಮೂಲದಲ್ಲಿರುವ 'ನಿಮಿತ್ತಕಾರಣತ್ವಾದಿ' ಎಂಬ ಆದಿಪದದಿಂದ ವ್ಯಾಪ್ತಿ ಮತ್ತು ಅಸಮವಾಯಿಕಾರಣಗಳು ವಿವಕ್ಷಿತವಾಗಿವೆ. ಅವುಗಳ ಗ್ರಹಕ್ಕೂ ಸಂಸರ್ಗಾಭಾವರೂಪವಾದ ವ್ಯತಿರೇಕಗ್ರಹವು ಕಾರಣ. ನಿಮಿತ್ತಕಾರಣ ಮತ್ತು ಅಸಮವಾಯಿಕಾರಣಗಳು ಕಾರ್ಯಕ್ಕೆ ಆಶ್ರಯಗಳಲ್ಲ. ಆದ್ದರಿಂದ ಅವುಗಳ ಗ್ರಹಕ್ಕೆ ಸಂಸರ್ಗಾಭಾವರೂಪ ವ್ಯತಿರೇಕಗ್ರಹವು ಕಾರಣವಾಗುತ್ತದೆ. ಆದರೆ, ಸಮವಾಯಿಕಾರಣವು ಕಾರ್ಯಕ್ಕೆ ಆಶ್ರಯವಾಗಿರುವುದರಿಂದ ಅನ್ಯೋನ್ಯಾಭಾವಘಟಿತವಾದ ವ್ಯತಿರೇಕವೂ ಕಾರಣತಾಗ್ರಹಕ್ಕೆ ಕಾರಣವಾಗುತ್ತದೆ.

ಈಶ್ವರಕೃತಿಯೂ ಇದೇರೀತಿ ಸಿದ್ಧವಾಗಲಿ. 'ಯಾವುದು ಕೃತಿವಿಷಯವಲ್ಲವೋ ಅದರಲ್ಲಿ ಕಾರ್ಯವಿರುವುದಿಲ್ಲ' ಹೀಗೆ ಅನ್ಯೋನ್ಯಾಭಾವಘಟಿತವ್ಯತಿರೇಕದಿಂದ ಕೃತಿಕಾರ್ಯಗಳಿಗೆ ಕಾರ್ಯ–ಕಾರಣಭಾವವು ಸಿದ್ಧವಾಗಿ ಕ್ಷಿತಿಗೆ ಕಾರಣವಾದ ಕೃತ್ಯಾಶ್ರಯತಯಾ ಈಶ್ವರನೂ ಸಿದ್ಧವಾಗಲಿ, ಎಂದರೆ ಅದಕ್ಕೆ ಸಮಾಧಾನ–ಈಶ್ವರೀಯಕೃತಿವಿಷಯವಲ್ಲದ ವಸ್ತುಗಳೇ ಇಲ್ಲದಿರುವುದರಿಂದ "ಅಯಂ ಈಶ್ವರೀಯಕೃತಿವಿಷಯಃ ನ" ಎಂಬ ಅನ್ಯೋನ್ಯಾಭಾವವು ಅಪ್ರಸಿದ್ಧ ಎಂದು. ಇದನ್ನು 'ನಚ' ಇತ್ಯಾದಿ ಗ್ರಂಥದಲ್ಲಿ ಹೇಳಲಾಗಿದೆ.

## ನ್ಯಾಯದೀಪ

नन्वस्त्वात्मकालाकाशादेरपि स्वगतगुणोपादानतयेश्वरकृतिविषयत्वम्। परमाणुपरिमाणस्य पारिमाण्डल्यशब्दितस्य किंचित् प्रत्यप्य-कारणत्वात्। तत्र 'यन्न कृतिविषयो न तत्र कार्यम्'इति व्यतिरेकग्रहः सुशक इत्यत आह—**पारिमाण्डल्यस्यापी।** द्व्यणुकगतह्रस्व-परिमाणस्याप्युपलक्षणं ध्येयम्। **योग्यप्रतियोगिकत्वादेरिति।** अन्यो-न्याभावप्रत्यक्षे ह्यधिकरणप्रत्यक्षं तन्त्रम्। नत्वभावप्रत्यक्षमात्रे। अभावप्रत्यक्षे हि प्रतियोगियोग्यत्वं वा 'यत्र यत्सत्त्वमनु पलब्धिविरोधी' इत्युक्तदिशा प्रतियोगिसत्त्वप्रसञ्जनप्रसञ्जितप्रतियोगि-कत्वरूपम् अनुपलब्धेर्योग्यत्वं वा तन्त्रम्। तच्च पारिमांडल्यादाव-भावग्रहेऽप्यस्तीति स्यादेवाभावः प्रत्यक्ष इत्यर्थः ॥

**न द्वितीय इत्यादिनोक्तं दोषं ''विपर्ययेणाप्यनुमातुं शक्यत्वात्'' इति मूलारूढं कुर्वन्नेव निष्कृष्य दर्शयति—एवंचेति । बाधकाभावेन व्यतिरेकावच्छेदकरूपवत्त्वस्य कारणत्वे तन्त्रत्वे सतीत्यर्थः। परिच्छिन्नेति । असर्वविषयानित्येत्यर्थः । तथाच कार्यत्वहेतुर-प्रयोजक इति भावः ।।**

ಪಾರಿಮಾಂಡಲ್ಯವೆಂದರೆ ಪರಮಾಣು ಪರಿಮಾಣ. ಅಜಹಲ್ಲಕ್ಷಣಯಾ ದ್ವ್ಯಣುಕಪರಿಮಾಣವನ್ನೂ ಪರಿಗ್ರಹಿಸಿ ಅವರೆಡೂ ಕಾರಣಗಳಲ್ಲ ಎಂದು ತಿಳಿಯಬೇಕು.

ಅನ್ಯೋನ್ಯಾಭಾವಜ್ಞಾನಕ್ಕೆ ಮಾತ್ರ ಅಧಿಕರಣಪ್ರತ್ಯಕ್ಷವು ಕಾರಣ. ಹೊರತು, ಅಭಾವಸಾಮಾನ್ಯ ಪ್ರತ್ಯಕ್ಷಕ್ಕೆ ಅಧಿಕರಣಪ್ರತ್ಯಕ್ಷವು ಕಾರಣವಲ್ಲ. ಅಭಾವಪ್ರತ್ಯಕ್ಷಕ್ಕೆ ಪ್ರತಿಯೋಗಿಯೋಗ್ಯತ್ವವು ಕಾರಣ. ಅಥವಾ, ಯೋಗ್ಯಾನುಪಲಬ್ಧಿಯು ಕಾರಣ. ಯೋಗ್ಯಾನುಪಲಬ್ಧಿ ಎಂದರೆ, ''ಯತ್ರ ಯತ್ ಸತ್ವಂ ಅನುಪಲಬ್ಧಿವಿರೋಧಿ'' ಎಂದಂತೆ ಪ್ರತಿಯೋಗಿಸತ್ವದಿಂದ ಅದರ ಉಪಲಬ್ಧಿಯನ್ನು ಆಪಾದನೆ ಮಾಡುವಂತಿರಬೇಕು. 'ಯದಿ ಅತ್ರ ಘಟಃ ಸ್ಯಾತ್ ತರ್ಹಿ ಉಪಲಭ್ಯೇತ'' ಎಂದು. ಅಂತಹ ಉಪಲಬ್ಧಿಪ್ರತಿಯೋಗಿಕಾಭಾವವೇ ಅನುಪಲಬ್ಧಿ. ಅಂತಹ ಘಟಾನುಪಲಬ್ಧಿಯು ಪಾರಿಮಾಂಡಲ್ಯದಲ್ಲೂ ಇದೆ—'ಯದಿ ಪಾರಿಮಾಂಡಲ್ಯೇ ಘಟಃ ಸ್ಯಾತ್ ತರ್ಹಿ ಉಪಲಭ್ಯೇತ' ಎಂದು ಆಪಾದಿಸಬಹುದು. ಹೀಗೆ ಯೋಗ್ಯಾನುಪಲಬ್ಧಿ ಇರುವುದರಿಂದ ಪಾರಿಮಾಂಡಲ್ಯದಲ್ಲಿ ಘಟಾಭಾವವು ಪ್ರತ್ಯಕ್ಷ.[1]

ಮೂಲದಲ್ಲಿ 'ಪರಿಚ್ಛಿನ್ನಕೃತಿ' ಎಂದಿದೆ. ಅದಕ್ಕೆ ಅರ್ಥ-ಸರ್ವವಿಷಯಕವಲ್ಲದ, ಅನಿತ್ಯವಾದ ಜೀವಕೃತಿ, ಎಂದು.

## ಅವತಾರಿಕೆ

**एवं पराभिमतकृतिजन्यत्वांशे कार्यत्वहेतोरप्रयोजकत्वमुक्त्वा अप-रोक्षज्ञानजन्यत्वांशेऽप्यप्रयोजकत्वमिति भावेन कृतेरपरोक्षज्ञानपूर्व-कत्वं प्रागुक्तं निराह–यच्चोक्तमित्यादि ।**

ಇದುವರೆಗೆ ತಾರ್ಕಿಕಾಭಿಮತವಾದ ಕೃತಿಜನ್ಯತ್ವಕ್ಕೆ ಕಾರ್ಯತ್ವಹೇತುವು ಅಪ್ರಯೋಜಕ,

---

१. तस्मात् सन्निकर्षे सति योग्यत्वात् भूतलमपि उपलभ्यते । न तु तस्योपलब्धेः अंगत्वमिति युक्तमुत्पश्यामः । (कुसुमांजलिः–द्वि.स्त.)

ಎಂದು ಹೇಳಲಾಗಿದೆ. ಉಪಾದಾನವಿಷಯಕವಾದ ಅಪರೋಕ್ಷಜ್ಞಾನಜನ್ಯತ್ವಾಂಶದಲ್ಲೂ ಆ ಹೇತು ಅಪ್ರಯೋಜಕ ಎಂದು ಸಾಧಿಸಲು ಕೃತಿಯು ಅಪರೋಕ್ಷಜ್ಞಾನಪೂರ್ವಕವಾಗಿರುತ್ತದೆ ಎಂದು ಹಿಂದೆ (ಪು.169) ಹೇಳಿದ್ದನ್ನು ಮುಂದಿನ ಗ್ರಂಥದಲ್ಲಿ ನಿರಾಕರಿಸುತ್ತಿದ್ದಾರೆ.

## ಉಪಾದಾನದ ಪರೋಕ್ಷಜ್ಞಾನದ ಅಗತ್ಯವಿಲ್ಲ

**यच्चोक्तमुपादानज्ञानं साक्षात्कारत्वेनैव हेतुरिति तदपि न । त्वन्मते चेष्टोपादानस्य वायवीयशरीरस्याप्रत्यक्षत्वेऽपि तदधिष्ठातुरात्मनश्चेष्टाहेतुकृतेरावश्यकत्वेन त्वदुक्तापरोक्षज्ञानत्वविपरीतेन ज्ञानत्वेनैव कृतिहेतुत्वात् । परमाण्वादिपरोक्षज्ञानेन कृत्यभावस्तु न साक्षात्त्वविरहात् । किन्तु कृतियोग्यताप्रयोजकदेश-कालविशेषसत्त्व-विषयकत्वविरहात् । अत एवान्धस्याप्तवाक्यादिना देशकालविशेष-हेयोपादेयज्ञाने सति हानोपादाने युक्ते ।**

ಹಿಂದೆ, (ಪ್ರ.169) ಉಪಾದಾನಜ್ಞಾನವು ಸಾಕ್ಷಾತ್ಕಾರತ್ವೇನ ಕಾರಣ, ಎಂದಿರುವುದೂ ಸರಿಯಲ್ಲ. ನೈಯಾಯಿಕರ ಮತದಲ್ಲಿ ವಾಯುವೀಯಶರೀರದಲ್ಲಿರುವ ಚೇಷ್ಟೆಗೆ ಆ ಶರೀರವು ಉಪಾದಾನ. ಅದರಲ್ಲಿ ಚೇಷ್ಟೆ ಹುಟ್ಟಬೇಕಾದರೆ ಆ ಶರೀರದಲ್ಲಿರುವ ಆತ್ಮನ ಕೃತಿಯು ಕಾರಣ. ಆ ಆತ್ಮನಿಗೆ ತನ್ನ ವಾಯುವೀಯ ಶರೀರದ ಪ್ರತ್ಯಕ್ಷವಿಲ್ಲ. ಆದ್ದರಿಂದ ಕೃತಿಗೆ ಉಪಾದಾನವಿಷಯಕವಾದ ಜ್ಞಾನವು ಅಪರೋಕ್ಷತ್ವೇನ ಕಾರಣವಲ್ಲ, ಕಿಂತು ಜ್ಞಾನತ್ವೇನ ಕಾರಣ.

ಹಾಗಾದರೆ, ಹಿಂದೆ ಹೇಳಿದಂತೆ, ಪರಮಾಣುಗಳ ಪರೋಕ್ಷಜ್ಞಾನವು ಜೀವರಿಗೂ ಇರುವುದರಿಂದ ತದ್ವಿಷಯಕವಾದ ಕೃತಿ ಏಕಾಗುವುದಿಲ್ಲ? ಈ ಆಕ್ಷೇಪಕ್ಕೆ ಸಮಾಧಾನ— ಅಲ್ಲಿ ಕೃತಿ ಇಲ್ಲದಿರುವುದಕ್ಕೆ ಕಾರಣ ಅಪರೋಕ್ಷಾಭಾವವಲ್ಲ. ಕಿಂತು, ಕೃತಿ ಹುಟ್ಟಬೇಕಾದರೆ ವಸ್ತು ದೇಶವಿಶೇಷದಲ್ಲಿ ಮತ್ತು ಕಾಲವಿಶೇಷದಲ್ಲಿ ಇದೆ, ಎಂದು ತಿಳಿದಿರಬೇಕು. ಪರಮಾಣುಗಳು ನಿತ್ಯವಾದುದರಿಂದ ಅವುಗಳು ಕಾಲವಿಶೇಷವೃತ್ತಿಗಳಲ್ಲ. ಆಕಾಶವು ವಿಭುವಾದುದರಿಂದ ದೇಶವಿಶೇಷವೃತ್ತಿಯಲ್ಲ. ಹೀಗಾಗಿ ಪರಮಾಣು ಮತ್ತು ಆಕಾಶಗಳ ವಿಷಯಕವಾದ ಕೃತಿಯು ಹುಟ್ಟುವುದಿಲ್ಲ. ಅಪರೋಕ್ಷಜ್ಞಾನವು ಕಾರಣವಲ್ಲದಿರುವುದರಿಂದಲೇ ಕುರುಡನು, ದೇಶವಿಶೇಷ-ಕಾಲ ವಿಶೇಷಗಳಲ್ಲಿ ಹೇಯವಾದ ಸರ್ಪಾದಿಗಳ ಜ್ಞಾನವು ಆಪ್ತವಾಕ್ಯದಿಂದ ಬಂದಾಗ, ನಿವೃತ್ತನಾಗುತ್ತಾನೆ. ಇಷ್ಟಸಾಧನವಾದ ಭೋಜನಾದಿಗಳ ಪರೋಕ್ಷಜ್ಞಾನ ಬಂದಾಗ ಪ್ರವೃತ್ತಿ ಮಾಡುತ್ತಾನೆ. ಇದರಿಂದ, ಪ್ರವೃತ್ತಿ-ನಿವೃತ್ತಿಗಳಿಗೆ ಹೇಯೋಪಾದೇಯಗಳ ಜ್ಞಾನಕಾರಣ, ಹೊರತು, ಅಪರೋಕ್ಷಜ್ಞಾನವು ಕಾರಣವಲ್ಲ, ಎಂದು ತಿಳಿಸುತ್ತದೆ.

## ನ್ಯಾಯದೀಪ

**हेतुरिति ।** कपालादिकृतावित्यर्थः । तथाच क्षित्यादिनिष्ठकार्यत्वहेतोर्व्यापकतया क्षित्यादिजनकमपीश्वरज्ञानमपरोक्षमेव सिद्ध्यतीति यदुक्तमित्यर्थः । **त्वन्मते चेष्टेत्यादि ।** वायवीयशरीरादावुपादानापरोक्षज्ञानाभावेऽपि चेष्टाहेतुतया कृतिसत्त्वेनापरोक्षत्वस्य कृतौ व्यभिचारादिति भावः ।

तर्हि परमाण्वाकाशादिगोचरलिङ्गादिजन्यज्ञानेनापि तद्गोचरकृतिः स्यादित्यत आह—**परमाण्वादीति । देशेति ।** कपालादेरिव देशविशेषे कालविशेषे सत्त्वाभावादित्यर्थः । परमाणोर्नित्यत्वेन कालविशेषसत्त्वं नास्ति, गगनादौ तु देशविशेषसत्त्वं नेति न तत्र कृतिरिति भावः । **अत एवेति ।** ज्ञानत्वेनैव कृतिहेतुत्वादेवेत्यर्थः । **हेयेति ।** तत्र सर्पोऽस्ति, अत्र रजतमस्तीति ज्ञाने सतीत्यर्थः ।।

ಕುಲಾಲನ ಕಪಾಲವಿಷಯಕ–ಕೃತಿಗೆ ತದ್ವಿಷಯಕವಾದ ಅಪರೋಕ್ಷಜ್ಞಾನವು ಕಾರಣ. ಅದರಂತೆ ಕ್ಷಿತ್ಯಾನಿಷ್ಠವಾದ ಕಾರ್ಯತ್ವಹೇತುವಿಗೆ ವ್ಯಾಪಕವಾದ, ಕ್ಷಿತ್ಯಾದಿಜನಕನಾದ ಈಶ್ವರನ ಜ್ಞಾನವೂ ಅಪರೋಕ್ಷರೂಪವಾದುದು ಸಿದ್ಧವಾಗುತ್ತದೆ, ಎಂದು ಹಿಂದೆ ಹೇಳಲಾಗಿದೆ. ಅದು ಸರಿಯಲ್ಲ.

ವಾಯುವೀಯಶರೀರಗತವಾದ ಚೇಷ್ಟೆಗೆ ಕಾರಣವಾದ ಆತ್ಮನಿಷ್ಠಕೃತಿಗೆ ಆ ಶರೀರಾಧಿಷ್ಠಿತನಾದ ಆತ್ಮನಲ್ಲಿರುವ ಶರೀರವಿಷಯಕವಾದ ಪರೋಕ್ಷಜ್ಞಾನವೇ ಕಾರಣ. ಅಲ್ಲಿ ಕೃತಿಗೆ ಅಪರೋಕ್ಷಜ್ಞಾನದೊಂದಿಗೆ ವ್ಯಭಿಚಾರ ಇದೆ.

ಕಪಾಲವು ದೇಶವಿಶೇಷದಲ್ಲಿ, ಕಾಲವಿಶೇಷದಲ್ಲಿ ಇರುವಂತೆ ಪರಮಾಣುವು ನಿತ್ಯವಾದುದರಿಂದ ಕಾಲವಿಶೇಷದಲ್ಲಿ ಇಲ್ಲವಾದ ಕಾರಣ, ಗಗನವು ವಿಭುವಾದುದರಿಂದ ದೇಶವಿಶೇಷದಲ್ಲಿ ಇಲ್ಲವಾದ ಕಾರಣ ತದ್ವಿಷಯಕವಾದ ಕೃತಿ ಜೀವನಿಗೆ ಇಲ್ಲ, ಎಂದು 'ದೇಶವಿಶೇಷ' ಇತ್ಯಾದಿ ಮೂಲದ ಅರ್ಥ.

## ಅವತಾರಿಕೆ

## ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ

**ನನ್ವಸ್ತ್ವಪರೋಕ್ಷಜ್ಞಾನವತ್ತ್ವಸಿದ್ಧ್ಯಭಾವಃ । ತಥಾಪಿ ಕುಲಾಲವತ್ ಕಾರ್ಯಹೇತುತಯಾ** — original Devanagari:

**नन्वस्त्वपरोक्षज्ञानवत्त्वसिद्ध्यभावः । तथापि कुलालवत् कार्यहेतुतया स्यादेवेश्वरसिद्धिः । कुलाले घटहेतुत्वस्य प्रागेव साधनादित्यतः प्रागुक्तं दृष्टान्ते साध्यवैकल्योद्धारमनूद्य निराह—यच्चेति ।**

ಅಪರೋಕ್ಷಜ್ಞಾನವು ಕಾರಣವಲ್ಲವೆಂದಾದರೆ ತಾದೃಶಜ್ಞಾನವತ್ತ್ವೇನ ಈಶ್ವರಸಿದ್ಧಿ ಯಾಗದಿದ್ದರೂ ಘಟಕ್ಕೆ ಕುಲಾಲನಂತೆ ಕ್ಷಿತ್ಯಾದಿಕಾರಣತ್ವೇನ ಈಶ್ವರ ಸಿದ್ಧಿಯಂತೂ ಆಗುತ್ತದೆ. ಕುಲಾಲನು ಘಟಕ್ಕೆ ಕಾರಣನೆಂದು ಹಿಂದೆಯೇ (ಪು.188) ಸಾಧಿಸಲಾಗಿದೆ. ಹೀಗೆ ನೈಯಾಯಿಕರು ಹೇಳಿದರೆ, ದೃಷ್ಟಾಂತವಾದ ಘಟದಲ್ಲಿ ಹಿಂದೆ ಮಾಡಿರುವ ಸಾಧ್ಯವೈಕಲ್ಯ ಪರಿಹಾರವನ್ನು ಅನುವಾದಿಸಿ ಸಾಧ್ಯವೈಕಲ್ಯವನ್ನು 'ಯಚ್ಚ' ಎಂಬ ಗ್ರಂಥದಲ್ಲಿ ಸಮರ್ಥಿಸಲಾಗಿದೆ.

**यच्च, कपालदृष्टान्तेन कारणीभूतसंयोगाश्रयत्वेनात्मनः कारणत्वसाधनं तन्न । कपालादेः कारणत्वे त्वदुक्तविपरीतस्य लघुनः कार्याश्रयत्वस्यैव तन्त्रत्वात् ।**

ಘಟಕ್ಕೆ ಕಪಾಲದ್ವಯಸಂಯೋಗವು ಅಸಮವಾಯಿಕಾರಣ. ತಾದೃಶ ಸಂಯೋಗಾಶ್ರಯತ್ವೇನ ಕಪಾಲವೂ ಘಟಕಾರಣ. ಅದರಂತೆ ಪ್ರಯತ್ನವದಾತ್ಮಸಂಯೋಗವು ಚೇಷ್ಟಾದ್ವಾರಾ ಘಟಕ್ಕೆ ಕಾರಣ. ತಾದೃಶಸಂಯೋಗಾಶ್ರಯತ್ವೇನ ಕುಲಾಲನೂ ಘಟಕ್ಕೆ ಕಾರಣ, ಎಂದು ಸಿದ್ಧವಾಗುತ್ತದೆ. ಇದನ್ನು ಹಿಂದೆ (ಪು.188) ಹೇಳಲಾಗಿದೆ. ಆದರೆ, ಇದು ಸರಿಯಲ್ಲ. ಕಪಾಲವು ಘಟಕ್ಕೆ ಕಾರಣವಾಗಲು ಕಾರ್ಯವಾದ ಘಟಾಶ್ರಯತ್ವವೇ ಪ್ರಯೋಜಕ. ಅದು ಲಘುಧರ್ಮ. ಪರೋಕ್ತವಾದ ಕಾರಣೀಭೂತ–ಸಂಯೋಗಾಶ್ರಯತ್ವವು ಗುರುಧರ್ಮ. ಆದ್ದರಿಂದ ತೇನ ರೂಪೇಣ ಕಪಾಲವು ಘಟಕ್ಕೆ ಕಾರಣವೇ ಅಲ್ಲ. ಅದನ್ನು ನಿದರ್ಶನವನ್ನಾಗಿಕೊಟ್ಟು ಆತ್ಮಸಂಯೋಗವು ಘಟಕಾರಣ ಎಂದು ಸಾಧಿಸಿ ಕುಲಾಲನಿಗೆ ಘಟಕಾರಣತ್ವವನ್ನು ಹೇಳಲಾಗದು. ಆಚಾರ್ಯರ "ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್" ಎಂಬ ಮಾತಿಗೆ ಇದೂ ಒಂದು ಅರ್ಥ.

## ನ್ಯಾಯದೀಪ

**'घटकारणीभूतसंयोगाश्रयस्य कपालस्य घटकारणत्वदर्शनात्'इतिग्रन्थेनोक्तमित्यर्थः । लघुन इति । कार्यासमवायिकारणसंयोगाश्रयत्वा-**

पेक्षया कार्याश्रयत्वस्य लघुत्वात् । तथाचात्मनस्तदभावान्न घटहेतुत्वमिति दृष्टान्तः साध्यविकल एवेति भावः । नच भूतलादेरपि घटकारणत्वप्रसङ्गः । समवायवृत्त्या तदाश्रयत्वस्याभिमतत्वात् ॥

ಕಾರ್ಯಾಸಮವಾಯಿ–ಸಂಯೋಗಾಶ್ರಯತ್ವವೂ ಕಪಾಲದಲ್ಲಿದೆ, ಕಾರ್ಯಾಶ್ರಯತ್ವವೂ ಇದೆ. ಇವೆರಡರಲ್ಲಿ ಕಾರ್ಯಾಶ್ರಯತ್ವವು ಲಘುಧರ್ಮ. ತೇನರೂಪೇಣೈವ ಕಪಾಲವು ಘಟಕಾರಣ. ಕುಲಾಲನು ಘಟಾಶ್ರಯನಲ್ಲ. ಆದ್ದರಿಂದ ಘಟಕಾರಣನಲ್ಲ, ಹೀಗೆ, ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಘಟಾಶ್ರಯತ್ವವೇ ಘಟಕಾರಣತ್ವ ಪ್ರಯೋಜಕವಾದರೆ ಭೂತಲವೂ ಘಟಕಾರಣವಾದೀತು. ಇಲ್ಲ. ಸಮವಾಯೇನ ಘಟಾಶ್ರಯತ್ವವೇ ಪ್ರಯೋಜಕ. ಭೂತಲವು ಸಂಯೋಗೇನ ಘಟಾಶ್ರಯ.

## ನ್ಯಾಯದೀಪ

एतच्चाभ्युपेत्योक्तम् । वस्तुतस्तु समवायस्याग्रे निरसिष्यमाणतया,

''तन्तुभ्योऽन्यः पटः साक्षात् कस्य दृष्टिपथं गतः''

इति स्मृत्या संयोगविशेषविशिष्ट-कपालद्वयातिरिक्तघटस्यैव अभावाद् दृष्टान्तासिद्धिः ।

किंच संयोगस्य हेतुत्वोपगमेऽपि तदवच्छेदकत्वेनान्यथासिद्ध-त्वादात्मनो न हेतुत्वम् । नचैवं चेष्टाद्वारा घटहेतुप्रयत्नवदात्म-संयोगावच्छेदकत्वेनात्मनोऽन्यथासिद्धौ तत एव प्रयत्नस्याहेतुत्वमिति युक्तम् । प्रयत्नस्य स्वतन्त्रान्वयव्यतिरेकाभ्यामेव हेतुत्वेन तस्य तादृशसंयोगविशेषणत्वनिबन्धनत्वाभावात् । प्रयत्नवदात्मसंयोगस्य हेतुत्वे मानाभावाच्च । येन तदाश्रयतयाऽप्यात्मा हेतुः स्यात् ।

स्वव्यधिकरणतदीयगुण-व्यतिरेकप्रयुक्तव्यतिरेकप्रतियोगित्वं तु मन्त्र-पाठजन्यविषचलने मन्त्ररूपशब्दगुणकाकाशसंयोगासमवायि-कारणत्वहीने, स्वव्यधिकरणमन्त्ररूपाकाशीयगुणव्यतिरेकप्रयुक्तव्यति-

रेकप्रतियोगित्वरूपहेतुमति व्यभिचारि। तथा, तुलायामेकदिगवस्थिताधिकगुरुत्वजन्यापरदिगवस्थितोन्नमनक्रियायां च व्यभिचारि। नच तत्रापि साध्यमस्तीति वाच्यम्। विप्रतिपत्तेः।

नच क्रमेण स्थलद्वये व्यभिचारवारणायादृष्टाद्वारकेति, प्रत्यक्षेति च गुणविशेषणम्। मन्त्रस्त्वाशुतरविनाशित्वाददृष्टद्वारैव विषचलनहेतुः। गुरुत्वगुणश्च न प्रत्यक्ष इति वाच्यम्। तथात्वे स्वव्यधिकरणपदवैय्यर्थ्यापत्तेः। प्रत्यक्षपदेनैव प्रागुक्ततत्कृत्यलाभात्, अदृष्टवदात्मसंयोगस्य कारणताभङ्गप्रसङ्गाच्च। चेष्टायामात्मकारणत्वप्राप्तावपि घटं प्रत्यात्मनः कारणत्वासिद्धेश्च ॥

ಸಮವಾಯಿತಯಾ ಘಟಾಶ್ರಯತ್ವವು ಕಪಾಲದಲ್ಲಿದೆ, ಎಂದು ನೈಯಾಯಿಕರು ಹೇಳಿದ್ದನ್ನು ಅಂಗೀಕರಿಸಿ ಕಪಾಲಕ್ಕೆ ಘಟಕಾರಣತ್ವವನ್ನು ತೋರಿಸಲಾಗಿದೆ. ವಸ್ತುತಃ, ಸಮವಾಯವನ್ನು ಇದೇ ಗ್ರಂಥದಲ್ಲಿ ಮುಂದೆ ನಿರಾಕರಿಸಲಾಗಿದೆ. ಆದ್ದರಿಂದ "ತಂತುಗಳಿಗಿಂತ ಭಿನ್ನವಾದ ಪಟವನ್ನು ಯಾರು ನೋಡಿದ್ದಾರೆ?" ಎಂದು ಸ್ಮೃತಿಯಲ್ಲಿ ಹೇಳಿರುವಂತೆ ಸಂಯುಕ್ತವಾದ ಕಪಾಲದ್ವಯಕ್ಕಿಂತ ಭಿನ್ನವಾದ ಘಟವೇ ಇಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಅಷ್ಟೇ ಅಲ್ಲ, ಅದೃಷ್ಟವದಾತ್ಮಸಂಯೋಗವು ಚೇಷ್ಟಾದ್ವಾರಾ ಘಟಹೇತುವಾದರೂ ಆತ್ಮನು ಅವಚ್ಛೇದಕ ಕೋಟಿಯಲ್ಲಿ ಸೇರಿರುವುದರಿಂದ ಅನ್ಯಥಾಸಿದ್ಧನಾದುದರಿಂದ ಘಟಕಾರಣನಲ್ಲ.

**ಆಕ್ಷೇಪ—**ಚೇಷ್ಟಾದ್ವಾರಾ ಘಟಕಾರಣವಾದ ಪ್ರಯತ್ನವುಳ್ಳ ಆತ್ಮನು, ಸಂಯೋಗದಲ್ಲಿ ಅವಚ್ಛೇದಕನಾದುದರಿಂದ ಅನ್ಯಥಾಸಿದ್ಧನಾದರೆ ಆತ್ಮಗತವಾದ ಪ್ರಯತ್ನವೂ ಘಟಕ್ಕೆ ಕಾರಣ ವಾಗಲಿಕ್ಕಿಲ್ಲ.

**ಸಮಾಧಾನ—**ಪ್ರಯತ್ನಕ್ಕೆ ಘಟದೊಂದಿಗೆ ಸ್ವತಂತ್ರವಾಗಿ ಅನ್ವಯ-ವ್ಯತಿರೇಕಗ್ರಹ ಇರುವುದರಿಂದಾಗಿ ಕಾರಣತ್ವಸಿದ್ಧವಾಗುತ್ತದೆ. ಅದಕ್ಕಾಗಿ ಪ್ರಯತ್ನವದಾತ್ಮಸಂಯೋಗದಲ್ಲಿ ಅದು ವಿಶೇಷಣವಾಗುವ ಅಗತ್ಯವಿಲ್ಲ.

ಅಷ್ಟೇ ಅಲ್ಲ, ಪ್ರಯತ್ನವದಾತ್ಮಸಂಯೋಗವು ಘಟಕ್ಕೆ ಕಾರಣ ಎನ್ನುವುದಕ್ಕೆ ಪ್ರಮಾಣವೂ ಇಲ್ಲ. ಅದು ಪ್ರಾಮಾಣಿಕವಾಗಿದ್ದಿದ್ದಲ್ಲಿ ತದವಚ್ಛೇದಕತಯಾ ಆತ್ಮನೂ ಕಾರಣನಾಗಬಹುದಿತ್ತು.

ಹಿಂದೆ (ಪು.191) ಆತ್ಮಸಂಯೋಗವು ಚೇಷ್ಟಾಕಾರಣ ಎಂದು ಸಮರ್ಥಿಸಲು ಒಂದು

ನಿಯಮವನ್ನು ಹೇಳಲಾಗಿತ್ತು— 'ಯಾವುದು ಸ್ವವ್ಯಧಿಕರಣವಾದ ಗುಣವ್ಯತಿರೇಕ ಪ್ರಯುಕ್ತ–ವ್ಯತಿರೇಕಪ್ರತಿಯೋಗಿಯೋ ಅದಕ್ಕೆ ತದೀಯ ಸಂಯೋಗವು ಕಾರಣ. ಶರೀರ–ಚೇಷ್ಟಾವ್ಯಧಿಕರಣವಾದ ಆತ್ಮಪ್ರಯತ್ನವು ಚೇಷ್ಟಾಕ್ಕೆ ಕಾರಣ. ಆದ್ದರಿಂದ ಶರೀರಾತ್ಮಸಂಯೋಗವು ಚೇಷ್ಟಾಕ್ಕೆ ಕಾರಣ, ಎಂದು. ಈ ನಿಯಮಕ್ಕೆ ವ್ಯಭಿಚಾರವಿದೆ—ಮಂತ್ರಪಾಠದಿಂದ ವಿಷನಿವೃತ್ತಿಯಾಗುತ್ತದೆ. ವಿಷನಿವೃತ್ತಿಯಾಗುವುದು ಸರ್ಪಕಚ್ಚಿದವನ ದೇಹದಲ್ಲಿ. ಶಬ್ದರೂಪವಾದ ಮಂತ್ರಪಾಠ ಆಕಾಶಗುಣ. ಹೀಗೆ ವಿಷನಿವೃತ್ತಿಯು ಸ್ವವ್ಯಧಿಕರಣವಾದ ಮಂತ್ರಪಾಠ–ವ್ಯತಿರೇಕ–ಪ್ರಯುಕ್ತ–ವ್ಯತಿರೇಕಪ್ರತಿಯೋಗಿಯಾಗಿದೆ. (ಮಂತ್ರಪಾಠಾಭಾವೇ ವಿಷನಿವೃತ್ತ್ಯಭಾವಃ) ಆದರೆ, ಅದಕ್ಕೆ ಆಕಾಶಸಂಯೋಗವು ಅಸಮವಾಯಿಕಾರಣವಲ್ಲ.

ಇನ್ನೊಂದು ಕಡೆಯಲ್ಲೂ ವ್ಯಭಿಚಾರವಿದೆ–ತಕ್ಕಡಿಯ ಒಂದು ತಟ್ಟೆಯಲ್ಲಿ ಭಾರ ಹಾಕಿದರೆ ಇನ್ನೊಂದು ತಟ್ಟೆ ಮೇಲಕ್ಕೇರುತ್ತದೆ. ಇಲ್ಲಿ ತಟ್ಟೆಯಲ್ಲಿರುವ ಉನ್ನಮನ ಕ್ರಿಯೆಗೆ ಇನ್ನೊಂದು ತಟ್ಟೆಯಲ್ಲಿರುವ ಗುರುತ್ವವು ಕಾರಣ. ಹೀಗೆ ಕಾರ್ಯ–ಕಾರಣಗಳು ವ್ಯಧಿಕರಣವಾಗಿದ್ದರೂ ಭಾರವಿರುವ ತಟ್ಟೆಯ ಸಂಯೋಗವು ಉನ್ನಮನಕ್ರಿಯೆಗೆ ಅಸಮವಾಯಿಕಾರಣವಲ್ಲ. ಈ ಎರಡು ಸಂಯೋಗಗಳು ವಿಷನಿವೃತ್ತಿಗೆ ಮತ್ತು ಉನ್ನಮನಕ್ರಿಯೆಗೆ ಕಾರಣ ಎನ್ನುವಲ್ಲಿ ವಿವಾದವಿದೆ.

**ಆಕ್ಷೇಪ**—ಈ ಎರಡು ವ್ಯಭಿಚಾರಗಳನ್ನು ಪರಿಹರಿಸಬಹುದು—ಮೊದಲನೆಯ ವ್ಯಭಿಚಾರ ಪರಿಹಾರಕ್ಕಾಗಿ ವ್ಯಧಿಕರಣ–ಗುಣವು ಅದೃಷ್ಟದ್ವಾರಾ ಕಾರಣವಾಗಿರಬಾರದು, ಎಂಬ ನಿಬಂಧನೆಯನ್ನು ಮಾಡಬೇಕು. ಮಂತ್ರಪಠನವು ಆಶುತರವಿನಾಶಿ. ಅದು ಸ್ವಜನ್ಯ–ಅದೃಷ್ಟದ್ವಾರಾ ವಿಷನಿವೃತ್ತಿಗೆ ಹೇತು. ಆದ್ದರಿಂದ ಅದರಲ್ಲಿ ಹೇತು ಇಲ್ಲ.

ಎರಡನೆಯ ವ್ಯಭಿಚಾರಪರಿಹಾರಕ್ಕಾಗಿ ಸ್ವವ್ಯಧಿಕರಣಗುಣವು ಪ್ರತ್ಯಕ್ಷವಾಗಿರಬೇಕೆಂದು ಹೇಳಿದರಾಯ್ತು. ಗುರುತ್ವವು ಪ್ರತ್ಯಕ್ಷವಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ.

**ಸಮಾಧಾನ**—ವ್ಯಧಿಕರಣಗುಣದಲ್ಲಿ ಪ್ರತ್ಯಕ್ಷತ್ವವಿಶೇಷಣ ಸೇರಿಸಿದರೆ 'ಸ್ವವ್ಯಧಿಕರಣ' ಎಂಬ ವಿಶೇಷಣವು ವ್ಯರ್ಥ. ಹಿಂದೆ (ಪು.194) ಪತನ ಕಾರಣವಾದ ಗುರುತ್ವದಲ್ಲಿ ವ್ಯಭಿಚಾರನಿರಾಸಕ್ಕಾಗಿ ಆ ವಿಶೇಷಣದ ಸಾರ್ಥಕ್ಯವನ್ನು ಹೇಳಲಾಗಿತ್ತು. ಆದರೆ, ಕಾರಣವಾದ ಗುರುತ್ವವು ಪ್ರತ್ಯಕ್ಷವಲ್ಲದಿರುವುದರಿಂದಲೇ ಅದು ಪರಿಹಾರವಾಗುತ್ತದೆ.

ಇದಲ್ಲದೆ, ನೈಯಾಯಿಕರು ಅದೃಷ್ಟವದಾತ್ಮಸಂಯೋಗವು ಕಾರ್ಯಕ್ಕೆ ಕಾರಣ, ಎಂದು ಹೇಳುತ್ತಾರೆ. ಅದೂ ಕಾರಣವಾಗಲಿಕ್ಕಿಲ್ಲ. ಅಲ್ಲಿಯೂ ಕಾರಣವಾದ ಸ್ವವ್ಯಧಿಕರಣ ಅದೃಷ್ಟವು ಪ್ರತ್ಯಕ್ಷವಲ್ಲ.

ಅಷ್ಟೇ ಅಲ್ಲ. ಈ ನಿಯಮದಂತೆ ಶರೀರಚೇಷ್ಟೆಗೆ ಆತ್ಮಸಂಯೋಗವು ಕಾರಣವೆಂದಂತಾಗಿ ತದ್‌ಘಟಕತಯಾ ಆತ್ಮನು ಚೇಷ್ಟೆಗೆ ಕಾರಣವೆಂದು ಸಿದ್ಧವಾಗುತ್ತದೆ, ಘಟಕ್ಕೆ ಕಾರಣ ಎಂಬ ಉದ್ದೇಶ ಸಿದ್ಧವಾಗುವುದಿಲ್ಲ.

## ನ್ಯಾಯದೀಪ

**एतेन, मूर्तवृत्ति यत्कार्यं यदीयगुणनिमित्तकारणकं तत् तत्संयोगजन्यमिति व्याप्त्या संयोगकारणत्वसिद्धिः । अत्र शब्दजन्ये, गगनसंयोगाजन्ये शब्दगोचरप्रत्यक्षे व्यभिचारनिरासाय मूर्तेति । तन्तुरूपजन्ये तन्तुसंयोगाजन्ये पटरूपे तन्निरासाय निमित्तेति । दण्डावयवीयदण्डनिमित्तके, दण्डावयवसंयोगाजन्ये घटे तद्वारणाय गुणेति पदमिति रुचिदत्तोक्तं निरस्तम् । पूर्वोक्तोन्नमनक्रियायां व्यभिचारादित्यलम् ।।**

ರುಚಿದತ್ತಮಿಶ್ರರು 'ಸ್ವವ್ಯಧಿಕರಣ' ಇತ್ಯಾದಿ ಕಾರ್ಯ-ಕಾರಣಭಾವವನ್ನು ಹೀಗೆ ಪರಿಷ್ಕರಿಸಿದ್ದಾರೆ—ಮೂರ್ತವಸ್ತುಗಳಲ್ಲಿ ಇರುವ ಕಾರ್ಯಕ್ಕೆ ಯಾವುದರ ಗುಣವು ನಿಮಿತ್ತಕಾರಣವಾಗಿರುವುದೋ ಆ ಕಾರ್ಯವು ಆ ವಸ್ತುವಿನ ಸಂಯೋಗದಿಂದ ಜನ್ಯವಾಗಿರುತ್ತದೆ, ಎಂದು ನಿಯಮ. ಪ್ರಕೃತ ಶರೀರವೆಂಬ ಮೂರ್ತವಸ್ತುವಿನಲ್ಲಿರುವ ಚೇಷ್ಟಾರೂಪಕಾರ್ಯಕ್ಕೆ ಆತ್ಮನ ಪ್ರಯತ್ನರೂಪಗುಣವು ನಿಮಿತ್ತಕಾರಣವಾಗಿದೆ. ಆದ್ದರಿಂದ ಶರೀರದೊಂದಿಗೆ ಆಗುವ ಆತ್ಮನ ಸಂಯೋಗದಿಂದ ಅದು ಜನ್ಯವಾಗಿದೆ.

**ಕೃತ್ಯಚಿಂತನೆ—**ಶಬ್ದವು ಅದರ ಶ್ರಾವಣಪ್ರತ್ಯಕ್ಷಕ್ಕೆ ನಿಮಿತ್ತಕಾರಣವಾಗಿದೆ. ಅದು ಆಕಾಶದ ಗುಣ. ಅದಕ್ಕೆ ಆಶ್ರಯ ಆಕಾಶ. ಆ ಆಕಾಶಸಂಯೋಗದಿಂದ ಶ್ರಾವಣಪ್ರತ್ಯಕ್ಷವು ಜನ್ಯವಾಗಿಲ್ಲ. ವ್ಯಭಿಚಾರ ಬಂತು. ಅದರ ಪರಿಹಾರಕ್ಕಾಗಿ 'ಮೂರ್ತವೃತ್ತಿಕಾರ್ಯ' ಎನ್ನಬೇಕು. ಶಬ್ದಪ್ರತ್ಯಕ್ಷವು ಆತ್ಮನಿಷ್ಠಕಾರ್ಯ, ಮೂರ್ತವೃತ್ತಿಯಲ್ಲ.

ತಂತುರೂಪದಿಂದ ಪಟರೂಪವು ಹುಟ್ಟುತ್ತದೆ. ಆದರೆ, ಪಟರೂಪಕ್ಕೆ ತಂತುಸಂಯೋಗವು ಕಾರಣವಲ್ಲ. ಅದಕ್ಕಾಗಿ ನಿಮಿತ್ತಕಾರಣ ಎನ್ನಬೇಕು. ತಂತುರೂಪವು ಅಸಮವಾಯಿಕಾರಣ, ನಿಮಿತ್ತಕಾರಣವಲ್ಲ. ಯದೀಯ ನಿಮಿತ್ತಕಾರಣಕಂ ಯತ್ ತತ್ ತತ್ಸಂಯೋಗಕಾರಣಕಂ, ಎಂದು ಹೇಳಿದರೆ ದಂಡಾವಯವೀಯವಾಗಿರುವ ದಂಡ-ನಿಮಿತ್ತಕವಾದ ಘಟಕ್ಕೆ ದಂಡಸಂಯೋಗವು ಕಾರಣವಲ್ಲ. ಈ ವ್ಯಭಿಚಾರಪರಿಹಾರಕ್ಕಾಗಿ 'ಯದೀಯಗುಣ' ಎನ್ನಬೇಕು. ದಂಡವು ಸ್ವಾವಯವೀಯಗುಣವಲ್ಲ, ದ್ರವ್ಯ.

ಈ ನಿಯಮಕ್ಕೂ ತುಲೋನ್ನಮನಕ್ರಿಯೆಯಲ್ಲಿ ವ್ಯಭಿಚಾರವಿದೆ. ಅದು ಇನ್ನೊಂದು ತಟ್ಟೆಯ ಗುರುತ್ವಗುಣ- ನಿಮಿತ್ತಕವಾಗಿದೆ. ಆದರೆ, ಅದರ ಸಂಯೋಗಜನ್ಯವಲ್ಲ. ಆದ್ದರಿಂದ, ರುಚಿದತ್ತನ ಈ ಪರಿಷ್ಕಾರಕ್ಕೂ ವ್ಯಭಿಚಾರವಿದೆ.

## ಅವತಾರಿಕೆ

**नन्वस्तूपादानगोचरज्ञानं ज्ञानत्वेनैव कृतिहेतुर्नत्वपरोक्षत्वेन । अस्तु च घटादौ कुलालकृत्यादेरेव हेतुतया कुलालस्याहेतुत्वेन तद्दृष्टान्तेन ईश्वरस्य क्षित्यादिहेतुतया सिद्ध्यभावः । तथापि तादृशज्ञानं कार्यत्वहेतोः पक्षधर्मताबलान्नित्यमेव सिध्यतीति तदाश्रयतयेश्वरसिद्धिर्भवतु, को दोषः ?**

**नच ज्ञानमनित्यमेव, साक्षात्कारस्त्विन्द्रियजन्य एव, इच्छा ज्ञानजन्यैव, कृतिरिच्छाजन्यैवत्यादिव्याप्तिबाधः। ज्ञानत्वानित्यत्वयोः कार्यकारणभावादेरभावेन व्याप्तेरमूलत्वात् । कार्यकृत्योश्च कार्यकारणभावादित्युक्तत्वादित्यतस्तन्निराह—यच्चेति ।**

ನೈಯಾಯಿಕರು ಹೀಗೆ ವಾದ ಮಾಡುತ್ತಾರೆ— ಹಿಂದೆ ಹೇಳಿದಂತೆ, ಉಪಾದಾನ ವಿಷಯಕಜ್ಞಾನವು ಜ್ಞಾನತ್ವೇನೈವ ಕೃತಿಗೆ ಕಾರಣವಾಗಲಿ, ಅಪರೋಕ್ಷತ್ವೇನ ಕಾರಣವಾಗುವುದು ಬೇಡ.

ಆದರಂತೆ, ಘಟಕ್ಕೆ ಕುಲಾಲಕೃತಿಯೇ ಕಾರಣ, ಕುಲಾಲ ಕಾರಣನಲ್ಲ. ಆದ್ದರಿಂದ ಕುಲಾಲದೃಷ್ಟಾಂತದಿಂದ ಕ್ಷಿತ್ಯಾದಿಹೇತುವಾಗಿ ಈಶ್ವರಸಿದ್ಧಿಯಾಗುವುದು ಬೇಡ.

ಆದರೂ ಕ್ಷಿತ್ಯಾದಿಗಳಿಗೆ ಕಾರಣವಾದ ಜ್ಞಾನವು ಕಾರ್ಯತ್ವಹೇತುವಿನ ಪಕ್ಷಧರ್ಮತಾ ದಿಂದಾಗಿ ನಿತ್ಯವೆಂದು ಸಿದ್ಧವಾಗುತ್ತದೆ. ತಾದೃಶನಿತ್ಯಜ್ಞಾನಕ್ಕೆ ಆಶ್ರಯನಾಗಿ ಈಶ್ವರನು ಸಿದ್ಧನಾಗುತ್ತಾನೆ. ಇದಕ್ಕೇನೂ ಬಾಧಕವಿಲ್ಲ.

**ಆಕ್ಷೇಪ**—ಜ್ಞಾನಗಳೆಲ್ಲವೂ ಅನಿತ್ಯವಾಗಿವೆ. ಅಪರೋಕ್ಷಜ್ಞಾನವಂತೂ ಇಂದ್ರಿಯಜನ್ಯ ವಾಗಿರಬೇಕು. ಇಚ್ಛೆಯೂ ಜ್ಞಾನದಿಂದ ಹುಟ್ಟುತ್ತದೆ. ಕೃತಿ ಇಚ್ಛಾಜನ್ಯ. ಹೀಗೆ ವ್ಯಾಪ್ತಿಯಿಂದ ನಿತ್ಯವಾದ ಜ್ಞಾನ-ಇಚ್ಛಾ-ಕೃತಿಗಳು ಸಿದ್ಧವಾಗುವುದು ಹೇಗೆ?

**ಸಮಾಧಾನ**—ಜ್ಞಾನಾದಿಗಳು ಜನ್ಯಗಳೇ ಆಗಿರಬೇಕು, ಎಂಬ ವ್ಯಾಪ್ತಿಗೆ ನಿಯಾಮಕವಿಲ್ಲ. ಆದ್ದರಿಂದ ಕ್ಷಿತ್ಯಾದಿಹೇತುಗಳಾದ ಜ್ಞಾನಾದಿಗಳಿಗೆ ಅನಿತ್ಯತ್ವವನ್ನು ಸಾಧಿಸುವ ಅನುಮಾನ ಅಪ್ರಯೋಜ. ಆದರೆ, ಕಾರ್ಯತ್ವಾನುಮಾನ ಕಾರ್ಯ-ಕೃತಿಗಳ ಕಾರ್ಯಕಾರಣದ ಮೇಲೆ ಆಧಾರಿತವಾಗಿದೆ.

ಹೀಗೆ ನಿತ್ಯಜ್ಞಾನಾಶ್ರಯತಯಾ ಈಶ್ವರಸಿದ್ಧಿಯು ಆಗುತ್ತದೆ, ಎಂಬ ಆಕ್ಷೇಪ ಬಂದಾಗ ಅದಕ್ಕೆ 'ಯಚ್ಚ' ಎಂಬ ಮುಂದಿನ ಗ್ರಂಥ ಸಮಾಧಾನ ಕೊಡುತ್ತದೆ.

**यच्चोक्तं ज्ञानमनित्यमेवेत्यादि व्याप्तिरमूलेति तन्न । लाघवेन कृतिजन्यत्वे जन्यत्वस्यैव, मनोजन्यत्वे आत्मविशेषगुणत्वस्यैव, इन्द्रियजन्यत्वे साक्षात्कारत्वस्यैव, ज्ञानजन्यत्वे इच्छात्वस्यैव, इच्छाजन्यत्वे कृतित्वस्यैव तन्त्रत्वेन व्याप्तेः समूलत्वेन त्वदुक्तविपरीतस्येश्वरज्ञानाद्यनित्यत्वस्यानुमातुं शक्यत्वात् ॥**

ಜ್ಞಾನವು ಅನಿತ್ಯವೇ ಆಗಿರುತ್ತದೆ, ಎಂಬ ವ್ಯಾಪ್ತಿಗೆ ಕಾರ್ಯ–ಕಾರಣಭಾವವು ಮೂಲವಲ್ಲವಾದ ಕಾರಣ, ಆ ವ್ಯಾಪ್ತಿಯು ಅಪ್ರಯೋಜಕ, ಎಂದು ಹಿಂದೆ (ಪು.213) ಹೇಳಲಾಗಿದೆ. ಆದರೆ, ಈ ವ್ಯಾಪ್ತಿಯು ನಿರ್ಮೂಲವಲ್ಲ. ನೈಯಾಯಿಕರು ಕೃತಿಜನ್ಯತ್ವಕ್ಕೆ ಜನ್ಯತ್ವವೇ ಪ್ರಯೋಜಕ ಎನ್ನುತ್ತಾರೆ. ಅದರಂತೆ, ಮನೋಜನ್ಯತ್ವಕ್ಕೆ ಪ್ರಯೋಜಕವಾದುದು ಆತ್ಮವಿಶೇಷಗುಣತ್ವ. ಆತ್ಮವಿಶೇಷಗುಣಗಳೆಲ್ಲವೂ ಮನೋಜನ್ಯವೇ ಆಗಿರುತ್ತವೆ. ಕ್ಷಿತ್ಯಾದಿಕಾರಣವಾದ ಜ್ಞಾನೇಚ್ಛಾ ಕೃತಿಗಳೂ ಆತ್ಮವಿಶೇಷಗುಣಗಳಾಗಿವೆ. ಆದ್ದರಿಂದ ಅವುಗಳೂ ಮನೋಜನ್ಯಗಳಾದುದರಿಂದ, ಅನಿತ್ಯಗಳೇ ಆಗಿರಬೇಕು.

2. ಇಂದ್ರಿಯಜನ್ಯತ್ವಕ್ಕೆ ಪ್ರಯೋಜಕವಾದುದು ಸಾಕ್ಷಾತ್ಕಾರತ್ವ. ಸಾಕ್ಷಾತ್ಕಾರಗಳೆಲ್ಲವೂ ಇಂದ್ರಿಯಜನ್ಯಗಳೇ ಆಗಿರಬೇಕು. ಕ್ಷಿತ್ಯಾದ್ಯುಪಾದಾನಗೋಚರವಾದ ಜ್ಞಾನವೂ ಅಪರೋಕ್ಷ ಜ್ಞಾನವಾದ ಕಾರಣ ಅದೂ ಇಂದ್ರಿಯಜನ್ಯವೇ ಆಗಬೇಕು.

3. ಜ್ಞಾನದಿಂದ ಸಾಕ್ಷಾಜ್ಜನ್ಯತ್ವಕ್ಕೆ ಪ್ರಯೋಜಕವಾದುದು ಇಚ್ಛಾತ್ವ. ಇಚ್ಛಾಗಳೆಲ್ಲವೂ ಜ್ಞಾನಜನ್ಯಗಳೇ ಆಗಬೇಕು. ಈಶ್ವರನ ಇಚ್ಛೆಯೂ ಜ್ಞಾನಜನ್ಯವಾಗಬೇಕು.

4. ಇಚ್ಛಾಜನ್ಯತ್ವಕ್ಕೆ ಪ್ರಯೋಜಕವಾದುದು ಕೃತಿತ್ವ. ಆದ್ದರಿಂದ ಕ್ಷಿತಿಕಾರಣವಾದ ಕೃತಿಯೂ ಇಚ್ಛಾಜನ್ಯವಾಗಬೇಕು.

ಹೀಗೆ ಈ ವ್ಯಾಪ್ತಿಗಳೆಲ್ಲವೂ ಪ್ರಯೋಜ್ಯಪ್ರಯೋಜಕಭಾವ–ಮೂಲವಾಗಿರುವುದರಿಂದ ಅವುಗಳು ಅಪ್ರಯೋಜಕಗಳಲ್ಲ. ಆದ್ದರಿಂದ ಆ ವ್ಯಾಪ್ತಿಗಳ ಆಧಾರದಿಂದ ವಿಪರ್ಯಯೇಣಾಪಿ= ನೀನು ಹೇಳಿರುವ ನಿತ್ಯಜ್ಞಾನಾದಿಗಳಿಗೆ ವಿಪರೀತವಾಗಿ ಅನಿತ್ಯಜ್ಞಾನಾದಿಗಳನ್ನು ಅನುಮಾನ ಮಾಡಬಹುದು.

## न्यायदीप

**यथाहि कृतिजन्यत्वमेव प्रयोजकं लाघवात्, नतु शरीरजन्यत्वादिकमित्युच्यते, तथा आत्मविशेषगुणत्वादिरेव मनःप्रभृतिकारणजन्यत्वे प्रयोजक इति आत्मविशेषगुणत्वस्येश्वरीयज्ञानेच्छाकृतिषु तिसृष्वपि सत्त्वात्, साक्षात्कारत्वेच्छात्व–कृतित्व–रूपधर्मत्रयस्यापीश्वरीयज्ञानादौ प्रत्येकं सत्त्वेन च मनःप्रभृतिकारणजन्यत्वापत्त्या अनित्यत्वस्य दुर्वारत्वादिति भावः ।**

**सङ्ख्यापरिमाणाद्यात्मसामान्यगुणे मनोजन्यत्वाभावाद् विशेषगुणत्वस्येत्युक्तम् । मनोजन्यत्वं च मनस्त्वेन रूपेण तज्जन्यत्वं ध्येयम् । तेन मनःक्रियायामात्ममनःसंयोगादौ च मनोजन्ये नाव्याप्तिदोषः । एवं ज्ञानजन्यत्व इत्यादावपि ज्ञानत्वादिना तज्जन्यत्वं ध्येयम् ।।**

ನೈಯಾಯಿಕರು, ಕಾರ್ಯತ್ವಕ್ಕೆ ಲಾಘವಾತ್ ಕೃತಿಜನ್ಯತ್ವವೇ ಪ್ರಯೋಜಕ, ಶರೀರಜನ್ಯತ್ವಾದಿಗಳಲ್ಲ, ಎನ್ನುತ್ತಾರೆ. ಅದರಂತೆ, ಆತ್ಮವಿಶೇಷಗುಣತ್ವಾದಿಗಳೇ ಲಾಘವಾತ್ ಮನೋಜನ್ಯತ್ವಾದಿಗಳಿಗೆ ಪ್ರಯೋಜಕ. ಪ್ರಯೋಜಕವಾದ ಈ ಆತ್ಮವಿಶೇಷಗುಣತ್ವವು ಜ್ಞಾನೇಚ್ಛಾಕೃತಿಗಳಲ್ಲಿ ಮೂರರಲ್ಲೂ ಇರುವುದರಿಂದ ಅವು ಮೂರೂ ಮನೋಜನ್ಯಗಳೇ ಆಗಬೇಕು.

ಅದರಂತೆ, ಜನ್ಯತ್ವ ಪ್ರಯೋಜಕಗಳಾದ ಸಾಕ್ಷಾತ್ಕಾರತ್ವ, ಇಚ್ಛಾತ್ವ, ಕೃತಿತ್ವರೂಪ–ಧರ್ಮಗಳೂ ಈಶ್ವರನ ಇಚ್ಛಾ–ಕೃತಿಗಳಲ್ಲಿ ಪ್ರತ್ಯೇಕವಾಗಿ ಇರುವುದರಿಂದಾಗಿ ಅವೆಲ್ಲವೂ ಕ್ರಮೇಣ ಇಂದ್ರಿಯ–ಜ್ಞಾನೇಚ್ಛಾಜನ್ಯಗಳೇ ಆಗಬೇಕು. ಹೀಗೆ, ಈಶ್ವರೀಯ ಜ್ಞಾನೇಚ್ಛಾಕೃತಿಗಳೂ ಅನಿತ್ಯಗಳು ಎಂದು ಮೂಲಕಾರರ ಆಶಯ.

ಆತ್ಮವಿಶೇಷಗುಣತ್ವವು ಮನೋಜನ್ಯತ್ವಕ್ಕೆ ಪ್ರಯೋಜಕ, ಎಂದಿದೆ. ಅಲ್ಲಿ ವಿಶೇಷಪದವನ್ನು ಬಿಟ್ಟರೆ, ಆತ್ಮಗುಣವು ಮನೋಜನ್ಯ ಎಂದಂತಾಗುತ್ತದೆ. ಆದರೆ, ಸಂಖ್ಯಾ, ಪರಿಮಾಣ, ಸಂಯೋಗ, ವಿಭಾಗಗಳೂ ಆತ್ಮಗುಣಗಳು. ಅವುಗಳು ಮನೋಜನ್ಯಗಳಲ್ಲ. ಅದಕ್ಕಾಗಿ ವಿಶೇಷಪದವಿದೆ. ಅವುಗಳು ಸಕಲದ್ರವ್ಯಸಾಧಾರಣಗುಣಗಳು. ಆದ್ದರಿಂದ ಮನೋಜನ್ಯಗಳಾಗಬೇಕಿಲ್ಲ.

ಮನೋಜನ್ಯ ಎಂದರೆ ಮನಸ್ತ್ವೇನ ಮನೋಜನ್ಯ, ಎಂದರ್ಥ. ಇದರಿಂದ ಮನಃಕ್ರಿಯೆ ಮತ್ತು ಆತ್ಮಮನಃಸಂಯೋಗ ಇವೆರಡೂ ಮನೋಜನ್ಯಗಳಾಗಿವೆ. ಆದರೂ ಪ್ರಯೋಜಕವಾದ

ಆತ್ಮವಿಶೇಷಗುಣತ್ವವು ಅವುಗಳಲ್ಲಿ ಇಲ್ಲ. ಮನಸ್ತ್ವೇನ ಎಂದಾಗ ಅವೆರಡಕ್ಕೆ ಮನಸ್ಸು ದ್ರವ್ಯತ್ವೇನ ಜನಕವಾದುದರಿಂದ ಅವ್ಯಾಪ್ತಿ ಇಲ್ಲ. ಇದರಂತೆಯೇ 'ಜ್ಞಾನಜನ್ಯ' ಎಂಬಲ್ಲಿ ಜ್ಞಾನತ್ವೇನ ಜ್ಞಾನಜನ್ಯತ್ವವನ್ನೂ, ಇಚ್ಛಾಜನ್ಯ ಎಂಬಲ್ಲಿಯೂ ಇಚ್ಛಾತ್ವೇನ ಇಚ್ಛಾಜನ್ಯ ಎಂದೂ ವಿವಕ್ಷೆ ಮಾಡಬೇಕು. ಆದ್ದರಿಂದ ಅವೆರಡೂ ಉತ್ತರಾತ್ಮವಿಶೇಷಗುಣತ್ವೇನ ಪೂರ್ವಗುಣಗಳ ನಾಶಕ್ಕೆ ಜನಕಗಳಾದರೂ ಅಲ್ಲಿ ಅವ್ಯಾಪ್ತಿ ಇಲ್ಲ.

## ಅವತಾರಿಕೆ

**''वयं तु ब्रूमः पक्षधर्मताबलान्नित्यत्वं सिध्यति'' इत्यादिना मण्युक्तमेवाशङ्क्य निराह—नचास्या व्याप्तेरिति ।**

ಮಣಿಗ್ರಂಥದಲ್ಲಿ 'ವಯಂ ತು ಬ್ರೂಮಃ''(ಪು.40) ಎಂದು ಪಕ್ಷಧರ್ಮತಾಬಲದಿಂದ ಜ್ಞಾನಾದಿಗಳಿಗೆ ನಿತ್ಯತ್ವವು ಸಿದ್ಧವಾಗುತ್ತದೆ, ಎನ್ನಲಾಗಿದೆ. ಅದನ್ನು ಆಶಂಕೆ ಮಾಡಿ ಮುಂದಿನ ಮೂಲದಲ್ಲಿ ಪರಿಹರಿಸಲಾಗಿದೆ.

**नचास्या व्याप्तेः अस्मदादिज्ञानादिमात्रविषयकत्वात् कार्यत्वानुमानेन च पक्षधर्मताबलादस्मदादिभिन्नकर्तृसिद्ध्या भिन्नविषयकत्वादप्रतिबन्धकतेति वाच्यम् । सामान्यप्रत्यासत्त्यभ्युपगमे समानविषयकत्वात् । तदनभ्युपगमे स्थापनानुमानव्याप्तेरप्रसिद्धकर्तृसाधकत्व इवास्या अपि व्याप्तेस्तद्बाधकत्वे समानप्रकारकत्वस्यैव तन्त्रत्वात् । अन्यथा बाधसत्प्रतिपक्षावप्यप्रतिबन्धकौ स्याताम् । प्रत्यक्षादिसिद्धाभावप्रतियोगि यच्छैत्यम् तदन्यस्यैव शैत्यादेः पक्षधर्मताबलात् सिद्धिरिति तत्रापि सुवचत्वात् ।**

'ಯತ್‌ಜ್ಞಾನಂ ತತ್ ಮನೋಜನ್ಯಂ' ಎಂಬ ವ್ಯಾಪ್ತಿಯು ಅನೀಶ್ವರ ಜ್ಞಾನಕ್ಕೆ ಮಾತ್ರ ಅನ್ವಯಿಸುತ್ತದೆ. ಕಾರ್ಯತ್ವಹೇತುವಿಗೆ ಕ್ಷಿತ್ಯಾದಿವೃತ್ತಿತ್ವರೂಪ-ಪಕ್ಷಧರ್ಮತಾಬಲಾತ್ ಅನೀಶ್ವರ ಭಿನ್ನನಾದವನೇ ಕ್ಷಿತ್ಯಾದಿಗಳಿಗೆ ಕರ್ತೃ ಎಂದು ಸಿದ್ಧವಾಗುತ್ತದೆ. ಅವನ ಜ್ಞಾನಾದಿಗಳಿಗೆ ಈ ವ್ಯಾಪ್ತಿಯು ಅನ್ವಯಿಸುವುದಿಲ್ಲ. ಹೀಗೆ, ಈ ವ್ಯಾಪ್ತಿಯು ಅನೀಶ್ವರ ಜ್ಞಾನಾದಿರೂಪವಾದ ಭಿನ್ನವಿಷಯಕವಾದುದರಿಂದ ಕ್ಷಿತ್ಯಾದಿಕರ್ತೃವಿನ ಜ್ಞಾನಾದಿನಿತ್ಯತ್ವಸಿದ್ಧಿಗೆ ಅದು ಬಾಧಕವಾಗುವುದಿಲ್ಲ, ಎಂದು ಆಕ್ಷೇಪ.

ಇದಕ್ಕೆ ನ್ಯಾಯಮತರೀತ್ಯಾ ಹೀಗೆ ಸಮಾಧಾನ—ಮಹಾನಸೀಯವಹ್ನಿ-ಧೂಮಗಳಿಗೆ ಸಾಹಚರ್ಯದರ್ಶನವಿದ್ದರೂ ವಹ್ನಿತ್ವ-ದೂಮತ್ವರೂಪಸಾಮಾನ್ಯಪ್ರತ್ಯಾಸತ್ತ್ಯಾ ಪಕ್ಷೀಯ-ವಹ್ನಿಧೂಮಗಳ ಉಪಸ್ಥಿತಿಯೂ ಬಂದು ಪರ್ವತೀಯಧೂಮದಲ್ಲೂ ವಹ್ನಿವ್ಯಾಪ್ತಿಯ ಜ್ಞಾನ ಬರುತ್ತದೆ. ಅದರಂತೆ, ಅನೀಶ್ವರೀಯಜ್ಞಾನಕ್ಕೆ ಅನಿತ್ಯತ್ವವು ಗೃಹೀತವಾದಾಗ ಜ್ಞಾನತ್ವಾದಿ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತ್ಯಾ ಈಶ್ವರೀಯಜ್ಞಾನವೂ ಗೃಹೀತವಾಗಿ ಅದರಲ್ಲೂ ಅನಿತ್ಯತ್ವವ್ಯಾಪ್ತಿಯು ಗೃಹೀತವಾಗುತ್ತದೆ. ಆದ್ದರಿಂದ ಆ ಜ್ಞಾನವೂ ಸಿದ್ಧವಾಗುವಾಗಲೇ ಜ್ಞಾನತ್ವಾತ್ ಅನಿತ್ಯವೆಂದೇ ಸಿದ್ಧವಾಗತ್ತದೆ.

ಮೀಮಾಂಸಕರು ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯನ್ನು ಅಂಗೀಕರಿಸುವುದಿಲ್ಲ. ಅವರ ಮತರೀತ್ಯಾ ಹೀಗೆ ಸಮಾಧಾನ— ಘಟಪಟಾದಿಕಾರ್ಯವಿಶೇಷಗಳಿಗೆ ಕುಲಾಲಾದಿ ಕರ್ತೃವಿಶೇಷ ಗಳೊಂದಿಗೆ ವ್ಯಾಪ್ತಿಯು ಗೃಹೀತವಾದರೂ ಘಟಾದಿಗಳಲ್ಲಿ ವ್ಯಾಪ್ಯವಾಗಿ ಗೃಹೀತವಾಗಿರುವ ಕಾರ್ಯತ್ವವೇ ಪಕ್ಷೀಭೂತಕ್ಷಿತ್ಯಾದಿಗಳಲ್ಲೂ ಪ್ರಕಾರವಾದುದರಿಂದ ಘಟಾದಿಗಳಲ್ಲಿ ವ್ಯಾಪಕತಾವಚ್ಛೇದಕತಯಾ ಗೃಹೀತವಾದ ಕರ್ತೃತ್ವವತ್ತಾದ ಅಪ್ರಸಿದ್ಧ ಕರ್ತೃವು ಸಿದ್ಧನಾಗುವಂತೆ 'ಯತ್ ಜ್ಞಾನಂ ತದನಿತ್ಯಂ' ಎಂದು ಅಸ್ಮದಾದಿ ಜ್ಞಾನಗಳಲ್ಲಿ ವ್ಯಾಪ್ಯತಾವಚ್ಛೇಕತಯಾ ಗೃಹೀತವಾದ ಜ್ಞಾನತ್ವವು ಕ್ಷಿತ್ಯಾದಿಕರ್ತೃವಿನ ಜ್ಞಾನದಲ್ಲೂ ತಿಳಿದಾಗ ಅದರಲ್ಲಿ ವ್ಯಾಪಕತಾವಚ್ಛೇದಕತಯಾ ಗೃಹೀತವಾದ ಅನಿತ್ಯತ್ವವೂ ಸಿದ್ಧವಾಗುತ್ತದೆ. ಹೀಗೆ, 'ಈಶ್ವರೀಯ ಜ್ಞಾನವು ನಿತ್ಯ' ಎಂಬ ಜ್ಞಾನಕ್ಕೆ 'ಯತ್ ಜ್ಞಾನಂ ತದನಿತ್ಯಂ' ಎಂಬ ವ್ಯಾಪ್ತಿಯು ಸಮಾನಪ್ರಕಾರಕವಾದುದರಿಂದ ಬಾಧಕ ವಾಗುತ್ತದೆ.

(ನೈಯಾಯಿಕ ಪಕ್ಷದಲ್ಲಿ 'ಈಶ್ವರಜ್ಞಾನವೂ ಅನಿತ್ಯ' ಎಂದು ವ್ಯಾಪ್ತಿಯಲ್ಲಿ ಗೃಹೀತ ವಾದುದರಿಂದ 'ಈಶ್ವರಜ್ಞಾನಂ ನಿತ್ಯಮ್' ಎಂಬ ಜ್ಞಾನಕ್ಕೆ ಆ ವ್ಯಾಪ್ತಿಜ್ಞಾನವು ಬಾಧಕವಾಗುತ್ತದೆ. ಮೀಮಾಂಸಕಮತರೀತ್ಯಾ ಈಶ್ವರಜ್ಞಾನದಲ್ಲಿ ವ್ಯಾಪ್ತಿಯು ಗೃಹೀತವಾಗಿರದಿದ್ದರೂ, ಸಮಾನ-ಪ್ರಕಾರಕವಾದುದರಿಂದ ಅಸ್ಮದಾದಿಜ್ಞಾನಗಳಲ್ಲಿ ಗೃಹೀತವಾದ ಅನಿತ್ಯತ್ವವ್ಯಾಪ್ತಿಯೇ ಪ್ರತಿಬಂಧಕ.)

ಅಪೂರ್ವವಾದ ಜ್ಞಾನವು ಈಶ್ವರಾನುಮಾನದಿಂದ ಸಿದ್ಧವಾಗುವುದರಿಂದ ಪ್ರಸಿದ್ಧ ಜ್ಞಾನಗಳಲ್ಲಿ ಗೃಹೀತವಾದ ಅನಿತ್ಯತ್ವವ್ಯಾಪ್ತಿಜ್ಞಾನವು ಅಪ್ರತಿಬಂಧಕ ಎಂದು ಹೇಳಿದರೆ (ಅನ್ಯಥಾ) ಬಾಧ ಮತ್ತು ಸತ್‌ಪ್ರತಿಪಕ್ಷಗಳು ಪ್ರತಿಬಂಧಕಗಳೇ ಆಗಲಿಕ್ಕಿಲ್ಲ. ''ಅಗ್ನಿಃ ಶೀತಃ ವಸ್ತುತ್ವಾತ್, ಜಲವತ್'' ಎಂಬ ಅನುಮಾನಕ್ಕೆ ಪ್ರತ್ಯಕ್ಷಬಾಧದೋಷ ಇದೆ. ಪ್ರತ್ಯಕ್ಷದಿಂದ ಅಗ್ನಿಯಲ್ಲಿ ಶೈತ್ಯಾಭಾವವು ಗೃಹೀತವಾಗಿದೆ, ಆದ್ದರಿಂದ ಬಾಧ. ಇಲ್ಲಿಯೂ ಬಾಧವನ್ನು ಪರಿಹಾರ ಮಾಡಬಹುದು. ಪ್ರತ್ಯಕ್ಷವು ಇಲ್ಲವೆಂದು ತಿಳಿಸುವ ಶೈತ್ಯವೇ ಬೇರೆ. ಅದಕ್ಕಿಂತ ವಿಲಕ್ಷಣವಾದ ಶೈತ್ಯವಿಶೇಷವನ್ನು ಅನುಮಾನ ಸಾಧಿಸತ್ತಿದೆ, ಎಂದು. ಹೀಗೆಯೇ ಸತ್‌ಪ್ರತಿಪಕ್ಷದೋಷವನ್ನೂ ಪರಿಹರಿಸಬಹುದು.

ಆದ್ದರಿಂದ ಈಶ್ವರಜ್ಞಾನೇಚ್ಛಾಕೃತಿಗಳು ಪಕ್ಷಧರ್ಮತಾಬಲಾತ್ ನಿತ್ಯವೆಂದೇ ಸಿದ್ಧವಾಗುತ್ತವೆ, ಎನ್ನುವುದು ಸರಿಯಲ್ಲ.

## ನ್ಯಾಯದೀಪ

**व्याप्तेतिति ।** ज्ञानमनित्यमेव, साक्षात्कार इन्द्रियजन्य एव, इच्छा ज्ञानजन्यैवेत्यादिव्याप्तेरित्यर्थः । **मात्रेति ।** पक्षधर्मताबललभ्याप्रसिद्ध-ज्ञानाद्यविषयकत्वादित्यर्थः । **कर्त्रिति ।** अपरोक्षज्ञानचिकीर्षाकृति-मत्पुरुषसिद्ध्येत्यर्थः ।

किमेतद्भिन्नविषयत्वं, यत्र धूमस्तत्राग्निरिति महानसादौ धूम-वह्न्योर्व्याप्तिग्रहः सामान्यप्रत्यासत्त्या पर्वतादिपक्षनिष्ठधूमवह्नी अपि विषयीकरोतीति त्वन्मतरीत्योच्यते, अथ सामान्यप्रत्यासत्तेरभावात् अन्यत्र जायमानव्याप्तिग्रहः पक्षीयहेतुसाध्ये नावगाहते । तथापि समानप्रकारकत्वमात्रेण पक्षीयहेतुसाध्ययोर्लिङ्गलिङ्गिभावे नियामक इति मीमांसकरीत्योच्यत, इति विकल्पौ हृदि कृत्वा क्रमेण निराह— **सामान्येति। समानेति।** कार्यत्व-कृतिजन्यत्वरूपसमानप्रकारकत्वस्य ज्ञानत्वानित्यत्वरूपसमानप्रकारकत्वस्य चेत्यर्थः । **अन्यथेति ।** उक्तव्याप्तेरवाधकत्व इत्यर्थः ।

वाधादेरप्रतिबन्धकत्वं व्यनक्ति—**प्रत्यक्षेति ।** 'वह्निः शीतो वस्तु-त्वात्'इत्यादौ यत् पक्षधर्मताबललभ्यं शैत्यं तदन्यस्यैव शैत्यस्याभावः पक्षीभूतवह्निव्यतिरिक्ते गृहीत इति, पक्षीभूतवह्नावेव वा यदि शैत्याभावो गृहीतः तदापि त्वगिन्द्रियगृहीताभावप्रतियोगिशैत्या-दन्यदेवेदं साध्यमानं शैत्यमिति वक्तुं शक्यत्वादित्यर्थः ।।

ಅನಿತ್ಯತ್ವಾದಿವ್ಯಾಪ್ತಿಯಸ್ವರೂಪ ಹೀಗೆ—ಜ್ಞಾನವು ಅನಿತ್ಯವಾಗಿಯೇ ಇರುತ್ತದೆ, ಸಾಕ್ಷಾತ್ಕಾರವು ಇಂದ್ರಿಯಜನ್ಯವಾಗಿಯೇ ಇರುತ್ತದೆ, ಇಚ್ಛೆಯು ಜ್ಞಾನಜನ್ಯವೇ ಆಗಿರುತ್ತದೆ, ಎಂದು.

ಇದಕ್ಕೆ ನ್ಯಾಯಮತರೀತ್ಯಾ ಹೀಗೆ ಸಮಾಧಾನ—ಮಹಾನಸೀಯವಹ್ನಿ-ಧೂಮಗಳಿಗೆ ಸಾಹಚರ್ಯದರ್ಶನವಿದ್ದರೂ ವಹ್ನಿತ್ವ-ದೂಮತ್ವರೂಪಸಾಮಾನ್ಯಪ್ರತ್ಯಾಸತ್ತ್ಯಾ ಪಕ್ಷೀಯ-ವಹ್ನಿಧೂಮಗಳ ಉಪಸ್ಥಿತಿಯೂ ಬಂದು ಪರ್ವತೀಯಧೂಮದಲ್ಲೂ ವಹ್ನಿವ್ಯಾಪ್ತಿಯ ಜ್ಞಾನ ಬರುತ್ತದೆ. ಅದರಂತೆ, ಅನೀಶ್ವರೀಯಜ್ಞಾನಕ್ಕೆ ಅನಿತ್ಯತ್ವವು ಗೃಹೀತವಾದಾಗ ಜ್ಞಾನತ್ವಾದಿ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತ್ಯಾ ಈಶ್ವರೀಯಜ್ಞಾನವೂ ಗೃಹೀತವಾಗಿ ಅದರಲ್ಲೂ ಅನಿತ್ಯತ್ವವ್ಯಾಪ್ತಿಯು ಗೃಹೀತವಾಗುತ್ತದೆ. ಆದ್ದರಿಂದ ಆ ಜ್ಞಾನವೂ ಸಿದ್ಧವಾಗುವಾಗಲೇ ಜ್ಞಾನತ್ವಾತ್ ಅನಿತ್ಯವೆಂದೇ ಸಿದ್ಧವಾಗತ್ತದೆ.

ಮೀಮಾಂಸಕರು ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯನ್ನು ಅಂಗೀಕರಿಸುವುದಿಲ್ಲ. ಅವರ ಮತರೀತ್ಯಾ ಹೀಗೆ ಸಮಾಧಾನ— ಘಟಪಟಾದಿಕಾರ್ಯವಿಶೇಷಗಳಿಗೆ ಕುಲಾಲಾದಿ ಕರ್ತೃವಿಶೇಷ ಗಳೊಂದಿಗೆ ವ್ಯಾಪ್ತಿಯು ಗೃಹೀತವಾದರೂ ಘಟಾದಿಗಳಲ್ಲಿ ವ್ಯಾಪ್ಯವಾಗಿ ಗೃಹೀತವಾಗಿರುವ ಕಾರ್ಯತ್ವವೇ ಪಕ್ಷೀಭೂತಕ್ಷಿತ್ಯಾದಿಗಳಲ್ಲೂ ಪ್ರಕಾರವಾದುದರಿಂದ ಘಟಾದಿಗಳಲ್ಲಿ ವ್ಯಾಪಕತಾವಚ್ಛೇದಕತಯಾ ಗೃಹೀತವಾದ ಕರ್ತೃತ್ವವತ್ತಾದ ಅಪ್ರಸಿದ್ಧ ಕರ್ತೃವು ಸಿದ್ಧನಾಗುವಂತೆ 'ಯತ್ ಜ್ಞಾನಂ ತದನಿತ್ಯಂ' ಎಂದು ಅಸ್ಮದಾದಿ ಜ್ಞಾನಗಳಲ್ಲಿ ವ್ಯಾಪ್ಯತಾವಚ್ಛೇಕತಯಾ ಗೃಹೀತವಾದ ಜ್ಞಾನತ್ವವು ಕ್ಷಿತ್ಯಾದಿಕರ್ತೃವಿನ ಜ್ಞಾನದಲ್ಲೂ ತಿಳಿದಾಗ ಅದರಲ್ಲಿ ವ್ಯಾಪಕತಾವಚ್ಛೇದಕತಯಾ ಗೃಹೀತವಾದ ಅನಿತ್ಯತ್ವವೂ ಸಿದ್ಧವಾಗುತ್ತದೆ. ಹೀಗೆ, 'ಈಶ್ವರೀಯ ಜ್ಞಾನವು ನಿತ್ಯ' ಎಂಬ ಜ್ಞಾನಕ್ಕೆ 'ಯತ್ ಜ್ಞಾನಂ ತದನಿತ್ಯಂ' ಎಂಬ ವ್ಯಾಪ್ತಿಯು ಸಮಾನಪ್ರಕಾರಕವಾದುದರಿಂದ ಬಾಧಕ ವಾಗುತ್ತದೆ.

(ನೈಯಾಯಿಕ ಪಕ್ಷದಲ್ಲಿ 'ಈಶ್ವರಜ್ಞಾನವೂ ಅನಿತ್ಯ' ಎಂದು ವ್ಯಾಪ್ತಿಯಲ್ಲಿ ಗೃಹೀತ ವಾದುದರಿಂದ 'ಈಶ್ವರಜ್ಞಾನಂ ನಿತ್ಯಮ್' ಎಂಬ ಜ್ಞಾನಕ್ಕೆ ಆ ವ್ಯಾಪ್ತಿಜ್ಞಾನವು ಬಾಧಕವಾಗುತ್ತದೆ. ಮೀಮಾಂಸಕಮತರೀತ್ಯಾ ಈಶ್ವರಜ್ಞಾನದಲ್ಲಿ ವ್ಯಾಪ್ತಿಯು ಗೃಹೀತವಾಗಿರದಿದ್ದರೂ, ಸಮಾನ-ಪ್ರಕಾರಕವಾದುದರಿಂದ ಅಸ್ಮದಾದಿಜ್ಞಾನಗಳಲ್ಲಿ ಗೃಹೀತವಾದ ಅನಿತ್ಯತ್ವವ್ಯಾಪ್ತಿಯೇ ಪ್ರತಿಬಂಧಕ.)

ಅಪೂರ್ವವಾದ ಜ್ಞಾನವು ಈಶ್ವರಾನುಮಾನದಿಂದ ಸಿದ್ಧವಾಗುವುದರಿಂದ ಪ್ರಸಿದ್ಧ ಜ್ಞಾನಗಳಲ್ಲಿ ಗೃಹೀತವಾದ ಅನಿತ್ಯತ್ವವ್ಯಾಪ್ತಿಜ್ಞಾನವು ಅಪ್ರತಿಬಂಧಕ ಎಂದು ಹೇಳಿದರೆ (ಅನ್ಯಥಾ) ಬಾಧ ಮತ್ತು ಸತ್‌ಪ್ರತಿಪಕ್ಷಗಳು ಪ್ರತಿಬಂಧಕಗಳೇ ಆಗಲಿಕ್ಕಿಲ್ಲ. ''ಅಗ್ನಿಃ ಶೀತಃ ವಸ್ತುತ್ವಾತ್, ಜಲವತ್'' ಎಂಬ ಅನುಮಾನಕ್ಕೆ ಪ್ರತ್ಯಕ್ಷಬಾಧದೋಷ ಇದೆ. ಪ್ರತ್ಯಕ್ಷದಿಂದ ಅಗ್ನಿಯಲ್ಲಿ ಶೈತ್ಯಾಭಾವವು ಗೃಹೀತವಾಗಿದೆ, ಆದ್ದರಿಂದ ಬಾಧ. ಇಲ್ಲಿಯೂ ಬಾಧವನ್ನು ಪರಿಹಾರ ಮಾಡಬಹುದು. ಪ್ರತ್ಯಕ್ಷವು ಇಲ್ಲವೆಂದು ತಿಳಿಸುವ ಶೈತ್ಯವೇ ಬೇರೆ. ಅದಕ್ಕಿಂತ ವಿಲಕ್ಷಣವಾದ ಶೈತ್ಯವಿಶೇಷವನ್ನು ಅನುಮಾನ ಸಾಧಿಸತ್ತಿದೆ, ಎಂದು. ಹೀಗೆಯೇ ಸತ್‌ಪ್ರತಿಪಕ್ಷದೋಷವನ್ನೂ ಪರಿಹರಿಸಬಹುದು.

ಆದ್ದರಿಂದ ಈಶ್ವರಜ್ಞಾನೇಚ್ಛಾಕೃತಿಗಳು ಪಕ್ಷಧರ್ಮತಾಬಲಾತ್ ನಿತ್ಯವೆಂದೇ ಸಿದ್ಧವಾಗುತ್ತವೆ, ಎನ್ನುವುದು ಸರಿಯಲ್ಲ.

## ನ್ಯಾಯದೀಪ

**व्याप्तेरिति ।** ज्ञानमनित्यमेव, साक्षात्कार इन्द्रियजन्य एव, इच्छा ज्ञानजन्यैवेत्यादिव्याप्तेरित्यर्थः । **मात्रेति ।** पक्षधर्मताबललभ्याप्रसिद्ध-ज्ञानाद्यविषयकत्वादित्यर्थः । **कर्त्रिति ।** अपरोक्षज्ञानचिकीर्षाकृति-मत्पुरुषसिद्ध्येत्यर्थः ।

किमेतद्भिन्नविषयत्वं, यत्र धूमस्तत्राग्निरिति महानसादौ धूम-वह्न्योर्व्याप्तिग्रहः सामान्यप्रत्यासत्त्या पर्वतादिपक्षनिष्ठधूमवह्नी अपि विषयीकरोतीति त्वन्मतरीत्योच्यते, अथ सामान्यप्रत्यासत्तेरभावात् अन्यत्र जायमानव्याप्तिग्रहः पक्षीयहेतुसाध्ये नावगाहते । तथापि समानप्रकारकत्वमात्रेण पक्षीयहेतुसाध्ययोर्लिङ्गलिङ्गिभावे नियामक इति मीमांसकरीत्योच्यत, इति विकल्पौ हृदि कृत्वा क्रमेण निराह— **सामान्येति। समानेति।** कार्यत्व-कृतिजन्यत्वरूपसमानप्रकारकत्वस्य ज्ञानत्वानित्यत्वरूपसमानप्रकारकत्वस्य चेत्यर्थः । **अन्यथेति ।** उक्तव्याप्तेरबाधकत्व इत्यर्थः ।

बाधादेरप्रतिबन्धकत्वं व्यनक्ति—**प्रत्यक्षेति ।** 'वह्निः शीतो वस्तु-त्वात्'इत्यादौ यत् पक्षधर्मताबललभ्यं शैत्यं तदन्यस्यैव शैत्यस्याभावः पक्षीभूतवह्निव्यतिरिक्ते गृहीत इति, पक्षीभूतवह्नावेव वा यदि शैत्याभावो गृहीतः तदापि त्वगिन्द्रियगृहीताभावप्रतियोगिशैत्या-दन्यदेवेदं साध्यमानं शैत्यमिति वक्तुं शक्यत्वादित्यर्थः ।।

ಅನಿತ್ಯತ್ವಾದಿವ್ಯಾಪ್ತಿಯಸ್ವರೂಪ ಹೀಗೆ–ಜ್ಞಾನವು ಅನಿತ್ಯವಾಗಿಯೇ ಇರುತ್ತದೆ, ಸಾಕ್ಷಾತ್ಕಾರವು ಇಂದ್ರಿಯಜನ್ಯವಾಗಿಯೇ ಇರುತ್ತದೆ, ಇಚ್ಛೆಯು ಜ್ಞಾನಜನ್ಯವೇ ಆಗಿರುತ್ತದೆ, ಎಂದು.

'ಯತ್ ಕಾರ್ಯಂ ತತ್ ಕೃತಿಜನ್ಯಂ' ಎಂಬ ವ್ಯಾಪ್ತಿಜ್ಞಾನ-ಸಮಾನಪ್ರಕಾರಕತ್ವವು ''ಕ್ಷಿತ್ಯಾದಿಕಾರ್ಯಂ ಸಕರ್ತೃಕಂ'' ಎಂಬ ಜ್ಞಾನಕ್ಕೆ ಇದೆ, ಎಂದು 'ಸಮಾನವಿಷಯಕತ್ವಾತ್' ಎಂಬ ಮೂಲದ ಅರ್ಥ.

ಇಂತಹ ವ್ಯಾಪ್ತಿಗೆ ನಮ್ಮೆಲ್ಲರ ಜ್ಞಾನಾದಿಗಳು ಮಾತ್ರ ವಿಷಯ. ಈಶ್ವರೀಯ ಜ್ಞಾನವು ಪಕ್ಷಧರ್ಮತಾಬಲದಿಂದ ಲಭ್ಯ. ಅದುವರೆಗೆ ಅದು ಅಪ್ರಸಿದ್ಧ. ವ್ಯಾಪ್ತಿಯು ತದ್ವಿಷಯಕವಲ್ಲ.

''ಜ್ಞಾನಮ್ ಅನಿತ್ಯಮ್'' ಎಂಬ ವ್ಯಾಪ್ತಿಯು ಭಿನ್ನವಿಷಯಕ ಎಂದು ಯಾರ ಮತರೀತ್ಯಾ ಹೇಳಲಾಗಿದೆ? ''ಯತ್ರ. ಧೂಮಃ ತತ್ರಾಗ್ನಿಃ'' ಎಂದು ಮಹಾನಸದಲ್ಲಿ ಧೂಮವಹ್ನಿಗಳಿಗೆ ವ್ಯಾಪ್ತಿಗ್ರಹವಾಗುವಾಗ ಸಾಮಾನ್ಯಲಕ್ಷಣಾಪ್ರತ್ಯಾಸತ್ತ್ಯಾ ಪರ್ವತೀಯ ಧೂಮ-ವಹ್ನಿಗಳೂ ಅದಕ್ಕೆ ವಿಷಯಗಳಾಗುತ್ತವೆ, ಎನ್ನುವ ನಿನ್ನ ಮತದ (ನೈಯಾಯಿಕ) ಪ್ರಕಾರವೋ? ಅಥವಾ, ಸಾಮಾನ್ಯಲಕ್ಷಣಾ ಎಂಬ ಪ್ರತ್ಯಾಸತ್ತಿಯೇ ಇಲ್ಲ. ಪಕ್ಷಾದನ್ಯತ್ರ ಹುಟ್ಟುವ ವ್ಯಾಪ್ತಿಜ್ಞಾನಕ್ಕೆ ಪಕ್ಷೀಯಹೇತು-ಸಾಧ್ಯಗಳು ವಿಷಯಗಳಲ್ಲ. ಆದರೂ ವ್ಯಾಪ್ತಿಯಲ್ಲಿ ಪ್ರಕಾರವಾಗಿರುವ ವಹ್ನಿತ್ವ-ಧೂಮತ್ವಗಳು ಪರ್ವತೀಯ ವಹ್ನಿಧೂಮಗಳಲ್ಲೂ ಇರುವುದರಿಂದ ಅವುಗಳ ಹೇತು-ಸಾಧ್ಯಭಾವಕ್ಕೂ ಕಾರಣವಾಗುತ್ತದೆ, ಎನ್ನುವ ಮೀಮಾಂಸಕಮತದ ಪ್ರಕಾರವೋ? ಹೀಗೆ, ಎರಡು ವಿಕಲ್ಪಗಳನ್ನು ಮಾಡಿ ಅವೆರಡನ್ನೂ ''ಸಾಮಾನ್ಯಪ್ರತ್ಯಾಸತ್ತ್ಯಾ'' ಇತ್ಯಾದಿ ಗ್ರಂಥದಲ್ಲಿ ನಿರಾಕರಿಸ ಲಾಗಿದೆ.

''ವಹ್ನಿಃ ಶೀತಃ'' ಎಂಬ ಅನುಮಾನಕ್ಕೆ ಬಾಧಾಭಾವವನ್ನು ಹೀಗೆ ಸಮರ್ಥಿಸಬೇಕು. ವಹ್ನಿಯಲ್ಲಿ ಪಕ್ಷಧರ್ಮತಾಬಲಾತ್ ಗೃಹೀತವಾಗುವ ಶೈತ್ಯವು ವಿಜಾತೀಯ. ಈಶ್ವರಾನುಮಾನದಲ್ಲಿ ವಿಜಾತೀಯ ಜ್ಞಾನವು ಸಿದ್ಧವಾಗುವಂತೆ. ಘಟಾದಿಗಳಲ್ಲಿ ಅಥವಾ ವಹ್ನಿಯಲ್ಲೇ ಇಲ್ಲವೆಂದು ಪ್ರತ್ಯಕ್ಷದಿಂದ ತಿಳಿಯಲ್ಪಡುವ ಶೈತ್ಯವು ಅನುಮಾನಸಾಧ್ಯವಾದ ಶೈತ್ಯಕ್ಕಿಂತ ವಿಲಕ್ಷಣ. ಪ್ರತ್ಯಕ್ಷದಿಂದ ತಿಳಿಯಲ್ಪಡುವ ಶೈತ್ಯಾಭಾವಕ್ಕೂ ಅನುಮಾನಗ್ರಾಹ್ಯವಾದ ಶೈತ್ಯಕ್ಕೂ ವಿರೋಧವೇ ಇಲ್ಲ. ಹೀಗೂ ವಾದ ಮಾಡಬಹುದು. ಆದ್ದರಿಂದ ಬಾಧ-ಸತ್ಪ್ರತಿಪಕ್ಷಗಳು ದೋಷಗಳೇ ಆಗಲಿಕ್ಕಿಲ್ಲ.

## ಅವತಾರಿಕೆ

**एवं कार्यत्वानुमानेऽसिद्ध्यप्रयोजकत्वबाधान् उक्त्वोपाधिश्चाह–अदृष्टेति ।**

ಇದುವರೆಗೆ ಈಶ್ವರಸಾಧಕವಾದ ಕಾರ್ಯತ್ವಾನುಮಾನಕ್ಕೆ ಅಸಿದ್ಧಿ-ಅಪ್ರಯೋಜಕತ್ವ-ಬಾಧ ದೋಷಗಳನ್ನು ಹೇಳಲಾಯಿತು. ಮುಂದೆ ಉಪಾಧಿದೋಷವನ್ನು ಹೇಳಲಾಗಿದೆ.

## ಈಶ್ವರಾನುಮಾನಕ್ಕೆ ಉಪಾಧಿದೋಷ

**अदृष्टाद्वारकशरीरजन्यत्वमुपाधिश्च । नचायं पक्षमात्रव्यावर्तकविशेषणवत्त्वात्, साधनघटितत्वाद्, व्याप्तिग्राहकतौल्येन हेतुसमानयोगक्षेमत्वाच्चानुपाधिरिति वाच्यम् । शरीरजन्यत्वे त्वदभिमतघटत्वादेरननुगतत्वेन तद्विपरीतस्य कर्तृजन्यत्वस्यैवावच्छेदकत्वेन साध्यव्यापकत्वात् । सति च साध्यव्यापकत्वे बाधोन्नीतस्य पक्षेतरत्वस्य, वह्निना धूमसाधने आर्द्रेन्धनप्रभववह्निमत्त्वरूपस्य साधनघटितस्य, जलस्य रसवत्त्वेन गन्धवत्त्वे साध्ये पृथिवीत्वरूपस्य हेतुसमानयोगक्षेमस्य चोपाधितादर्शनात् ।**

**नच कर्तृजन्यत्वे लाघवेन जन्यत्वस्यै-वावच्छेदकत्वाद् हेतोर्व्याप्तिनिश्चये साध्यव्याप्यहेत्वाव्यापकत्वादुपाधेः साध्याव्यापकतेति वाच्यम् । त्वदुक्तरीत्या कर्तृजन्यत्वे जन्यत्वमवच्छेदकं, शरीरजन्यत्वे तु घटत्वादिकं वा अथवा तद्विपर्ययेण शरीरजन्यत्वे जन्यत्वं, कर्तृजन्यत्वे तु घटत्वादिकं वेति सन्देहेन सन्दिग्धोपाधेर्दुष्परिहत्वात् ।**

ಈ ಅನುಮಾನಕ್ಕೆ ಅದೃಷ್ಟಾದ್ವಾರಕ–ಶರೀರಜನ್ಯತ್ವವು ಉಪಾಧಿ. ಈ ಉಪಾಧಿಯು ಘಟಾದಿಗಳಲ್ಲಿ ಸಕರ್ತೃಕತ್ವರೂಪ–ಸಾಧ್ಯಕ್ಕೆ ವ್ಯಾಪಕವಾಗಿದೆ. ಘಟದಲ್ಲಿ ಸಕರ್ತೃಕತ್ವವೂ ಇದೆ, ಕುಲಾಲಶರೀರಜನ್ಯತ್ವವೂ ಇದೆ. ಅದೂ ಅದೃಷ್ಟದ ಮೂಲಕವಲ್ಲ. ಸಾಕ್ಷಾದೇವ ಕುಲಾಲನ ಶರೀರವು ಘಟಕ್ಕೆ ಕಾರಣ. ಆ ಘಟವನ್ನು ಅನುಭವಿಸುವ ವ್ಯಕ್ತಿಯ ಶರೀರವು ಮಾತ್ರ ಅದೃಷ್ಟದ್ವಾರಾ ಕಾರಣವಾಗುತ್ತದೆ. ಹೀಗೆ ಉಪಾಧಿಯು ಘಟದಲ್ಲಿದೆ. ಪಕ್ಷದಲ್ಲಿ ಹೇತು ಇದೆ. ಆದರೆ ಅದಕ್ಕೆ ಕರ್ತೃವಾದ ಈಶ್ವರನಿಗೆ ಶರೀರವಿಲ್ಲ. ಆದ್ದರಿಂದ ಪಕ್ಷದಲ್ಲಿ ಶರೀರಜನ್ಯತ್ವ ಉಪಾಧಿ ಇಲ್ಲ. ಸಾಧನಾವ್ಯಾಪಕತ್ವವೂ ಬರುತ್ತದೆ.

(ಯದ್ಯಪಿ ಕ್ಷಿತ್ಯಾದಿಗಳು ಭೋಕ್ತೃವಿನ ಶರೀರಜನ್ಯವಾಗಿವೆ. ಆದರೂ ಆ ಶರೀರವು ಅದೃಷ್ಟದ್ವಾರಾ ಕಾರಣ, ಅದೃಷ್ಟವನ್ನು ಅವಲಂಬಿಸದ ಆ ಶರೀರವು ಕಾರಣವಲ್ಲ. ಹೀಗೆ, ಸಾಧನಾವ್ಯಾಪಕತಾಸಿದ್ಧಿಗಾಗಿ 'ಅದೃಷ್ಟಾದ್ವಾರಕತ್ವ' ವಿಶೇಷಣವನ್ನು ಶರೀರಕ್ಕೆ ಕೊಡಲಾಗಿದೆ.)

**ಆಕ್ಷೇಪ—**ಈ ಉಪಾಧಿಯಲ್ಲಿ ಜನ್ಯತ್ವಕ್ಕೆ ಶರೀರವಿಶೇಷಣವನ್ನು ಉಪಾಧಿಯು ಪಕ್ಷದಲ್ಲಿ ಬರಬಾರದು, ಎಂದಿಷ್ಟೇ ಉದ್ದೇಶದಿಂದ ಕೊಡಲಾಗಿದೆ. ವಸ್ತುತಃ, ಸಕರ್ತೃಕತ್ವಕ್ಕೆ ಜನ್ಯತ್ವಮಾತ್ರ ಪ್ರಯೋಜಕ, ಶರೀರಜನ್ಯತ್ವವಲ್ಲ. ಆದ್ದರಿಂದ ಶರೀರವಿಶೇಷಣವು ವ್ಯಾಪ್ತಿಪ್ರಯೋಜಕವಲ್ಲ. ಪಕ್ಷಮಾತ್ರ ವ್ಯಾವರ್ತಕವಿಶೇಷಣ. ಹೀಗಿದ್ದರೂ ಉಪಾಧಿಯಾಗುವುದಾದಲ್ಲಿ 'ಪಕ್ಷೇತರತ್ವವೂ' ಉಪಾಧಿಯಾಗಿ ಸರ್ವಾನುಮಾನೋಚ್ಛೇದ ಪ್ರಸಂಗ.

2. ಇನ್ನೊಂದು ಅನುಪಪತ್ತಿಯೂ ಇದೆ. ಈ ಅನುಮಾನದ ಹೇತು ಕಾರ್ಯತ್ವ. ಜನ್ಯತ್ವ ವೆಂದರೂ ಕಾರ್ಯತ್ವವೇ. ಹೀಗೆ, ಹೇತುಸ್ವರೂಪವು ಉಪಾಧಿಯಲ್ಲಿ ಸೇರಿದೆ. ಇದರಿಂದಾಗಿಯೂ ಇದು ಉಪಾಧಿಯಲ್ಲ.

3. ಮತ್ತೊಂದು ಅನುಪಪತ್ತಿ– 'ಯತ್ರ ಕಾರ್ಯತ್ವಂ ತತ್ರ ಸಕರ್ತೃಕತ್ವಂ' ಎಂಬ ಸಹಚಾರ ದರ್ಶನದಿಂದ ಹೇತುವಿನಲ್ಲಿ ವ್ಯಾಪ್ತಿನಿಶ್ಚಯವಾಗುವುದು. ಅದೇ ರೀತಿಯ ಸಹಚಾರದರ್ಶನದಿಂದ ಶರೀರಜನ್ಯತ್ವರೂಪ–ಉಪಾಧಿಗೂ ಘಟಾದಿಗಳಲ್ಲಿ ವ್ಯಾಪ್ತಿಯು ಗೃಹೀತವಾಗುತ್ತದೆ. ಇಂತಹ ಉಪಾಧಿಯು ಪಕ್ಷವ್ಯಾವೃತ್ತವಾಗಿರುವುದು ನಿಶ್ಚಿತ. ಆದರೆ, ಪಕ್ಷದಲ್ಲಿ ಸಾಧ್ಯವು ಸಂದಿಗ್ಧವಾಗಿದೆ. ಇದರಿಂದಾಗಿ ಉಪಾಧಿಯಲ್ಲಿ ಸಾಧ್ಯವ್ಯಾಪಕತ್ವವು ಸಂದಿಗ್ಧವಾಗುತ್ತದೆ.

ಹೀಗೆ, ಈ ಮೂರು ಕಾರಣಗಳಿಂದ ಇದು ಉಪಾಧಿಯಾಗುವುದಿಲ್ಲ.

**ಸಮಾಧಾನ—** (ಮಣಿಗ್ರಂಥದ ಪೂರ್ವಪಕ್ಷಭಾಗದಲ್ಲಿ ಹೇಳಿರುವ ಸಮಾಧಾನವನ್ನೇ ಇಲ್ಲಿ ಹೇಳವಾಗಿದೆ.) ಶರೀರಜನ್ಯತ್ವವು ಯದ್ಧಾರ್ಮಾವಚ್ಛೇದೇನ ಇದೆ? (ಎಲ್ಲೆಲ್ಲಿ ಇದೆ?) ಎಂದು ಪ್ರಶ್ನೆ ಮಾಡಿದರೆ ಘಟತ್ವಾವಚ್ಛೇದೇನ ಇದೆ ಎನ್ನಲಾಗದು. ಪಟದಲ್ಲೂ ಶರೀರಜನ್ಯತ್ವವಿದೆ. ಅದಕ್ಕಾಗಿ ಕೃತಿಜನ್ಯತ್ವಾವಚ್ಛೇದೇನ ಇದೆ, (ಕೃತಿಜನ್ಯವಾದ ಎಲ್ಲ ವಸ್ತುಗಳಲ್ಲೂ ಇದೆ.) ಎಂದೇ ಹೇಳಬೇಕು. ಹೀಗೆ ಶರೀರಜನ್ಯತ್ವಕ್ಕೆ ಪಟತ್ವಾದಿಗಳು ಅನನುಗತವಾದುದರಿಂದ ಅವಚ್ಛೇದಕವಲ್ಲ, ಅನುಗತಾವಾದ ಕೃತಿಜನ್ಯತ್ವವೇ ಅವಚ್ಛೇದಕ, ಎಂದು ಹೇಳಬೇಕು. ಇದರಿಂದ ''ಯತ್ರ ಕೃತಿಜನ್ಯತ್ವಂ ತತ್ರ ಶರೀರಜನ್ಯತ್ವಂ'' ಎಂದು ಶರೀರಜನ್ಯತ್ವರೂಪ–ಉಪಾಧಿಯಲ್ಲಿ ಸಾಧ್ಯವ್ಯಾಪಕತ್ವವು ಸಿದ್ಧವಾಗುತ್ತದೆ. ಹೀಗೆ, ಸಾಧ್ಯ–ವ್ಯಾಪಕತ್ವವು ನಿಶ್ಚಿತವಾಗಿರುವಾಗ ಬಾಧೋನ್ನೀತವಾದ ಪಕ್ಷೇತರತ್ವದಂತೆ, ಪಕ್ಷಮಾತ್ರವ್ಯಾವರ್ತಕ ವಿಶೇಷಣ ವಿಶಿಷ್ಟವಾದ ಶರೀರಜನ್ಯತ್ವವೂ ಉಪಾಧಿಯಾಗುತ್ತದೆ. (ಪಕ್ಷೇತರತ್ವದಲ್ಲೂ 'ಇತರತ್ವ' ಎಂಬ ವಿಶೇಷ್ಯವು ಪಕ್ಷಮಾತ್ರ ವ್ಯಾವರ್ತಕವಾದ 'ಪಕ್ಷ' ಎಂಬ ವಿಶೇಷಣವಿಶಿಷ್ಟವಾಗಿದೆ. ಆದರೂ, ಅದು ಬಾಧದೋಷವಿದ್ದಲ್ಲಿ ಉಪಾಧಿಯಾಗುತ್ತದೆ.)

2. ''ಪರ್ವತಃ ಧೂಮವಾನ್, ವಹ್ನೇಃ'' ಎಂಬ ಅನುಮಾನಕ್ಕೆ ''ಆರ್ದ್ರೇಂಧನಪ್ರಭವ ವಹ್ನಿಮತ್ತ್ವವು'' ಉಪಾಧಿಯಾಗುತ್ತದೆ. ಈ ಉಪಾಧಿಯಲ್ಲಿ ವಹ್ನಿ ಎಂಬ ಹೇತುವು ಘಟಕವಾಗಿದೆ. ಆದರೂ ಅದನ್ನು ಉಪಾಧಿಯನ್ನಾಗಿ ಪರಿಗಣಿಸಲಾಗಿದೆ.

3. ''ಜಲಂ ಗಂಧವತ್ ರಸವತ್ತ್ವಾತ್, ಪೃಥಿವೀವತ್'' ಇಲ್ಲಿ ಪೃಥಿವೀತ್ವವು ಉಪಾಧಿ. ಅದು ಹೇತುವಾದ ರಸವತ್ತ್ವಸಮಾನಯೋಗಕ್ಷೇಮವಾಗಿದೆ. ರಸವತ್ತ್ವರೂಪಹೇತುವಿಗೂ ಗಂಧವತ್ತ್ವರೂಪ ಸಾಧ್ಯದೊಂದಿಗೆ ಸಹಚಾರವನ್ನು ಪೃಥಿವಿಯಲ್ಲೇ ತಿಳಿಯಬೇಕು. ಪೃಥಿವೀತ್ವಕ್ಕೂ ಅಲ್ಲೇ ಗಂಧವತ್ತ್ವ ಸಹಚಾರವು ತಿಳಿಯುತ್ತದೆ. ಹೀಗೆ ಇಲ್ಲಿ ಹೇತುಸಮಾನಯೋಗಕ್ಷೇಮವುಳ್ಳದ್ದು ಉಪಾಧಿಯಾಗಿದೆ.

ಇದರಂತೆ, ಪ್ರಕೃತದಲ್ಲೂ ಶರೀರಜನ್ಯತ್ವವೂ ಉಪಾಧಿಯಾಗಬಹುದು.

## ನ್ಯಾಯದೀಪ

**क्षित्यादेरदृष्टद्वाराऽस्मदादिशरीरजन्यत्वात्,** साधनाव्यापकत्वायादृष्टाद्वारकेति शरीरेति च विशेषणम्। घटादौ साध्यव्यापकत्वं व्यक्तम्। उपाध्याभासोऽयमित्याशङ्क्य निराह—**नचायं पक्षमात्रेति ।** तादृशस्याप्युपाधित्वे पर्वतेतरत्वादेरप्युपाधितापत्त्याऽनुमानमात्रोच्छेद इति भावः । **साधनेति ।** कार्यत्वापरपर्यायजन्यत्वघटितत्वादित्यर्थः। तादृशस्याप्युपाधित्वेऽतिप्रसङ्गादिति भावः ।

यद्यपि समवेतत्वे सति जन्यत्वं साधनं, नतु जन्यत्वमात्रम् । तथापि साधनविशेषितवत् साधनैकदेशविशेषितोऽपि नोपाधिरिति भावेनेदं योज्यम् । यद्वा ध्वंससाधारणपक्षत्वे जन्यत्वमेव हेतुरिति तदभिप्रायमेतत् ।।

ಉಪಾಧಿಯಲ್ಲಿ 'ಅದೃಷ್ಟ-ಅದ್ವಾರಾ' ಎಂಬ ವಿಶೇಷಣವನ್ನು ಶರೀರಜನ್ಯತ್ವೋಪಾಧಿಯು ಕ್ಷಿತ್ಯಾದಿಗಳಲ್ಲಿ ಇರಬಾರದು ಎಂಬ ಕಾರಣಕ್ಕಾಗಿ ಕೊಡಲಾಗಿದೆ. ಅಸ್ಮದಾದಿ ಶರೀರಜನ್ಯತ್ವವು ಕ್ಷಿತಿಯಲ್ಲೂ ಇದೆ. ಆದರೆ, ಅದು ಅದೃಷ್ಟದ್ವಾರಾ. ಅದೃಷ್ಟ-ಅದ್ವಾರಾ ಎಂದಾಗ ಅಂತಹ ಶರೀರಜನ್ಯತ್ವವು ಕ್ಷಿತ್ಯಾದಿಪಕ್ಷಗಳಲ್ಲಿ ಇಲ್ಲ. ಪಕ್ಷವ್ಯಾವೃತ್ತಿ ಉಪಾಧಿಗೆ ಸಿದ್ಧವಾಗುತ್ತದೆ.

'ನ ಚಾಯಂ'ಎಂಬ ಮೂಲದಲ್ಲಿ ಶರೀರಜನ್ಯತ್ವವು ಉಪಾಧಿಯೇ ಅಲ್ಲ ಎಂದು ಶಂಕೆ ಮಾಡಲಾಗಿದೆ.

ಪಕ್ಷಮಾತ್ರವ್ಯಾವರ್ತಕವಾದ ವಿಶೇಷಣಘಟಿತವಾದರೂ ಉಪಾಧಿಯಾಗುವುದಾದಲ್ಲಿ ಪರ್ವತೇತರತ್ವಾದಿಗಳೂ ಉಪಾಧಿಗಳಾಗಿ ಸಕಲಸದನುಮಾನಗಳೂ ದುಷ್ಟವಾಗಬೇಕಾದೀತು.

ಶರೀರಜನ್ಯತ್ವೋಪಾಧಿಯು ಹೇತುಘಟಿತವಾಗಿದೆ, ಎಂದು ಎರಡನೆಯ ದೋಷ. ಕಾರ್ಯತ್ವ ಪರ್ಯಾಯವಾಚಕವಾದುದು ಜನ್ಯತ್ವ. ತದ್ಘಟಿತವಾದುದರಿಂದ ಉಪಾಧಿಯು ಹೇತುಘಟಿತರೂಪ ವಾಗಿದೆ. ಇಂತಹದ್ದು ಉಪಾಧಿಯಾದರೆ ಮಹಾನಸೀಯಧೂಮವೂ ವಹ್ನಿಸಾಧ್ಯಕಾನುಮಾನದಲ್ಲಿ ಉಪಾಧಿಯಾದೀತು.

ವಸ್ತುತಃ, ಪ್ರಕೃತದಲ್ಲಿ ಹೇತುವು ಧ್ವಂಸದಿಂದ ವ್ಯಾವೃತ್ತವಾಗಬೇಕೆಂದು ಸಮವೇತತ್ವೇ ಸತಿ, ಎಂಬ ವಿಶೇಷಣವನ್ನು ಹೇತುವಿಗೆ ಕೊಡಲಾಗಿದೆ. ಆ ವಿಶಿಷ್ಟ ಹೇತುವು ಪ್ರಕೃತ–ಉಪಾಧಿಯಲ್ಲಿ ಸೇರಿಲ್ಲ. ಆದರೂ ಹೇತ್ವೇಕದೇಶವು ಸೇರಿದೆ. ಅಥವಾ, ಧ್ವಂಸವೂ ಪಕ್ಷದಲ್ಲಿ ಸೇರುವುದಾದಲ್ಲಿ ಕಾರ್ಯತ್ವಮಾತ್ರವೇ ಹೇತು. ಧ್ವಂಸವೂ ಸಕರ್ತೃಕವಾಗಿದೆ. ಸಾಧ್ಯವಾದ ಸಕರ್ತೃಕತ್ವದಲ್ಲಿ 'ಉಪಾದಾನ' ಪದವನ್ನು ಬಿಟ್ಟಾಗ ಧ್ವಂಸದಲ್ಲಿ ಸಾಧ್ಯವೂ ಬರುತ್ತದೆ.

## ನ್ಯಾಯದೀಪ

**व्याप्तिग्राहकेति ।** यत्र सकर्तृकत्वं तत्र शरीरजन्यत्वमिति व्याप्तिग्राहकं भूयःसहचारदर्शनादिकं, यत्र जन्यत्वं तत्र सकर्तृकत्वमिति व्याप्तिग्रहेऽपि तुल्यमिति व्याप्तिग्राहकतौल्येनेत्यर्थः । तथाच साध्यव्यापकत्वानिश्चयान्नोपाधिरिति भावः ।

शङ्काग्रन्थमण्युक्तमेव समाधिमाह—**शरीरजन्यत्व** इत्यादिना **दर्शनादित्यन्तेन ।** अननुगतत्वेनेत्यनन्तरं अनवच्छेदकत्वादिति शेषः। मूलारूढताभिव्यक्त्यर्थं तद्विपरीतेत्युक्तम् । **साध्येति ।** सकर्तृकत्वरूपसाध्येत्यर्थः । **पक्षेतरत्वस्येति ।** तेजोऽनुष्णं पदार्थत्वादित्यत्रातेजस्त्वस्येत्यर्थः । तत्र बाधस्थले इवेहापि पक्षभूतक्षित्यादितः शरीरजन्यत्वरूपोपाधेर्व्यावृत्त्या तद्व्याप्यसाध्याभावस्यापि निर्णयादिति भावः ।।

ಮೂಲದಲ್ಲಿ 'ವ್ಯಾಪ್ತಿಗ್ರಾಹಕತೌಲ್ಯೇನ'' ಎಂದಿದೆ. ಅದರ ಅರ್ಥ–ಸಕರ್ತೃಕತ್ವಕ್ಕೂ ಶರೀರಜನ್ಯತ್ವಕ್ಕೂ ವ್ಯಾಪ್ತಿನಿಶ್ಚಯಕ್ಕೆ ಬೇಕಾದ ಭೂಯೋದರ್ಶನಾದಿಗಳೇ ಜನ್ಯತ್ವ–ಸಕರ್ತೃಕತ್ವಗಳ ವ್ಯಾಪ್ತಿಜ್ಞಾನಕ್ಕೂ ಕಾರಣವಾಗಿವೆ, ಎಂದರ್ಥ. ಪಕ್ಷವ್ಯಾವೃತ್ತವಾದುದರಿಂದ ಉಪಾಧಿಯಲ್ಲಿ ಸಾಧ್ಯವ್ಯಾಪಕತ್ವ–ಸಂದೇಹ ಬರುತ್ತದೆ. ಅದು ಉಪಾಧಿಯಾಗುವುದಿಲ್ಲ.

ಈ ಆಕ್ಷೇಪಕ್ಕೆ ಮಣಿಯ ಶಂಕಾಗ್ರಂಥದಲ್ಲಿ (ಪು.52) ಹೇಳಲಾದ ಸಮಾಧಾನವನ್ನೇ ಮೂಲದಲ್ಲಿ ತಿಳಿಸಲಾಗಿದೆ. (ಮಣಿಗ್ರಂಥದಲ್ಲೂ ಈ ಮೂರೂ ಆಕ್ಷೇಪಗಳನ್ನು ಉಪಾಧಿಯ ಬಗ್ಗೆ ಮಾಡಿ ಅದಕ್ಕೆ ಇದೇ ರೀತಿಯ ಸಮಾಧಾನಗಳನ್ನು ಕೊಡಲಾಗಿದೆ. ಆದರೆ, ಆ ಸಮಾಧಾನಗಳು ಅಲ್ಲಿ ಪೂರ್ವಪಕ್ಷರೂಪದಲ್ಲಿ ಇವೆ. ಶರೀರಜನ್ಯತ್ವವು ಉಪಾಧಿಯಾಗುವುದಿಲ್ಲ ಎಂದೇ ಅಲ್ಲಿನ ಸಿದ್ಧಾಂತವಾಗಿದೆ. ಆದರೂ ಆ ಪೂರ್ವಪಕ್ಷಕ್ಕೆ ಮಣಿಕಾರ ಹೇಳಿರುವ ದೋಷವನ್ನು ಮುಂದಿನ ಮೂಲದಲ್ಲಿ ಪರಿಹರಿಸಿ ಅದೇ ಸಿದ್ಧಾಂತ ಅಂದರೆ, ಶರೀರಜನ್ಯತ್ವವು ಉಪಾಧಿಯಾಗುತ್ತದೆ ಎಂದು ಸಾಧಿಸಲಾಗಿದೆ.)

ಪಕ್ಷೇತರತ್ವವೂ ಬಾಧೋನ್ನೀತಸ್ಥಳದಲ್ಲಿ ಉಪಾಧಿ ಎಂದು ಮೂಲದಲ್ಲಿದೆ. ಅದಕ್ಕೆ ಉದಾಹರಣೆ— ''ತೇಜಃ ಅನುಷ್ಣಂ, ಪದಾರ್ಥತ್ವಾತ್'' ಎಂಬ ಅನುಮಾನ. ಈ ಅನುಮಾನದಲ್ಲಿ ''ಅತೇಜಸ್ತ್ವವು''(ತೇಜೋಭಿನ್ನತ್ವ) ಉಪಾಧಿ. ಈ ಅನುಮಾನಕ್ಕೆ ಬಾಧದೋಷವು ಇರುವುದರಿಂದ ಪಕ್ಷೇತರತ್ವಕ್ಕೆ ಪಕ್ಷಾದನ್ಯತ್ರ ಮಾತ್ರ ಇರುವ ಸಾಧ್ಯದ ವ್ಯಾಪಕತ್ವವು ನಿಶ್ಚಿತವಾಗುತ್ತದೆ. ಆದ್ದರಿಂದ ಇಲ್ಲಿ ಪಕ್ಷೇತರತ್ವವೂ ಉಪಾಧಿಯಾಗಿದೆ.

ಪ್ರಕೃತ ಈಶ್ವರಾನುಮಾನದಲ್ಲೂ, ಹಿಂದೆ ಹೇಳಿದಂತೆ, ಉಪಾಧಿಯಲ್ಲಿ ಸಾಧ್ಯವ್ಯಾಪಕತ್ವವು ನಿಶ್ಚಿತವಾಗಿದೆ. ಅಂತಹ ಉಪಾಧಿಯು ಪಕ್ಷದಿಂದ ವ್ಯಾವೃತ್ತವಾಗಿದೆ. ವ್ಯಾಪಕವಾದ ಉಪಾಧಿಯು ಇಲ್ಲದಿರುವುದರಿಂದ ವ್ಯಾಪ್ಯವಾದ ಸಾಧ್ಯವೂ ಪಕ್ಷದಿಂದ ವ್ಯಾವೃತ್ತವಾಗುತ್ತದೆ. ಹೀಗೆ ಪಕ್ಷೇತರತ್ವರೂಪವಾದರೂ ಅದು ಉಪಾಧಿಯಾಗುತ್ತದೆ.

(ಮಣಿಗ್ರಂಥದಲ್ಲಿ ಪೂರ್ವಪಕ್ಷವಾಗಿ ಶರೀರಜನ್ಯತ್ವದಲ್ಲಿ ವ್ಯಾಪ್ತಿಪ್ರಯೋಜಕವನ್ನು ಹೀಗೆ ಹೇಳಲಾಗಿದೆ— **ನಹಿ ಶರೀರವಿನಾಕೃತಃ ಕರ್ತಾ ಶರೀರಕ್ರಿಯಾಂ ಚೇಷ್ಟಾಂ, ಘಟಾದಿಕಂ ವಾ ಜನಯತಿ। ನ ಚ ಯತ್ಸಹಕೃತಂ ಯಜ್ಜನಕಂ ತೇನ ವಿನಾ ತಜ್ಜನಕಮ್। ಅತಃ ಅರ್ಥಾತ್, ಶರೀರಜನ್ಯಮೇವ ಕರ್ತೃಜನ್ಯಮಿತಿ ಸಾಧ್ಯವ್ಯಾಪಕತ್ವನಿಶ್ಚಯಾತ್।**)

**वह्निनेत्यादि ।** ननु तत्र धूमवत्त्वे वह्निमत्त्वमात्रमप्रयोजकम् । अनुकूलतर्काभावात् । साधनघटितोऽपि स्यादुपाधिरिति चेत्; तुल्यं प्रकृतेऽपि । त्वदभिप्रेतसकर्तृकत्वे कार्यत्वहेतोरप्रयोजकत्वस्य प्रागुपपादनादिति भावः ।

**हेतुसमानयोगक्षेमस्येति ।** रसवत्त्वस्य गन्धवत्त्वेन व्याप्तिः पृथिवीत्वोपहिते ग्राह्या । नत्वन्यत्र । सा च तत्र येन मानेन ग्राह्या तेनैव च गन्धवत्त्व-पृथिवीत्वयोरपि सिद्ध्यतीति भावः ।

ಮೂಲದಲ್ಲಿ "ಆರ್ದ್ರೇಂಧನ-ಪ್ರಭವ-ವಹ್ನಿಮತ್ತ್ವವು" ಉಪಾಧಿ ಎಂದಿದೆ. ಧೂಮಕ್ಕೆ ವಹ್ನಿಮಾತ್ರವು ಪ್ರಯೋಜಕವಲ್ಲ. ಅಯೋಗೋಲಕದಲ್ಲಿ ವಹ್ನಿ ಇದ್ದರೂ ಧೂಮವಿಲ್ಲ. ಅದಕ್ಕಾಗಿ, ವಹ್ನಿಗೆ "ಆರ್ದ್ರೇಂಧನಪ್ರಭವ" ಎಂಬ ವಿಶೇಷಣವನ್ನು ಸೇರಿಸಬೇಕು. ಹೀಗೆ, ಅಲ್ಲಿ ಸಾಧನ ಘಟಿತವಾದುದೇ ಉಪಾಧಿ, ಎಂದು ಸಮರ್ಥನೆಯನ್ನು ಕೊಡುವುದಾದರೆ, ಪ್ರಕೃತದಲ್ಲೂ ಇದು ಸಮಾನ. ಸಕರ್ತೃಕತ್ವಹೇತುವಿಗೆ ಕಾರ್ಯತ್ವವು ಪ್ರಯೋಜಕವಲ್ಲ, ಎಂದು ಹಿಂದೆ (ಪು.235) ಹೇಳಲಾಗಿದೆ. ಅದಕ್ಕಾಗಿ, ಶರೀರಜನ್ಯತ್ವವನ್ನೇ ಪ್ರಯೋಜಕವನ್ನಾಗಿ ಹೇಳಬೇಕು.

## ಅವತಾರಿಕೆ

**"लाघवेन बाधकं विना कर्तृजन्यत्वे हि जन्यत्वमवच्छेदकं नतु शरीरजन्यत्वं, गौरवात्। तथाच न शरीरजन्यत्वं सकर्तृकत्वव्यापकम्। घटादौ त्वार्थः समाजः। घटत्वेन शरीरजन्यत्वनियमात्" इत्यादिना मण्युक्तमाशङ्क्य निराह— नच कर्त्रिति।**

ಮಣಿಗ್ರಂಥದಲ್ಲಿ (ಪು.52) ಶರೀರಜನ್ಯತ್ವಕ್ಕೆ ಸಾಧ್ಯವ್ಯಾಪಕತ್ವವನ್ನು ಪೂರ್ವಪಕ್ಷ ಮಾಡಿ ಮುಂದೆ (ಪು.55) ಅದನ್ನು ಹೀಗೆ ನಿರಾಕರಿಸಲಾಗಿದೆ—"ಕರ್ತೃಜನ್ಯತಾವಚ್ಛೇದಕವಾದುದು ಲಾಘವಾತ್ ಜನ್ಯತ್ವಮಾತ್ರ, ಶರೀರಜನ್ಯತ್ವವಲ್ಲ. ಅದು, ಗುರುಧರ್ಮ. ಅಷ್ಟೇ ಅಲ್ಲ, ಲಘುವಾದ ಜನ್ಯತ್ವವು ಅವಚ್ಛೇದಕವಾದರೆ ಬಾಧಕವೂ ಇಲ್ಲ. ಆದ್ದರಿಂದ ಕರ್ತೃಜನ್ಯತ್ವ ಇದ್ದಲ್ಲಿ ಜನ್ಯತ್ವವು ಇರುತ್ತದೆ. ಹೊರತು, ಶರೀರಜನ್ಯತ್ವವಲ್ಲ. ಹೀಗೆ, ಸಾಧ್ಯವ್ಯಾಪ್ಯವಾದ ಹೇತುವಿಗೆ ಅವ್ಯಾಪಕವಾದ ಶರೀರಜನ್ಯತ್ವೋಪಾಧಿಯು ಸಕರ್ತೃಕತ್ವ ಎಂಬ ಸಾಧ್ಯಕ್ಕೆ ವ್ಯಾಪಕವಲ್ಲ. ಘಟದಲ್ಲಿ ಜನ್ಯತ್ವಮಾತ್ರ ಇರದೆ ಶರೀರಜನ್ಯತ್ವವು ಇರುವುದು ಕಾರ್ಯತ್ವಪ್ರಯುಕ್ತವಾಗಿ ಅಲ್ಲ. ಕಾರ್ಯವು ಘಟತ್ವೇನ ರೂಪೇಣ ಶರೀರಜನ್ಯವೇ ಆಗಿರುವುದರಿಂದ ಘಟದಲ್ಲಿ ಜನ್ಯತ್ವಪ್ರಯೋಜಕವಾದ ಕಾರ್ಯತ್ವ ಮತ್ತು ಶರೀರಜನ್ಯತ್ವ ನಿಯಾಮಕವಾದ ಘಟತ್ವ ಎರಡೂ ಇದೆಯಾದ ಕಾರಣ ಶರೀರಜನ್ಯತ್ವವು (ಸಮಾಜಃ) ಇದೆ." ಮಣ್ಯುಕ್ತವಾದ ಈ ಸಿದ್ಧಾಂತವನ್ನು ಪೂರ್ವಪಕ್ಷವನ್ನಾಗಿ ಮಾಡಿ ಮುಂದಿನ ಗ್ರಂಥದಲ್ಲಿ ನಿರಾಕರಿಸಲಾಗಿದೆ.

**नच कर्तृजन्यत्वे लाघवेन जन्यत्वस्यैवावच्छेदकत्वाद् हेतोर्व्याप्तिनिश्चये साध्यव्याप्यहेत्वव्यापकत्वादुपाधेः साध्याव्यापकतेति वाच्यम्। त्वदुक्तरीत्या कर्तृजन्यत्वे जन्यत्वमवच्छेदकं, शरीरजन्यत्वे तु**

**घटत्वादिकं वा अथवा तद्विपर्ययेण शरीरजन्यत्वे जन्यत्वं, कर्तृजन्यत्वे तु घटत्वादिकं वेति सन्देहेन सन्दिग्धोपाधेर्दुष्परिहरत्वात् ।।**

**ಪೂರ್ವಪಕ್ಷ**—ಕರ್ತೃಜನ್ಯತ್ವಕ್ಕೆ ಜನ್ಯತ್ವಮಾತ್ರ ಪ್ರಯೋಜಕ. ಅದು ಲಘುಧರ್ಮ. ಶರೀರಜನ್ಯತ್ವವು ಗುರುಧರ್ಮವಾದುದರಿಂದ ಅವಚ್ಛೇದಕವಲ್ಲ. ಆದ್ದರಿಂದ ಜನ್ಯತ್ವಾವಚ್ಛೇದೇನ ಕರ್ತೃಜನ್ಯತ್ವವು ಇರುತ್ತದೆ. ಹೀಗೆ ಲಾಘವತರ್ಕದ ಸಹಕಾರದಿಂದ ಜನ್ಯತ್ವಹೇತುವಿನಲ್ಲಿ ಸಾಧ್ಯದ ವ್ಯಾಪ್ತಿಯು ನಿಶ್ಚಿತವಾಗುತ್ತದೆ. ಸಾಧ್ಯವ್ಯಾಪ್ಯವಾದ ಆ ಹೇತುವಿಗೆ ಉಪಾಧಿಯು ಅವ್ಯಾಪಕವಾಗಿದೆ. ಆದ್ದರಿಂದ ಸಾಧ್ಯಕ್ಕೂ ಅವ್ಯಾಪಕವಾಗಿದೆ. ಹೀಗೆ, ಸಾಧ್ಯ-ಅವ್ಯಾಪಕವಾದುದರಿಂದ ಶರೀರಜನ್ಯತ್ವವು ಉಪಾಧಿಯಲ್ಲ.

**ಸಿದ್ಧಾಂತ**—ನೈಯಾಯಿಕರು ಕರ್ತೃಜನ್ಯತ್ವಕ್ಕೆ ಜನ್ಯತ್ವವು ಅವಚ್ಛೇದಕ, ಶರೀರಜನ್ಯತ್ವಕ್ಕೆ ಘಟತ್ವಾದಿಗಳು ಅವಚ್ಛೇದಕ, ಎಂದು ಹೇಳುತ್ತಾರೆ. ನಾವು, ಅದಕ್ಕೆ ವಿಪರೀತವಾಗಿ ಶರೀರಜನ್ಯತ್ವಕ್ಕೆ ಅನುಗತವಾದ ಜನ್ಯತ್ವವು ಅವಚ್ಛೇದಕ, ಕರ್ತೃಜನ್ಯತ್ವಕ್ಕೆ ಘಟತ್ವಾದಿಧರ್ಮಗಳು ಅವಚ್ಛೇದಕ, ಎನ್ನುತ್ತೇವೆ. ಯಾವುದಕ್ಕೂ ನಿರ್ದಿಷ್ಟವಾದ ನಿಯಾಮಕವಿಲ್ಲ. ಹಾಗೂ ಆಗಬಹುದು, ಹೀಗೂ ಆಗಬಹುದು. ತಾರ್ಕಿಕರು ಹೇಳಿದ್ದನ್ನು ಅಂಗೀಕರಿಸಿದರೆ ಉಪಾಧಿಗೆ ಸಾಧ್ಯವ್ಯಾಪಕತ್ವವು ಬರುವುದಿಲ್ಲ. ನಾವು ಹೇಳಿದ್ದನ್ನು ಅಂಗೀಕರಿಸಿದಲ್ಲಿ ಸಾಧ್ಯವ್ಯಾಪಕತ್ವ ಬರುತ್ತದೆ. ಒಟ್ಟಿನಲ್ಲಿ ಉಪಾಧಿಯು ಸಂದಿಗ್ಧವಾಯಿತು. ಸಂದಿಗ್ಧೋಪಾಧಿಯೇ ಅನುಮಾನಕ್ಕೆ ದೋಷ.

## ನ್ಯಾಯದೀಪ

**हेतोरिति ।** जन्यत्वहेतोरित्यर्थः । ध्वंससाधारणपक्षत्वपक्षे जन्यत्वस्यैव हेतुत्वादिति भावः ।।

ಮೂಲದಲ್ಲಿ "ಹೇತೋಃ" ಎಂದರೆ ಸಕರ್ತೃಕತ್ವಸಾಧಕವಾದ ಜನ್ಯತ್ವಹೇತುವಿಗೆ, ಎಂದರ್ಥ. ವಸ್ತುತಃ 'ಜನ್ಯತ್ವೇ ಸತಿ ಭಾವತ್ವಾತ್' ಎಂದು ಹೇತು. ಧ್ವಂಸವನ್ನು ವ್ಯಾವೃತ್ತಿಗೊಳಿಸುವ ಸಲುವಾಗಿ ಭಾವತ್ವವನ್ನು ಹೇತುವಿನಲ್ಲಿ ಸೇರಿಸಲಾಗಿದೆ. ಆದರೆ, ಧ್ವಂಸವೂ ಪಕ್ಷದಲ್ಲಿ ಸೇರಿದೆ ಎಂಬ ಪಕ್ಷದಲ್ಲಿ ಜನ್ಯತ್ವ ಮಾತ್ರ ಹೇತು.

## ಅವತಾರಿಕೆ

प्रथमं कर्तृजन्यत्वे जन्यत्वमवच्छेदकं क्लृप्तमिति तद्विरोधेन शरीरजन्यत्वे न सकर्तृकत्वमवच्छेदकम् । अत एव न सन्दिग्धोपाधित्वमित्यादिमण्युक्तमाशङ्क्य निराह—**नच कर्तृजन्यत्वमिति ।**

**ಆಕ್ಷೇಪ**—ಜನ್ಯತ್ವವೇ ಕರ್ತೃಜನ್ಯತಾವಚ್ಛೇದಕ, ಎಂದು ಮೊದಲು ಗೃಹೀತವಾಗುತ್ತದೆ. ಏಕೆಂದರೆ, ನೀವು ಹೇಳಿದಂತೆ, ಶರೀರಜನ್ಯತಾದಲ್ಲಿ ಕರ್ತೃಜನ್ಯತ್ವವು ಅವಚ್ಛೇದಕ ಎಂದು ತಿಳಿಯಬೇಕಾದರೆ ಮೊದಲು ಘಟಾದಿಕಾರ್ಯಗಳಲ್ಲಿ ಕರ್ತೃಜನ್ಯತ್ವವು ಸಿದ್ಧವಾಗಿರಬೇಕು. ಘಟಾದಿಗಳಲ್ಲಿ ಕರ್ತೃಜನ್ಯತ್ವವು ಸಿದ್ಧವಾಗುವಾಗಲೇ ಅದಕ್ಕೆ ಜನ್ಯತ್ವವು ಅವಚ್ಛೇದಕ (ಕರ್ತೃಜನ್ಯತ್ವ ಜನ್ಯತ್ವಕ್ಕೆ ವ್ಯಾಪಕ) ಎಂದು ಲಾಘವ ಮತ್ತು ಬಾಧಕಾಭಾವಗಳಿಂದ ಕ್ಲೃಪ್ತವಾಗುತ್ತದೆ. ಆದಕ್ಕೆ ವಿರುದ್ಧವಾಗಿ, ಶರೀರಜನ್ಯತ್ವದಲ್ಲಿ ಸಕರ್ತೃಕತ್ವವು ಅವಚ್ಛೇದಕ (ವ್ಯಾಪ್ಯ) ಎಂದು ತಿಳಿಯುವುದಿಲ್ಲ. ಕಾರ್ಯತ್ವಕ್ಕೆ ಕರ್ತೃಜನ್ಯತ್ವವು ವ್ಯಾಪಕ ಎಂದು ನಿರ್ಧಾರವಾದ ಮೇಲೆ ಕಾರ್ಯತ್ವಕ್ಕೆ ಅವ್ಯಾಪಕವಾದ ಶರೀರಜನ್ಯತ್ವವು ಕರ್ತೃಜನ್ಯತ್ವಕ್ಕೆ ವ್ಯಾಪಕವಾಗದು. ಆದ್ದರಿಂದ, ಯತ್ರ ಸಕರ್ತೃಕತ್ವಂ ತತ್ರ ಶರೀರಜನ್ಯತ್ವಂ, ಎಂದು ಉಪಾಧಿಗೆ ಸಾಧ್ಯವ್ಯಾಪಕತ್ವವನ್ನು ನಿರ್ಧರಿಸಲಾಗದು. ಹೀಗೆ ಸಂದಿಗ್ಧೋಪಾಧಿದೋಷವನ್ನು ಪರಿಹಾರ ಮಾಡಬಹುದು. ಮಣಿಗ್ರಂಥದಲ್ಲಿ[1] ಮಾಡಿರುವ ಈ ಆಕ್ಷೇಪವನ್ನು ಅನುವಾದ ಮಾಡಿ ಮುಂದಿನ ಗ್ರಂಥದಲ್ಲಿ ನಿರಾಕರಿಸಲಾಗಿದೆ.

**नच कर्तृजन्यत्वं प्रथमं ज्ञातं सच्छरीरजन्यतावच्छेदकत्वेन कल्प्यम् । तच्च कार्यत्वावच्छिन्नमेव ज्ञातमित्युपजीव्यविरोधान्न कर्तृजन्यत्वं शरीरजन्यतावच्छेदकमिति वाच्यम् । त्वदुक्तरीत्या शरीरजन्यत्ववत् तद्विपरीतकर्तृजन्यत्वस्यापि प्रथमं घटत्वाद्यवच्छेदेनैव ज्ञानसम्भवात् ।।**

**ಪೂರ್ವಪಕ್ಷ**—ಮೊದಲು ಕರ್ತೃಜನ್ಯತ್ವವನ್ನು ತಿಳಿದುಕೊಂಡು ಆಮೇಲೆ ಅದು ಶರೀರಜನ್ಯತಾವಚ್ಛೇದಕ, ಎಂದು ತಿಳಿಯಬೇಕು. ಮೊದಲು ಕರ್ತೃಜನ್ಯತ್ವವು ತಿಳಿಯಲ್ಪಡುವಾಗಲೇ ಕಾರ್ಯತ್ವಾವಚ್ಛಿನ್ನತ್ವೇನೈವ ಜ್ಞಾತವಾಗುತ್ತದೆ. ಅಂದರೆ ಅದು ಕಾರ್ಯತ್ವಕ್ಕೆ ವ್ಯಾಪಕವಾಗಿಯೇ ತಿಳಿಯಲ್ಪಡುತ್ತದೆ. ಅಂತಹ ಕಾರ್ಯತ್ವಕ್ಕೆ ಅವ್ಯಾಪಕವಾಗಿದೆ, ಶರೀರಜನ್ಯತ್ವ. ಅಂದಮೇಲೆ ಕಾರ್ಯತ್ವವ್ಯಾಪಕತಯಾ ಗೃಹೀತವಾದ ಕರ್ತೃಜನ್ಯತ್ವಕ್ಕೂ (ಸಾಧ್ಯಕ್ಕೂ) ಉಪಾಧಿಯು ಅವ್ಯಾಪಕವಾಗಬೇಕು. ಹೀಗಿರುವಾಗ ಕರ್ತೃಜನ್ಯತ್ವವು ಶರೀರಜನ್ಯತಾವಚ್ಛೇದಕವಾಗುವುದು (ವ್ಯಾಪ್ಯವಾಗುವುದು) ಉಪಜೀವ್ಯಪ್ರಮಾಣಕ್ಕೆ ವಿರುದ್ಧ. ಹೀಗೆ ಶರೀರಜನ್ಯತ್ವರೂಪ ಉಪಾಧಿಯು ಸಾಧ್ಯವ್ಯಾಪಕವಲ್ಲ.

---

१ किञ्च, कर्तृजन्यत्वे जन्यत्वं, शरीरजन्यत्वे वा सकर्तृकत्वम् वा अवच्छेदकम् इति संशयेऽपि न हेतोः साध्यव्याप्यत्वनिश्चयः इति चेत्, तर्हि घटादौ कर्तृजन्यत्वे गृहीते तस्य शरीरजन्यत्वावच्छेदकत्वं ग्रहीतव्यम् । घटे च घटत्ववत् जन्यत्वमपि वाधकं विना कर्तृजन्यतावच्छेदकं गृहीतम्, अतो जन्यमात्रस्य कर्तृजन्यत्वात् न शरीरजन्यत्वे तदवच्छेदकत्वम्। प्रथमगृहीतोपजीव्यविरोधात् । (मणि.५८)

**ಸಿದ್ಧಾಂತ**—ನೀವು(ನೈಯಾಯಿಕರು) ಘಟತ್ವಾದಿಧರ್ಮಗಳು ಮೊದಲೇ ಶರೀರ ಜನ್ಯತಾವಚ್ಛೇಕಗಳಾಗಿ ತಿಳಿಯಲ್ಪಡುತ್ತವೆ ಎನ್ನುತ್ತೀರಿ. ನಾವು ಅದಕ್ಕೆ ವಿಪರೀತವಾಗಿ ಘಟತ್ವಾದಿಗಳು ಕರ್ತೃಜನ್ಯತಾವಚ್ಛೇದಕತಯಾ ಗೃಹೀತವಾಗುತ್ತವೆ, ಎನ್ನುತ್ತೇವೆ.

ನೈಯಾಯಿಕರು, ಘಟತ್ವಾದ್ಯವಚ್ಛೇದೇನ ಶರೀರಜನ್ಯತ್ವವೂ, ಜನ್ಯತ್ವಾವಚ್ಛೇದೇನ ಕರ್ತೃಜನ್ಯತವೂ ಸಿದ್ಧವಾಗುತ್ತದೆ, ಎನ್ನುತ್ತಾರೆ. ಹಾಗೇನೂ ನಿರ್ಬಂಧವಿಲ್ಲ, ನಾವು ಅದಕ್ಕೆ ವಿಪರೀತವಾಗಿ, ಘಟತ್ವಾದ್ಯವಚ್ಛೇದೇನ ಕರ್ತೃಜನ್ಯತ್ವವೂ, ಜನ್ಯತ್ವಾವಚ್ಛೇದೇನ ಶರೀರಜನ್ಯತ್ವವೂ ಸಿದ್ಧವಾಗುತ್ತದೆ ಎನ್ನುತ್ತೇವೆ. ಹೀಗೆ ಹೇಳಿದಾಗ 'ಯಜ್ಜನ್ಯಂ ತತ್ ಸರ್ವಂ ಶರೀರಜನ್ಯಂ'' ಎಂದು ಜನ್ಯತ್ವವು ಶರೀರಜನ್ಯತ್ವಕ್ಕೇ ವ್ಯಾಪ್ಯತಯಾ ಮೊದಲು ತಿಳಿದಿರುವುದರಿಂದ ಜನ್ಯತ್ವಹೇತುವಿನಿಂದ ಶರೀರಜನ್ಯತ್ವವೇ ಪಕ್ಷದಲ್ಲಿ ಸಿದ್ಧವಾಗುತ್ತದೆ. ಕರ್ತೃಜನ್ಯತ್ವಕ್ಕೆ ಘಟತ್ವಾದಿಗಳೇ ಅವಚ್ಛೇದಕಗಳೆಂದು ಮೊದಲು ಜ್ಞಾನಬರುವುದರಿಂದ ಅದಕ್ಕೆ ವಿರುದ್ಧವಾಗಿ ಕಾರ್ಯತ್ವವು ತದವಚ್ಛೇದಕ ಎಂದು ಆಮೇಲೆ ತಿಳಿಯಲು ಸಾಧ್ಯವಿಲ್ಲ.

## ನ್ಯಾಯದೀಪ

**तच्चेति ।** कर्तृजन्यत्वमित्यर्थः । कर्तृजन्यत्वे लाघवेन जन्यत्वस्यैवावच्छेदकत्वात् । कार्यत्वावच्छिन्नं=कार्यत्वव्यापकम् । कर्तृजन्यत्वं शरीरजन्यतावच्छेदकं न सम्भवति । तस्य कार्यत्वरूप-हेत्वव्यापकत्वात् । शरीरजन्यत्वं सकर्तृकत्वव्याप्यकार्यत्वाव्यापकं सकर्तृकत्वव्यापकं चेत्यस्यायोगात् । अत उपजीव्यविरोधान्न कर्तृजन्यत्वं शरीरजन्यतावच्छेदकमित्यर्थः । **शरीरजन्यत्ववदिति ।** शरीरजन्यत्वं घटत्वादिनाऽवच्छिद्यते— यत्र घटत्वादिकं तत्र शरीरजन्यत्वमिति । कर्तृजन्यत्वं तु कार्यत्वेन— यत्र कार्यत्वं तत्र कर्तृजन्यत्वमिति । एतच्च प्रथमं ज्ञायत इति यथा त्वयोच्यते, तथैव कर्तृजन्यत्वं घटत्वादिनैवावच्छिद्यते— यत्र घटत्वादि तत्र कर्तृजन्यत्वमिति । प्रथमं चास्य ज्ञानं सम्भवत्येव । ग्राहकसत्त्वात् । तथाच कर्तृजन्यत्वं घटत्वादिनाऽवच्छिन्नतया प्रथमं ज्ञातमिति तद्विरोधान्न कार्यत्वावच्छिन्नत्वेन पश्चाज्ज्ञातुं शक्यमिति कार्यत्वस्येव

**कर्तृजन्यत्वाव्याप्यत्वात् तेन कथं त्वदभिमतसकर्तृकत्वानुमानम् । प्रत्युत शरीरजन्यत्वावच्छेदकत्वेनैव कार्यत्वस्यावगमात् तेन तदनुमानमेव स्यादित्यर्थः ।**

**ननु यत्सामान्यविशेषन्यायेन कृतित्व–कार्यत्वयोरवच्छेद्यावच्छेदक-भावग्रहे सति कृतिजन्यत्वव्याप्यकार्यत्वाव्यापकत्वात् साध्याव्याप-कत्वं शरीरजन्यत्वस्येति चेन्न । प्रागेव यत्सामान्येति न्यायलभ्यपक्षस्य खण्डनात् ।।**

ಮೂಲದಲ್ಲಿ, ಕರ್ತೃಜನ್ಯತ್ವವು ಕಾರ್ಯತ್ವಾವಚ್ಛಿನ್ನ, ಎಂದು ಜ್ಞಾತವಾಗಿದೆ, ಎಂದಿದೆ. ಕಾರ್ಯತ್ವಾವಚ್ಛಿನ್ನವೆಂದರೆ 'ಕಾರ್ಯತ್ವಕ್ಕೆ ವ್ಯಾಪಕವಾದುದು ಕರ್ತೃಜನ್ಯತ್ವ' ಎಂದರ್ಥ. ಕಾರ್ಯತ್ವಕ್ಕೆ ವ್ಯಾಪಕವಾದುದರಿಂದಾಗಿಯೇ ಕರ್ತೃಜನ್ಯತ್ವರೂಪ ಸಾಧ್ಯಕ್ಕೆ ಶರೀರಜನ್ಯತ್ವರೂಪ ಉಪಾಧಿಯು ವ್ಯಾಪಕವಾಗುವುದಿಲ್ಲ. ಏಕೆಂದರೆ, ಆ ಉಪಾಧಿಯು ಕಾರ್ಯತ್ವಕ್ಕೆ ಅವ್ಯಾಪಕವಾಗಿದೆ. ಅದಕ್ಕೆ ಅವ್ಯಾಪಕವಾದ ಮೇಲೆ ಅದಕ್ಕೆ ವ್ಯಾಪಕವಾದ ಕರ್ತೃಜನ್ಯತ್ವಕ್ಕೆ (ಸಾಧ್ಯಕ್ಕೆ) ಅವ್ಯಾಪಕವಾಗಿರಬೇಕು. ಆದ್ದರಿಂದ, ಶರೀರಜನ್ಯತ್ವವು ಸಕರ್ತೃಕತ್ವವ್ಯಾಪ್ಯವಾದ ಕಾರ್ಯತ್ವಕ್ಕೆ ಅವ್ಯಾಪಕ ಎನ್ನುವುದು ಸಕರ್ತೃಕತ್ವಕ್ಕೆ ವ್ಯಾಪಕ ಎನ್ನುವುದಕ್ಕೆ ವಿರುದ್ಧ. ಹೀಗೆ, 'ಕಾರ್ಯತ್ವವು ಸಕರ್ತೃಕತ್ವದಲ್ಲಿ ಅವಚ್ಛೇದಕ' ಎಂಬ ಅಂಶವು ಉಪಜೀವ್ಯವಾದುದರಿಂದ 'ಕರ್ತೃಜನ್ಯತ್ವವು ಶರೀರಜನ್ಯತಾವಚ್ಛೇದಕ' (ಕರ್ತೃಜನ್ಯತ್ವಕ್ಕೆ ಶರೀರಜನ್ಯತ್ವವು ವ್ಯಾಪಕ) ಎನ್ನುವುದು ಅದಕ್ಕೆ ವಿರುದ್ಧವಾಗುತ್ತದೆ.

ನೈಯಾಯಿಕರ ಈ ವಾದಕ್ಕೆ ಪ್ರತಿಯಾಗಿ ಮೂಲದಲ್ಲಿ ಆಪಾದಿಸಲಾಗಿದೆ. ನೈಯಾಯಿಕರ ವಾದ ಹೀಗೆ—

ಶರೀರಜನ್ಯತಾವಚ್ಛೇದಕವಾದುದು ಘಟತ್ವಾದಿಗಳು. ಅಂದರೆ 'ಯತ್ರ ಘಟತ್ವಾದಿಕಂ ತತ್ರ ಶರೀರಜನ್ಯತ್ವಂ' ಎಂದು ವ್ಯಾಪ್ಯ–ವ್ಯಾಪಕಭಾವ. ಕರ್ತೃಜನ್ಯತಾವಚ್ಛೇದಕವಾದುದು ಕಾರ್ಯತ್ವ. ಅಂದರೆ, 'ಯತ್ರ ಕಾರ್ಯತ್ವಂ ತತ್ರ ಕರ್ತೃಜನ್ಯತ್ವಂ' ಎಂದು ವ್ಯಾಪ್ಯವ್ಯಾಪಕಭಾವ.

ಇದಕ್ಕೆ ವಿರುದ್ಧವಾಗಿ ಹೀಗೂ ವಾದಮಾಡಬಹುದು—ಕರ್ತೃಜನ್ಯತಾವಚ್ಛೇದಕ ಘಟತ್ವಾದಿಗಳು. ಅಂದರೆ 'ಯತ್ರ ಘಟತ್ವಾದಿಕಂ ತತ್ರ ಕರ್ತೃಜನ್ಯತ್ವಂ' ಎಂದು ವ್ಯಾಪ್ಯವ್ಯಾಪಕಭಾವವು ಮೊದಲು ಗೃಹೀತವಾಗುತ್ತದೆ. ಇದಕ್ಕೆ ವಿರುದ್ಧವಾದುದರಿಂದ 'ಕಾರ್ಯತ್ವವು ಕರ್ತೃಜನ್ಯತಾವಚ್ಛೇದಕ' ಅಂದರೆ 'ಯತ್ರ ಕಾರ್ಯತ್ವಂ ತತ್ರ ಕರ್ತೃಜನ್ಯತ್ವಂ' ಎಂಬ ವ್ಯಾಪ್ಯವ್ಯಾಪಕಭಾವವು ಗೃಹೀತವಾಗುವುದಿಲ್ಲ. ಹೀಗಾಗಿ, ಕಾರ್ಯತ್ವಹೇತುವಿನಿಂದ

ಸಕರ್ತೃಕತ್ವವನ್ನು ಅನುಮಾನ ಮಾಡಲಾಗುವುದಿಲ್ಲ. ಅಷ್ಟೇ ಅಲ್ಲ, ಕಾರ್ಯತ್ವವು ಶರೀರಜನ್ಯತಾವಚ್ಛೇದಕತಯಾ ಪ್ರಥಮ ಗೃಹೀತವಾದುದರಿಂದ ಕಾರ್ಯತ್ವದಿಂದ ಶರೀರಜನ್ಯತ್ವವನ್ನೇ ಅನುಮಾನ ಮಾಡಬೇಕು.

**ಆಕ್ಷೇಪ**—'ಯದ್ವಿಶೇಷಯೋಃ ಕಾರ್ಯಕಾರಣಭಾವಃ ತತ್ಸಾಮಾನ್ಯಯೋರಪಿ' ಎಂಬ ನ್ಯಾಯದಿಂದ ಕೃತಿ-ಕಾರ್ಯಗಳಿಗೆ ಕಾರ್ಯಕಾರಣಭಾವವು ನಿರ್ಧಾರವಾಗುತ್ತದೆ. ಇದರಿಂದ, ಕಾರ್ಯತ್ವ ಮತ್ತು ಕೃತಿಜನ್ಯತ್ವಗಳಲ್ಲಿ ಅವಚ್ಛೇದ್ಯ-ಅವಚ್ಛೇದಕಭಾವವು ಸಿದ್ಧವಾಗುತ್ತದೆ. ಅಂದರೆ, ಕಾರ್ಯತಾವಚ್ಛೇದೇನ ಕೃತಿಜನ್ಯತ್ವವು ಸಿದ್ಧವಾಗುತ್ತದೆ. ಇದರಿಂದಾಗಿ, 'ಯತ್ರ ಕಾರ್ಯತ್ವಂ ತತ್ರ ಕೃತಿಜನ್ಯತ್ವಂ' ಎಂಬ ವ್ಯಾಪ್ತಿಯಿಂದ ಕಾರ್ಯತ್ವವು ಕೃತಿಜನ್ಯತ್ವಕ್ಕೆ ವ್ಯಾಪ್ಯ ಎಂದು ನಿರ್ಧಾರವಾಗುತ್ತದೆ. ಇಂತಹ ಕಾರ್ಯತ್ವಕ್ಕೆ ಶರೀರಜನ್ಯತ್ವವು ಅವ್ಯಾಪಕವಾದುದರಿಂದ, ಕಾರ್ಯತ್ವವ್ಯಾಪಕವಾದ ಕೃತಿಜನ್ಯತ್ವಕ್ಕೂ ಅವ್ಯಾಪಕವಾಗುತ್ತದೆ. ಸಾಧ್ಯಾವ್ಯಾಪಕವಾದುದರಿಂದ ಅದು ಉಪಾಧಿಯಾಗುವುದಿಲ್ಲ.

**ಸಮಾಧಾನ**—ಇದು ಸರಿಯಲ್ಲ 'ಯದ್ವಿಶೇಷಯೋಃ...' ಎಂಬ ನ್ಯಾಯವು ಸರಿಯಲ್ಲ ಎಂದು ಹಿಂದೆಯೇ (ಪು.252) ಹೇಳಲಾಗಿದೆ.

## ಅವತಾರಿಕೆ

**अभ्युपेत्यापि कार्यत्वेन कृतिजन्यत्वानुमानम्, ज्ञानचिकीर्षावत्त्वांशे शरीरजन्यत्वमुपाधिर्भवत्येव। नहि कृतित्वकार्यत्वयोरिव ज्ञानत्वकार्यत्वयोः, इच्छात्वकार्यत्वयोर्वा व्याप्यव्यापकभावे बीजमस्ति। येन ज्ञानेच्छाजन्यत्व-व्याप्य-कार्यत्वाव्यापकत्वाच्छरीरजन्यत्वं साध्याव्यापकं स्यादित्यत आह—किंचेति।**

ಕೃತಿ-ಕಾರ್ಯಗಳಿಗೆ ಕಾರ್ಯ-ಕಾರಣಭಾವವನ್ನು ಬೇಕಾದರೆ ಒಪ್ಪೋಣ. ಆದರಿಂದ ಕಾರ್ಯತ್ವ ಹೇತುವಿನಿಂದ ಕೃತಿಜನ್ಯತ್ವವನ್ನೂ ಅನುಮಾನಮಾಡೋಣ. ಆದರೂ ಜ್ಞಾನ ಮತ್ತು ಚಿಕೀರ್ಷಾಂಶದಲ್ಲಿ ಶರೀರಜನ್ಯತ್ವವು ಉಪಾಧಿಯಾಗುತ್ತದೆ. ಕೃತಿತ್ವ-ಕಾರ್ಯತ್ವಗಳ ವ್ಯಾಪ್ಯ-ವ್ಯಾಪಕಭಾವಕ್ಕೆ ನಿಮಿತ್ತವಿದ್ದಂತೆ ಜ್ಞಾನತ್ವ-ಕಾರ್ಯತ್ವಗಳಿಗಾಗಲೀ, ಇಚ್ಛಾತ್ವಕಾರ್ಯತ್ವಗಳಿಗಾಗಲೀ ವ್ಯಾಪ್ಯ- ವ್ಯಾಪಕಭಾವಕ್ಕೆ ನಿಮಿತ್ತವೇನೂ ಇಲ್ಲ. ಆ ರೀತಿಯ ವ್ಯಾಪ್ತಿಯು ಇದ್ದಿದ್ದರೆ ಜ್ಞಾನಜನ್ಯತ್ವ ಮತ್ತು ಇಚ್ಛಾಜನ್ಯತ್ವಗಳಿಗೆ ಕಾರ್ಯತ್ವವು ವ್ಯಾಪ್ಯವಾಗಿ, ತದ್‌ವ್ಯಾಪಕವಾದುದರಿಂದ ಸಾಧ್ಯಕ್ಕೂ ಶರೀರಜನ್ಯತ್ವವು ಅವ್ಯಾಪಕವಾದೀತು. (ಯತ್ ಯದ್‌ವ್ಯಾಪ್ಯಾವ್ಯಾಪಕಂ ತತ್ ತಸ್ಯಾಪಿ

ಅವ್ಯಾಪಕಂ, ಎಂದು ನಿಯಮ) ಆದರಿಂದಾಗಿ ಅದು ಉಪಾಧಿಯಾಗಲಿಕ್ಕಿಲ್ಲ. ಆದರೆ ಕಾರ್ಯತ್ವಕ್ಕೆ ಜ್ಞಾನಜನ್ಯತ್ವಾದಿಗಳ ವ್ಯಾಪ್ಯತ್ವವು ಅನಿಶ್ಚಿತವಾದುದರಿಂದ ಜ್ಞಾನ ಮತ್ತು ಇಚ್ಛೆಗಳು ಸಾಧ್ಯವಾದಾಗ ಶರೀರಜನ್ಯತ್ವವು ಉಪಾಧಿಯಾಗುತ್ತದೆ. ಇದನ್ನು 'ಕಿಂಚ' ಎಂಬ ಮೂಲದಲ್ಲಿ ಹೇಳಲಾಗಿದೆ.

**किंच कृतिकार्ययोः कार्यकारणभावग्रहेऽपि न ज्ञानेच्छयोः सिद्धिः । आत्मनः शरीरसम्बन्धे ज्ञानगतकार्यत्वस्येव ज्ञानादिसम्बन्धेऽपि त्वदुक्तकृतित्वमात्रविपरीतकृतिगतकार्यत्वस्यैव तन्त्रत्वात् । नच, कृतिवज्ज्ञानेच्छयोरपि स्वातन्त्र्येण कार्यहेतुत्वात् तत्सिद्धिः । आत्मसंयोगे सत्यपि कृतिव्यतिरेकेणेव कृतौ सत्यां ज्ञानादिव्यतिरेकेण कार्यव्यतिरेकादर्शनात् ॥**

ಕೃತಿ ಮತ್ತು ಕಾರ್ಯಗಳಿಗೆ ಕಾರ್ಯ-ಕಾರಣಭಾವವು ತಿಳಿದರೂ, ಅದರಿಂದಾಗಿ ಈಶ್ವರನಿಗೆ ಕೃತ್ಯಾಶ್ರಯತ್ವವು ಸಿದ್ಧವಾದರೂ ಜ್ಞಾನ ಮತ್ತು ಇಚ್ಛೆಗಳು ಈಶ್ವರನಿಗಿದೆ, ಎಂದೇನೂ ಸಿದ್ಧವಾಗುವುದಿಲ್ಲ. ಏಕೆಂದರೆ, ಆತ್ಮನಿಗೆ ಶರೀರದೊಂದಿಗೆ ಆಗುವ ಸಂಬಂಧಕ್ಕೆ ಜ್ಞಾನಗತವಾದ ಕಾರ್ಯತ್ವವು ನಿಮಿತ್ತ. ಅರ್ಥಾತ್, ಜ್ಞಾನವು ಹುಟ್ಟುವುದರಿಂದಾಗಿ ಶರೀರಾತ್ಮಸಂಯೋಗವಿದೆ, ಎಂದು ನಿರ್ಧರಿಸಲಾಗುತ್ತದೆ. (ಈಶ್ವರನ ಜ್ಞಾನವು ನಿತ್ಯವಾದುದರಿಂದ ಅವನಿಗೆ ಶರೀರವಿಲ್ಲ.) ಅದರಂತೆ, ಆತ್ಮನಿಗೆ ಜ್ಞಾನಸಂಬಂಧಕ್ಕೆ ನಿಮಿತ್ತ(ಅಂದರೆ, ಜ್ಞಾನವು ಆತ್ಮನಲ್ಲಿ ಇರಲು ಕಾರಣ) ನೀನು ಹೇಳುವಂತೆ ಕೃತಿಮಾತ್ರವಲ್ಲ, ಕೃತಿಯಲ್ಲಿರುವ ಜನ್ಯತ್ವ. ಕೃತಿಯು ಜನ್ಯವಾದುದರಿಂದ ಅದಕ್ಕೆ ಜನಕವಾಗಿ ಆತ್ಮನಲ್ಲಿ ಜ್ಞಾನವು ಇರಬೇಕು. ಹೀಗೆ ಕೃತಿಯಲ್ಲಿರುವ ಜನ್ಯತ್ವವೇ ಆತ್ಮನಲ್ಲಿ ಜ್ಞಾನವಿದೆ, ಎನ್ನಲು ನಿಮಿತ್ತ. ಈಶ್ವರನ ಕೃತಿಯು ನಿತ್ಯವಾದ ಕಾರಣ, ತಜ್ಜನಕತ್ವೇನ ಜ್ಞಾನವು ಸಿದ್ಧವಾಗುವುದಿಲ್ಲ.

**ಪೂರ್ವಪಕ್ಷ**—ಕೃತಿಯು ಹೇಗೆ ಸ್ವಾತಂತ್ರ್ಯೇಣ ಕಾರ್ಯಕ್ಕೆ ಕಾರಣವೋ ಅದರಂತೆ, ಜ್ಞಾನ ಮತ್ತು ಇಚ್ಛೆಗಳೂ ಕಾರ್ಯಕ್ಕೆ ಸ್ವಾತಂತ್ರ್ಯೇಣ ಕಾರಣಗಳಾಗಿರುವುದರಿಂದ ಈಶ್ವರನಿಗೆ ಜ್ಞಾನೇಚ್ಛಾಗಳೂ ಸಿದ್ಧವಾಗುತ್ತವೆ.

**ಸಿದ್ಧಾಂತ**—ಇದು ಸರಿಯಲ್ಲ. ಮೃದಾದಿ ಉಪಾದಾನಕ್ಕೆ ಆತ್ಮಸಂಯೋಗವಾದರೂ ಆತ್ಮನಲ್ಲಿ ಕೃತಿ ಇಲ್ಲದ ಹೊರತು ಕಾರ್ಯ ಹುಟ್ಟುವುದಿಲ್ಲ. ಇದರಂತೆ, ಕೃತಿ ಇದ್ದರೂ ಜ್ಞಾನೇಚ್ಛಾವ್ಯತಿರೇಕೇಣ ಕಾರ್ಯವ್ಯತಿರೇಕವು ಕಂಡಿಲ್ಲ. ಕೃತಿ ಇದ್ದರೆ ಸಾಕು, ಕಾರ್ಯ ಹುಟ್ಟುತ್ತದೆ. ಆದ್ದರಿಂದ ಜ್ಞಾನ ಮತ್ತು ಇಚ್ಛೆಗಳು ಕಾರ್ಯಕ್ಕೆ ಸಾಕ್ಷಾತ್ ಕಾರಣಗಳಲ್ಲ.

**नच कृतेर्विषयप्रत्यासत्त्यर्थं ज्ञानापेक्षा । कृतिविषययोर्ज्ञानस्यैव**

**प्रत्यासत्तित्वादिति वाच्यम्। कृत्यजनकज्ञानस्य प्रत्यासत्तित्वेऽति-प्रसङ्गात् तज्जनकज्ञानस्य च कृतिकाले नष्टत्वेनाप्रत्यासत्तितया ज्ञाने ज्ञानस्वरूपस्येव कृतावपि कृतिस्वरूपस्यैव प्रत्यासत्तित्वात्। अन्यथा कृतिकाले ज्ञानाभावेन घटं करोमीति घटकृत्योः सम्बन्धधीर्न स्यात्। तस्मात् त्वदुक्तकृत्यादित्रयविपरीत-कृतिमात्रवत्त्वेनाप्यनुमितिः स्यात्॥**

**ಪೂರ್ವಪಕ್ಷ**—ಕಾರ್ಯಹೇತುತಯಾ ಜ್ಞಾನವು ಸಿದ್ಧವಾಗದಿದ್ದರೂ ಕೃತಿಸಂಬಂಧತಯಾ ಜ್ಞಾನವು ಸಿದ್ಧವಾಗುತ್ತದೆ. ಕೃತಿಗೂ ಉಪಾದಾನಾದಿರೂಪವಿಷಯಗಳಿಗೂ ಜ್ಞಾನವೇ ಸಂಬಂಧ. ಯಾವುದು ಜ್ಞಾತವೋ ಅದೇ ಕೃತಿ ಸಂಬದ್ಧವಾಗುತ್ತದೆ. ಹೀಗೆ ಅಸಂಬದ್ಧವಾದ ಕೃತಿಗೆ ಸಂಬಂಧ ಕಲ್ಪಕವಾದುದು ಜ್ಞಾನವೇ ಆಗಿದೆ. ಆದ್ದರಿಂದ ಕೃತಿ ಇದ್ದವನಿಗೆ ಜ್ಞಾನ ಇರಲೇಬೇಕು.

**ಸಿದ್ಧಾಂತ**—ಕೃತಿಗೆ ಜನಕವಲ್ಲದ ಜ್ಞಾನವು ಸಂಬಂಧವಾದರೆ ಚೈತ್ರನ ಕೃತಿಗೆ ಮೈತ್ರನ ಜ್ಞಾನವು ಸಂಬಂಧವಾಗಬೇಕಾದೀತು. ಆದ್ದರಿಂದ, ಕೃತಿಜನಕವಾದ ಜ್ಞಾನವೇ ಪ್ರತ್ಯಾಸತ್ತಿ ಎನ್ನಬೇಕು. ಆದರೆ, ಕೃತಿ ಇರುವಾಗ ಅದಕ್ಕೆ ಜನಕವಾದ ಜ್ಞಾನವು ಇರುವುದಿಲ್ಲ. ಅದು ಕ್ಷಣಿಕ. ಅದು ಪ್ರತ್ಯಾಸತ್ತಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಜ್ಞಾನಕ್ಕೆ ಜ್ಞಾನಸ್ವರೂಪವೇ ಸಂಬಂಧವಾಗುವಂತೆ ಕೃತಿಗೂ ಕೃತಿಸ್ವರೂಪವೇ (ವಿಷಯಿತಾ) ಸಂಬಂಧ. ಜ್ಞಾನವೇ ಸಂಬಂಧವಾದರೆ ಕೃತಿಕಾಲದಲ್ಲಿ ಜ್ಞಾನವು ನಷ್ಟವಾಗಿರುವುದರಿಂದ "ಘಟಂ ಕರೋಮಿ" ಎಂಬ ಘಟ ಮತ್ತು ಕೃತಿಗಳಿಗೆ ಸಂಬಂಧವಿಷಯಕವಾದ ಜ್ಞಾನವು ಬರಲು ಸಾಧ್ಯವಿಲ್ಲ. ಆದ್ದರಿಂದ ವಿಪರ್ಯಯಸ್ಯಾಪಿ=ನೀವು ಹೇಳುವ ಕೃತ್ಯಾದಿತ್ರಯಾನುಮಾನಕ್ಕೆ ವಿಪರೀತವಾಗಿ ಕೃತಿಮಾತ್ರವತ್ತ್ವೇನ ಈಶ್ವರನ ಅನುಮಾನ ಮಾಡಬಹುದಾಗಿದೆ.

## ನ್ಯಾಯದೀಪ

ग्रहेऽपीत्यस्य, ग्रहात् कार्यत्वेन कृति-सिद्धावपीत्यर्थो ध्येयः। **न ज्ञानेच्छयोः सिद्धिरिति।** तयोः शरीरसंबन्धनिमित्तत्वादीश्वरे च त्वया तदनङ्गीकारादिति भावः।

ननु कार्यत्वेन कृतिसिद्धावुपेतायां कृतेर्ज्ञानेच्छापूर्वकत्वस्य घट-कृत्यादौ दर्शनात् कृत्यानुषङ्गिकतया तयोरपि सिद्धिः स्यादेव। नच शरीरसम्बन्धे तन्त्रयोर्ज्ञानेच्छयोर्भावात् तत्प्रयुक्तशरीरसम्बन्धसिद्धिः।

**तस्य जन्यज्ञानादिप्रयुक्तत्वादित्यतः तर्हि जन्यकृतावेव ज्ञानेच्छापूर्वकत्वं, नत्वजन्यकृताविति कार्यत्वस्य पक्षधर्मताबलान्नित्यकृतिसिद्ध्या न ज्ञानेच्छयोः सिद्धिरिति भावेनाह—आत्मन इति ।।**

ಮೂಲದಲ್ಲಿ ''ಕೃತಿ-ಕಾರ್ಯಯೋಃ ಕಾರ್ಯ-ಕಾರಣಭಾವಗ್ರಹೇಽಪಿ'' ಎಂದಿದೆ. ಅದರ ಅಭಿಪ್ರಾಯ ''ಈ ಕಾರ್ಯ-ಕಾರಣಭಾವಗ್ರಹದಿಂದ ಕಾರ್ಯತ್ವ ಹೇತುವಿನಿಂದ ಕೃತಿಯು ಸಿದ್ಧವಾದರೂ'' ಎಂದು.

ಜ್ಞಾನ ಮತ್ತು ಇಚ್ಛೆಗಳು ಈಶ್ವರನಿಗೆ ಸಿದ್ಧವಾಗುವುದಿಲ್ಲ. ಏಕೆಂದರೆ, ಜ್ಞಾನೇಚ್ಛೆಗಳು ಆತ್ಮನಿಗೆ ಶರೀರಸಂಬಂಧವಿದ್ದರೆ ಮಾತ್ರವೇ ಇರುತ್ತವೆ. ತಾರ್ಕಿಕರಾದರೋ ಈಶ್ವರನಿಗೆ ಶರೀರವನ್ನು ಅಂಗೀಕರಿಸುವುದಿಲ್ಲ.

**ಪೂರ್ವಪಕ್ಷ**—ಕೃತಿ ಸಿದ್ಧವಾದರೆ ಜ್ಞಾನ ಮತ್ತು ಇಚ್ಛೆಗಳೂ ಸಿದ್ಧವಾಗುತ್ತವೆ. ಕೃತಿಯ ಹಿಂದೆ ಸರ್ವದಾ ಜ್ಞಾನ ಮತ್ತು ಇಚ್ಛೆಗಳು ಇದ್ದೇ ಇರುತ್ತವೆ. ಇದು, ಘಟವಿಷಯಕಕೃತಿ ಇರುವ ಕುಲಾಲನಲ್ಲಿ ಕಂಡಿದೆ. ಹೀಗೆ ಕೃತಿಸಿದ್ಧವಾದರೆ ಆನುಷಂಗಿಕವಾಗಿ ಜ್ಞಾನೇಚ್ಛೆಗಳೂ ಸಿದ್ಧವಾಗುತ್ತವೆ.

**ಆಕ್ಷೇಪ**—ಜ್ಞಾನ ಇಚ್ಛೆಗಳು ಶರೀರಸಂಬಂಧವಿದ್ದರೆ ಮಾತ್ರ ಬರುತ್ತವೆ. ಅವುಗಳು ಈಶ್ವರನಿಗೆ ಇರುವುದಾದಲ್ಲಿ ತನ್ನಿಮಿತ್ತ ಶರೀರಸಂಬಂಧವೂ ಬರಬೇಕಾದೀತು.

**ಸಮಾಧಾನ**—ಜನ್ಯಜ್ಞಾನಾದಿಗಳು ಮಾತ್ರ ಶರೀರಸಂಬಂಧಸಾಪೇಕ್ಷ. ಆದರೆ, ಈಶ್ವರನ ಜ್ಞಾನಾದಿಗಳು ನಿತ್ಯವಾಗಿವೆ. ಕಾರ್ಯತ್ವಹೇತುವಿನ ಪಕ್ಷಧರ್ಮತಾಸಾಮರ್ಥ್ಯದಿಂದ ಜ್ಞಾನಾದಿಗಳು ನಿತ್ಯವೆಂದೇ ಸಿದ್ಧವಾಗುತ್ತವೆ. ಅದರಿಂದಾಗಿ ಈಶ್ವರನಿಗೆ ಶರೀರಸಂಬಂಧದ ಅಗತ್ಯವಿಲ್ಲ.

**ಪೂರ್ವಪಕ್ಷನಿರಾಸ**-ಹೇಗೆ ನಿತ್ಯಜ್ಞಾನಾದಿಗಳು ಶರೀರಸಾಪೇಕ್ಷಗಳಲ್ಲವೋ, ತುಲ್ಯನ್ಯಾಯೇನ, ಪಕ್ಷಧರ್ಮತಾಬಲಾತ್ ನಿತ್ಯಕೃತಿಯೇ ಸಿದ್ಧವಾಗುವುದರಿಂದ ಅದು ಜ್ಞಾನೇಚ್ಛಾಸಾಪೇಕ್ಷವೂ ಅಲ್ಲ. ಆದ್ದರಿಂದ ಜ್ಞಾನೇಚ್ಛಾಗಳು ಸಿದ್ಧವಾಗುವುದಿಲ್ಲ, ಎಂದು ಮುಂದಿನ ''ಆತ್ಮನಃ'' ಇತ್ಯಾದಿ ಮೂಲದಲ್ಲಿ ಹೇಳಲಾಗಿದೆ.

## ನ್ಯಾಯದೀಪ

**नन्वस्तु कार्यत्वेन कृतेरिव स्वातन्त्र्येण ज्ञानादिसिद्धिः । शरीरजन्यत्वोपाधेः साध्यव्याप्यहेत्वव्यापकत्वेन निराससम्भवादिति भावेनाशङ्क्य निराह—नचेति । यद्वा ज्ञानेच्छयोः सिद्धिः किं**

**कृत्यानुषङ्गिकत्वेन, उत स्वातन्त्र्येण, अथ ज्ञातस्यैव कृतिविषयत्वात् कृतेः स्वतोऽर्थासम्बद्धत्वाद् विषयेण सह कृतेः प्रत्यासत्तित्वेन ? आद्यस्योत्तरं—आत्मन इत्यादि। द्वितीयमाशङ्क्य निराह—न चेत्यादि। आत्मसंयोग इति। आत्मनो विभुत्वेन त्वन्मते सदा संयोगादिति भावः। तृतीयमाशङ्क्य निराह–नच कृतेरिति। अतिप्रसङ्गादिति। चैत्रकृतौ मैत्रज्ञानस्यापि तथात्वापत्तेरिति भावः ।।**

ಕೃತಿಹೇತುತಯಾ ಈಶ್ವರನಲ್ಲಿ ಜ್ಞಾನೇಚ್ಛೆಗಳು ಸಿದ್ಧವಾಗದಿದ್ದರೂ ಕಾರ್ಯತ್ವ ಹೇತುವಿನಿಂದ ಕೃತಿಯು ಸಿದ್ಧವಾಗುವಂತೆ, ಸ್ವಾತಂತ್ರ್ಯೇಣ ಕಾರ್ಯಹೇತುತಯಾ ಜ್ಞಾನಾದಿಗಳೂ ಸಿದ್ಧವಾಗುತ್ತವೆ. ಇದಕ್ಕೆ ಶರೀರಜನ್ಯತ್ವವು ಉಪಾಧಿಯಾಗುವುದಿಲ್ಲ. ಅದು ಸಾಧ್ಯವಾಗಿರುವ ಜ್ಞಾನಜನ್ಯತ್ವ ವ್ಯಾಪ್ಯವಾದ ಹೇತುವಿಗೆ ಅವ್ಯಾಪಕವಾದುದರಿಂದ ಸಾಧ್ಯಕ್ಕೂ ಅವ್ಯಾಪಕವಾಗುತ್ತದೆ. ಹೀಗೆ ನೈಯಾಯಿಕರು ಮಾಡಬಹುದಾದ ಆಕ್ಷೇಪಕ್ಕೆ "ನ ಚ" ಎಂಬ ಮೂಲದಲ್ಲಿ ಸಮಾಧಾನವಿದೆ. ಅದರ ಅಭಿಪ್ರಾಯ ಹೀಗೆ–ಕೃತಿಗೆ ಕಾರಣತ್ವ ಸಿದ್ಧವಾದಂತೆ ಜ್ಞಾನ ಮತ್ತು ಇಚ್ಛೆಗಳಿಗೆ ಕಾರ್ಯಂ ಪ್ರತಿ ಕಾರಣತ್ವವು ಇಲ್ಲ. ಕೃತಿ ಇದ್ದಾಗ ಜ್ಞಾನಾದಿವ್ಯತಿರೇಕೇಣ ಕಾರ್ಯವ್ಯತಿರೇಕವು ದೃಷ್ಟವಲ್ಲ. ಆದರಿಂದಾಗಿ ಜ್ಞಾನ ಮತ್ತು ಇಚ್ಛೆ ಕಾರ್ಯಜನಕವಲ್ಲ. ಕಾರ್ಯತ್ವಹೇತುವಿನಿಂದ ಜ್ಞಾನ ಮತ್ತು ಇಚ್ಛೆಗಳು ಸಿದ್ಧವಾಗವುದಿಲ್ಲ.

ಅಥವಾ "ಆತ್ಮನಃ ಶರೀರಸಂಬಂಧೇ..." ಇತ್ಯಾದಿ ಗ್ರಂಥಕ್ಕೆ ಹೀಗೂ ಅಭಿಪ್ರಾಯವನ್ನು ಹೇಳಬಹುದು—ಈಶ್ವರನಿಗೆ ಜ್ಞಾನೇಚ್ಛೆಗಳೂ ಇವೆ ಎಂದು ಮೂರು ವಿಧದಿಂದ ಸಾಧಿಸಬಹುದು—

1. ಕೃತಿಯು ಜ್ಞಾನ ಮತ್ತು ಇಚ್ಛಾಪೂರ್ವಕವಾಗಿಯೇ ಇರುವುದರಿಂದ ಈಶ್ವರನಲ್ಲಿ ಕೃತಿ ಇರುವುದಾದಲ್ಲಿ ಜ್ಞಾನೇಚ್ಛೆಗಳೂ ಇರಬೇಕು.

2. ಕಾರ್ಯಕ್ಕೆ ಕೃತಿಯು ಹೇಗೆ ಸ್ವಾತಂತ್ರ್ಯೇಣ ಕಾರಣವೋ ಅದರಂತೆ, ಜ್ಞಾನ ಮತ್ತು ಇಚ್ಛೆಗಳೂ ಕಾರಣ.

3. ಜ್ಞಾತವಸ್ತುವೇ ಕೃತಿವಿಷಯವಾದುದರಿಂದ ಕೃತಿಗೆ ಸಾಕ್ಷಾತ್ ವಿಷಯಸಂಬಂಧವು ಇಲ್ಲ. ಜ್ಞಾನದ ಮೂಲಕವೇ ವಿಷಯಸಂಬಂಧವಾಗಬೇಕು.

1. ಮೊದಲನೆಯ ಕಾರಣದ ನಿರಾಸಕ "ಆತ್ಮನಃ..." ಎಂಬ ವಾಕ್ಯ. ಅನಿತ್ಯಕೃತಿಯು ಮಾತ್ರ ಜ್ಞಾನಜನ್ಯವಾದುದರಿಂದ ಜ್ಞಾನಪೂರ್ವಕ. ನಿತ್ಯಕೃತಿಗೆ ಜ್ಞಾನದ ಅಪೇಕ್ಷೆ ಇಲ್ಲ. ಆದ್ದರಿಂದ ಈಶ್ವರನ ನಿತ್ಯಕೃತಿಯು ಜ್ಞಾನಪೂರ್ವಕವಲ್ಲ.

2. ಎರಡನೆಯ ಆಶಂಕೆಯನ್ನು ಮಾಡಿ ಅದಕ್ಕೆ ಸಮಾಧಾನ ಕೊಡಲು "ನಚ" ಎಂಬ ಮೂಲಗ್ರಂಥ. ಜ್ಞಾನವ್ಯತಿರೇಕೇಣ ಕಾರ್ಯವ್ಯತಿರೇಕ ಕಂಡಿಲ್ಲದಿರುವುದರಿಂದ ಜ್ಞಾನವು ಕಾರ್ಯಕ್ಕೆ ಸಾಕ್ಷಾತ್ ಕಾರಣವಲ್ಲ, ಎಂದು ಆ ಗ್ರಂಥದ ಭಾವ.

3. ಮೂರನೆಯ ಆಶಂಕೆ ಮಾಡಿ ಸಮಾಧಾನ ನೀಡುವ ಗ್ರಂಥ 'ನ ಚ ಕೃತೇಃ' ಇತ್ಯಾದಿ. ಜ್ಞಾನದಂತೆ ಕೃತಿಗೂ ಸಾಕ್ಷಾತ್ ವಿಷಯಸಂಬಂಧವಿದೆ, ಎಂದು ಅದರ ಅರ್ಥ.

## ನ್ಯಾಯದೀಪ

**नन्वस्त्वतिप्रसङ्गभिया जन्यकृतावन्यत्र जनकज्ञानस्य प्रत्यासत्तित्वम्। एवंच ज्ञानस्य कृतिप्रत्यासत्तित्वे क्वचित् सिद्धे सति इहागत्यानीदृशस्याप्यस्तु प्रत्यासत्तित्वमित्यतोऽन्यत्रापि तन्नास्तीत्याह– तज्जनकेति । अनन्यगत्या अस्तु नष्टस्यापि तथात्वमित्यत आह–ज्ञान इति । उक्तं च "न प्रयोजनवत्त्वात्" इत्यधिकरणसुधायाम्—**

**"महातात्पर्ययुक्तेश्च"**

**इत्येतद् व्याख्यावसरे "प्रयत्नस्य विषयनियमार्थं बुद्धिरेष्टव्येति चेन्न बुद्धिवत्स्वतोविषयप्रवणतोपपत्तेः इति" इति भावः ।**

ಮೂಲದಲ್ಲಿ ಸ್ವಜನಕಜ್ಞಾನವೇ ಕೃತಿಗೆ ವಿಷಯಪ್ರತ್ಯಾಸತ್ತಿಯಾದುದರಿಂದ, ಈಶ್ವರಕೃತಿಯು ನಿತ್ಯವಾದುದರಿಂದ, ಅದಕ್ಕೆ ಜ್ಞಾನದ್ವಾರಕ ಸಂಬಂಧದ ಅಗತ್ಯವಿಲ್ಲ ಎನ್ನಲಾಗಿದೆ. ಇದರ ಮೇಲೆ ಹೀಗೆ ಆಕ್ಷೇಪಮಾಡಬಹುದು–ಕೃತ್ಯಜನಕ ಜ್ಞಾನವು ಜನ್ಯಕೃತಿಗೆ ವಿಷಯಪ್ರತ್ಯಾಸತ್ತಿ ಎಂದರೆ ಅತಿಪ್ರಸಂಗ ಇರುವುದರಿಂದ ಸ್ವಜನಕಜ್ಞಾನವೇ ಪ್ರತ್ಯಾಸತ್ತಿ ಎಂದು ಒಂದುಕಡೆ ಸಿದ್ಧವಾದ ಮೇಲೆ ಈಶ್ವರೀಯಕೃತಿಯು ಅಜನ್ಯವಾದರೂ ಅದಕ್ಕೂ ಜ್ಞಾನದ್ವಾರಾ ವಿಷಯಪ್ರತ್ಯಾಸತ್ತಿ ಎಂದು ಅನಿವಾರ್ಯವಾಗಿ ಕಲ್ಪಿಸಬೇಕು. ಆದ್ದರಿಂದ ಈಶ್ವರನಿಗೆ ಜ್ಞಾನಾದಿಗಳೂ ಸಿದ್ಧವಾಗುತ್ತವೆ, ಎಂದು.

ಇದಕ್ಕೆ ಮೂಲದಲ್ಲಿ ಹೇಳಿರುವ ಸಮಾಧಾನ— ಅನಿತ್ಯಕೃತಿಗೂ ಜ್ಞಾನದ ಮೂಲಕ ವಿಷಯಸಂಬಂಧವಲ್ಲ, ಏಕೆಂದರೆ, ಕೃತಿಕಾಲದಲ್ಲಿ ಜ್ಞಾನವು ನಾಶವಾಗಿರುತ್ತದೆ, ಎಂದು.

**ಆಕ್ಷೇಪ**—ಜ್ಞಾನವು ನಾಶವಾಗಿದ್ದರೂ ಅನಿವಾರ್ಯವಾದುದರಿಂದ ಅದನ್ನೇ ಕೃತಿಗೆ ಪ್ರತ್ಯಾಸತ್ತಿ ಎಂದು ಹೇಳಬೇಕು.

**ಸಮಾಧಾನ**—ಅನಿವಾರ್ಯತೆ ಇಲ್ಲ. ಜ್ಞಾನದಂತೆ ಕೃತಿಗೂ ವಿಷಯದೊಂದಿಗೆ ಸಾಕ್ಷಾತ್ ಸಂಬಂಧವನ್ನು ಹೇಳಬಹುದು. ಇದನ್ನು 'ನ ಪ್ರಯೋಜನವತ್ತ್ವಾತ್' (2.1.4) ಎಂಬ ಅಧಿಕರಣದ ಸುಧಾದಲ್ಲಿ ''ಮಹಾತಾತ್ಪರ್ಯಯುಕ್ತೇಶ್ಚ'' ಎಂಬ ಅನುವ್ಯಾಖ್ಯಾನವನ್ನು ವಿವರಿಸುವ ಸುಧಾದಲ್ಲಿ ಹೀಗೆ ಹೇಳಲಾಗಿದೆ— ಪ್ರಯತ್ನಕ್ಕೆ 'ಇದೇ ವಿಷಯ' ಎಂದು ನಿರ್ದಿಷ್ಟವಿಷಯಕತ್ವಸಿದ್ಧಿಗಾಗಿ ಜ್ಞಾನವೂ ಸಿದ್ಧವಾಗುತ್ತದೆ ಎನ್ನುವುದು ಸರಿಯಲ್ಲ. ಜ್ಞಾನದಂತೆ ಯತ್ನವೂ ಸವಿಷಯಕವಾಗ ಬಹುದು, ಎಂದು.

**किंचास्तु कृतिप्रत्यासत्तित्वेन ज्ञानसिद्धिः । इच्छा तु कथं सिद्ध्येत् । तथा च त्वदुक्तत्रितयविपरीतद्वितयवत्त्वेनाप्यनुमितिः स्यात् ।।**

ಅಥವಾ, ಕೃತಿಗೆ ಜ್ಞಾನದ್ವಾರಾ ಸಂಬಂಧ, ತಥಾಚ ಕೃತಿಸಂಬಂಧ ಘಟಕತ್ವೇನ ಜ್ಞಾನವು ಸಿದ್ಧವಾಗುತ್ತದೆ, ಎಂದೇ ಅಂಗೀಕರಿಸೋಣ. ಆದರಿಂದಾಗಿ ಈಶ್ವರನಿಗೆ ಜ್ಞಾನವೂ ಸಿದ್ಧವಾಗಲಿ. ಇಚ್ಛೆ ಇದೆ, ಎಂದು ಸಿದ್ಧವಾಗುವುದು ಹೇಗೆ? ಹೀಗಾಗಿ ನೀವು ಹೇಳುವಂತೆ ಗುಣತ್ರಯ ಸಿದ್ಧಿಗೆ ವಿಪರೀತವಾಗಿ ಗುಣದ್ವಯವಷ್ಟೇ ಅನುಮಾನದಿಂದ ಸಿದ್ಧವಾದೀತು. ('ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್')

## ನ್ಯಾಯದೀಪ

**कथं सिध्येदिति ।** किं कृत्यानुषङ्गिकत्वेनाथ स्वातन्त्र्येणोत कृतिप्रत्यासत्तित्वेन । न पक्षत्रयमपि सम्भवति । पूर्वोक्तदोषादिति भावः ।।

ಇಚ್ಛೆಯು ಹೇಗೆ ಸಿದ್ಧವಾಗುತ್ತದೆ? ಎಂದು ಮೂಲದಲ್ಲಿ ಆಕ್ಷೇಪಿಸಲಾಗಿದೆ. ಅದರ ಅಭಿಪ್ರಾಯ ಇದು—ಕೃತಿಗೆ ಆನುಷಂಗಿಕವಾಗಿ ಅಥವಾ, ಕಾರ್ಯಕ್ಕೆ ಸ್ವತಂತ್ರ ಕಾರಣವಾಗಿ ಇಲ್ಲವೆ, ಕೃತಿಸಂಬಂಧ ಘಟಕವಾಗಿ ಇಚ್ಛೆಯು ಸಿದ್ಧವಾಗಬೇಕು. ಈ ಮೂರೂ ರೀತಿಯಿಂದ ಜ್ಞಾನದ ಅಗತ್ಯವಿಲ್ಲ ಎಂದು ಈಗಾಗಲೇ ತಿಳಿಸಲಾಗಿದೆ. ಅದು ಇಚ್ಛೆಗೂ ಅನ್ವಯಿಸುತ್ತದೆ. ಆದ್ದರಿಂದ ಇಚ್ಛೆಯ ಅಗತ್ಯವಿಲ್ಲ.

### ಅವತಾರಿಕೆ

एवं कार्यत्वहेतोः सोपाधिकत्वमुक्त्वा सत्प्रतिपक्षतां चाह—**किञ्चे-त्यादिना ।**

ಹೀಗೆ ಕಾರ್ಯತ್ವಹೇತುವು ಸೋಪಾಧಿಕವಾಗಿದೆ ಎಂದು ಇದುವರೆಗೆ ನಿರೂಪಿಸಿ ಮುಂದೆ ಸತ್ಪ್ರತಿಪಕ್ಷದೋಷವನ್ನು ಹೇಳುತ್ತಾರೆ.

## ಈಶ್ವರಾನುಮಾನಕ್ಕೆ ಸತ್ಪ್ರತಿಪಕ್ಷದೋಷ

**किञ्चोपाधेर्व्यभिचारोन्नायकत्वपक्षे, त्वदुक्तसकर्तृकत्वविपरीताकर्तृकत्वस्य शरीराजन्यत्वेनाप्यनुमातुं शक्यत्वात्वत् प्रतिपक्षता। नच कर्त्रजन्यत्वेऽजन्यत्वस्यैव तन्त्रत्वादप्रयोजको हेतुः। शरीरजन्यत्वे कर्तृजन्यत्वं वावच्छेदकं, कर्तृजन्यत्वे कार्यत्वं वेति संदेहस्योपपादितत्वेन स्थापनाहेतुतौल्यात् ॥**

ಈಶ್ವರಾನುಮಾನಕ್ಕೆ ಸತ್ಪ್ರತಿಪಕ್ಷದೋಷವೂ ಇದೆ—ಈ ಹಿಂದೆ ಉಪಾಧಿದೋಷವನ್ನು ಹೇಳಲಾಗಿದೆ. ಉಪಾಧ್ಯಭಾವದಿಂದ ಪಕ್ಷದಲ್ಲಿ ಸಾಧ್ಯಾಭಾವವನ್ನು ಸಾಧಿಸಬಹುದು. ಹೀಗೆ ಉಪಾಧಿದೋಷವನ್ನು ಹೇಳಿರುವುದರಿಂದ ಸತ್ಪ್ರತಿಪಕ್ಷದೋಷವನ್ನು ಹೇಳಿದಂತಾಗಿದೆ. ಆದರೆ, ಮಣಿಕಾರ ಉಪಾಧಿಯು ವ್ಯಭಿಚಾರೋನ್ನಾಯಕ ಎಂದು ಹೇಳಿರುವುದರಿಂದ ಅದನ್ನು ಅಂಗೀಕರಿಸಿ ಇಲ್ಲಿ ಸತ್ಪ್ರತಿಪಕ್ಷದೋಷವನ್ನು ಹೇಳಲಾಗಿದೆ. ನೈಯಾಯಿಕರು ಕಾರ್ಯತ್ವಹೇತುವಿನಿಂದ ಸಾಧಿಸುವ ಸಕರ್ತೃಕತ್ವಕ್ಕೆ ವಿರುದ್ಧವಾಗಿ ಶರೀರಾಜನ್ಯತ್ವ ಹೇತುವಿನಿಂದ ಅಕರ್ತೃಕತ್ವವನ್ನೂ ಸಾಧಿಸಬಹುದು.

''ವಿಮತಂ ಅಕರ್ತೃಕಂ ಶರೀರಾಜನ್ಯತ್ವಾತ್, ಗಗನವತ್'' ಎಂದು ಪ್ರತಿಪಕ್ಷಾನುಮಾನ.

**ಆಕ್ಷೇಪ**—ಕರ್ತೃವಿನಿಂದ ಅಜನ್ಯವಾಗಿರುವುದಕ್ಕೆ ಅಜನ್ಯತ್ವವೇ ಪ್ರಯೋಜಕ. ಅಜನ್ಯವಾದುದರಿಂದ ಗಗನಾದಿಗಳು ಕರ್ತೃ–ಅಜನ್ಯವಾಗಿವೆ. ಆದರಿಂದ ಶರೀರಾಜನ್ಯತ್ವವು ಪ್ರಯೋಜಕವಲ್ಲ.

**ಸಮಾಧಾನ**—ಹಿಂದೆ (ಪು.282) ಕರ್ತೃಜನ್ಯತ್ವವೇ ಶರೀರಜನ್ಯತ್ವಾವಚ್ಛೇದಕವೋ ಅಥವಾ ಕಾರ್ಯತ್ವವು ಕರ್ತೃಜನ್ಯತಾವಚ್ಛೇದಕವೊ, ಎನ್ನುವುದಕ್ಕೆ ನಿಯಾಮಕವಿಲ್ಲ, ಎಂದು ಹೇಳಲಾಗಿದೆ. ನೈಯಾಯಿಕರು ಕಾರ್ಯತ್ವಾವಚ್ಛೇದೇನ ಕರ್ತೃಜನ್ಯತ್ವ ಇದೆ ಎಂದು ಹೇಳಿ ಕಾರ್ಯತ್ವದಿಂದ ಕರ್ತೃಜನ್ಯತ್ವವನ್ನು ಸಾಧನೆ ಮಾಡುತ್ತಾರೆ. ನಾವು ಕರ್ತೃಜನ್ಯತ್ವಾವಚ್ಛೇದೇನ ಶರೀರಜನ್ಯತ್ವವು ಇದೆ ಎಂದು ಹೇಳುತ್ತೇವೆ. ಇವೆರಡರಲ್ಲಿ ಇಂತಹುದನ್ನೇ ಹೇಳಬೇಕು, ಎನ್ನುವುದಕ್ಕೆ ವಿನಿಗಮಕವೇನೂ ಇಲ್ಲ. ನಾವು ಹೇಳುವಂತೆ ಶರೀರಜನ್ಯತ್ವವು ಕರ್ತೃಜನ್ಯತ್ವಕ್ಕೆ ವ್ಯಾಪಕ. 'ವ್ಯಾಪಕಾಭಾವಾತ್ ವ್ಯಾಪ್ಯಾಭಾವಃ.' ಶರೀರಜನ್ಯತ್ವವು ಜಗತ್ತಿನಲ್ಲಿ ಇಲ್ಲದಿರುವುದರಿಂದ ಕರ್ತೃಜನ್ಯತ್ವವೂ ಇಲ್ಲ ಎಂದು ಸಾಧಿಸಬಹುದು. ತಾರ್ಕಿಕಮತದಂತೆ, ಕಾರ್ಯತ್ವರೂಪ ವ್ಯಾಪ್ಯಧರ್ಮವು ಜಗತ್ತಿನಲ್ಲಿ

ಇರುವುದರಿಂದ ಕರ್ತೃಜನ್ಯತ್ವವನ್ನೂ ಸಾಧಿಸಬಹುದು. ಆದ್ದರಿಂದ ನಮ್ಮ ಪ್ರತಿಪಕ್ಷಾನುಮಾನವು ನೈಯಾಯಿಕರ ಸಾಧನಾನುಮಾನಕ್ಕೆ ಸಮಬಲವಾಗಿದೆ. ಆದ್ದರಿಂದ ಸತ್ಪ್ರತಿಪಕ್ಷದೋಷ ಬರುತ್ತದೆ.

## ನ್ಯಾಯದೀಪ

**ननु प्रमाणलक्षणे ''स एवोपाधिदोषोऽपि'' इत्युक्तोपाधेः प्रतिपक्षत्वेनैव दोषत्वोपगमात्, प्राचीनन्यायमते तथैवाभ्युपगमाच्चोपाध्युक्त्यैव तद्व्यतिरेकरूपप्रतिपक्षस्योक्तत्वात् किंचेति दोषान्तरतयोक्तिरयुक्तेत्यत आह—व्यभिचारेति । मणिकृन्मते[1] व्यभिचारोन्नायकत्वोपगमेनोपाध्युक्त्या हेतोर्व्यभिचारबुद्धेरेवोदयेन प्रतिपक्षबुद्धेरनुदयादिति भावः । विपरीतेति । विमतं क्षित्यादि अकर्तृकं शरीराजन्यत्वाद् गगनवदित्यनुमातुं शक्यत्वादित्यर्थः । अत्र शरीराजन्यत्वमदृष्टाद्वारकशरीरजन्यत्वाभावो ध्येयः । तेनादृष्टद्वाराऽस्मदादिशरीरजन्यत्वादसिद्धिरिति शङ्कानवकाशः ।**

ಆಚಾರ್ಯರು ಪ್ರಮಾಣಲಕ್ಷಣದಲ್ಲಿ ಸತ್ಪ್ರತಿಪಕ್ಷವನ್ನು ಉಲ್ಲೇಖಿಸಿ ''ಸ ಏವೋಪಾಧಿದೋಷೋಽಪಿ'' ಎಂದು ಉಪಾಧಿದೋಷವೂ ಸತ್ಪ್ರತಿಪಕ್ಷದಲ್ಲೇ ಸೇರುತ್ತದೆ ಎಂದಿರುತ್ತಾರೆ. ಈ ಹಿಂದೆ ಈಶ್ವರಾನುಮಾನಕ್ಕೆ ಉಪಾಧಿದೋಷವನ್ನು ಹೇಳಲಾಗಿದೆ. ಅದರಿಂದಲೇ ಸತ್ಪ್ರತಿಪಕ್ಷದೋಷವನ್ನೂ ಹೇಳಿದಂತಾಗಿದೆ. ಪ್ರಾಚೀನ ತಾರ್ಕಿಕರೂ ಹೀಗೆಯೇ ಹೇಳುತ್ತಾರೆ. ಆದ್ದರಿಂದ ಉಪಾಧಿದೋಷವನ್ನು ಹೇಳಿರುವುದರಿಂದಾಗಿಯೇ ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧನೆ ಮಾಡಬಹುದಾದ್ದರಿಂದ ಸತ್ಪ್ರತಿಪಕ್ಷವನ್ನೂ ಹೇಳಿದಂತಾಗಿದೆ. ಮತ್ತೆ ಇಲ್ಲಿ ಅದೇ ದೋಷವನ್ನು ಏಕೆ ಹೇಳಬೇಕು? ಇದು 'ಕಿಂಚ' ಎಂದು ಮೂಲದಲ್ಲಿ ಹೇಳಿರುವ ದೋಷಾಂತರವಾಗುವುದಾದರೂ ಹೇಗೆ? ಈ ಆಕ್ಷೇಪಕ್ಕೆ ಮೂಲದಲ್ಲಿ ''ವ್ಯಭಿಚಾರೋನ್ನಾಯಕತ್ವ ಪಕ್ಷೇ'' ಎಂದು ಸಮಾಧಾನವನ್ನು ಹೇಳಲಾಗಿದೆ. ಪ್ರಾಚೀನರು ಉಪಾಧಿದೋಷವನ್ನು ಸತ್ಪ್ರತಿಪಕ್ಷದಲ್ಲಿ ಸೇರಿಸಿದ್ದರೂ ಮಣಿಕಾರ ಉಪಾಧಿಗ್ರಂಥದಲ್ಲಿ ಅದನ್ನು ವ್ಯಭಿಚಾರೋನ್ನಾಯಕ ಎಂದು ಹೇಳಿರುವುದರಿಂದ ಮೂಲದಲ್ಲಿ ಸತ್ಪ್ರತಿಪಕ್ಷವನ್ನು ದೋಷಾಂತರವೆಂದು ಪರಿಗಣಿಸಲಾಗಿದೆ.

---

१. तस्मात् उपाधिनिश्चयात् व्यभिचारनिश्चयः । तत्संशयात् तत्संशयः इति व्यभिचारज्ञानद्वारा साध्यव्यापकाव्यापकत्वेन व्याप्तिविरहोन्नायकतया वा उपाधेर्दूषकत्वम् । (मणि-उपाधिप्रकरण)

ಮೂಲದಲ್ಲಿ ಶರೀರಾಜನ್ಯತ್ವ ಹೇತುವಿನಿಂದ ಪಕ್ಷದಲ್ಲಿ ಕರ್ತ್ರಜನ್ಯತ್ವವನ್ನು ಸಾಧನೆ ಮಾಡಲಾಗಿದೆ. ಆದರೆ, ಕ್ಷಿತ್ಯಾದಿಗಳು ಅದೃಷ್ಟದ್ವಾರಾ ಅಸ್ಮದಾದಿ ಶರೀರ ಜನ್ಯವೇ ಆಗಿವೆ. ಆದ್ದರಿಂದ ಹೇತ್ವಸಿದ್ಧಿದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಅದೃಷ್ಟಾದ್ವಾರಕ ಶರೀರಾಜನ್ಯತ್ವವನ್ನೇ ಹೇತುವನ್ನಾಗಿ ಮಾಡಬೇಕು.

## ನ್ಯಾಯದೀಪ

**अप्रयोजक इति ।** **अकर्तृत्वे अजन्यमात्रस्य प्रयोजकत्वादिति भावः ।** **'सन्देहस्ये'ति प्रतिपक्षतानिर्वाहायोक्तम् । वस्तुतस्तु कर्तृजन्यत्वे कार्यत्वं नावच्छेदकम् । तेन विनापि तस्योपपत्तेः। अन्यथा कर्मजन्यतावच्छेदकमपि कार्यत्वं स्यादित्यादिना कार्यत्वहेतोरप्रयोजकत्वस्योक्तत्वादिति ।** **तौल्यादिति ।** **तथाच नाप्रयोजकत्वमिति भावः ।।**

ಅಜನ್ಯತ್ವವೇ ಕರ್ತೃರಹಿತತ್ವಕ್ಕೆ ಪ್ರಯೋಜಕ, ಹೊರತು ಶರೀರಾಜನ್ಯತ್ವವಲ್ಲ. ಆದ್ದರಿಂದ ಕ್ಷಿತ್ಯಾದಿಗಳಲ್ಲಿ ಶರೀರಾಜನ್ಯತ್ವವಿದ್ದರೂ ಅಕರ್ತೃಕತ್ವವು ಇರಬೇಕಾಗಿಲ್ಲವಾದ ಕಾರಣ, ಪ್ರತಿಪಕ್ಷಾನುಮಾನವು ಅಪ್ರಯೋಜಕ, ಎಂದು ನೈಯಾಯಿಕರ ಆಕ್ಷೇಪ. ಇದಕ್ಕೆ ಮೂಲದಲ್ಲಿ, ಪ್ರತಿಪಕ್ಷಾನುಮಾನವು ಸಾಧ್ಯನಿಶ್ಚಾಯಕವಾಗದಿದ್ದರೂ ಸಾಧ್ಯಸಂದೇಹಜನಕವಾಗಿದೆ, ಎಂದು ಸಮಾಧಾನವನ್ನು ಹೇಳಲಾಗಿದೆ. ಅದು ಪ್ರತಿಪಕ್ಷತಾ ನಿರ್ವಾಹಕ್ಕಾಗಿ ಹೇಳಿರುವ ಅಭ್ಯುಪಗಮವಾದ ಮಾತ್ರ. ವಸ್ತುತಃ ಅದು ಅಕರ್ತೃಕತ್ವರೂಪವಾದ ಸಾಧ್ಯಕ್ಕೆ ನಿಶ್ಚಾಯಕವೇ ಆಗಿದೆ. ಹೇಗೆಂದರೆ— ಹಿಂದೆ ಕರ್ತೃಜನ್ಯತಾವಚ್ಛೇಕ ಕಾರ್ಯತ್ವ ಎಂದು ನಿರ್ಧರಿಸಲಾಗುವುದಿಲ್ಲ. ಕ್ಷಿತ್ಯಾದಿಗಳು ಕಾರ್ಯಗಳಾದರೂ ಅವುಗಳಿಗೆ ಒಬ್ಬ ಕರ್ತೃ ಸಿದ್ಧವಾಗಿಲ್ಲ. ಹೀಗಾಗಿ ಕಾರ್ಯತ್ವಾವಚ್ಛೇದೇನ ಕರ್ತೃಜನ್ಯತ್ವವನ್ನು ನಿರ್ಧರಿಸಲಾಗದು. ಕ್ವಚಿತ್ ಘಟಾದಿಗಳಲ್ಲಿ ದರ್ಶನ ಮಾತ್ರದಿಂದ ಹಾಗೆ ನಿರ್ಧರಿಸುವುದಾದಲ್ಲಿ ಗಮನಾದಿಕ್ರಿಯೆಗಳೂ ಕರ್ಮಜನ್ಯವೆಂದು ದೃಷ್ಟವಾದುದರಿಂದ ಕಾರ್ಯತ್ವವು ಕರ್ಮಜನ್ಯತಾವಚ್ಛೇದಕ ಎಂದು ನಿರ್ಧರಿಸಿ ಶಯನಾಸನಾದಿಕ್ರಿಯೆಗಳೂ ಸಕರ್ಮಕಗಳಾಗಬೇಕಾದೀತು, ಎಂದು ಆಪಾದಿಸಿ ಕಾರ್ಯತ್ವಹೇತುವು ಅಪ್ರಯೋಜಕ, ಎಂದು ಹೇಳಲಾಗಿದೆ.

## ಅವತಾರಿಕೆ

अपिच ''शरीरजन्यत्वे व्यर्थविशेषणत्वम् । लाघवेनाजन्यत्वस्यैव

व्याप्यत्वात्'' इत्यादिना मण्याद्युक्तं निष्कृष्यानुवदति—**अथ मत मित्यादिना अत्रोच्यते इत्यन्तेन ।**

ಮಣಿಗ್ರಂಥದಲ್ಲಿ (ಪು.61) ಹೀಗೆ ಉಪಾಧಿಯನ್ನು ನಿರಾಕರಿಸಲಾಗಿದೆ- 'ಯತ್ರಾಜನ್ಯತ್ವಂ ತತ್ರ ಕರ್ತ್ರಜನ್ಯತ್ವಂ'' ಎಂದೂ ವ್ಯಾಪ್ತಿಯನ್ನು ಹೇಳಬಹುದು. ''ಯತ್ರ ಶರೀರಾಜನ್ಯತ್ವಂ ತತ್ರ ಕರ್ತ್ರಜನ್ಯತ್ವಂ'' ಎಂದೂ ಹೇಳಬಹುದು. ಮೊದಲಪಕ್ಷದಲ್ಲಿ 'ಅಜನ್ಯತ್ವವು' ವ್ಯಾಪ್ಯ, ವ್ಯಾಪ್ಯತಾವಚ್ಛೇದಕ ಅಜನ್ಯತ್ವತ್ವ. ಇದು ಲಘುಧರ್ಮ. ಎರಡನೆಯ ಪಕ್ಷದಲ್ಲಿ ಶರೀರಾಜನ್ಯತ್ವವು ವ್ಯಾಪ್ಯ, ವ್ಯಾಪ್ಯತಾವಚ್ಛೇದಕ ಶರೀರಾಜನ್ಯತ್ವ. ಇದು ಗುರುಧರ್ಮ. ಇವೆರಡರಲ್ಲಿ ಅಜನ್ಯತ್ವವೇ ಲಘುವಾದ್ದರಿಂದ ವ್ಯಾಪ್ಯ. ಶರೀರಾಜನ್ಯತ್ವವು ಗುರುಧರ್ಮವಾದ್ದರಿಂದ ವ್ಯಾಪ್ಯವೇ ಅಲ್ಲ ಎಂದು. ಈ ಆಕ್ಷೇಪವನ್ನು 'ಅಥ ಮತಂ' ಎಂಬ ವಾಕ್ಯವನ್ನು ಆರಂಭಿಸಿ 'ಮೈವಂ' ಎನ್ನುವಲ್ಲಿವರೆಗೆ ಅನುವಾದ ಮಾಡಲಾಗಿದೆ.

**अथ मतं, आकाशादावजन्यत्वस्यैवाकर्तृकत्वेन व्याप्ति-ग्रहाच्छरीरविशिष्टे तस्मिंस्तदभावाद् व्याप्यत्वासिद्धिः । तथाच विशेषणविशेष्ययोरेकैव व्याप्तिर्व्यासज्यवृत्तिरिति वा विशिष्टव्याप्तिशब्दार्थः, विशेष्यनिष्ठैव व्याप्तिर्विशेषणेनावच्छिद्यत इति वा । तत्र व्यासज्यवृत्तित्वे केवलविशेष्यावृत्तित्वासंभवो हेतुः । विशेषणेनावच्छेद्यत्वे तु विशेष्यतावच्छेदकस्य व्याप्यतावच्छे-दकत्वासम्भवः। प्रकृते तु नोभयम् । व्याप्तौ केवलविशेष्य-रूपाजन्यत्वनिष्ठतायाः विशेष्यत्वावच्छेदकावच्छिन्नतायाश्च सम्भवात् । नच व्याप्तिवत् पक्षधर्मताया अप्यनुमित्यङ्गत्वात् तत्सिद्ध्यर्थं विशेषणमिति वाच्यम् । व्याप्तिसमानाधिकरणाया एव तस्या अङ्गत्वेनात्र विशेष्यनिष्ठव्याप्तिव्यधिकरणाया विशिष्टवृत्ति-पक्षधर्मताया अनङ्गत्वात् ।।**

ಆಕಾಶಾದಿ ನಿತ್ಯಪದಾರ್ಥಗಳಲ್ಲಿ ಅಜನ್ಯತ್ವವೇ ಅಕರ್ತೃಕತ್ವಕ್ಕೆ ವ್ಯಾಪ್ಯ ಎಂದು ನಿಶ್ಚಿತವಾಗಿದೆ. ಶರೀರವಿಶೇಷಣವಿಶಿಷ್ಟವಾದ ಶರೀರಾಜನ್ಯತ್ವವು ಗುರುವಾದ್ದರಿಂದ ಅದರಲ್ಲಿ ವ್ಯಾಪ್ಯತ್ವವು ಗ್ರಹೀತವಾಗುವುದಿಲ್ಲ. ಆದ್ದರಿಂದ ಶರೀರಜನ್ಯತ್ವ ಹೇತುವು ವ್ಯಾಪ್ಯತ್ವಾಸಿದ್ಧಿದೋಷಗ್ರಸ್ತವಾಗಿದೆ.

ವ್ಯಾಪ್ಯತ್ವಾಸಿದ್ಧಿಯನ್ನು ಹೀಗೆ ಸಮರ್ಥನೆ ಮಾಡಬಹುದು–ವಿಶಿಷ್ಟದಲ್ಲಿ ವ್ಯಾಪ್ತಿ ಎಂಬುದುದನ್ನು ಎರಡು ರೀತಿಯಲ್ಲಿ ಹೇಳಬಹುದು.

1. ವ್ಯಾಪ್ತಿಯು ವಿಶೇಷಣ ಮತ್ತು ವಿಶೇಷ್ಯ ಎರಡರಲ್ಲಿ ವ್ಯಾಸಜ್ಯವೃತ್ತಿ. ಉದಾಹರಣೆಗೆ– ಶಬ್ದಃ ಅನಿತ್ಯಃ ಭಾವಕಾರ್ಯತ್ವಾತ್, ಎಂಬ ಅನುಮಾನದಲ್ಲಿ ಅನಿತ್ಯತ್ವದ ವ್ಯಾಪ್ತಿ ಭಾವ ವಿಶೇಷಣ ಮತ್ತು ಕಾರ್ಯತ್ವ ಇವೆರಡರಲ್ಲೇ ಪರ್ಯಾಪ್ತ. ಕೇವಲ ಕಾರ್ಯತ್ವವು ಧ್ವಂಸದಲ್ಲಿ ವ್ಯಭಿಚಾರಿ.

2. ವ್ಯಾಪ್ತಿಯು ವಿಶೇಷ್ಯಮಾತ್ರ ನಿಷ್ಠ, ಆ ವ್ಯಾಪ್ತಿಯಲ್ಲಿ ವಿಶೇಷಣವು ಅವಚ್ಛೇದಕ. ಉದಾಹರಣೆಗೆ—ಪರ್ವತಃ ಕೃಷ್ಣಾಗರುವಹ್ನಿಮಾನ್ ಸುರಭಿಧೂಮವತ್ವಾತ್. ಇಲ್ಲಿ ವಹ್ನಿಯ ವ್ಯಾಪ್ತಿ ಧೂಮದಲ್ಲಿ ಮಾತ್ರ ಇದೆ. ಆ ವ್ಯಾಪ್ತಿಯಲ್ಲಿ ಸೌರಭ್ಯವು ಅವಚ್ಛೇದಕ.

ಪ್ರಕೃತದಲ್ಲಿ ಶರೀರಾಜನ್ಯತ್ವವು ಹೇತು. ವ್ಯಾಪ್ತಿಯು ವಿಶೇಷಣ ಮತ್ತು ವಿಶೇಷ್ಯ ಇವೆರಡರಲ್ಲೂ ಪರ್ಯಾಪ್ತವಾಗಿದೆ, ಎಂದು ಮೊದಲನೆಯ ಪಕ್ಷವನ್ನು ಅಂಗೀಕರಿಸಬೇಕು. ಹಾಗೆ ಅಂಗೀಕರಿಸಬೇಕಾದರೆ ವ್ಯಾಪ್ತಿಯು ವಿಶೇಷ್ಯ ಮಾತ್ರದಲ್ಲಿ ಇರಬಾರದು. ಮೇಲೆ ತೋರಿಸಿದ ಉದಾಹರಣೆಯಲ್ಲಿ ಅನಿತ್ಯತ್ವದ ವ್ಯಾಪ್ತಿಯು ಕಾರ್ಯತ್ವರೂಪವಿಶೇಷ್ಯದಲ್ಲಿ ಇಲ್ಲ, ಧ್ವಂಸದಲ್ಲಿ ಕಾರ್ಯತ್ವವು ಇದ್ದರೂ ಅನಿತ್ಯತ್ವ ಇಲ್ಲ. ಆದರಿಂದಾಗಿ ವಿಶೇಷಣ–ವಿಶೇಷ್ಯ ಉಭಯಪರ್ಯಾಪ್ತ, ಎಂದು ಹೇಳಬೇಕು. ಆದರೆ, ಪ್ರಕೃತದಲ್ಲಿ ಅಜನ್ಯತ್ವದಲ್ಲೇ ಕರ್ತೃಜನ್ಯತ್ವದ ವ್ಯಾಪ್ತಿ ಇದೆ. ಆದ್ದರಿಂದ ವಿಶೇಷಣಾಂತರ್ಭಾವೇನ ಪರ್ಯಾಪ್ತ ಎಂದು ಹೇಳಬೇಕಾದ ಅಗತ್ಯವಿಲ್ಲ, ಆದ್ದರಿಂದ ಮೊದಲ ಪಕ್ಷ ಸರಿಯಲ್ಲ.

ಎರಡನೆಯ ಪಕ್ಷದಲ್ಲೂ, ವಿಶೇಷ್ಯತಾವಚ್ಛೇದಕವು ವ್ಯಾಪ್ಯತಾವಚ್ಛೇದಕವಾಗದಿದ್ದಾಗ ವಿಶೇಷಣವು ಅವಚ್ಛೇದಕ, ಎಂದು ಹೇಳಬೇಕು. ಮೇಲಿನ ಉದಾಹರಣೆಯಲ್ಲಿ ಧೂಮತ್ವವು ವ್ಯಾಪ್ಯತಾವಚ್ಛೇದಕವಾದರೆ ವಹ್ನಿಯಷ್ಟೇ ಸಿದ್ಧವಾಗುತ್ತದೆ, ಕೃಷ್ಣಾಗರುವಹ್ನಿಯು ಸಿದ್ಧವಾಗುವುದಿಲ್ಲ. ಆದಕ್ಕಾಗಿ ಸೌರಭ್ಯವೂ ವ್ಯಾಪ್ಯತಾವಚ್ಛೇದಕ ಎಂದು ಹೇಳಬೇಕು. ಆದರೆ, ಪ್ರಕೃತದಲ್ಲಿ ಅಜನ್ಯತ್ವತ್ವವೇ ವ್ಯಾಪ್ಯತಾವಚ್ಛೇದಕವಾದರೂ ಬಾಧಕವಿಲ್ಲ. 'ಶರೀರ' ಎಂಬ ವಿಶೇಷಣವನ್ನು ಅವಚ್ಛೇದಕವೆಂದು ಹೇಳಬೇಕಾಗಿಲ್ಲ.

ಹೀಗೆ, ಶರೀರಾಜನ್ಯತ್ವವಿಶಿಷ್ಟ ಹೇತುವಿನಲ್ಲಿ ವ್ಯಾಪ್ತಿಯು ಇಲ್ಲ. ವ್ಯಾಪ್ಯತ್ವಾಸಿದ್ಧಿದೋಷವಿದೆ.

**ಆಕ್ಷೇಪ**—ಹೇತುವಿನಲ್ಲಿ ವ್ಯಾಪ್ತಿಯಂತೆ ಪಕ್ಷಧರ್ಮತಾವೂ ಇರಬೇಕು. ಅದೂ ಅನುಮಾನಾಂಗ. ಪ್ರಕೃತದಲ್ಲಿ ಪಕ್ಷ ಕ್ಷಿತ್ಯಾದಿಗಳು. ಅವುಗಳಲ್ಲಿ ಅಜನ್ಯತ್ವರೂಪಹೇತು ಇಲ್ಲ, ಪಕ್ಷಧರ್ಮತಾಭಂಗವಾಗುತ್ತದೆ. ಶರೀರವಿಶೇಷಣವನ್ನು ಸೇರಿಸಿದಾಗ ಶರೀರಾಜನ್ಯತ್ವವು ಕ್ಷಿತ್ಯಾದಿಗಳಲ್ಲಿ ಇದೆ. ಪಕ್ಷಧರ್ಮತಾಸಿದ್ಧವಾಗುತ್ತದೆ. ಹೀಗೆ, ಪಕ್ಷಧರ್ಮತಾಸಿದ್ಧಿಗಾಗಿ ಶರೀರವಿಶೇಷಣದ ಅಗತ್ಯವಿದೆ.

**ಸಮಾಧಾನ**—ಪಕ್ಷಧರ್ಮತಾವು ವ್ಯಾಪ್ತಿ ಸಮಾನಾಧಿಕರಣವಾಗಿರಬೇಕು–ವ್ಯಾಪ್ತಿ ಎಲ್ಲಿದೆಯೋ ಅದರಲ್ಲೇ ಪಕ್ಷಧರ್ಮತಾ ಇರಬೇಕು. ಪ್ರಕೃತದಲ್ಲಿ ವ್ಯಾಪ್ತಿಯು ಅಜನ್ಯತ್ವರೂಪ ವಿಶೇಷ್ಯದಲ್ಲಿ ಇದೆ. ಅದರಲ್ಲಿ ಪಕ್ಷಧರ್ಮತಾ ಇಲ್ಲ. ಅದು ಇರುವುದು ಶರೀರಾಜನ್ಯತ್ವದಲ್ಲಿ. ಅದರಲ್ಲಿ ವ್ಯಾಪ್ತಿ ಇಲ್ಲ. ಹೀಗೆ ಪಕ್ಷಧರ್ಮತಾವು ವ್ಯಾಪ್ತಿವ್ಯಧಿಕರಣವಾಗಿದೆ. ಇದು ಅನುಮಾನಾಂಗವಲ್ಲ. ಆದ್ದರಿಂದ ಶರೀರವಿಶೇಷಣವು ಪಕ್ಷಧರ್ಮತಾಸಾಧಕವೂ ಅಲ್ಲ.

## ನ್ಯಾಯದೀಪ

**विशिष्टव्याप्तीति ।** विशिष्टहेतुनिष्ठा व्याप्तिरिति शब्दार्थ इत्यर्थः । **तत्रेति ।** कल्पद्वय इत्यर्थः । **हेतुरिति ।** यथा, शब्दो नित्यः भावकार्यत्वादित्यादौ । **विशेषणेनेत्यादि ।** यथा, कृष्णागरुवह्निमान् सुरभिधूमवत्त्वादित्यादाविति भावः । **विशेष्यत्वावच्छेदकेति ।** अजन्यत्वरूपावच्छेदकेत्यर्थः ।।

ಮೂಲದಲ್ಲಿ "ವಿಶಿಷ್ಟವ್ಯಾಪ್ತಿಶಬ್ದಾರ್ಥ" ಎಂದರೆ "ವಿಶಿಷ್ಟ ಹೇತುವಿನಲ್ಲಿ ವ್ಯಾಪ್ತಿ ಇದೆ" ಎಂಬ ವಾಕ್ಯದ ಅರ್ಥ, ಎಂದು ಭಾವ.

**नच चक्षुस्तैजसं रूपादिषु पञ्चसु रूपस्यैव ग्राहकद्रव्यत्वात् इत्यादौ विशिष्टवृत्तिपक्षधर्मता विशेष्यवृत्तिव्याप्तेरङ्गं दृष्टमिति वाच्यम् । तत्राप्यवधारणमहिम्ना रूपेतरविशेषगुणाव्यञ्जकत्वे सति रूपग्राहकत्वस्य हेतुत्वेन विशेष्यमात्रस्य मनसि व्यभिचारितया व्याप्तेरपि विशिष्टनिष्ठत्वात्। नचात्राजन्यत्वरूपस्य विशेष्यस्य व्यभिचारोऽस्ति।।**

**ಆಕ್ಷೇಪ**—ವ್ಯಾಪ್ತಿ-ಪಕ್ಷಧರ್ಮತಾಗಳಿಗೆ ವೈಯಧಿಕರಣ್ಯವು ದೋಷವಲ್ಲ. ತಾರ್ಕಿಕರು ಹೇಳಿರುವ ಅನುಮಾನದಲ್ಲೇ ಅಂತಹ ದೋಷವಿದೆ. "ಚಕ್ಷುಃ ತೈಜಸಂ, ರೂಪಾದಿಷು ಪಂಚಸು (ಮಧ್ಯೇ) ರೂಪಸ್ಯೈವ ಗ್ರಾಹಕ ದ್ರವ್ಯತ್ವಾತ್" ಈ ಅನುಮಾನದಲ್ಲಿ 'ರೂಪಸ್ಯೈವ ಗ್ರಾಹಕತ್ವಾತ್' ಎಂಬ ಹೇತುವಿಗೆ 'ರೂಪೇತರಾಗ್ರಾಹಕತ್ವೇ ಸತಿ ರೂಪಗ್ರಾಹಕತ್ವಾತ್' ಎಂದು ಅರ್ಥ. ತೈಜಸತ್ವರೂಪ ಸಾಧ್ಯದ ವ್ಯಾಪ್ತಿ ಈ ಹೇತುವಿನಲ್ಲಿ ಇದೆ. ಆದರೆ, ಅದರಲ್ಲಿ ಪಕ್ಷಧರ್ಮತಾ ಇಲ್ಲ. ಏಕೆಂದರೆ ಚಕ್ಷುಸ್ಸು ರೂಪತ್ವಕ್ಕೂ ವ್ಯಂಜಕವಾಗಿದೆ. ಪಕ್ಷಧರ್ಮತಾ ಸಿದ್ಧಿಗಾಗಿ 'ರೂಪಾದಿಷು ಮಧ್ಯೇ' ಎಂಬ ಅಂಶವನ್ನು

ಕೊಡಬೇಕು. 'ರೂಪಾದಿಷು ಮಧ್ಯೇ' ಎಂದರೆ 'ರೂಪಾದಿ ಐದು ಗುಣಗಳ ಮಧ್ಯದಲ್ಲಿ' ಎಂದರ್ಥ. ರೂಪತ್ವವು ಅವುಗಳಲ್ಲಿ ಸೇರಿಲ್ಲ. ಆದ್ದರಿಂದ ರೂಪತ್ವವ್ಯಂಜಕವಾದರೂ ರೂಪೇತರಗುಣಾವ್ಯಂಜಕತ್ವವು ಚಕ್ಷುಸ್ಸಿನಲ್ಲಿ ಇಲ್ಲದಿರುವುದರಿಂದ ರೂಪಸ್ಯೈವ ಗ್ರಾಹಕತ್ವರೂಪ ಹೇತುವು ಪಕ್ಷದಲ್ಲಿ ಬರುತ್ತದೆ. ಹೀಗೆ 'ರೂಪೇತರ ಗುಣಾ...' ಎಂಬ ವಿಶೇಷಣವಿಶಿಷ್ಟಾಂಶದಲ್ಲಿ ಪಕ್ಷಧರ್ಮತಾ. 'ರೂಪೇತರಾವ್ಯಂಜಕತ್ವೇ ಸತಿ ರೂಪವ್ಯಂಜಕತ್ವಾಂಶದಲ್ಲಿ' ವ್ಯಾಪ್ತಿ. ಇಲ್ಲಿ ವಿಶೇಷ್ಯನಿಷ್ಠವ್ಯಾಪ್ತಿಗೆ ಪಕ್ಷಧರ್ಮತಾವು ವ್ಯಧಿಕರಣವಾಗಿದೆ.

**ಸಮಾಧಾನ**—ಇದು ಸರಿಯಲ್ಲ. ಆ ಹೇತುವಿನಲ್ಲೂ 'ರೂಪಸ್ಯೈವ' ಎಂಬ ಏವಕಾರದಿಂದ ರೂಪೇತರ–ವಿಶೇಷಗುಣಾವ್ಯಂಜಕತ್ವವೇ ತಿಳಿಯುತ್ತದೆ. ಇದರಿಂದ ತಾದೃಶಗುಣಾವ್ಯಂಜಕತ್ವ ವಿಶಿಷ್ಟರೂಪವ್ಯಂಜಕತ್ವವೇ ಹೇತು. ವಿಶೇಷ್ಯಾಂಶವಾದ ರೂಪವ್ಯಂಜಕತ್ವವು ಹೇತುವಲ್ಲ. ಅದು ಸರ್ವಜ್ಞಾನಕಾರಣವಾದ ಮನಸ್ಸಿನಲ್ಲೂ ಇರುವುದರಿಂದ ವ್ಯಭಿಚಾರಿಯಾಗಿರುವುದರಿಂದ ಅದರಲ್ಲಿ ವ್ಯಾಪ್ತಿಯೂ ಇಲ್ಲ. ಏವಂ ಚ, ವ್ಯಾಪ್ತಿ–ಪಕ್ಷಧರ್ಮತಾಗಳು ವಿಶಿಷ್ಟದಲ್ಲೇ ಇವೆ, ವ್ಯಧಿಕರಣಗಳಲ್ಲ. ಆದರೆ ಪ್ರಕೃತ ಈಶ್ವರಾನುಮಾನದ ಹೇತುಘಟಕ ವಿಶೇಷ್ಯಭಾಗ ಅಜನ್ಯತ್ವ. ಅದಕ್ಕೆ ವ್ಯಭಿಚಾರ ಇಲ್ಲ. ಅದು ವ್ಯಾಪ್ಯವಾಗಿದೆ. ಆದರೆ, ಅದರಲ್ಲಿ ಪಕ್ಷಧರ್ಮತಾ ಇಲ್ಲ. ಹೀಗೆ, ಅಲ್ಲಿ ವ್ಯಾಪ್ತಿ–ಪಕ್ಷಧರ್ಮತಾಗಳಿಗೆ ವ್ಯಧಿಕರಣತ್ವ ಇದೆ.[1]

## ನ್ಯಾಯದೀಪ

### ರूपादिषु पञ्चस्विति स्वरूपकथनं मत्वाह—तत्रापीति ।।

"ರೂಪಾದಿಷು ಮಧ್ಯೇ ರೂಪಸ್ಯೈವ ವ್ಯಂಜಕತ್ವಾತ್" ಎಂಬ ಹೇತುವಿನ 'ರೂಪಾದಿಷು ಮಧ್ಯೇ' ಎಂಬ ಅಂಶವು ಸ್ವರೂಪಕಥನ, ಏವಕಾರಕ್ಕೇ 'ರೂಪೇತರ ವಿಶೇಷಗುಣಾವ್ಯಂಜಕತ್ವೇ ಸತಿ' ಎಂದರ್ಥ. ಈ ಅಭಿಪ್ರಾಯದಿಂದ ಮೂಲದಲ್ಲಿ ಅಸಿದ್ಧಿಯನ್ನು ಪರಿಹರಿಸಲಾಗಿದೆ.

---

1. ಮಣಿಗ್ರಂಥದಲ್ಲಿ "ರೂಪಾದಿಷು ಮಧ್ಯೇ ಗಂಧಸ್ಯೈವ ವ್ಯಂಜಕತ್ವಾತ್" ಎಂದು ಘ್ರಾಣೇಂದ್ರಿಯಕ್ಕೆ ಪಾರ್ಥಿವತ್ವವನ್ನು ಸಾಧಿಸುವ ಅನುಮಾನವನ್ನು ಉಲ್ಲೇಖಿಸಲಾಗಿದೆ. (ಪು.64) ಈ ವಾಕ್ಯದ ಟಿಪ್ಪಣಿಯಲ್ಲಿ ಹೀಗಿದೆ—

"अत्र दृष्टांते स्वीयरूपव्यंजकत्वात् असिद्धिवारणाय रूपादिषु मध्ये इत्यनेन परकीयरूपाव्यंजकत्वस्य विक्षितत्त्वं आवश्यकम् । तथाचात्र परकीयेति विशेषणं असिद्धिवारकमिति समुदितात्पर्यम् ।।

ಸನ್ನಿಕರ್ಷದಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಹೇತುವಿನಲ್ಲಿ 'ದ್ರವ್ಯತ್ವಾತ್' ಎಂಬ ಅಂಶವನ್ನೂ ಮೂಲದಲ್ಲಿ ಸೇರಿಸಲಾಗಿದೆ.

## ಅವತಾರಿಕೆ

**ननु रूपस्यैवेत्यादेरेव रूपेतरविशेषगुणेत्याद्यर्थकत्वे रूपादिषु पञ्चस्विति व्यर्थम् । अतो रूपेतराव्यञ्जकत्वमेव तदर्थो वाच्यः । तथा च चक्षुषो रूपत्वस्यापि व्यञ्जकतया हेतोरसिद्ध्यापत्त्या तन्निरासकविशेषणविशिष्ट एव पक्षधर्मता, व्याप्तिस्तु विशेष्य इत्यरुचेरप्रसिद्धिवारकत्वेन सार्थक्यं मन्वान आह—यद्वेति ।**

ಮೂಲದಲ್ಲಿ ಹೇಳಿರುವ ಸಮಾಧಾನದ ಮೇಲೆ ಹೀಗೆ ಆಕ್ಷೇಪ ಬರಬಹುದು— 'ರೂಪಸ್ಯೈವ' ಎಂಬ ಅಂಶಕ್ಕೇ ರೂಪೇತರವಿಶೇಷಗುಣಾವ್ಯಂಜಕತ್ವೇ ಸತಿ ಎಂದು ಅರ್ಥಹೇಳಿದರೆ "ರೂಪಾದಿಷು ಪಂಚಸು" ಎಂಬ ಅಂಶವೇ ವ್ಯರ್ಥ. ಅದರ ಸಾರ್ಥಕ್ಯಕ್ಕಾಗಿ 'ರೂಪೇತರಾವ್ಯಂಜಕತ್ವೇ ಸತಿ' ಎಂದಿಷ್ಟೇ ಏವಕಾರಘಟಿತಭಾಗದ ಅರ್ಥ, ಎಂದು ಹೇಳಬೇಕು. ಆಗ ಪಕ್ಷಧರ್ಮತಾ ಬರುವುದಿಲ್ಲ. ಚಕ್ಷುಸ್ಸು ರೂಪೇತರವಾದ ರೂಪತ್ವಕ್ಕೂ ಗ್ರಾಹಕವಾಗಿದೆ. ಅದರ ನಿರಾಸಕ್ಕಾಗಿ 'ರೂಪಾದಿ ಪಂಚಸು' ಎಂಬ ವಿಶೇಷಣವನ್ನು ಸೇರಿಸಬೇಕು. ಆಗ ವ್ಯಾಪ್ತಿಯು ವಿಶೇಷ್ಯಾಂಶನಿಷ್ಠ, ಪಕ್ಷಧರ್ಮತಾ ವಿಶಿಷ್ಟದಲ್ಲಿ, ಎಂದಾಗಿ ವ್ಯಾಪ್ತಿಪಕ್ಷಧರ್ಮತಾಗಳಿಗೆ ವ್ಯಧಿಕರಣತ್ವವು ಇದ್ದೇ ಇದೆ.

ಹೀಗೆ ಈ ಸಮಾಧಾನದಲ್ಲಿ ನೈರ್ಭರ್ಯವಿಲ್ಲದಿರುವುದರಿಂದ 'ಯದ್ವಾ' ಎಂದು ಮೂಲದಲ್ಲಿ ಇನ್ನೊಂದು ಸಮಾಧಾನವನ್ನು ಹೇಳಲಾಗಿದೆ.

**यद्वा, मनसि व्यभिचारवारकस्यावधारणस्य रूपादिष्विति विशेषणं विनाऽलब्धात्मकस्य व्यभिचारवारणाशक्त्या विशेषणस्यापि तल्लाभसंपादनद्वारा व्यभिचारवारणप्रयोजनकत्वमेव । अजन्यत्वं तु शरीरविशेषणं विनाऽपि गगनादौ लब्धात्मकम् ॥**

ಅಥವಾ 'ರೂಪಾದಿಷು ಮಧ್ಯೇ' ಎಂಬ ವಿಶೇಷಣ ಪಕ್ಷಧರ್ಮತಾಸಿದ್ಧಿಗಾಗಿ ಕೊಟ್ಟಿರುವುದಲ್ಲ. ವ್ಯಭಿಚಾರ ಪರಿಹಾರಕ್ಕಾಗಿಯೇ ಆ ವಿಶೇಷಣ. ರೂಪಸ್ಯೈವ ಗ್ರಾಹಕತ್ವಾತ್ ಎಂದರೆ "ರೂಪೇತರಾಗ್ರಾಹಕತ್ವೇ ಸತಿ ರೂಪಗ್ರಾಹಕತ್ವಾತ್" ಎಂದರ್ಥ. ಇಲ್ಲಿ ವಿಶೇಷ್ಯಾಂಶವನ್ನು ಮಾತ್ರ, ಹೇತುವನ್ನಾಗಿ ಮಾಡಿದರೆ ಮನಸ್ಸಿನಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ವಿಶೇಷಣಾಂಶವನ್ನು ಸೇರಿಸಿದರೆ ಅಪ್ರಸಿದ್ಧಿ. ರೂಪಗ್ರಾಹಕವಾದ ಇಂದ್ರಿಯವು ರೂಪತ್ವಗ್ರಾಹಕವೂ

ಆಗುವುದರಿಂದ ರೂಪಗ್ರಾಹಕವಾಗಿ ರೂಪೇತರಾಗ್ರಾಹಕವಾದ ಇಂದ್ರಿಯವೇ ಇಲ್ಲ. ಆದ್ದರಿಂದ, 'ರೂಪೇತರ– ವಿಶೇಷಗುಣಾಗ್ರಾಹಕತ್ವಂ' ಎಂಬ ಅರ್ಥವನ್ನು ಮಾಡದ ಹೊರತು ಹೇತುವಿನ ಸ್ವರೂಪವೇ ಸಿದ್ಧವಾಗುವುದಿಲ್ಲ. ಇದರಿಂದಾಗಿ ವ್ಯಭಿಚಾರವೂ ಪರಿಹಾರವಾಗುವುದಿಲ್ಲ. ಅದಕ್ಕಾಗಿ 'ರೂಪಾದಿಷು ಪಂಚಷು' ಎಂಬ ವಿಶೇಷಣವು ಅಗತ್ಯವಾಗುತ್ತದೆ. ಆಗ ಹೇತುಸ್ವರೂಪವು ಪ್ರಸಿದ್ಧವಾಗಿ ಆ ಮೂಲಕ ವ್ಯಭಿಚಾರವೂ ಪರಿಹಾರವಾಗುತ್ತದೆ. ಆದರೆ, ಪ್ರಕೃತಾನುಮಾನದಲ್ಲಿ ಅಜನ್ಯತ್ವಹೇತುವು 'ಶರೀರ' ವಿಶೇಷಣವಿಲ್ಲದಿದ್ದರೂ ಗಗನಾದಿಗಳಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ, ಆ ವಿಶೇಷಣವು ಕೇವಲ ಪಕ್ಷಧರ್ಮತಾಸಿದ್ಧಿಗಾಗಿಯೇ ಇದೆ. ಅದು ವ್ಯರ್ಥ.

## ನ್ಯಾಯದೀಪ

**अलब्धात्मकस्येति ।** काप्यप्रसिद्धेः, मनःप्रभृतेः रूपत्वस्यापि ग्राहकत्वादिति भावः ।।

''ರೂಪೇತರಾಗ್ರಾಹಕತ್ವೇ ಸತಿ ರೂಪಗ್ರಾಹಕತ್ವವು'' ಅಪ್ರಸಿದ್ಧವಾದುದರಿಂದ ಅಲಬ್ಧಾತ್ಮಕ. ಮನ ಇಂದ್ರಿಯಾದಿಗಳು ರೂಪ ಮಾತ್ರವಲ್ಲದೆ ರೂಪತ್ವಜಾತಿಗ್ರಾಹಕವೂ ಆಗಿವೆ.

## ಅವತಾರಿಕೆ

''नीलधूमादौ व्याप्तिरस्त्येव । अन्यथा विशेषाणामव्याप्यत्वे निराश्रया व्याप्तिः स्यात्'' इत्यादिना मण्युक्तविशिष्टनिष्ठव्याप्तिपक्षाशङ्कामनुवदति—**अथ मतमित्यादिना मैवमित्यन्तेन । नीलधूमादावपीति** । तथाच शरीराजन्यत्वेऽपि विशिष्टहेतौ व्याप्तिरस्त्येवेति तत्र व्याप्त्यसिद्धिव्युत्पादनमयुक्तमिति भावः ।।

ಮಣಿಗ್ರಂಥದಲ್ಲಿ ''ಉಚ್ಯತೇ'' (ಪು.66) ಎಂದು ಪೂರ್ವಪಕ್ಷವನ್ನು ಹೀಗೆ ಸಮರ್ಥಿಸಲಾಗಿದೆ— ವ್ಯರ್ಥವಿಶೇಷಣ ಘಟಿತವಾದ ''ನೀಲಧೂಮಾದಿಗಳಲ್ಲೂ'' ವಹ್ನಿಯ ವ್ಯಾಪ್ತಿ ಇದೆ. ಧೂಮವಿಶೇಷ ನೀಲಧೂಮ. ಯಾವ ವಿಶೇಷಗಳಲ್ಲೂ ವ್ಯಾಪ್ತಿ ಇಲ್ಲದೇ ಹೋದರೆ ಆ ವ್ಯಾಪ್ತಿಗೆ ಆಶ್ರಯವೇ ಇಲ್ಲವೆಂದಾದೀತು. ಆದ್ದರಿಂದ ನೀಲಧೂಮದಲ್ಲಿ ವ್ಯಾಪ್ಯತ್ವಾಸಿದ್ಧಿ ಇಲ್ಲ. ಆದರೆ ವ್ಯಾಪ್ಯತಾವಚ್ಛೇದಕ ಮಾತ್ರ ಧೂಮತ್ವ, ನೀಲಧೂಮತ್ವವಲ್ಲ, ಗುರುಧರ್ಮವಾದುದರಿಂದ. ಆದ್ದರಿಂದ ಧೂಮ ಮಾತ್ರ ಹೇತು, ನೀಲಧೂಮ ಹೇತುವಲ್ಲ, ಎಂದು. ಇದನ್ನು 'ಅಥ' ಎಂಬಲ್ಲಿಂದ 'ನೈವಂ' ಎಂಬಲ್ಲಿವರೆಗೆ ಅನುವಾದ ಮಾಡಲಾಗಿದೆ.

**अथ मतं, नीलधूमादावपि विशिष्टनिष्ठैव व्याप्तिः। तत्र व्यभिचारोपाध्योरभावात् । अन्यथा विशेषाणामव्याप्यत्वे निराश्रया व्याप्तिः स्यात् । किंतु नीलधूमत्वं न तदवच्छेदकम् । गौरवात् । अपितु धूमत्वमेव । नच व्यभिचारावारकनैल्यविशेषणवत्त्वेनाज्ञात एव व्याप्तिग्रहात् तद्वत्त्वेन ज्ञाते व्याप्तिप्रमाविरह इति वाच्यम् । सहचारदर्शने व्यभिचारादर्शने च सति द्रव्यत्वादिमत्तयाज्ञातेऽपि धूमेऽव्यभिचारादिरूपव्याप्तिग्रहादिति चेत् ।**

ವಹ್ನಿಸಾಧಕವಾಗಿ ಹೇಳುವ 'ನೀಲಧೂಮದಲ್ಲೂ' ವಹ್ನಿಯ ವ್ಯಾಪ್ತಿ ಇದ್ದೇ ಇದೆ. ವ್ಯಾಪ್ತಿ ವಿಘಟಕವಾದ ವ್ಯಭಿಚಾರ ಅಥವಾ ಉಪಾಧಿದೋಷಗಳು ನೀಲಧೂಮದಲ್ಲಿ ಇಲ್ಲ. ಅಲ್ಲದೆ ನೀಲಾದಿಧೂಮಗಳು ಧೂಮವಿಶೇಷಗಳು. ಆ ಯಾವ ವಿಶೇಷಗಳಲ್ಲೂ ವ್ಯಾಪ್ತಿಯು ಇಲ್ಲವೆಂದಾದಲ್ಲಿ ವ್ಯಾಪ್ತಿಗೆ ಆಶ್ರಯವೇ ಇಲ್ಲವೆಂದಾದೀತು. ಹೀಗೆ, ಅದರಲ್ಲಿ ವ್ಯಾಪ್ತಿ ಇದ್ದರೂ ಆ ವ್ಯಾಪ್ತಿಗೆ ಅವಚ್ಛೇದಕ ನೀಲಧೂಮತ್ವವಲ್ಲ. ಅದು ಗುರುಧರ್ಮವಾದುದರಿಂದ, ಧೂಮತ್ವವೇ ಅವಚ್ಛೇದಕ.

**ಆಕ್ಷೇಪ**—ನೈಲ್ಯಾದಿವಿಶೇಷಣಗಳು ಧೂಮಕ್ಕೆ ವಹ್ನಿವ್ಯಭಿಚಾರವಾರಕಗಳಲ್ಲ. ಆದ್ದರಿಂದ ತಾದೃಶವಿಶೇಷಣವತ್ತ್ವೇನ ಅಜ್ಞಾತವಾದ ಧೂಮದಲ್ಲೇ ವ್ಯಾಪ್ತಿಯು ಗೃಹೀತವಾಗುತ್ತದೆ. ತಾದೃಶವಿಶೇಷಣ ವಿಶಿಷ್ಟವಾದ ಧೂಮದಲ್ಲಿ ವ್ಯಾಪ್ತಿಪ್ರಮಾ ಬರುವುದಿಲ್ಲ. ಅದರಲ್ಲಿ ವ್ಯಾಪ್ಯತ್ವಾಸಿದ್ಧಿ ಇದೆ.

**ಪರಿಹಾರ**—ಸಹಚಾರದರ್ಶನ-ವ್ಯಭಿಚಾರಾದರ್ಶನ ಇವೆರಡರಿಂದ ವ್ಯಾಪ್ತಿ ಗ್ರಹವಾಗುತ್ತದೆ. ಇವೆರಡು ಇದ್ದಾಗ ವ್ಯಾಪ್ಯತಾವಚ್ಛೇದಕವಲ್ಲದ ದ್ರವ್ಯತ್ವಾದಿಮತ್ತಯಾ ಜ್ಞಾತವಾದರೂ ಧೂಮದಲ್ಲಿ ಸಾಧ್ಯಾವ್ಯಭಿಚರಿತತ್ವರೂಪವ್ಯಾಪ್ತಿಯು ಗೃಹೀತವಾಗುತ್ತದೆ. ಅದರಂತೆ, ಪ್ರಕೃತ ಶರೀರಾಜನ್ಯತ್ವದಲ್ಲೂ ವ್ಯಾಪ್ತಿಯು ಗೃಹೀತವಾಗುತ್ತದೆ. ಅದರಿಂದಾಗಿ ಶರೀರಾಜನ್ಯತ್ವವು ಸತ್ಪ್ರತಿಪಕ್ಷವಾಗುತ್ತದೆ.

(ಹೀಗೆ ಮಣಿಗ್ರಂಥದಲ್ಲಿ ಪೂರ್ವಪಕ್ಷ ಮಾಡಿ ನಿರಾಕರಿಸಲಾಗಿದೆ. ಆ ನಿರಾಕರಣೆಯನ್ನು ಮುಂದಿನ ಗ್ರಂಥದಲ್ಲಿ ಅನುವಾದ ಮಾಡಲಾಗಿದೆ.)

## ಅವತಾರಿಕೆ

विशिष्टहेतोर्व्याप्तिविरहवादी, अवान्तरविशिष्टनिष्ठव्याप्तिपक्षचोद्यं व्याप्तिवादे मणिकृदभिमतव्याप्तिलक्षणमुपेत्य निराह—**मैवमित्यादिना ।**

ನೈಲ್ಯವಿಶಿಷ್ಟಧೂಮದಲ್ಲಿ ವ್ಯಾಪ್ತಿ ಇಲ್ಲ, ಎಂದು ನೈಯಾಯಿಕ ಸಿದ್ಧಾಂತ. ಅದರಲ್ಲೂ ಅವ್ಯಭಿಚರಿತತ್ವರೂಪ–ವ್ಯಾಪ್ತಿ ಇದೆ, ಎಂದು ಈವರೆಗೆ ಮಾಡಿರುವ ಅವಾಂತರಚೋದ್ಯ. ಇದಕ್ಕೆ, ವ್ಯಾಪ್ತಿವಾದದಲ್ಲಿ ಮಣಿಕಾರನು ಹೇಳಿರುವ ವ್ಯಾಪ್ತಿಲಕ್ಷಣವನ್ನು ಅಂಗೀಕರಿಸಿ 'ಮೈವಂ' ಎಂದು ಮುಂದಿನ ಗ್ರಂಥದಲ್ಲಿ ಪರಿಹಾರವನ್ನು ಹೇಳಲಾಗಿದೆ.

**मैवम् । अनुमितिप्रयोजकव्याप्तिविरहो हि व्याप्यत्वासिद्धिः । तत्प्रयोजिका च व्याप्तिः साध्यसामानाधिकरण्यावच्छेदकरूपवत्त्वलक्षणा, नत्वव्यभिचाररूपाऽनौपाधिकत्वरूपा वा । गौरवात्। अपदार्थत्वेन अवाक्यार्थत्वेन चोदाहरणवाक्येन तदप्रतीतेश्च । तद्विरहश्च सामानाधिकरण्याभावेन वा यथा निरधिकरणे वस्तुनि, सत्यपि तस्मिंस्तस्य साध्यनिरूपितत्वविरहाद्वा यथा विरुद्धे, सतोरपि तयो-र्धर्मस्यावेच्छेदकत्वविरहाद्वा यथेयं पृथिवी द्रव्यत्वादित्यत्र द्रव्यत्वे । व्यर्थविशेषणे च नीलधूमादौ सामानाधिकरण्ये तस्य साध्यनिरूपितत्वे च सत्यपि नीलधूमत्वस्य वह्निनिरूपितसामानाधिकरण्यावच्छेदकत्वविरहाद् व्याप्तिविरहः ।**

ಶರೀರಾಜನ್ಯತ್ವಹೇತುವಿನಲ್ಲಿ ವ್ಯಾಪ್ಯತ್ವಾಸಿದ್ಧಿ ಇದ್ದೇ ಇದೆ. ಅನುಮಿತಿಗೆ ಪ್ರಯೋಜಕ ವಾಗಿರುವ ವ್ಯಾಪ್ತಿರಾಹಿತ್ಯವೇ ವ್ಯಾಪ್ಯತ್ವಾಸಿದ್ಧಿ. ಅಂತಹ ವ್ಯಾಪ್ತಿಯಾದರೋ 'ಸಾಧ್ಯಸಾಮಾನಾಧಿ-ಕರಣ್ಯಾವಚ್ಛೇದಕರೂಪವತ್ವಮ್'. ಹೊರತು, ಅವ್ಯಭಿಚಾರ ರೂಪವೂ ಅಲ್ಲ, ಅನೌಪಾಧಿಕತ್ವ ರೂಪವೂ ಅಲ್ಲ. ಇಂತಹ ವ್ಯಾಪ್ತಿಸ್ವರೂಪದಲ್ಲಿ ನಞ್ ಸೇರಿರುವುದರಿಂದ ಅದು ಗುರುರೂಪ ವಾಗುತ್ತದೆ. ''ಯೋ ಯೋ ಧೂಮವಾನ್ ಸ ಸ ವಹ್ನಿಮಾನ್' ಎಂಬ ಉದಾಹರಣವಾಕ್ಯ ಘಟಕವಾದ ಯಾವುದೇ ಪದಕ್ಕಾಗಲೀ ಅಥವಾ ಆ ಉದಾಹರಣವಾಕ್ಯಕ್ಕಾಗಲೀ ಅಂತಹ ವ್ಯಾಪ್ತಿಯು ಅರ್ಥವಲ್ಲ. ಹೀಗಾಗಿ, ಉದಾಹರಣವಾಕ್ಯದಿಂದ ಆ ವಿಧದ ವ್ಯಾಪ್ತಿಜ್ಞಾನ ಬರುವುದಿಲ್ಲ. ಕಿಂತು, ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕರೂಪವತ್ವಂ, ಇದೇ ವ್ಯಾಪ್ತಿಸ್ವರೂಪ. ಇಂತಹ ವ್ಯಾಪ್ತಿವಿರಹವು ಹೇತುವಿನಲ್ಲಿ ಮೂರು ಕಾರಣಗಳಿಂದ ಬರುತ್ತದೆ—

1. ಸಾಮಾನಾಧಿಕರಣ್ಯವು ಇಲ್ಲದಿರುವುದರಿಂದ. ಉದಾಹರಣೆಗೆ, ವಹ್ನಿಯನ್ನು ಸಾಧನೆ ಮಾಡಲು ಗಗನರೂಪಹೇತುವನ್ನು ಹೇಳಿದರೆ ಗಗನವು ಅವೃತ್ತಿಮತ್ ಪದಾರ್ಥವಾಗಿರುವುದರಿಂದ ಅದರಲ್ಲಿ ಸಾಮಾನಾಧಿಕರಣ್ಯವು ಇಲ್ಲದಿರುವ ಪ್ರಯುಕ್ತ ಸಾಧ್ಯಸಾಮಾನಾಧಿಕರಣ್ಯರೂಪವಾದ ವ್ಯಾಪ್ತಿಯು ಬರುವುದಿಲ್ಲ.

2. ಸಾಮಾನಾಧಿಕರಣ್ಯವು ಇದ್ದರೂ ಅದರಲ್ಲಿ ಸಾಧ್ಯನಿರೂಪಿತತ್ವವು ಇಲ್ಲದಿರುವುದರಿಂದ– ವಿರುದ್ಧ ಹೇತುವಿನಲ್ಲಿ ಸಾಧ್ಯಸಾಮಾನಾಧಿಕರಣ್ಯವು ಇರುವುದಿಲ್ಲ. 'ಪರ್ವತಃ ವಹ್ನಿಮಾನ್ ಹ್ರದತ್ವಾತ್' ಎಂಬ ಅನುಮಾನದ ಹೇತುವು ವಿರುದ್ಧವಾದುದರಿಂದ ಅದರಲ್ಲಿ ಮೀನಾದಿ ಸಾಮಾನಾಧಿಕರಣ್ಯವು ಇದ್ದರೂ ವಹ್ನಿನಿರೂಪಿತ ಸಾಮಾನಾಧಿಕರಣ್ಯ ಇಲ್ಲ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ ಇದೆ.

3. ಇವೆರಡು ಇದ್ದರೂ ಹೇತುನಿಷ್ಠಧರ್ಮವು ಅವಚ್ಛೇದಕವಾಗದಿರುವುದರಿಂದ. 'ಇಯಂ ಪೃಥಿವೀ, ದ್ರವ್ಯತ್ವಾತ್'. ಇಲ್ಲಿ ಪೃಥಿವೀತ್ವಸಾಮಾನಾಧಿಕರಣ್ಯವು ದ್ರವ್ಯತ್ವದಲ್ಲಿ ಇದ್ದರೂ ದ್ರವ್ಯತ್ವವು ಪೃಥಿವೀತ್ವಮಾತ್ರ ಸಮಾನಾಧಿಕರಣವಲ್ಲದ ಕಾರಣ ದ್ರವ್ಯತ್ವತ್ವವು ಪೃಥೀತ್ವಸಾಮಾನಾಧಿ ಕರಣ್ಯಾವಚ್ಛೇದಕವಾಗುವುದಿಲ್ಲ. ಆದ್ದರಿಂದ ದ್ರವ್ಯತ್ವ ಹೇತುವಿನಲ್ಲಿ ಸಾಧ್ಯಸಾಮಾನಾಧಿ ಕರಣ್ಯಾವಚ್ಛೇದಕರೂಪವತ್ವ ಎಂಬ ವ್ಯಾಪ್ತಿಯು ಇಲ್ಲ.

ವ್ಯರ್ಥವಿಶೇಷಣ ಘಟಿತವಾದ ನೀಲಧೂಮರೂಪ ಹೇತುವಿನಲ್ಲಿ ಸಾಮಾನಾಧಿಕರಣ್ಯವೂ ಇದೆ, ಆ ಸಾಮಾನಾಧಿಕರಣ್ಯದಲ್ಲಿ ಸಾಧ್ಯನಿರೂಪಿತತ್ವವೂ ಇದೆ. ಆದರೆ, ಗುರುಧರ್ಮವಾದ್ದರಿಂದ ನೀಲಧೂಮತ್ವವು ಸಾಮಾನಾಧಿಕರಣ್ಯದಲ್ಲಿ ಅವಚ್ಛೇದಕವಾಗುವುದಿಲ್ಲ. ಇದರಿಂದಾಗಿ ನೀಲಧೂಮದಲ್ಲಿ ವ್ಯಾಪ್ತಿ ಇಲ್ಲ. ಅದರಂತೆ, ಶರೀರಾಜನ್ಯತ್ವತ್ವವೂ ಅಜನ್ಯತ್ವತ್ವಾಪೇಕ್ಷಯಾ ಗುರುವಾದ ಕಾರಣ ಸಾಮಾನಾಧಿಕರಣ್ಯಾವಚ್ಛೇದಕವಲ್ಲ. ಆದ್ದರಿಂದ ಅದರಲ್ಲಿ ವ್ಯಾಪ್ತಿ ಇಲ್ಲ.

## ನ್ಯಾಯದೀಪ

**गौरवादिति ।** नञ्घटितत्वादिति भावः । **उदाहरणेति ।** योयो धूमवानसावसावसौ अग्निमानित्यादिरूपवाक्येन धूमे वह्निरूपसाध्ये-नैकाधिकरण्यस्य, तदवच्छेदकधूमत्ववत्त्वस्य च प्रतीतेरिवाव्यभिचारा-देरप्रतीतेरित्यर्थः । **वस्तुनीति।** पर्वतोऽग्निमान् गगनवत्त्वादित्यत्र गगनाख्यवस्तुनीत्यर्थः । **तस्मिन्निति ।** सामानाधिकरण्य इत्यर्थः । **विरुद्ध इति ।** पर्वतोऽग्निमान् ह्रदत्वादित्यादावित्यर्थः । **द्रव्यत्व इति ।** तत्र सामानाधिकरण्यस्य तस्मिन् पृथिवीत्वरूपसाध्यनिरूपितत्वस्य चोभयस्य भावेऽपि द्रव्यत्वत्वं न पृथिवीत्वसामानाधि-करण्यावच्छेदकम् । द्रव्यत्वस्य पृथिवीत्वमात्रसामानाधिकरण्याभावा-दिति भावः । अस्तु, प्रकृते किमित्यत आह—**व्यर्थेति।** आदिपदेन

**शरीराजन्यत्वादिग्रहः । अवच्छेदकत्वविरहादिति । गौरवादिति भावः । तथाच विशिष्टो हेतुर्व्याप्तिशून्य एवेति भावः ।।**

ಉದಾಹರಣೇತ್ಯಾದಿ ಮೂಲದ ಅಭಿಪ್ರಾಯ ಹೀಗೆ— ಯೋ ಯೋ ಧೂಮವಾನ್ ಸಃ ಸಃ ವಹ್ನಿಮಾನ್, ಎಂದು ಉದಾಹರಣ ವಾಕ್ಯ. ಇಲ್ಲಿರುವ ಯತ್ತತ್‌ಪದಗಳು ಒಂದೇ ಅಧಿಕರಣವನ್ನು ಹೇಳುವುದರಿಂದ ದೂಮವತ್ತಾದ ಅಧಿಕರಣವು ವಹ್ನಿಮತ್ತಾಗಿದೆ, ಎಂಬ ಅರ್ಥವು ತಿಳಿದಾಗ ಧೂಮತ್ವವು ವಹ್ನ್ಯಧಿಕರಣವೃತ್ತಿತಾವಚ್ಛೇದಕ ಎಂದು ಜ್ಞಾನ ಬರುತ್ತದೆ. ಹೀಗೆ, ಆ ವಾಕ್ಯದಿಂದ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕರೂಪವತ್ವರೂಪವಾದ ವ್ಯಾಪ್ತಿಯು ಗಮ್ಯವಾಗುತ್ತದೆ.

ಮೂಲದಲ್ಲಿ ದ್ರವ್ಯತ್ವದಲ್ಲಿ ವ್ಯಾಪ್ತಿ ಇಲ್ಲ ಎಂದಿದೆ. ಅದಕ್ಕೆ ಕಾರಣ ದ್ರವ್ಯತ್ವವು ಪೃಥಿವೀತ್ವಮಾತ್ರ ಸಮಾನಾಧಿಕರಣವಲ್ಲ, ಜಲತ್ವಾದಿ ಸಮಾನಾಧಿಕರಣವೂ ಆಗಿದೆ. ಹೀಗಾಗಿ ಪೃಥಿವೀತ್ವಸಾಮಾನಾಧಿಕರಣ್ಯದಲ್ಲಿ ಗಂಧತ್ವವು ಅವಚ್ಛೇದಕವಾದರೂ ದ್ರವ್ಯತ್ವತ್ವವು ಅವಚ್ಛೇದಕವಲ್ಲ.

## ಅವತಾರಿಕೆ

**विशिष्टनिष्ठव्याप्तिवादी व्याप्तिवादे पक्षधराद्युक्तमवच्छेदकत्वनिरुक्तिनिष्कर्षमनुवदन्नीलधूमत्वादावपि साध्यसामानाधिकरण्यावच्छेदकत्वमस्तीति शङ्कते—नन्वित्यादिना मैवमित्यन्तेन ।**

'ನನು' ಎಂಬಲ್ಲಿಂದ 'ಮೈವಂ' ಎನ್ನುವ ಮೂಲದವರೆಗೆ ವ್ಯಾಪ್ತಿಯು ವ್ಯರ್ಥವಿಶೇಷಣ ವಿಶಿಷ್ಟದಲ್ಲೂ ಇದೆ, ಎನ್ನುವ ಪೂರ್ವಪಕ್ಷಿಯ ಆಕ್ಷೇಪ.

ಪಕ್ಷಧರಮಿಶ್ರೋಕ್ತವಾದ ಅವಚ್ಛೇದಕತ್ವವು ನೀಲಧೂಮತ್ವದಲ್ಲೂ ಇದೆ. ಆದ್ದರಿಂದ ನೀಲಧೂಮದಲ್ಲೂ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕ-ಧರ್ಮವತ್ವರೂಪವಾದ ವ್ಯಾಪ್ತಿಯು ಇದೆ, ಎಂಬ ಶಂಕೆಯನ್ನು ಈ ಗ್ರಂಥದಲ್ಲಿ ಮಾಡಲಾಗುವುದು.

**नन्विहावच्छेदकत्वं न तावदवच्छित्तिप्रत्ययहेतुत्वादिकम् । आत्माश्रयात् । नाप्यवच्छेद्यान्यूनानतिरिक्तवृत्तित्वम् । वह्निसामानाधिकरण्यवत्यालोकादावविद्यमाने धूमत्वादावपि तदभावात् । किंत्वनतिरिक्तदेशकत्वम् । तच्च नीलधूमत्वेप्यस्ति । नच तत्रातिव्याप्तिवारणायावच्छेद्या—नतिरिक्तदेशकधर्मान्तराघटितत्वे सतीति विशेष्यते।**

**नीलधूमत्वस्य च धूमत्वरूपतादृशधर्मान्तरघटितत्वान्न तदवच्छेदकतेति वाच्यम् । एवं सति व्याप्तिशरीरस्याभावद्वयघटितत्वेन अतिगौरवात् । उदाहरणवाक्ये तदभावाच्चेति ।**

ವ್ಯಾಪ್ತಿಘಟಕವಾದ ಅವಚ್ಛೇದಕತ್ವದ ಸ್ವರೂಪ ಏನು?

1. ಅವಚ್ಛಿತ್ತಿಪ್ರತ್ಯಯ ಹೇತುತ್ವಮ್, ಎಂದು ಹೇಳಬೇಕು. ಅವಚ್ಛಿತ್ತಿ ಎಂದರೆ ಭೇದ. ಭೇದಪ್ರತ್ಯಯ ಹೇತುತ್ವಂ. ವಹ್ನಿಗೆ ಧೂಮವೇ ವ್ಯಾಪ್ಯ. ಬೇರಾವುದೂ ಅಲ್ಲ, ಎನ್ನುವ ಪ್ರತ್ಯಯವನ್ನು ಧೂಮತ್ವವು ಉಂಟುಮಾಡುತ್ತದೆ. ಆದ್ದರಿಂದ ಅದು ಅವಚ್ಛೇದಕ, ಎಂದು ಹೇಳಬಹುದು. ಆದರೆ, ಹೀಗೆ ಹೇಳಿದರೆ ಆತ್ಮಾಶ್ರಯದೋಷ ಬರುತ್ತದೆ. ಹೇತುತ್ವವೆಂದರೆ ನಿಯತಪೂರ್ವವೃತ್ತಿತ್ವ. ನಿಯಮವು ವ್ಯಾಪ್ತಿರೂಪ. ಆಗ ವ್ಯಾಪ್ತಿಜ್ಞಾನಕ್ಕೆ ಸ್ವಘಟಕವಾದ ವ್ಯಾಪ್ತಿಜ್ಞಾನವೇ ಕಾರಣ ವೆಂದಾಗುವುದರಿಂದ ಆತ್ಮಾಶ್ರಯದೋಷ.

ಇದರಿಂದಾಗಿಯೇ, ಅವಚ್ಛೇದ್ಯವ್ಯಾಪ್ಯತ್ವ ಅಥವಾ ಅವಚ್ಛೇದ್ಯಸಮನಿಯತತ್ವ ಇವೆರಡೂ ಅವಚ್ಛೇದಕತ್ವಂ ಎಂದು ಹೇಳಲಾಗುವುದಿಲ್ಲ. ಹಾಗೆ ಹೇಳಿದರೂ ಆತ್ಮಾಶ್ರಯದೋಷ ಬರುತ್ತದೆ. ಸಾಮಾನಾಧಿಕರಣ್ಯದಲ್ಲಿ ಧೂವತ್ವವು ಅವಚ್ಛೇದಕವೆಂದರೆ ವಹ್ನಿಸಾಮಾನಾಧಿಕರಣ್ಯಕ್ಕೆ ಅದು ವ್ಯಾಪ್ಯ ಎಂದರ್ಥ. ಯತ್ರ ದೂಮತ್ವಂ ತತ್ರ ವಹ್ನಿಸಾಮಾನಾಧಿಕರಣ್ಯಮ್, ಎಂದು ವ್ಯಾಪ್ತಿ.

2. ಅವಚ್ಛೇದಕತ್ವವೆಂದರೆ ಅವಚ್ಛೇದ್ಯಾನ್ಯೂನಾತಿರಿಕ್ತವೃತ್ತಿತ್ವಂ, ಎನ್ನಬಹುದು. ಪ್ರಕೃತದಲ್ಲಿ ಅವಚ್ಛೇದ್ಯ ವಹ್ನ್ಯಧಿಕರಣವೃತ್ತಿತಾ. ಅದು ಧೂಮಮಾತ್ರ ವೃತ್ತಿಯಾಗಿದೆ. ಧೂಮತ್ವವೂ ಧೂಮಮಾತ್ರ ವೃತ್ತಿ. ಹೀಗೆ ಅನ್ಯೂನಾನತಿರಿಕ್ತ ವೃತ್ತಿತ್ವವನ್ನು ಹೇಳಬೇಕು. ಆದರೆ, ವಹ್ನಿಸಾಮಾನಾಧಿ ಕರಣ್ಯ ಆಲೋಕಾದಿಗಳಲ್ಲೂ ಇದೆ. ಅಲ್ಲಿ ಧೂಮತ್ವ ಇಲ್ಲ. ಅದು ನ್ಯೂನವೃತ್ತಿಯಾಯಿತು. ಆದ್ದರಿಂದ ಇಂತಹ ಅವಚ್ಛೇದಕತ್ವವೂ ಧೂಮತ್ವದಲ್ಲಿ ಬರುವುದಿಲ್ಲ.

ಪರಿಶೇಷಾತ್, ಅನತಿರಿಕ್ತವೃತ್ತಿತ್ವರೂಪವಾದ ಅವಚ್ಛೇದಕತ್ವವನ್ನೇ ಹೇಳಬೇಕು. ಅಂತಹ ಅವಚ್ಛೇದಕತ್ವವು ನೀಲಧೂಮತ್ವದಲ್ಲೂ ಇದೆ. ಆದ್ದರಿಂದ ಅದರಲ್ಲೂ ವಹ್ನಿವ್ಯಾಪ್ತಿ ಬರುತ್ತದೆ.

**ಆಕ್ಷೇಪ**—ನೀಲಧೂಮತ್ವದಲ್ಲಿ ವ್ಯಾಪ್ಯತಾವಚ್ಛೇದಕಲಕ್ಷಣಕ್ಕೆ ಅತಿವ್ಯಾಪ್ತಿಪರಿಹಾರಕ್ಕಾಗಿ-ಅವಚ್ಛೇದ್ಯಾನತಿರಿಕ್ತವೃತ್ತಿ-ಧರ್ಮಾಂತರಾಘಟಿತತ್ವೇ ಸತಿ ಸಾಮಾನಾಧಿಕರಣ್ಯಾನತಿರಿಕ್ತದೇಶಕತ್ವಂ ಎಂದು ಲಕ್ಷಣವನ್ನು ಪರಿಷ್ಕಾರ ಮಾಡಬೇಕು. ಪ್ರಕೃತ, ನೀಲಧೂಮತ್ವದಲ್ಲಿ ಸಾಮಾನಾಧಿ ಕರಣ್ಯಾವಚ್ಛೇದಕವಾದ ಧೂಮತ್ವರೂಪ-ಧರ್ಮಾಂತರವು ಘಟಕವಾಗಿದೆ. ಆದ್ದರಿಂದ ಅದು ವ್ಯಾಪ್ಯತಾವಚ್ಛೇದಕವಾಗುವುದಿಲ್ಲ.

**ಸಮಾಧಾನ**—ಹೀಗೆ ಹೇಳಿದರೆ ವ್ಯಾಪ್ತಿಸ್ವರೂಪವು ಅತಿಗುರುಭೂತವಾಗುತ್ತದೆ—

ಸಾಮಾನಾಧಿಕರಣ್ಯಾನತಿರಿಕ್ತವೃತ್ತಿಧರ್ಮಾಂತರಾಘಟಿತತ್ವೇ ಸತಿ ಸಾಮಾನಾಧಿಕರಣ್ಯಾನತಿರಿಕ್ತವೃತ್ತಿಃ ಯೋ ಧರ್ಮಃ ತದ್‌ವತ್ತ್ವಮ್। ಇದು ವ್ಯಾಪ್ತಿ ಸ್ವರೂಪ. ಇದರಲ್ಲಿ 'ಅನತಿರಿಕ್ತವೃತ್ತಿ' 'ಧರ್ಮಾಂತರಾಘಟಿತತ್ವಂ' ಎಂದು ಎರಡು ಅಭಾವಗಳು ಸೇರಿವೆ. ಹೀಗಾಗಿ, ಇದು ಗುರುರೂಪವಾಗುತ್ತದೆ. ಅಲ್ಲದೆ, ಹಿಂದೆ ಹೇಳಿದಂತೆ ಇಂತಹ ವ್ಯಾಪ್ತಿಯ ಲಾಭ ಉದಾಹರಣವಾಕ್ಯದಿಂದ ಆಗುವುದಿಲ್ಲ. ಆದ್ದರಿಂದ ನೀಲಧೂಮದಲ್ಲಿಯೂ ವ್ಯಾಪ್ತಿ ಇದೆ, ಎಂದು ಪೂರ್ವಪಕ್ಷ.

## ನ್ಯಾಯದೀಪ

**आदिकमिति ।।** आदिपदेनावच्छेद्यव्याप्यत्वावच्छेद्यसमनियतत्वादिग्रहः । **आत्माश्रयादिति ।** हेतुत्वस्य नियतपूर्ववृत्तित्वरूपत्वान्नियमस्य व्याप्तितया व्याप्तिज्ञाने व्याप्तिज्ञानस्यावश्यकत्वादिति भावः। **अतिव्याप्तीति।** प्रमेयधूमत्व-द्रव्यधूमत्व-नीलधूमत्वैतद्धूमत्वादावपि वह्निसामानाधिकरण्यरूपावच्छेद्यानतिरिक्तदेशकत्वसत्त्वादतिव्याप्तीत्यर्थः । **अभावद्वयेति ।** साध्यसामानाधिकरण्यानतिरिक्तदेशक–धर्मान्तराघटितत्वे सति साध्यसामानाधिकरण्यानतिरिक्तदेशकत्वमित्यत्र यद्यपि नञ्त्रयप्रवेशादभावत्रयम् । तथापि अनतिरिक्तेत्यस्यैव द्विरुपादानादभावद्वयेत्युक्तम् । यद्वा सत्यन्तप्रविष्टनञ्द्वयापेक्षया अभावद्वयेत्युक्तम् ।

केचित्तु तादृशधर्मान्तराघटितत्वे सति साध्यसामानाधिकरण्यदेशकत्वं तदर्थः । एवंचाभावद्वयमेवेत्याहुः । तच्चिन्त्यम् । प्रमेयत्वद्रव्यत्वादावतिव्याप्तेः ।।

ಮೂಲದ ಆತ್ಮಾಶ್ರಯದೋಷ ಹೀಗೆ— ಹೇತುತ್ವವು ನಿಯತಪೂರ್ವವೃತ್ತಿತ್ವರೂಪ. ಅದರಲ್ಲಿ ಘಟಕವಾದ ನಿಯಮವೆಂದರೆ ವ್ಯಾಪ್ತಿ. ಆಗ ವ್ಯಾಪ್ತಿಸ್ವರೂಪದಲ್ಲೇ ವ್ಯಾಪ್ತಿಯು ಸೇರಿದಂತಾಗಿ ವ್ಯಾಪ್ತಿಜ್ಞಾನಕ್ಕೆ ವ್ಯಾಪ್ತಿಜ್ಞಾನವು ಕಾರಣ ಎಂದಂತಾಗುತ್ತದೆ. ಇದು ಆತ್ಮಾಶ್ರಯ.

ಮೂಲದಲ್ಲಿ ವ್ಯಾಪ್ತಿಯು ಅಭಾವದ್ವಯ ಘಟಿತವಾದುದರಿಂದ ಗುರುಭೂತ ಎಂದು ಹೇಳಲಾಗಿದೆ. ವಸ್ತುತಃ ಉಕ್ತವ್ಯಾಪ್ತಿಯು ಅಭಾವತ್ರಯಘಟಿತವಾಗಿದೆ. 'ಅನತಿರಿಕ್ತವೃತ್ತಿಧರ್ಮಾಂತ-

ರಾಘಟಿತತ್ವೇ ಸತಿ' ಎಂಬ ಸತ್ಯಂತದಲ್ಲಿ ಎರಡು ನಞಗಳಿವೆ. ವಿಶೇಷ್ಯಾಂಶದಲ್ಲಿ ಒಂದು ನಞ. ಹೀಗೆ ಅಭಾವತ್ರಯಗಳು ಸೇರಿವೆ. ಆದರೂ ವಿಶೇಷ್ಯ–ವಿಶೇಷಣಗಳಲ್ಲಿರುವ 'ಅನತಿರಿಕ್ತ' ಎಂಬ ಅಂಶಗಳೆರಡನ್ನೂ ಒಂದು ಎಂದು ಪರಿಗಣಿಸಿ ಅಭಾವದ್ವಯಘಟಿತ, ಎಂದು ಮೂಲದಲ್ಲಿ ಹೇಳಲಾಗಿದೆ. ಅಥವಾ, ವಿಶೇಷ್ಯಾಂಶವನ್ನು ಬಿಟ್ಟು ಸತ್ಯಂತದಲ್ಲೇ ಎರಡು ಅಭಾವಗಳು ಸೇರಿವೆ, ಎಂದು ಅದರ ಅಭಿಪ್ರಾಯ.

ಕೆಲವರು 'ಅಭಾವದ್ವಯ'ವನ್ನು ಹೀಗೆ ಸಮರ್ಥಿಸುತ್ತಾರೆ–ತಾದೃಶ ಧರ್ಮಾಂತರಾಘಟಿತತ್ವೇ ಸತಿ ಸಾಧ್ಯಸಾಮಾನಾಧಿಕರಣ್ಯದೇಶಕತ್ವಂ, ಇದು ಅವಚ್ಛೇದಕತ್ವ. ಸಾಧ್ಯಸಾಮಾನಾಧಿಕರಣ್ಯವು ಧೂಮದಲ್ಲಿದೆ, ಅದರಲ್ಲೇ ಧೂಮತ್ವವೂ ಇದೆ. ಅವೆರಡಕ್ಕೆ ದೇಶಸಾಮ್ಯ ಇದೆ. ಹೀಗೆ ವಿಶೇಷ್ಯಾಂಶದಲ್ಲಿ ಅಭಾವದ ಪ್ರವೇಶ ಇಲ್ಲ. ವಿಶೇಷಣಾಂಶದಲ್ಲೇ ನಞದ್ವಯಗಳು, ಎಂದು.

ಆದರೆ, ಇದು ಸರಿಯಲ್ಲ. ವಿಶೇಷ್ಯಾಂಶದಲ್ಲಿ 'ಅನತಿರಿಕ್ತದೇಶತ್ವವನ್ನು' ವಿವಕ್ಷೆ ಮಾಡದಿದ್ದಲ್ಲಿ ಅತಿರಿಕ್ತವೃತ್ತಿಯಾದ ಪ್ರಮೇಯತ್ವ, ದ್ರವ್ಯತ್ವಗಳೂ ಸಂಗ್ರಹೀತವಾಗುತ್ತವೆ. ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ.

**मैवम् । अवच्छेदकत्वं हि विशेषणताविशेषरूपः स्वरूपसम्बन्धः । न चास्याप्युदाहरणवाक्यादप्रतीतिः । उदाहरणस्थधूमपदोपस्थापितस्य धूमत्वस्योदाहरणवाक्योपस्थापितेन धूमगतवह्निसामानाधिकरण्येन सहावच्छेदकत्वरूपसम्बन्धस्य संसर्गविधया भानात् । स च स्वरूपसम्बन्धो लघुनि धूमत्व एव कल्प्यते । नतु गुरुणि नीलधूमत्व इति नीलधूमे न व्याप्तिः ॥**

ಮಣಿಕಾರ ಮಾಡಿರುವ ಪೂರ್ವಪಕ್ಷದ ಸಾರಾಂಶ–ಶರೀರಾಜನ್ಯತ್ವದಲ್ಲೂ ಸಕರ್ತೃಕತ್ವದ ವ್ಯಾಪ್ತಿ ಇದೆ. ಆದ್ದರಿಂದ ಈಶ್ವರಾನುಮಾನಕ್ಕೆ ಸತ್ಪ್ರತಿಪಕ್ಷ ದೋಷವಿದೆ, ಎಂದು. ಇದನ್ನು 'ಮೈವಂ' ಎಂದು ಅವನು ನಿರಾಕರಿಸಿದ್ದಾನೆ.

ಅವಚ್ಛೇದಕತ್ವಂ ವಿಶೇಷಣತಾವಿಶೇಷಃ. ಅಂದರೆ, ಸ್ವರೂಪಸಂಬಂಧವಿಶೇಷಃ. ಇಂತಹ ಅವಚ್ಛೇದಕತ್ವವು ಉದಾಹರಣವಾಕ್ಯದಿಂದ ಹೇಗೆ ಪ್ರತೀತವಾಗುತ್ತದೆ? ಎಂದರೆ— 'ಯೋ ಯೋ ಧೂಮವಾನ್' ಎಂಬ ಉದಾಹರಣವಾಕ್ಯದಲ್ಲಿರುವ ಧೂಮಪದದಿಂದ ಧೂವತ್ವದ ಉಪಸ್ಥಿತಿ ಬರುತ್ತದೆ. ಸಮಗ್ರ ಉದಾಹರಣವಾಕ್ಯದಿಂದ ಧೂಮಗತ–ವಹ್ನಿಸಾಮಾನಾಧಿಕರಣ್ಯವೂ ಉಪಸ್ಥಾಪಿತವಾಗಿದೆ. ಧೂಮತ್ವಕ್ಕೆ ವಹ್ನಿಸಾಮಾನಾಧಿಕರಣ್ಯದೊಂದಿಗೆ ಅವಚ್ಛೇದಕತಾಸಂಬಂಧೇನ

ಅನ್ವಯ. ಹೀಗೆ ಧೂಮತ್ವದಲ್ಲಿ ಸಾಮಾನಾಧಿಕರಣ್ಯಾವಚ್ಛೇದಕತ್ವವು ಸಂಸರ್ಗವಿಧಯಾ ಭಾನವಾಗುತ್ತದೆ.

ಈ ಸ್ವರೂಪಸಂಬಂಧರೂಪವಾದ ಅವಚ್ಛೇದಕತ್ವವು ಲಘುವಾದ ಧೂಮತ್ವದಲ್ಲಿ ಮಾತ್ರ ಇದೆ, ಗುರುವಾದ ನೀಲಧೂಮತ್ವದಲ್ಲಿ ಇಲ್ಲ. ಏವಂ ಚ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕ ಧರ್ಮವತ್ವರೂಪವಾದ ವ್ಯಾಪ್ತಿಯು ಧೂಮದಲ್ಲಿ ಇದ್ದರೂ ನೀಲಧೂಮದಲ್ಲಿ ಇಲ್ಲ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ.

**नच लघुधूमत्वमपि नीलधूमेऽस्तीति वाच्यम्। हेतुतावच्छेदकस्यैव हि सामानाधिकरण्यावच्छेदकता वाच्या । उपस्थितत्वाद्, धर्मान्तरकल्पने गौरवाच । इह तु हेतुतावच्छेदकत्वेनोपात्तस्य नीलधूमत्वस्य शरीराजन्यत्वस्य च सामानाधिकरण्यानवच्छेदकत्वेन व्याप्यत्वासिद्धेः ।।**

**ಆಕ್ಷೇಪ**—ಅವಚ್ಛೇದಕವಾದ ಧರ್ಮ ಧೂಮತ್ವವೇ ಆದರೂ ತಾದೃಶಧರ್ಮವತ್ವ ರೂಪವ್ಯಾಪ್ತಿ ನೀಲಧೂಮದಲ್ಲೂ ಇದೆ. ಆದ್ದರಿಂದ ನೀಲಧೂಮವೂ ವ್ಯಾಪ್ಯವಾಗುತ್ತದೆ.

**ಸಮಾಧಾನ**—ವ್ಯಾಪ್ತಿಸ್ವರೂಪ-ಸಾಮಾನಾಧಿಕರಣ್ಯಾವಚ್ಛೇದಕ-ಹೇತುತಾವಚ್ಛೇದಕವತ್ವಂ. ಹೇತುತಾವಚ್ಛೇದಕವೇ ಉಪಸ್ಥಿತವಾದುದರಿಂದ ಅದನ್ನೇ ಸಾಮಾನಾಧಿಕರಣ್ಯಾವಚ್ಛೇದಕ ಎಂದು ಹೇಳಬೇಕು, ಧರ್ಮಾಂತರವು ಅವಚ್ಛೇದಕ ಎಂದು ಕಲ್ಪನೆ ಮಾಡುವುದು ಉಪಸ್ಥಿತಿಕೃತಗೌರವದಿಂದ ಉಚಿತವಲ್ಲ. ಪ್ರಕೃತದಲ್ಲಿ ನೀಲಧೂಮತ್ವ ಮತ್ತು ಈಶ್ವರಾನುಮಾನದಲ್ಲಿ ಶರೀರಾಜನ್ಯತ್ವ ಇವುಗಳು ಹೇತುತಾವಚ್ಛೇದಕಗಳು. ಆದರೆ, ಇವುಗಳು ಗುರುಧರ್ಮಗಳಾದುದರಿಂದ ಸಾಮಾನಾಧಿಕರಣ್ಯಾವಚ್ಛೇದಕಗಳಲ್ಲ. ಇದರಿಂದ ಆ ಎರಡು ಹೇತುಗಳಲ್ಲಿ ಸಾಮಾನಾಧಿಕರಣ್ಯಾವಚ್ಛೇಕಂ ಯತ್ ಹೇತುತಾವಚ್ಛೇದಕಂ ತಾದೃಶಧರ್ಮವತ್ವರೂಪವಾದ ವ್ಯಾಪ್ತಿಯು ಇಲ್ಲ. ವ್ಯಾಪ್ಯತ್ವಾಸಿದ್ಧಿ ಬರುತ್ತದೆ.

**नचैवं, विमतो निर्धूमः आर्द्रेन्धनप्रभववह्निरहितत्वात्, सुरभि धूमरहितः चन्दनप्रभववह्निरहितत्वादित्यादावपि व्याप्यत्वासिद्धिः स्यादिति वाच्यम् । तत्र कार्यकारणभावमूलकानुतर्केण वह्निरहितत्व-आर्द्रेन्धनप्रभववह्निरहितत्वादावपि व्याप्तिनिश्चयादिति ।।**

**ಆಕ್ಷೇಪ**—ಗುರುಧರ್ಮವು ಸಾಮಾನಾಧಿಕರಣ್ಯದಲ್ಲಿ ಅವಚ್ಛೇದಕವಲ್ಲ, ಎನ್ನುವುದಾದಲ್ಲಿ ಕಾರಣವಿಶೇಷಾಭಾವದಿಂದ ಕಾರ್ಯವಿಶೇಷಾಭಾವವನ್ನು ಸಾಧಿಸುವ ಅನುಮಾನವೂ ದುಷ್ಟವಾದೀತು. ಉದಾಹರಣೆಗೆ—

1. ವಿಮತಃ ನಿರ್ಧೂಮಃ, ಅರ್ದ್ರೇಂಧನಪ್ರಭವ ವಹ್ನಿರಹಿತತ್ವಾತ್ ।

2. ವಿಮತಃ ಸುರಭಿಧೂಮರಹಿತಃ, ಚಂದನಪ್ರಭವ-ವಹ್ನಿರಹಿತತ್ವಾತ್ ॥

ಮೊದಲನೆಯ ಅನುಮಾನದ ಹೇತು ಆರ್ದ್ರೇಂಧನಪ್ರಭವ-ವಹ್ನ್ಯಭಾವ. ಏತಾದೃಶವಹ್ನ್ಯಭಾವತ್ವವು ಕೇವಲ ವಹ್ನ್ಯಭಾವತ್ವಾಪೇಕ್ಷಯಾ ಗುರುಧರ್ಮ. ಹೀಗಾಗಿ, ಹೇತುತಾವಚ್ಛೇದಕವು ಸಾಮಾನಾಧಿಕರಣ್ಯಾವಚ್ಛೇದಕವಲ್ಲ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ. ಇದೇರೀತಿ ಎರಡನೆಯ ಅನುಮಾನದಲ್ಲಿ.

**ಸಮಾಧಾನ—**ಧೂಮಕ್ಕೆ ವಹ್ನಿಮಾತ್ರ ಕಾರಣವಲ್ಲ. ಅಯೋಗೋಲಕದಲ್ಲಿ ವಹ್ನಿ ಇದ್ದರೂ ಧೂಮವಿಲ್ಲ. ಆದ್ದರಿಂದ ಆರ್ದ್ರೇಂಧನಪ್ರಭವವಹ್ನಿಯೇ ಧೂಮಕಾರಣ. ಅದರಂತೆ ಸುರಭಿಧೂಮಕ್ಕೆ ಚಂದನಪ್ರಭವವಹ್ನಿಯು ಕಾರಣ. ಹೀಗೆ ಕಾರ್ಯಕಾರಣಭಾವರೂಪವಾದ ಅನುಕೂಲತರ್ಕದಿಂದ ವಹ್ನ್ಯಭಾವದಲ್ಲಿ ಹೇಗೋ ಹಾಗೆ ತಾದೃಶವಿಶಿಷ್ಟವಹ್ನ್ಯಭಾವಗಳಲ್ಲೂ ವ್ಯಾಪ್ತಿಯು ಗೃಹೀತವಾಗುತ್ತದೆ. ಆದ್ದರಿಂದ ಅಲ್ಲಿ ವ್ಯಾಪ್ಯತ್ವಾಸಿದ್ಧಿಯನ್ನು ಹೇಳಬಾರದು.

**(सुरभिधूमादौ च चंदनप्रभवाग्न्यादेः कारणत्वात् कारणाभावस्य कार्याभावप्रयोजकतया व्याप्यत्वनिश्चयः-मणि.७२)**

ಹೀಗೆ ಈಶ್ವರಾನುಮಾನಕ್ಕೆ ಸತ್ಪ್ರತಿಪಕ್ಷವಾಗಿ ಹೇಳಿರುವ ಶರೀರಾಜನ್ಯತ್ವಹೇತುವಿನಲ್ಲಿ ವ್ಯಾಪ್ಯತ್ವಾಸಿದ್ಧಿಯು ಇರುವುದರಿಂದ ಅದು ದುಷ್ಟಾನುಮಾನ. ಆದ್ದರಿಂದ ಈಶ್ವರಾನುಮಾನಕ್ಕೆ ದೋಷವಿಲ್ಲ. ಹೀಗೆ ಮಣಿಕಾರ ಮಾಡಿರುವ ಆಕ್ಷೇಪ.

## ನ್ಯಾಯದೀಪ

को विशेषणताविशेषः । विशिष्टज्ञानजनक-ज्ञानविषयत्वादिरूपत्वे चात्माश्रयादित्यत आह—**स्वरूपसम्बन्ध इति** ।।

ननु कुत एवमिति चेत्; अवच्छेदकत्वानिरुक्तेरिति वदन्ति । तथाहि । यदुक्तमवच्छेद्यानतिरिक्तदेशकत्वमवच्छेदकत्वमिति । तन्न । इदं सुखि आत्मत्वादित्यादावीश्वरात्मनि सुखाभावसमानाधिकरणे व्यभिचारिणि गतत्वात् । आत्मत्वस्य जीवात्मनि सुखसामानाधिकरण्येनात्मत्वत्वस्य सुखसामानाधिकरण्यानतिरिक्तवृत्तित्वात् ।।

ಅವಚ್ಛೇದಕತ್ವವು ವಿಶೇಷಣತಾವಿಶೇಷ ಎಂದರೆ, ವಿಶಿಷ್ಟಜ್ಞಾನಜನಕವಾದ ಯಾವ ಜ್ಞಾನವಿದೆಯೋ ತದ್ವಿಷಯತ್ವ ಎಂದು ಹೇಳಿದರೆ ಜನಕತ್ವದಲ್ಲಿ ಓಂದೆ ಹೇಳಿದಂತೆ ವ್ಯಾಪ್ತಿಯು ಸೇರಿರುವುದರಿಂದ ಆತ್ಮಾಶ್ರಯದೋಷ ಬರುತ್ತದೆ. ಅದಕ್ಕಾಗಿ ಅದನ್ನು 'ಸ್ವರೂಪಸಂಬಂಧವಿಶೇಷಃ' ಎನ್ನಲಾಗಿದೆ.

ಅವಚ್ಛೇದಕತ್ವವು ಸ್ವರೂಪಸಂಬಂಧವಿಶೇಷ ಎಂದು ಸಮ್ಮುಗ್ಧವಾಗಿ ಏಕೆ ಹೇಳಬೇಕು? ಬೇರೆ ರೀತಿಯಿಂದ ಅದರ ನಿರ್ವಚನವನ್ನು ಮಾಡಲು ಸಾಧ್ಯವಿಲ್ಲವಾದುದರಿಂದ. ಹೇಗೆಂದರೆ— ಅವಚ್ಛೇದ್ಯಾನತಿರಿಕ್ತದೇಶಕತ್ವಂ–ಅವಚ್ಛೇದ್ಯವು ಎಷ್ಟು ಪ್ರದೇಶಗಳಲ್ಲಿ ಇದೆಯೋ ಅದಕ್ಕಿಂತ ಹೆಚ್ಚಿನ ದೇಶದಲ್ಲಿ ಇಲ್ಲದಿರುವ ಧರ್ಮವು ಅವಚ್ಛೇದಕ, ಎಂದು ಹೇಳಬೇಕು. ಆದರೆ, ಹೀಗೆ ಹೇಳಿದರೆ ವ್ಯಭಿಚಾರಿ ಹೇತುವಿನಲ್ಲಿ ವ್ಯಾಪ್ತಿಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ. ''ಇದಂ ಸುಖಿ, ಆತ್ಮತ್ವಾತ್'' ಎಂದು ಅನುಮಾನ. ಸುಖವಿಲ್ಲದ ಈಶ್ವರನಲ್ಲಿ ಆತ್ಮತ್ವ ಇದೆ. ಆದ್ದರಿಂದ ಈ ಹೇತು ವ್ಯಭಿಚಾರಿ. ಆದರೂ, ಸುಖಾಧಿಕರಣನಾದ ಜೀವಾತ್ಮನಲ್ಲಿ ಆತ್ಮತ್ವವು ಇದೆಯಾದ ಕಾರಣ ಅದು ಸುಖಸಮಾನಾಧಿಕರಣವಾಗಿದೆ. ಆತ್ಮತ್ವತ್ವವು ಆತ್ಮತ್ವಮಾತ್ರದಲ್ಲಿ ಇರುವುದರಿಂದಾಗಿ ಸುಖಸಾಮಾನಾಧಿಕರಣ್ಯಾವಚ್ಛೇದಕವಾಯಿತು. ತಾದೃಶಧರ್ಮವತ್ವವು ಆತ್ಮತ್ವದಲ್ಲಿದೆ, ವ್ಯಾಪ್ತಿ ಲಕ್ಷಣಕ್ಕೆ ಅತಿವ್ಯಾಪ್ತಿಬಂತು.

**ವಿವರಣೆ**—ಆತ್ಮತ್ವವು ಸುಖಾತಿರಿಕ್ತವೃತ್ತಿಯಾದರೂ ಆತ್ಮತ್ವತ್ವವು ಸುಖಸಾಮಾನಾಧಿಕರಣ್ಯಾತಿರಿಕ್ತವೃತ್ತಿಯಲ್ಲ. ಸುಖಸಮಾನಾಧಿಕರಣವಾದ ಆತ್ಮತ್ವವನ್ನು ಬಿಟ್ಟು ಆತ್ಮತ್ವತ್ವವು ಬೇರೆಲ್ಲೂ ಇಲ್ಲ. ಆದ್ದರಿಂದ ಅವಚ್ಛೇದ್ಯವಾದ ಸುಖಸಾಮಾನಾಧಿಕರಣ್ಯಾನತಿರಿಕ್ತದೇಶಕತ್ವವು ಆತ್ಮತ್ವತ್ವದಲ್ಲಿ ಇದೆ.

## ನ್ಯಾಯದೀಪ

**नच साध्याभावसमानाधिकरणावृत्तित्वमवच्छेदकत्वम् । आत्मत्वं त्वीश्वरात्मनि सुखाभावसमानाधिकरणमेवेति वाच्यम् । केवलान्वयिसाध्यकहेतावभावात् । तत्र साध्याभावाप्रसिद्धेः ।**

**नापि, साध्यसामानाधिकरण्याभावाधिकरणावृत्तित्वम् अवच्छेदकत्वम्। आत्मत्वं त्वीश्वरात्मवृत्तित्वावच्छेदेन सुखसामानाधिकरण्याभावाधिकरणमेवेति वाच्यम् । 'वृक्षः एतत्कपिसंयोगवान् एतद्वृक्षत्वात्' इत्यादावव्याप्तेः । एतद्वृक्षत्वस्यापि मूलावच्छेदेनैतत्कपिसंयोगसामानाधिकरण्याभावाधिकरणत्वात् । यदिचैतद्वृक्षत्वे एतत्कपिसंयोगसामा-**

**नाधिकरण्यस्य सत्त्वात् कथं तदभाव इति । तर्ह्यात्मत्वेऽपि तुल्य-मेतत् । विरुद्धयोरप्यवच्छेदकभेदेनाविरोध इत्येतस्यापि साम्यात् ।**

**ಆಕ್ಷೇಪ**—ಯಾವ ಧರ್ಮವು ಸಾಧ್ಯಾಭಾವಸಮಾನಾಧಿಕರಣದಲ್ಲಿ ಅವೃತ್ತಿಯಾಗುವುದೋ ಅದೇ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕ. ಆತ್ಮತ್ವತ್ವವು ಸುಖಾಭಾವಾಧಿಕರಣನಾದ ಈಶ್ವರನಲ್ಲಿ ಇರುವ ಆತ್ಮತ್ವವೃತ್ತಿಯಾಗಿದೆ. ಆದ್ದರಿಂದ ಅದು ಸಾಮಾನಾಧಿಕರಣ್ಯಾವಚ್ಛೇಕವಲ್ಲ.

**ಸಮಾಧಾನ**—ಈ ರೀತಿಯಾದ ಅವಚ್ಛೇದಕತ್ವವನ್ನು ಕೇವಲಾನ್ವಯಿಸಾಧ್ಯಕ ಹೇತುತಾವಚ್ಛೇದಕದಲ್ಲಿ ಹೇಳಲು ಬರುವುದಿಲ್ಲ. ಅಲ್ಲಿ ಸಾಧ್ಯಾಭಾವವು ಅಪ್ರಸಿದ್ಧ.

**ಆಕ್ಷೇಪ**—ಸಾಧ್ಯಸಾಮಾನಾಧಿಕರಣ್ಯಾಭಾವಕ್ಕೆ ಅಧಿಕರಣವಾದುದರಲ್ಲಿ ಇರಬಾರದು. ಇದೇ ಅವಚ್ಛೇದಕತ್ವ. ಧೂಮತ್ವವು ವಹ್ನಿಸಾಮಾನಾಧಿಕರಣ್ಯ ಇಲ್ಲದ ಘಟಾದಿಗಳಲ್ಲಿ ಅವೃತ್ತಿಯಾಗಿದೆ. ಅರ್ಥಾತ್ ಸಕಲ ಧೂಮಗಳೂ ವಹ್ನಿಸಮಾನಾಧಿಕರಣಗಳೇ ಆಗಿರುವುದರಿಂದ ಧೂಮತ್ವ ವಹ್ನಿಸಮಾನಾಧಿಕರಣಮಾತ್ರ ವೃತ್ತಿಯಾಗಿದೆ. ಹೀಗಾಗಿ, ಅದು ವಹ್ನಿಸಾಮಾನಾಧಿಕರಣ್ಯಾವಚ್ಛೇದಕವಾಗಿದೆ. ಆತ್ಮತ್ವವು ಸುಖವಿಲ್ಲದ ಈಶ್ವರನಲ್ಲಿ ಇರುವುದರಿಂದ ಸುಖಸಮಾನಾಧಿಕರಣ್ಯಾಭಾವವೂ ಅದರಲ್ಲಿದೆ. ಅಂತಹ ಆತ್ಮತ್ವದಲ್ಲಿ ವೃತ್ತಿಯಾದುದರಿಂದ ಆತ್ಮತ್ವತ್ವವು ಸಾಮಾನಾಧಿಕರಣ್ಯಾವಚ್ಛೇದಕವಲ್ಲ. (ಕೇವಲಾನ್ವಯಿಸಾಧ್ಯಕಸ್ಥಳದಲ್ಲಿ ಸಾಧ್ಯಾಭಾವವು ಅಪ್ರಸಿದ್ಧವಾದರೂ ಸಾಧ್ಯಸಾಮಾನಾಧಿಕರಣ್ಯಾಭಾವವು ಅವೃತ್ತಿಗಗನಾದಿಗಳಲ್ಲಿ ಪ್ರಸಿದ್ಧವಾಗಿದೆ.)

**ಸಮಾಧಾನ**—ಇದೂ ಸರಿಯಲ್ಲ. "ವೃಕ್ಷಃ ಏತತ್‌ಕಪಿಸಂಯೋಗವಾನ್, ಏತದ್ ವೃಕ್ಷತ್ವಾತ್" ಎಂಬ ಅನುಮಾನದ ಹೇತುವಿನಲ್ಲಿ ಅವ್ಯಾಪ್ತಿ ಬರುತ್ತದೆ. ಕಪಿಸಂಯೋಗವು ಅವ್ಯಾಪ್ಯವೃತ್ತಿಯಾದುದರಿಂದ ಏತದ್‌ವೃಕ್ಷದಲ್ಲಿ ಮೂಲಾವಚ್ಛೇದೇನ ತದಭಾವ ಇದೆ. ಇದರಿಂದ ಹೇತುವು ಕಪಿಸಂಯೋಗ-ಸಾಮಾನಾಧಿಕರಣ್ಯಾಭಾವಕ್ಕೆ ಅಧಿಕರಣವಾಗಿದೆ. ಅಲ್ಲಿ ವೃತ್ತಿಯಾಗಿವೆ ಏತದ್‌ವೃಕ್ಷತ್ವತ್ವ. ಅವೃತ್ತಿತ್ವರೂಪವಾದ ಅವಚ್ಛೇದಕತ್ವವು ಬರುವುದಿಲ್ಲ. ಅವ್ಯಾಪ್ತಿ ಬರುತ್ತದೆ.

**ಆಕ್ಷೇಪ**—ಏತದ್‌ವೃಕ್ಷತ್ವವು ಕಪಿಸಂಯೋಗಸಾಮಾನಾಧಿಕರಣ್ಯಕ್ಕೆ ಅಧಿಕರಣವಾದುದರಿಂದ ಸಾಮಾನಾಧಿಕರಣ್ಯಾಭಾವಕ್ಕೆ ಅಧಿಕರಣವಾಗುವುದು ಹೇಗೆ?

**ಸಮಾಧಾನ**—ಈ ಪ್ರಶ್ನೆ ಆತ್ಮತ್ವಹೇತುವಿನಲ್ಲೂ ಇದೆ. ಆತ್ಮತ್ವವು ಜೀವಾತ್ಮರಲ್ಲಿ ಸುಖಸಮಾನಾಧಿಕರಣವಾಗಿದೆ. ಅದರಲ್ಲಿ ಸುಖಸಾಮಾನಾಧಿಕರಣ್ಯವೇ ಇರುವಾಗ ಸುಖಸಾಮಾನಾಧಿಕರಣ್ಯಾಭಾವ ಇರುವುದು ಹೇಗೆ?

ಇದಕ್ಕೆ ಹೀಗೆ ಉತ್ತರಿಸಬೇಕು— ಸಾಮಾನಾಧಿಕರಣ್ಯ-ತದಭಾವಗಳು ವಿರುದ್ಧಗಳಾದರೂ ಅವಚ್ಛೇದಕಭೇದೇನ ಆ ವಿರೋಧವನ್ನು ಪರಿಹಾರ ಮಾಡಬೇಕು. ವೃಕ್ಷದ ಅಗ್ರಾವಚ್ಛೇದೇನ

ಏತದ್ವೃಕ್ಷತ್ವದಲ್ಲಿ ಕಪಿಸಂಯೋಗ-ಸಾಮಾನಾಧಿಕರಣ್ಯ ಇದೆ. ಅದೇ ಏತದ್ವೃಕ್ಷತ್ವದಲ್ಲಿ ಮೂಲಾವಚ್ಛೇದೇನ ಕಪಿಸಂಯೋಗಸಾಮಾನಾಧಿಕರಣ್ಯಾಭಾವ ಇದೆ. ಈ ಉತ್ತರವನ್ನು ಆತ್ಮತ್ವದಲ್ಲೂ ಹೇಳಬಹುದು—ಜೀವಾತ್ಮಾವಚ್ಛೇದೇನ ಸುಖಸಾಮಾನಾಧಿಕರಣ್ಯವು ಆತ್ಮತ್ವದಲ್ಲಿದೆ, ಈಶ್ವರಾವಚ್ಛೇದೇನ ತದಭಾವವೂ ಇದೆ. ಆತ್ಮತ್ವರೂಪವಾದ ಒಂದೇ ಧರ್ಮದಲ್ಲಿ ಸುಖಸಾಮಾನಾಧಿಕರಣ್ಯ ಮತ್ತು ತತ್ಸಾಮಾನಾಧಿಕರಣ್ಯಾಭಾವ ಈ ಎರಡು ವಿರುದ್ಧಧರ್ಮಗಳು ಜೀವ-ಈಶ್ವರ ರೂಪವಾದ ಅವಚ್ಛೇದಕಭೇದೇನ ಇರಬಹುದು, ಎಂಬ ಸಮಾಧಾನ ಏತದ್ವೃಕ್ಷತ್ವದಲ್ಲೂ ಸಮಾನವಾದುದು. ಏವಂ ಚ, ಆತ್ಮತ್ವತ್ವವು ಸಾಧ್ಯಸಾಮಾನಾಧಿಕರಣ್ಯಾಭಾವಾಧಿಕರಣ ವೃತ್ತಿಯಾದುದರಿಂದ ಅವಚ್ಛೇದಕವಾಗುವುದಿಲ್ಲ. ಆತ್ಮತ್ವದಲ್ಲಿ ವ್ಯಾಪ್ತಿ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ. ಆದರೂ ತುಲ್ಯಯುಕ್ತ್ಯಾ ಏತದ್ವೃಕ್ಷತ್ವರೂಪ-ಸದ್ಧೇತುವಿನಲ್ಲಿ ಕಪಿಸಂಯೋಗ-ಸಾಮಾನಾಧಿಕರಣ್ಯಾಭಾವವು ಇರುವುದರಿಂದ ಅವ್ಯಾಪ್ತಿಯು ಇದ್ದೇ ಇದೆ.

## ನ್ಯಾಯದೀಪ

नापि, अधिकरणैकदेशानवच्छेदेन साध्यसामानाधिकरण्याभाववदवृत्तित्वं तत् । एतद्वृक्षत्वे चाधिकरणैकदेशमूलावच्छेदेनैव साध्यसामानाधिकरण्यमिति विशिष्टव्यतिरेकस्य तत्रापि सत्त्वान्नाव्याप्तिः । अत्मत्वे तु ईश्वररूपाधिकरणवृत्तित्वावच्छेदेनैव साध्यसामानाधिकरण्याभाववत्त्वम् । नतु तदैकदेशावच्छेदेनेति न तत्रातिव्याप्तिः । केवलान्वयिनि च तादृशसाध्यसामानाधिकरण्याभाववत्त्वं गगनादौ प्रसिद्धमिति न कोऽपि दोष इति युक्तम् । सुखादेरव्याप्यवृत्तितया जीवात्मन्यप्यात्मत्वस्य सुखसामानाधिकरण्याभावाधिकरणतया तत्र तदेकदेशवृत्तित्वस्यैवावच्छेदकत्वादिति दिक् ।

तस्मादवच्छेदकत्वानिरुक्तेः स्वरूपसम्बन्ध एवावच्छेदकत्वमिति नीलधूमेऽस्तीति। तथाच तादृशावच्छेदकधर्मवत्त्वान्नीलधूमोऽपि व्याप्य एवेति शङ्कितुर्भावः ।

**नचैवमिति ।** गुरुधर्मस्य व्याप्यतानवच्छेदकत्वे कारणविशेषाभावेन कार्यविशेषाभावानुमानं न स्यादित्यर्थः ।।

**ಆಕ್ಷೇಪ**—ಏತದ್ ವೃಕ್ಷತ್ವದಲ್ಲಿ ಅವ್ಯಾಪ್ತಿಯನ್ನು ಹೀಗೆ ಪರಿಹರಿಸಬಹುದು-ಅಧಿಕರಣದ ಏಕದೇಶಾನವಚ್ಛೇದೇನ ಸಾಧ್ಯಸಾಮಾನಾಧಿಕರಣ್ಯಾಭಾವ ಇರುವ ಹೇತುವಿನಲ್ಲಿ (ಅವಚ್ಛೇದಕ ಧರ್ಮವು) ಅವೃತ್ತಿಯಾಗಿರಬೇಕು. ಪ್ರಕೃತ ಏತದ್‌ವೃಕ್ಷತ್ವತ್ವವು ಹೀಗಾಗಿದೆ. ಏತದ್‌ವೃಕ್ಷ ರೂಪವಾದ ಏಕಾಧಿಕರಣದಲ್ಲೇ ಅಗ್ರ ಮತ್ತು ಮೂಲರೂಪವಾದ ಅವಚ್ಛೇದಕಭೇದೇನ ಏತದ್‌ವೃಕ್ಷತ್ವದಲ್ಲಿ ಕಪಿಸಂಯೋಗಸಾಮಾನಾಧಿಕರಣ್ಯ-ತದಭಾವಗಳು ಇವೆ. ಹೀಗೆ, 'ಏಕದೇಶಾನವಚ್ಛೇದೇನ' ಎಂಬ ವಿಶೇಷಣಾಂಶವು ಇಲ್ಲದಿರುವುದರಿಂದ ಏತದ್‌ವೃಕ್ಷತ್ವದಲ್ಲಿ ತದ್ವಿಶಿಷ್ಟವಾದ ವೃತ್ತಿತ್ವದ ವ್ಯತಿರೇಕವು ಇದೆ. ಹೀಗಾಗಿ ಏತದ್ ವೃಕ್ಷತ್ವತ್ವವು ಏಕದೇಶಾನವಚ್ಛೇದೇನ ಕಪಿಸಂಯೋಗ ಸಾಮಾನಾಧಿಕರಣ್ಯಾಭಾವವದ್ ವೃತ್ತಿಯಾಗಿಲ್ಲ. ಆದ್ದರಿಂದ ಏತದ್‌ವೃಕ್ಷತ್ವತ್ವವು ಸಾಮಾನಾಧಿಕರಣ್ಯಾವಚ್ಛೇದಕ ವಾಗುತ್ತದೆ. ಏತದ್‌ವೃಕ್ಷತ್ವದಲ್ಲಿ ಅವ್ಯಾಪ್ತಿ ಇಲ್ಲ.

ಆತ್ಮತ್ವದಲ್ಲಿ ಅತಿವ್ಯಾಪ್ತಿಯೂ ಪರಿಹಾರವಾಗುತ್ತದೆ—ಈಶ್ವರರೂಪವಾದ ಏಕಾಧಿಕರಣಾ ವಚ್ಛೇದೇನ ಸಾಧ್ಯಸಾಮಾನಾಧಿಕರಣ್ಯಾಭಾವವು ಆತ್ಮತ್ವದಲ್ಲಿದೆ. ಹೊರತು, ಈಶ್ವರನ ಏಕದೇಶಾವಚ್ಛೇದೇನ ಅಲ್ಲ. ಈಶ್ವರನಲ್ಲಿ ಸುಖಾಭಾವವು ವ್ಯಾಪ್ಯವೃತ್ತಿಯಾಗಿದೆ. ಆದ್ದರಿಂದ ಸುಖಸಾಮಾನಾಧಿಕರಣ್ಯಾಭಾವವು ಆತ್ಮತ್ವದಲ್ಲಿ ಏಕದೇಶಾವಚ್ಛೇದೇನ ಇರುವುದಲ್ಲ. ಈಶ್ವರರೂಪ ಅಧಿಕರಣಾವಚ್ಛೇದೇನ ಆತ್ಮತ್ವದಲ್ಲಿ ತಾದೃಶಸಾಮಾನಾಧಿಕರಣ್ಯಾಭಾವವು ಇದೆ. ತದ್‌ವೃತ್ತಿಯಾಗಿದೆ ಆತ್ಮತ್ವತ್ವ. ತದ್‌ವತ್ವ ಆತ್ಮತ್ವದಲ್ಲಿದೆ, ಅತಿವ್ಯಾಪ್ತಿ ಪರಿಹಾರವಾಗುತ್ತದೆ.

**ಆಕ್ಷೇಪ**—ಕೇವಲಾನ್ವಯಿಸಾಧ್ಯಕ ಹೇತುವಿನಲ್ಲಿ ವ್ಯಾಪ್ತಿಲಕ್ಷಣದ ಸಮನ್ವಯ ಹೇಗೆ? ಎಲ್ಲಾ ವಸ್ತುಗಳಲ್ಲೂ ಸಾಧ್ಯಸಾಮಾನಾಧಿಕರಣ್ಯವೇ ಇರುತ್ತದೆ. ತದಭಾವವು ಅಪ್ರಸಿದ್ಧವಾಗಿದೆ.

**ಸಮಾಧಾನ**—ಸಾಧ್ಯಾಭಾವವು ಅಪ್ರಸಿದ್ಧವಾದರೂ ಸಾಧ್ಯಸಾಮಾನಾಧಿಕರಣ್ಯಾಭಾವವು ಅವೃತ್ತಿಗಗನದಲ್ಲಿ ಪ್ರಸಿದ್ಧವಾಗಿದೆ. ತದವೃತ್ತಿತ್ವವು ಹೇತುತಾವಚ್ಛೇದಕದಲ್ಲಿದೆ. ತದ್‌ವತ್ವವು ಹೇತುವಿನಲ್ಲಿ, ಎಂದು ಅಲ್ಲೂ ಲಕ್ಷಣಸಮನ್ವಯವಾಗುತ್ತದೆ.

ಆದ್ದರಿಂದ ಏಕದೇಶಾನವಚ್ಛೇದೇನ ಸಾಧ್ಯಸಾಮಾನಾಧಿಕರಣ್ಯಾಭಾವವದವೃತ್ತಿತ್ವಂ ಅವಚ್ಛೇದಕತ್ವಂ, ಎಂದು ಹೇಳಬಹುದಲ್ಲವೆ?

**ಸಮಾಧಾನ**—ಇಲ್ಲ. ಹೀಗೆ ಹೇಳಿದರೂ ಆತ್ಮತ್ವದಲ್ಲಿ ಅತಿವ್ಯಾಪ್ತಿಯು ತಪ್ಪಿದ್ದಲ್ಲ. ಕಪಿಸಂಯೋಗದಂತೆ ಸುಖಾದಿಗಳೂ ಜೀವಾತ್ಮರಲ್ಲಿ ಅವ್ಯಾಪ್ಯವೃತ್ತಿಯೇ ಆಗಿವೆ. ಆತ್ಮರಲ್ಲಿ ಸುಖವು ಶರೀರಾವಚ್ಛೇದೇನ ಇದೆ, ಘಟಾವಚ್ಛೇದೇನ ಇಲ್ಲ. (ಆದ್ದರಿಂದಲೇ ಅವ್ಯಾಪ್ಯವೃತ್ತಿವಿಶೇಷ ಗುಣವತ್ವಂ, ಎಂಬುದು ಆಕಾಶಾತ್ಮರಿಗೆ ಸಾಧರ್ಮ್ಯವಾಗಿದೆ.) ಏವಂಚ ಆತ್ಮತ್ವವು ಕಿಂಚಿದವಚ್ಛೇನ ಸಾಧ್ಯಸಾಮಾನಾಧಿಕರಣ್ಯಾಭಾವವತ್ತಾಗಿದೆ. ಆತ್ಮತ್ವತ್ವವು ಏಕದೇದಶಾನವಚ್ಛೇದೇನ ಸಾಧ್ಯಸಾಮಾನಾಧಿಕರಣ್ಯಾಭಾವವದ್-ಅವೃತ್ತಿಯಾಯಿತು. ತಾದೃಶಧರ್ಮವತ್ವಾತ್ ಆತ್ಮತ್ವದಲ್ಲಿ ಅತಿವ್ಯಾಪ್ತಿ ಅಪರಿಹಾರ್ಯ.

ಹೀಗೆ, ಬೇರಾವವಿಧದ ಅವಚ್ಛೇದಕತ್ವವನ್ನೂ ಹೇಳಲು ಬರುವುದಿಲ್ಲವಾದುದರಿಂದ ಸ್ವರೂಪಸಂಬಂಧರೂಪವಾದ ಅವಚ್ಛೇದಕತ್ವವನ್ನೇ ಹೇಳಬೇಕು. ಅಂತಹ ಅವಚ್ಛೇದಕತ್ವವು ಧೂಮತ್ವ ದಲ್ಲಿದೆ. ತದ್‌ವತ್ವ ನೀಲಧೂಮದಲ್ಲೂ ಇದೆ. ಆದ್ದರಿಂದ ನೀಲಧೂಮವೂ ವ್ಯಾಪ್ಯವಾಗಲಿ, ಎಂದು ಪೂರ್ವಪಕ್ಷಿಯ ಅಭಿಪ್ರಾಯ. ಅದಕ್ಕೆ ಮಣಿಕಾರ "ತಾದೃಶಸಾಮಾನಾಧಿಕರಣ್ಯಾವಚ್ಛೇದಕಂ ಯದ್ಧೇತುತಾವಚ್ಛೇದಕಂ ತದ್‌ವತ್ವಂ ವ್ಯಾಪ್ತಿಃ" ಎಂದು ಪರಿಷ್ಕಾರ ಮಾಡಿದ್ದಾನೆ.

'ನ ಚೈವಂ' ಎಂಬ ಮೂಲದಲ್ಲಿ ಮಾಡಿರುವ ಆಕ್ಷೇಪ ಇದು—ಗುರುಧರ್ಮವು ವ್ಯಾಪ್ಯತಾನವಚ್ಛೇದಕವೆಂದಾದಲ್ಲಿ ಕಾರಣವಿಶೇಷಾಭಾವದಿಂದ ಕಾರ್ಯವಿಶೇಷಾಭಾವಾನು ಮಾನವನ್ನು ಮಾಡುವುದು ಹೇಗೆ? ಅಲ್ಲಿ ಹೇತು ಕಾರಣವಿಶೇಷಾಭಾವ. (ಆರ್ದ್ರೇಂಧನಪ್ರಭವ ವಹ್ನ್ಯಭಾವ) ಅದು ವ್ಯಾಪ್ಯವಾದಾಗ ಕಾರಣಸಾಮಾನ್ಯಾಭಾವವೂ (ವಹ್ನ್ಯಭಾವವು) ವ್ಯಾಪ್ಯವಾಗುತ್ತದೆ. ಲಾಘವಾತ್ ಸಾಮಾನ್ಯಾಭಾವತ್ವವೇ ವ್ಯಾಪ್ಯತಾವಚ್ಛೇದಕವಾಗುತ್ತದೆ. ವಿಶೇಷಾಭಾವತ್ವವು ಗುರುಧರ್ಮವಾದುದರಿಂದ ಅವಚ್ಛೇದಕವಾಗುವುದಿಲ್ಲ, ಎಂದು.

## ಅವತಾರಿಕೆ

**एवं नीलधूमदृष्टान्तेन शरीराजन्यत्वस्य व्याप्यत्वासिद्धत्वे पूर्वपक्षिते सति, न मण्युक्तं व्याप्तिस्वरूपमनुमित्यङ्गम् किंत्वन्यदेव । तच्चास्ति नीलधूमे शरीराजन्यत्वे च । अतो न व्याप्तिशून्यत्वमितिभावेन सिद्धान्तयति—अत्रोच्यत इत्यादिना ।**

ಇಲ್ಲಿಯವರೆಗೆ ಮಣಿಗ್ರಂಥದ ಅಭಿಪ್ರಾಯವನ್ನು ಅನುವಾದ ಮಾಡಲಾಗಿದೆ. ನೀಲಧೂಮವನ್ನು ದೃಷ್ಟಾಂತವನ್ನಾಗಿ ಕೊಟ್ಟು ಅದರಲ್ಲಿ ಹೇಗೆ ವ್ಯಾಪ್ತಿ ಇಲ್ಲವೋ ಅದರಂತೆ ಶರೀರಾಜನ್ಯತ್ವ ಹೇತುವಿನಲ್ಲೂ ವ್ಯಾಪ್ತಿ ಇಲ್ಲ. ವ್ಯಾಪ್ಯತ್ವಾಸಿದ್ಧಿದೋಷದಿಂದಾಗಿ ಶರೀರಾಜನ್ಯತ್ವವು ಪ್ರತಿಪಕ್ಷಾನುಮಾನವಾಗುವುದಿಲ್ಲ. ಇದು ಮಣಿಕಾರನ ಪೂರ್ವಪಕ್ಷ.

ಇದಕ್ಕೆ ಸಮಾಧಾನ—ಮಣಿಕಾರ ಹೇಳಿರುವ ವ್ಯಾಪ್ತಿಯು ಅನುಮಿತಿಗೆ ಅಂಗವಲ್ಲ. ಬೇರೊಂದು ವ್ಯಾಪ್ತಿಯೇ ಅನುಮಿತಿ ಕಾರಣ. ಆ ವ್ಯಾಪ್ತಿ ನೀಲಧೂಮದಲ್ಲೂ ಇದೆ, ಶರೀರಾಜನ್ಯತ್ವದಲ್ಲೂ ಇದೆ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ ಇಲ್ಲ. ಇದನ್ನು 'ಅತ್ರೋಚ್ಯತೇ' ಇತ್ಯಾದಿಯಾಗಿ ಮುಂದಿನ ಮೂಲದಲ್ಲಿ ಹೇಳಲಾಗಿದೆ.

## ಶರೀರಾಜನ್ಯತ್ವದಲ್ಲಿ ವ್ಯಾಪ್ಯತ್ವಾಸಿದ್ಧಿನಿರಾಸ

**अत्रोच्यते । व्यभिचारज्ञानस्य ह्यनुमितिप्रतिबन्धकत्वमनुभव-सिद्धम् । त्वदनुमतं च । तच्च न बाधादिवत् साक्षात्**

**साध्यविरुद्धविषयकत्वात् । किंतु करणीभूतव्याप्तिज्ञानविघटनद्वारा । तच्च व्याप्तेः त्वदुक्तसाध्यसामानाधिकरण्या-वच्छेदकरूपवत्त्वविपरीते व्यभिचाराभावविशिष्टसहचाररूपत्वे एव युक्तम् । विरुद्धवत् सहचार-रूपविशेष्यांशेनाविरोधेऽपि व्यभिचाराभावरूपविशेषणांशेन सह वैषयिकविरोधात् । नतु साध्यसामानाधिकरण्यावच्छेदक-रूपवत्त्वात्मकत्वे तद् युक्तम् । परस्परविरहानात्मकत्वेन साक्षादविरोधात् ।।**

ಮಣಿಕಾರನಿಗೆ ಪ್ರತಿಯಾಗಿ ನಾವು ಹೀಗೆ ಹೇಳುತ್ತೇವೆ—ವ್ಯಭಿಚಾರಜ್ಞಾನವು ಅನುಮಿತಿಗೆ ಪ್ರತಿಬಂಧಕವಾಗುತ್ತದೆ, ಎನ್ನುವುದು ಅನುಭವಸಿದ್ಧವಾಗಿದೆ. ಮಾತ್ರವಲ್ಲ, ಮಣಿಕಾರನೂ ಹಾಗೆಂದು ಒಪ್ಪಿರುತ್ತಾನೆ. ಸಾಧ್ಯವಿರುದ್ಧವಾದ ಸಾಧ್ಯಾಭಾವವಿಷಯಕವಾದ ಭಾಧಜ್ಞಾನವು ಹೇಗೆ ಅನುಮಿತಿಗೆ ಸಾಕ್ಷಾತ್ ಪ್ರತಿಬಂಧಕವೋ ಆ ರೀತಿ ವ್ಯಭಿಚಾರಜ್ಞಾನವು ಪ್ರತಿಬಂಧಕವಲ್ಲ. ಏಕೆಂದರೆ, ಅದು ಬಾಧದಂತೆ ಅನುಮಿತಿವಿರುದ್ಧ ವಿಷಯಕವಲ್ಲ. ಕಿಂತು, ಅನುಮಿತಿಕಾರಣವಾದ ವ್ಯಾಪ್ತಿಜ್ಞಾನವನ್ನು ವಿಘಟನೆ ಮಾಡಿ ಆ ಮೂಲಕ ಅನುಮಿತಿಗೆ ಪ್ರತಿಬಂಧಕವಾಗಬೇಕು. ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗಬೇಕಾದರೆ ವ್ಯಾಪ್ತಿಯು ವ್ಯಭಿಚಾರಕ್ಕೆ ವಿರುದ್ಧವಾಗಿರಬೇಕು. ಈ ಹಿಂದೆ ಮಣಿಕಾರ ಹೇಳಿರುವ ''ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕರೂಪವತ್ತ್ವಂ'' ಎಂಬ ವ್ಯಾಪ್ತಿಸ್ವರೂಪವು ''ಸಾಧ್ಯಾಭಾವವದ್‌ವೃತ್ತಿತ್ವ'ರೂಪವಾದ ವ್ಯಭಿಚಾರಕ್ಕೆ ವಿರೋಧಿಯಲ್ಲ. ಈ ವ್ಯಾಪ್ತಿಗೆ ವಿಪರೀತವಾದ 'ವ್ಯಭಿಚಾರಾಭಾವವಿಶಿಷ್ಟ-ಸಹಚಾರರೂಪವಾದ' ವ್ಯಾಪ್ತಿಸ್ವರೂಪವೇ ವ್ಯಭಿಚಾರವಿರೋಧಿರೂಪವಾಗುತ್ತದೆ. ಈ ವ್ಯಾಪ್ತಿಯ ವಿಶೇಷ್ಯಾಂಶ 'ಸಹಚಾರ'. ಅದು ವ್ಯಭಿಚಾರಕ್ಕೆ ವಿರೋಧಿಯಲ್ಲದಿದ್ದರೂ 'ವ್ಯಭಿಚಾರಾಭಾವರೂಪವಾದ' ವಿಶೇಷಣಾಂಶವು ವಿರುದ್ಧಹೇತ್ವಾಭಾಸದಂತೆ, ವಿರೋಧಿಯಾಗುತ್ತದೆ. ಏವಂಚ, ವ್ಯಾಪ್ತಿಜ್ಞಾನಕ್ಕೂ ವ್ಯಭಿಚಾರಜ್ಞಾನಕ್ಕೂ ವೈಷಯಿಕವಿರೋಧವು ಉಪಪನ್ನವಾಗುತ್ತದೆ. 'ಸಾಧ್ಯಸಾಮಾನಧಿಕರಣ್ಯಾವಚ್ಛೇದಕರೂಪವತ್ತ್ವಂ' ಎಂಬ ಮಣಿಕಾರ ಹೇಳಿರುವ ವ್ಯಾಪ್ತಿಯಲ್ಲಿ ವ್ಯಭಿಚಾರವಿರೋಧಿತ್ವ ಇಲ್ಲ. ಅವೆರಡೂ ಪರಸ್ಪರ ಭಾವಾಭಾವರೂಪಗಳಲ್ಲವಾದುದರಿಂದ ಸಾಕ್ಷಾದ್ವಿರೋಧವಿಲ್ಲ. ಆದ್ದರಿಂದ ವ್ಯಭಿಚಾರಜ್ಞಾನಕ್ಕೆ ತಾದೃಶವ್ಯಾಪ್ತಿವಿಘಟಕತ್ವವು ಯುಕ್ತವಲ್ಲ. ಆದ್ದರಿಂದ ಮಣಿಕಾರ ಹೇಳಿರುವ ವ್ಯಾಪ್ತಿಯು ಅನುಮಿತ್ಯೌಪಯಿಕವಾಗಿಲ್ಲ.

## ನ್ಯಾಯದೀಪ

**त्वदनुमतं चेति ।** अनुमितिकारणीभूताभावप्रतियोगि-यथार्थज्ञान-विषयत्वमिति व्यभिचारादिहेत्वाभासलक्षणोक्तेरिति भावः ।

ಹೀಗೆ, ಬೇರಾವವಿಧದ ಅವಚ್ಛೇದಕತ್ವವನ್ನೂ ಹೇಳಲು ಬರುವುದಿಲ್ಲವಾದುದರಿಂದ ಸ್ವರೂಪಸಂಬಂಧರೂಪವಾದ ಅವಚ್ಛೇದಕತ್ವವನ್ನೇ ಹೇಳಬೇಕು. ಅಂತಹ ಅವಚ್ಛೇದಕತ್ವವು ಧೂಮತ್ವ ದಲ್ಲಿದೆ. ತದ್‌ವತ್ತ್ವ ನೀಲಧೂಮದಲ್ಲೂ ಇದೆ. ಆದ್ದರಿಂದ ನೀಲಧೂಮವೂ ವ್ಯಾಪ್ಯವಾಗಲಿ, ಎಂದು ಪೂರ್ವಪಕ್ಷಿಯ ಅಭಿಪ್ರಾಯ. ಅದಕ್ಕೆ ಮಣಿಕಾರ ''ತಾದೃಶಸಾಮಾನಾಧಿಕರಣ್ಯಾವಚ್ಛೇದಕಂ ಯದ್ಧೇತುತಾವಚ್ಛೇದಕಂ ತದ್‌ವತ್ತ್ವಂ ವ್ಯಾಪ್ತಿಃ'' ಎಂದು ಪರಿಷ್ಕಾರ ಮಾಡಿದ್ದಾನೆ.

'ನ ಚೈವಂ' ಎಂಬ ಮೂಲದಲ್ಲಿ ಮಾಡಿರುವ ಆಕ್ಷೇಪ ಇದು—ಗುರುಧರ್ಮವು ವ್ಯಾಪ್ಯತಾನವಚ್ಛೇದಕವೆಂದಾದಲ್ಲಿ ಕಾರಣವಿಶೇಷಾಭಾವದಿಂದ ಕಾರ್ಯವಿಶೇಷಾಭಾವಾನು ಮಾನವನ್ನು ಮಾಡುವುದು ಹೇಗೆ? ಅಲ್ಲಿ ಹೇತು ಕಾರಣವಿಶೇಷಾಭಾವ. (ಆರ್ದ್ರೇಂಧನಪ್ರಭವ ವಹ್ನ್ಯಭಾವ) ಅದು ವ್ಯಾಪ್ಯವಾದಾಗ ಕಾರಣಸಾಮಾನ್ಯಾಭಾವವೂ (ವಹ್ನ್ಯಭಾವವು) ವ್ಯಾಪ್ಯವಾಗುತ್ತದೆ. ಲಾಘವಾತ್ ಸಾಮಾನ್ಯಾಭಾವತ್ವವೇ ವ್ಯಾಪ್ಯತಾವಚ್ಛೇದಕವಾಗುತ್ತದೆ. ವಿಶೇಷಾಭಾವತ್ವವು ಗುರುಧರ್ಮವಾದುದರಿಂದ ಅವಚ್ಛೇದಕವಾಗುವುದಿಲ್ಲ, ಎಂದು.

## ಅವತಾರಿಕೆ

**एवं नीलधूमदृष्टान्तेन शरीराजन्यत्वस्य व्याप्यत्वासिद्धत्वे पूर्वपक्षिते सति, न मण्युक्तं व्याप्तिस्वरूपमनुमित्यङ्गम् किंत्वन्यदेव । तच्चास्ति नीलधूमे शरीराजन्यत्वे च । अतो न व्याप्तिशून्यत्वमितिभावेन सिद्धान्तयति—अत्रोच्यत इत्यादिना ।**

ಇಲ್ಲಿಯವರೆಗೆ ಮಣಿಗ್ರಂಥದ ಅಭಿಪ್ರಾಯವನ್ನು ಅನುವಾದ ಮಾಡಲಾಗಿದೆ. ನೀಲಧೂಮವನ್ನು ದೃಷ್ಟಾಂತವನ್ನಾಗಿ ಕೊಟ್ಟು ಅದರಲ್ಲಿ ಹೇಗೆ ವ್ಯಾಪ್ತಿ ಇಲ್ಲವೋ ಅದರಂತೆ ಶರೀರಾಜನ್ಯತ್ವ ಹೇತುವಿನಲ್ಲೂ ವ್ಯಾಪ್ತಿ ಇಲ್ಲ. ವ್ಯಾಪ್ಯತ್ವಾಸಿದ್ಧಿದೋಷದಿಂದಾಗಿ ಶರೀರಾಜನ್ಯತ್ವವು ಪ್ರತಿಪಕ್ಷಾನುಮಾನವಾಗುವುದಿಲ್ಲ. ಇದು ಮಣಿಕಾರನ ಪೂರ್ವಪಕ್ಷ.

ಇದಕ್ಕೆ ಸಮಾಧಾನ—ಮಣಿಕಾರ ಹೇಳಿರುವ ವ್ಯಾಪ್ತಿಯು ಅನುಮಿತಿಗೆ ಅಂಗವಲ್ಲ. ಬೇರೊಂದು ವ್ಯಾಪ್ತಿಯೇ ಅನುಮಿತಿ ಕಾರಣ. ಆ ವ್ಯಾಪ್ತಿ ನೀಲಧೂಮದಲ್ಲೂ ಇದೆ, ಶರೀರಾಜನ್ಯತ್ವದಲ್ಲೂ ಇದೆ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ ಇಲ್ಲ. ಇದನ್ನು 'ಅತ್ರೋಚ್ಯತೇ' ಇತ್ಯಾದಿಯಾಗಿ ಮುಂದಿನ ಮೂಲದಲ್ಲಿ ಹೇಳಲಾಗಿದೆ.

## ಶರೀರಾಜನ್ಯತ್ವದಲ್ಲಿ ವ್ಯಾಪ್ಯತ್ವಾಸಿದ್ಧಿನಿರಾಸ

**अत्रोच्यते । व्यभिचारज्ञानस्य ह्यनुमितिप्रतिबन्धकत्वमनुभव-सिद्धम् । त्वदनुमतं च । तच्च न बाधादिवत् साक्षात्**

**साध्यविरुद्धविषयकत्वात् । किंतु करणीभूतव्याप्तिज्ञानविघटनद्वारा । तच्च व्याप्तेः त्वदुक्तसाध्यसामानाधिकरण्या-वच्छेदकरूपवत्त्वविपरीते व्यभिचाराभावविशिष्टसहचाररूपत्वे एव युक्तम् । विरुद्धवत् सहचार-रूपविशेष्यांशेनाविरोधेऽपि व्यभिचाराभावरूपविशेषणांशेन सह वैषयिकविरोधात् । नतु साध्यसामानाधिकरण्यावच्छेदक-रूपवत्त्वात्मकत्वे तद् युक्तम् । परस्परविरहानात्मकत्वेन साक्षादविरोधात् ॥**

ಮಣಿಕಾರನಿಗೆ ಪ್ರತಿಯಾಗಿ ನಾವು ಹೀಗೆ ಹೇಳುತ್ತೇವೆ—ವ್ಯಭಿಚಾರಜ್ಞಾನವು ಅನುಮಿತಿಗೆ ಪ್ರತಿಬಂಧಕವಾಗುತ್ತದೆ, ಎನ್ನುವುದು ಅನುಭವಸಿದ್ಧವಾಗಿದೆ. ಮಾತ್ರವಲ್ಲ, ಮಣಿಕಾರನೂ ಹಾಗೆಂದು ಒಪ್ಪಿರುತ್ತಾನೆ. ಸಾಧ್ಯವಿರುದ್ಧವಾದ ಸಾಧ್ಯಾಭಾವವಿಷಯಕವಾದ ಬಾಧಜ್ಞಾನವು ಹೇಗೆ ಅನುಮಿತಿಗೆ ಸಾಕ್ಷಾತ್ ಪ್ರತಿಬಂಧಕವೋ ಆ ರೀತಿ ವ್ಯಭಿಚಾರಜ್ಞಾನವು ಪ್ರತಿಬಂಧಕವಲ್ಲ. ಏಕೆಂದರೆ, ಅದು ಬಾಧದಂತೆ ಅನುಮಿತಿವಿರುದ್ಧ ವಿಷಯಕವಲ್ಲ. ಕಿಂತು, ಅನುಮಿತಿಕಾರಣವಾದ ವ್ಯಾಪ್ತಿಜ್ಞಾನವನ್ನು ವಿಘಟನೆ ಮಾಡಿ ಆ ಮೂಲಕ ಅನುಮಿತಿಗೆ ಪ್ರತಿಬಂಧಕವಾಗಬೇಕು. ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗಬೇಕಾದರೆ ವ್ಯಾಪ್ತಿಯು ವ್ಯಭಿಚಾರಕ್ಕೆ ವಿರುದ್ಧವಾಗಿರಬೇಕು. ಈ ಹಿಂದೆ ಮಣಿಕಾರ ಹೇಳಿರುವ ''ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕರೂಪವತ್ತ್ವಂ'' ಎಂಬ ವ್ಯಾಪ್ತಿಸ್ವರೂಪವು ''ಸಾಧ್ಯಾಭಾವವದ್‌ವೃತ್ತಿತ್ವ'ರೂಪವಾದ ವ್ಯಭಿಚಾರಕ್ಕೆ ವಿರೋಧಿಯಲ್ಲ. ಈ ವ್ಯಾಪ್ತಿಗೆ ವಿಪರೀತವಾದ 'ವ್ಯಭಿಚಾರಾಭಾವವಿಶಿಷ್ಟ–ಸಹಚಾರರೂಪವಾದ' ವ್ಯಾಪ್ತಿಸ್ವರೂಪವೇ ವ್ಯಭಿಚಾರವಿರೋಧಿರೂಪವಾಗುತ್ತದೆ. ಈ ವ್ಯಾಪ್ತಿಯ ವಿಶೇಷ್ಯಾಂಶ 'ಸಹಚಾರ'. ಅದು ವ್ಯಭಿಚಾರಕ್ಕೆ ವಿರೋಧಿಯಲ್ಲದಿದ್ದರೂ 'ವ್ಯಭಿಚಾರಾಭಾವರೂಪವಾದ' ವಿಶೇಷಣಾಂಶವು ವಿರುದ್ಧಹೇತ್ವಾಭಾಸದಂತೆ, ವಿರೋಧಿಯಾಗುತ್ತದೆ. ಏವಂಚ, ವ್ಯಾಪ್ತಿಜ್ಞಾನಕ್ಕೂ ವ್ಯಭಿಚಾರಜ್ಞಾನಕ್ಕೂ ವೈಷಯಿಕವಿರೋಧವು ಉಪಪನ್ನವಾಗುತ್ತದೆ. 'ಸಾಧ್ಯಸಾಮಾನಧಿಕರಣ್ಯಾವಚ್ಛೇದಕರೂಪವತ್ತ್ವಂ' ಎಂಬ ಮಣಿಕಾರ ಹೇಳಿರುವ ವ್ಯಾಪ್ತಿಯಲ್ಲಿ ವ್ಯಭಿಚಾರವಿರೋಧಿತ್ವ ಇಲ್ಲ. ಅವೆರಡೂ ಪರಸ್ಪರ ಭಾವಾಭಾವರೂಪಗಳಲ್ಲವಾದುದರಿಂದ ಸಾಕ್ಷಾದ್ವಿರೋಧವಿಲ್ಲ. ಆದ್ದರಿಂದ ವ್ಯಭಿಚಾರಜ್ಞಾನಕ್ಕೆ ತಾದೃಶವ್ಯಾಪ್ತಿವಿಘಟಕತ್ವವು ಯುಕ್ತವಲ್ಲ. ಆದ್ದರಿಂದ ಮಣಿಕಾರ ಹೇಳಿರುವ ವ್ಯಾಪ್ತಿಯು ಅನುಮಿತ್ಯೌಪಯಿಕವಾಗಿಲ್ಲ.

## ನ್ಯಾಯದೀಪ

**त्वदनुमतं चेति ।** अनुमितिकारणीभूताभावप्रतियोगि-यथार्थज्ञान-विषयत्वमिति व्यभिचारादिहेत्वाभासलक्षणोक्तेरिति भावः ।

अनुमितिप्रतिबन्धकत्वं हि द्वेधा । अनुमितिविषयविरोधिविषयत्वेन साक्षादेव वा, तत्करणीभूतज्ञानविषयाभावावगाहित्वेन तत्करण-विघटकत्वेन वा । तत्राद्यं बाधप्रतिपक्षयोरेव । नत्वन्यस्य । द्वितीयं तु स्यादिति भावेनाह—**तच्चेत्यादिना ।**

**व्याप्तिज्ञानेति ।** यद्यपि परामर्श एवानुमितिकरणं तार्किकमते । यथाह ''लिङ्गपरामर्शोऽनुमानम्'' इति । तथापि, करणस्य व्यापारवत्त्व-नियमात्, परामर्शस्य करणत्वे व्यापाराभावाद् 'व्याप्तिज्ञानं करणं परामर्शोऽवान्तरव्यापारः' इति लिङ्गकरणतावादे मणिकृदुक्तरीत्या करणीभूतव्याप्तिज्ञानेत्युक्तम् । **तच्चेति ।** व्याप्तिज्ञानविघटकत्व-मित्यर्थः । मूलारूढतां दर्शयितुं विपरीत इत्युक्तिः ।

युक्तमित्येतद् व्यनक्ति—**विरुद्धवदिति ।** साध्याभावमात्रसम्बद्ध-विरुद्धहेत्वाभासवदित्यर्थः । **वैषयिकेति ।** भावाभावरूपविरुद्धविषय-कृतेत्यर्थः । **तद् युक्तमिति ।** व्याप्तिज्ञानविघटकत्वं युक्तमित्यर्थः ।

ವ್ಯಭಿಚಾರಜ್ಞಾನವು ಅನುಮಿತಿಪ್ರತಿಬಂಧಕ ಎನ್ನುವುದು ಮಣಿಕಾರನಿಗೂ ಸಮ್ಮತ ಎಂದಿದೆ ಮೂಲದಲ್ಲಿ. ಅದು ಹೇಗೆಂದರೆ, ಮಣಿಕಾರ ''ಅನುಮಿತಿಕಾರಣೀಭೂತಾಭಾವಪ್ರತಿಯೋಗಿತ್ವಂ'' ಇತ್ಯಾದಿ ಹೇತ್ವಾಭಾಸಸಾಮಾನ್ಯಲಕ್ಷಣವನ್ನು ಹೇಳಿದ್ದಾನೆ. ವ್ಯಭಿಚಾರದಲ್ಲಿ ಈ ಲಕ್ಷಣವನ್ನು ಸಮನ್ವಯಮಾಡಬೇಕಾದರೆ ವ್ಯಭಿಚಾರಜ್ಞಾನಾಭಾವವು ಅನುಮಿತಿಗೆ ಕಾರಣವೆಂದು ಅಂಗೀಕರಿಸ ಬೇಕು. ಆಗ ವ್ಯಭಿಚಾರಜ್ಞಾನದಲ್ಲಿ ಕಾರಣೀಭೂತಾಭಾವಪ್ರತಿಯೋಗಿತ್ವರೂಪವಾದ ಪ್ರತಿಬಂಧಕತ್ವ ಸಿದ್ಧವಾಗುತ್ತದೆ.

ದೋಷಜ್ಞಾನಗಳಿಗೆ ಅನುಮಿತಿಪ್ರತಿಬಂಧಕತ್ವವು ಎರಡುವಿಧದಿಂದ ಬರಬಹುದು— ಒಂದು ಸಾಕ್ಷಾತ್, ಅಂದರೆ ಅನುಮಿತಿವಿಷಯಕ್ಕೆ ವಿರುದ್ಧವಾದುದು ದೋಷಜ್ಞಾನಕ್ಕೆ ವಿಷಯ ವಾಗಿರುವುದು. ಅದಕ್ಕೆ ಬಾಧಜ್ಞಾನ, ಸತ್ಪ್ರತಿಪಕ್ಷಜ್ಞಾನಗಳು ಉದಾಹರಣೆಗಳು. ಬಾಧಜ್ಞಾನವು ತದಭಾವವಿಷಯಕತ್ವೇನ, ಪ್ರತಿಪಕ್ಷಜ್ಞಾನವು ತದಭಾವವ್ಯಾಪ್ಯವಿಷಯಕತ್ವೇನ ಪ್ರತಿಬಂಧಕ ಗಳಾಗುತ್ತವೆ.

ಇನ್ನೊಂದು ವಿಧದ ಪ್ರತಿಬಂಧಕತ್ವ-ಅನುಮಿತಿಕಾರಣೀಭೂತವಾದ ಯಾವ ಜ್ಞಾನವಿದೆಯೋ

ತದ್ವಿಷಯಾಭಾವವನ್ನು ವಿಷಯೀಕರಿಸುವ ಮೂಲಕ ಕಾರಣವಿಘಟಕತ್ವೇನ ಅನುಮಿತಿಗೆ ಪ್ರತಿಬಂಧಕವಾಗುತ್ತದೆ. ಉದಾಹರಣೆಗೆ—ಅಸಿದ್ಧಿಜ್ಞಾನ. ಅದು ಅನುಮಿತಿಗೆ ಕಾರಣವಾದ ಪರಾಮರ್ಶವಿಘಟಕವಾಗಿದೆ. "ಸಾಧ್ಯವ್ಯಾಪ್ಯಹೇತುಮಾನ್ ಪಕ್ಷಃ" ಎಂಬ ಜ್ಞಾನ ಅನುಮಿತಿಗೆ ಕಾರಣ. ಅದಕ್ಕೆ ವಿಷಯವಾದುದು ಹೇತುಮತ್ಪಕ್ಷ. ತದಭಾವ=ಹೇತ್ವಭಾವವತ್ ಪಕ್ಷ. ಅದನ್ನು ಅಸಿದ್ಧಿಜ್ಞಾನವು ವಿಷಯೀಕರಿಸುತ್ತದೆ. ಆದರಿಂದ ಅದು ಪರಾಮರ್ಶಕ್ಕೆ ಪ್ರತಿಬಂಧಕವಾಗಿ ಆ ಮೂಲಕ ಅನುಮಿತ್ಯನುತ್ಪಾದಕ್ಕೆ ಕಾರಣವಾಗುತ್ತದೆ. ಇಂತಹ ಪ್ರತಿಬಂಧಕತ್ವವನ್ನು ವ್ಯಭಿಚಾರಜ್ಞಾನಕ್ಕೆ ಹೇಳಬೇಕು, ಎನ್ನುವ ಅಭಿಪ್ರಾಯದಿಂದ "ತಚ್ಚ" ಇತ್ಯಾದಿವಾಕ್ಯವು ಹೊರಟಿದೆ.

ಮೂಲದಲ್ಲಿ 'ಕರಣೀಭೂತವ್ಯಾಪ್ತಿಜ್ಞಾನ' ಎಂದು ಅನುಮಿತಿಗೆ ಕರಣವ್ಯಾಪ್ತಿಜ್ಞಾನ ಎನ್ನಲಾಗಿದೆ. ಆದರೆ ತಾರ್ಕಿಕಮತದಲ್ಲಿ ಪರಾಮರ್ಶವೇ ಅನುಮಿತಿಕರಣ. "ತತ್‌ಕರಣಮ್ ಅನುಮಾನಮ್। ತಚ್ಚ ಲಿಂಗಪರಾಮರ್ಶಃ।" ಎಂಬ ಮಣಿವಾಕ್ಯದಿಂದ ಇದು ತಿಳಿಯುತ್ತದೆ. ಆದರೆ, ಪರಾಮರ್ಶವು ಕರಣವಾಗಲಾರದು. "ವ್ಯಾಪಾರವತ್ ಅಸಾಧಾರಣಂ ಕಾರಣಂ ಕರಣಮ್" ಕರಣವಾಗಬೇಕಾದರೆ ವ್ಯಾಪಾರವಿರಬೇಕು. ಲಿಂಗಪರಾಮರ್ಶಕ್ಕೆ ವ್ಯಾಪಾರವಿಲ್ಲ. ಪರಾಮರ್ಶಾವ್ಯವಹಿತೋತ್ತರದಲ್ಲೇ ಅನುಮಿತಿ ಹುಟ್ಟುತ್ತದೆ. ವ್ಯಾಪ್ತಿಜ್ಞಾನವು ಕರಣವಾದರೆ ಪರಾಮರ್ಶವು ವ್ಯಾಪಾರವಾಗುತ್ತದೆ. ಆದಕ್ಕೆ ಕರಣತ್ವವು ಉಪಪನ್ನವಾಗುತ್ತದೆ. ಇದನ್ನು ಮಣಿಗ್ರಂಥದ 'ಲಿಂಗಕರಣತಾವಾದದಲ್ಲಿ' ಮಣಿಕಾರನೇ ಹೇಳುತ್ತಾನೆ. ಅದಕ್ಕನುಸಾರವಾಗಿ ಮೂಲದಲ್ಲೂ ಹೇಳಲಾಗಿದೆ.

**"यत्तु व्यापाराभावात् न परामर्शः करणमिति तत् तथैव । किन्तु व्याप्तिज्ञानं करणं, परामर्शो व्यापारः।"**

(ಲಿಂಗಕರಣತಾ ಪ್ರಕರಣ. ಮಣಿ)

"ವಿಪರ್ಯಯೇಣಾಪಿ ಅನುಮಾತುಂ ಶಕ್ಯತ್ವಾತ್" ಎಂಬ ಆಚಾರ್ಯರ ತತ್ತ್ವನಿರ್ಣಯ-ವಾಕ್ಯಾರೂಢವನ್ನಾಗಿ ಮಾಡಲು ಮೂಲದಲ್ಲಿ "ವಿಪರೀತೇ" ಎಂಬ ಪದವಿದೆ.

**नच व्यभिचारेण हेतुतावच्छेदकस्य साध्यसामानाधिकरण्या-नवच्छेदकत्वानुमानात् परम्परया विरोधः । व्यभिचारज्ञानानन्तरमेव व्याप्तिविरहज्ञानानुभवेन परम्पराकल्पनेऽनुभवविरोधात् । बाधादिवत् साक्षादनुमितिप्रतिबन्धकत्वस्य, असिद्ध्यादिवत् परामर्शविषयाभावत्वस्य चाभावेन उपाधिवद्धेत्वाभासत्वोपाधित्वाभावापत्तेश्च ।।**

**ಆಕ್ಷೇಪ**—ಮಣ್ಯುಕ್ತವ್ಯಾಪ್ತಿಜ್ಞಾನವು ವ್ಯಭಿಚಾರಜ್ಞಾನಕ್ಕೆ ಸಾಕ್ಷಾದ್ವಿರೋಧಿಯಾಗದಿದ್ದರೂ ಪರಂಪರಯಾ ವಿರೋಧಿಯಾಗತ್ತದೆ. ಸಾಧ್ಯಾಭಾವಸಂಬಂಧವು ಹೇತುವಿನಲ್ಲಿದ್ದರೆ ವ್ಯಭಿಚಾರ. ಇಂತಹ ಸಾಧ್ಯಾಭಾವಸಂಬಂಧದಿಂದ ಹೇತುತಾವಚ್ಛೇದಕವು ಸಾಧ್ಯಸಾಮಾನಾಧಿಕರಣ್ಯದಲ್ಲಿ ಅನವಚ್ಛೇದಕ, ಎಂದು ಅನುಮಾನಮಾಡಬಹುದು. ಅನುಮಾನಕ್ರಮ ಹೀಗೆ—'ಧೂಮವಾನ್ ವಹ್ನೇಃ' ಇದು ವ್ಯಭಿಚಾರಿಹೇತು. ಇಲ್ಲಿ ಹೇತುತಾವಚ್ಛೇದಕವಾದ ವಹ್ನಿತ್ವವನ್ನು ಪಕ್ಷವನ್ನಾಗಿ ಮಾಡಬೇಕು—

ವಹ್ನಿತ್ವಂ–ನ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕಮ್, ಧೂಮಾಭಾವ–ಸಮಾನಾಧಿಕರಣ–ವೃತ್ತಿತ್ವಾತ್ ।

ದೂಮಾಭಾವಾಧಿಕರಣವಾದ ಅಯೋಗೋಲಕದಲ್ಲಿ ವಹ್ನಿಯು ಇದೆ. ತದ್‌ವೃತ್ತಿಯಾಗಿದೆ, ವಹ್ನಿತ್ವ. ಅದರಿಂದ ವಹ್ನಿತ್ವವು ದೂಮಸಾಮಾನಾಧಿಕರಣ್ಯದಲ್ಲಿ ಅವಚ್ಛೇದಕವಲ್ಲ, ಎಂದು ಅನುಮಾನದ ಅರ್ಥ.

ಹೀಗೆ ವ್ಯಭಿಚಾರಜ್ಞಾನವು ಅನವಚ್ಛೇದಕತ್ವಜ್ಞಾನಕ್ಕೆ ಕಾರಣವಾಗುವ ಮೂಲಕ ವ್ಯಾಪ್ತಿಜ್ಞಾನ ಪ್ರತಿಬಂಧಕವಾಗುತ್ತದೆ.

**ಸಮಾಧಾನ**—ಇದು ಅನುಭವವಿರುದ್ಧವಾದ ಕಲ್ಪನೆ. ವ್ಯಭಿಚಾರಜ್ಞಾನ ಬಂದ ಸಮನಂತರದಲ್ಲೇ ವ್ಯಾಪ್ತಿಜ್ಞಾನವು ಪ್ರತಿಬದ್ಧವಾಗುವುದು ಅಥವಾ ಹೇತುವಿನಲ್ಲಿ ವ್ಯಾಪ್ತಿ ಇಲ್ಲ, ಎಂದು ತಿಳಿಯುವುದು ಅನುಭವಸಿದ್ಧವಾಗಿದೆ. ಅದು ಪರಂಪರಯಾ ಪ್ರತಿಬಂಧಕ ಎಂದು ಕಲ್ಪಿಸುವುದು ಈ ಅನುಭವಕ್ಕೆ ವಿರುದ್ಧವಾಗುತ್ತದೆ.

ಇನ್ನೂ ಒಂದು ಅನುಪಪತ್ತಿ ಇದೆ—ಹೀಗೆ ಹೇಳಿದರೆ, ವ್ಯಭಿಚಾರವು ಹೇತ್ವಾಭಾಸವೇ ಆಗಲಾರದು. ಉಪಾಧಿದೋಷವು ವ್ಯಭಿಚಾರೋನ್ನಯನ ದ್ವಾರಾ ಪ್ರತಿಬಂಧಕವಾದುದರಿಂದ ಅದು ಹೇಗೆ ಹೇತ್ವಾಭಾಸವಲ್ಲವೋ ವ್ಯಭಿಚಾರವೂ ಅದರಂತಾದೀತು. ಅದು ಬಾಧಾದಿಗಳಂತೆ ಸಾಕ್ಷಾತ್ ಅನುಮಿತಿಗೆ ಪ್ರತಿಬಂಧಕವೂ ಅಲ್ಲ. ಅಸಿದ್ಧ್ಯಾದಿಗಳಂತೆ ಅನುಮಿತಿಜನಕ–ಪರಾಮರ್ಶಕ್ಕೂ ಪ್ರತಿಬಂಧಕವಲ್ಲ. ಏಕೆಂದರೆ, ತದ್ವಿರೋಧಿವಿಷಯಕತ್ವವು ವ್ಯಭಿಚಾರಜ್ಞಾನದಲ್ಲಿ ಇಲ್ಲ. ಹೀಗೆ ವ್ಯಭಿಚಾರದಲ್ಲಿ ಹೇತ್ವಾಭಾಸೋಪಾಧಿಯೇ ಇಲ್ಲ. ಅನುಮಿತಿ–ತತ್ಕರಣಾನ್ಯತರ–ಪ್ರತಿಬಂಧಕತ್ವವೇ ಹೇತ್ವಾಭಾಸೋಪಾಧಿ. ಅದು ಮಣಿಕಾರರೀತ್ಯಾ ವ್ಯಭಿಚಾರದಲ್ಲಿ ಇಲ್ಲ.

## ನ್ಯಾಯದೀಪ

**व्यभिचारेणेति** । साध्याभावसम्बन्धरूपव्यभिचारेणेत्यर्थः । **परम्परयेति** । पर्वतो धूमवान् वह्निमत्त्वादित्यत्र 'वह्नित्वादिरूपहेतुतावच्छेदकं,

न साध्यसामानाधिकरण्यावच्छेदकं साध्याभावसमानाधिकरणवृत्तित्वात्, इति साध्यसामानाधिकरण्यानवच्छेदकत्वानुमितिः । तया च तादृशावच्छेदकधर्मवत्त्वरूपव्याप्तिज्ञानं नेति व्यभिचारज्ञानस्यानवच्छेदकत्व-ज्ञानद्वारा व्याप्तिज्ञानप्रतिबन्धकत्वमित्यर्थः ।

अनुभवे विवदमानं प्रत्याह–**बाधादिवदिति। हेत्वाभासत्वोपाधित्वेति** । अनुमितिप्रतिबन्धकयथार्थज्ञानविषयत्वस्य हेत्वाभासतायामुपाधित्वरूपत्वात्तस्य च व्यभिचारोन्नायकोपाधाविव साध्यसामानाधिकरण्यानवच्छेदकत्वानुमापके व्यभिचारेप्यभावेनोपाधिवद् व्यभिचारोऽपि हेत्वाभासो न स्यादित्यर्थः ।

ಸಾಧ್ಯಸಂಬಂಧಾಭಾವರೂಪವಾದ ವ್ಯಭಿಚಾರದಿಂದ ಹೇತುತಾವಚ್ಛೇದಕದಲ್ಲಿ ಸಾಧ್ಯ-ಸಾಮಾನಾಧಿಕರಣ್ಯಾನವಚ್ಛೇದಕತ್ವವನ್ನು ಅನುಮಾನಮಾಡಬಹುದು, ಎಂದು 'ವ್ಯಭಿಚಾರೇಣ' ಇತ್ಯಾದಿ ಮೂಲವಾಕ್ಯದ ಅಭಿಪ್ರಾಯ. ('ಯತ್ಯದಭಾವಸಮಾನಾಧಿಕರಣಂ ತದ್ವೃತ್ತಿ ಧರ್ಮಃ ತತ್ಸಾಮಾನಾಧಿಕರಣ್ಯಾವಚ್ಛೇದಕಃ ನ ಭವತಿ' ಎಂದು ಸಾಮಾನ್ಯಮುಖೀ ವ್ಯಾಪ್ತಿಯಿಂದ ಅದನ್ನು ಸಾಧಿಸಬಹುದು.)

ಮೂಲದಲ್ಲಿ 'ಹೇತ್ವಾಭಾಸತ್ವೋಪಾಧಿತ್ವಾನುಪಪತ್ತೇಃ' ಎಂದಿದೆ. ಅನುಮಿತಿಪ್ರತಿಬಂಧಕ-ಯಥಾರ್ಥಜ್ಞಾನವಿಷಯತ್ವ, ಇದೇ ಹೇತ್ವಾಭಾಸತ್ವ ಪ್ರಯೋಜಕವಾದ ಉಪಾಧಿ. ಇಂತಹ ಉಪಾಧಿಯು ವ್ಯಭಿಚಾರೋನ್ನಾಯಕವಾದ "ಉಪಾಧಿದೋಷದಲ್ಲಿ" ಇಲ್ಲ. ಆದ್ದರಿಂದಲೇ ಉಪಾಧಿದೋಷವು ಹೇತ್ವಾಭಾಸವಲ್ಲ. ಅದರಂತೆ "ಸಾಧ್ಯಸಾಮಾನಾಧಿಕರಣ್ಯಾನವಚ್ಛೇದಕತ್ವಕ್ಕೆ ಅನುಮಾಪಕವಾದ ವ್ಯಭಿಚಾರವೂ ಹೇತ್ವಾಭಾಸವಾಗಲಿಕ್ಕಿಲ್ಲ" ಎಂದರ್ಥ.

**नचोदाहरणवाक्येन तदप्रतीतिः । तत्र वीप्साऽस्तीति मते "नित्यवीप्सयोः" इति सूत्रेण व्याप्तिप्रतिपादनेच्छायां सत्यामादिष्टस्यैकार्थवाचकत्वेनैकपदरूपस्य 'योय' इत्यस्य शब्दस्यानुमित्यङ्गत्वेन निर्णीताव्यभिचारविशिष्ट–सहचाररूपव्याप्तिवाचकत्वोपपत्तेः ।**

**वीप्सा नास्तीति मते उदाहरणोत्पादित–सहचारदर्शनसहकृतेन मनसैवोक्तव्याप्तिज्ञानसम्भवात् । तथाच व्यभिचाराभावविशिष्ट-**

**सहचाररूपा व्याप्तिर्नीलधूमे, शरीराजन्यत्वे चास्तीति कथं तयोर्व्याप्यत्वासिद्धिः ?**

ವ್ಯಭಿಚಾರಾಭಾವವಿಶಿಷ್ಟ-ಸಹಚಾರವು ವ್ಯಾಪ್ತಿ, ಎಂದಿರುವುದು ಸರಿಯಲ್ಲ. ಅಂತಹ ವ್ಯಾಪ್ತಿಯು ದೃಷ್ಟಾಂತ ವಾಕ್ಯಪ್ರತಿಪಾದ್ಯವಲ್ಲ, ಎಂದು ಆಕ್ಷೇಪ. ಇದಕ್ಕೆ ಸಮಧಾನ ಹೀಗೆ— ಉದಾಹರಣವಾಕ್ಯದಲ್ಲಿ 'ವೀಪ್ಸಾ' (ದ್ವಿರುಚ್ಚಾರಣೆ) ಇದೆ ಎಂದು ಒಂದು ಪಕ್ಷ, ಇಲ್ಲ ಎನ್ನುವುದು ಇನ್ನೊಂದು ಪಕ್ಷ. ಇದೆ ಎಂಬ ಪಕ್ಷದಲ್ಲಿ 'ವೀಪ್ಸಾ' ಎಂದರೆ ಪ್ರಕೃತದಲ್ಲಿ 'ವ್ಯಾಪ್ತಿಪ್ರತಿಪಾದನೇಚ್ಛಾ'. ಇಂತಹ ಇಚ್ಛೆ ಇದ್ದಾಗ ''ನಿತ್ಯವೀಪ್ಸಯೋಃ'' ಎಂಬ ಸೂತ್ರದಿಂದ 'ಯಃ' ಎಂಬ ಒಂದು ಪದಕ್ಕೆ ''ಯೋಯಃ'' ಎಂಬ ದ್ವಿರುಕ್ತ ವರ್ಣಸಮುದಾಯವು ಆದೇಶವಾಗಿ ಬರುತ್ತದೆ. 'ಯೋಯಃ' ಎಂಬುದು ಏಕಪದರೂಪ. ಸ್ಥಾನಿವದ್ಭಾವೇನ ಅದಕ್ಕೆ ಪ್ರಾತಿಪದಿಕಸಂಜ್ಞೆಯೂ ಇದೆ. ಅದಕ್ಕೆ ಅನುಮಿತ್ಯಂಗತ್ವೇನ ಈಪ್ಸಿತವಾದ ವ್ಯಾಪ್ತಿಯು ಅರ್ಥ. ''ಅವ್ಯಭಿಚಾರವಿಶಿಷ್ಟಸಹಚಾರವೇ'' ಅಂತಹ ವ್ಯಾಪ್ತಿ. ಆದ್ದರಿಂದ 'ವಹ್ನ್ಯಭಿಚಾರವಿಶಿಷ್ಟ ಸಹಚಾರವಾನ್ ಧೂಮಃ'' ಎಂದು ಅದರ ಅರ್ಥ. ಹೀಗೆ ದೃಷ್ಟಾಂತವಾಕ್ಯವು ವ್ಯಾಪ್ತಿಪ್ರತಿಪಾದಕವಾಗುತ್ತದೆ.

ವೀಪ್ಸಾ ಇಲ್ಲ, ಎಂಬ ಎರಡನೆಯ ಪಕ್ಷದಲ್ಲಿ ಉದಾಹರಣ ವಾಕ್ಯದಿಂದ ವಹ್ನಿಸಹಚಾರ ಜ್ಞಾನವು ಧೂಮದಲ್ಲಿ ಹುಟ್ಟುತ್ತದೆ. ಅದರ ಸಹಕಾರದಿಂದ ಮಾನಸಿಕವಾಗಿ ವ್ಯಾಪ್ತಿ ನಿಶ್ಚಯವು ಬರುತ್ತದೆ.

ಏವಂಚ, ವ್ಯಭಿಚಾರಾಭಾವ-ವಿಶಿಷ್ಟಸಹಚಾರ ರೂಪವಾದ ವ್ಯಾಪ್ತಿಯು ನೀಲಧೂಮದಲ್ಲೂ ಶರೀರಾಜನ್ಯತ್ವದಲ್ಲೂ ಇದೆ. ಅಂದಮೇಲೆ ಆ ಹೇತುಗಳಲ್ಲಿ ವ್ಯಾಪ್ಯತ್ವಾಸಿದ್ಧಿ ಇರುವುದು ಹೇಗೆ ಸಾಧ್ಯ?

## ನ್ಯಾಯದೀಪ

**तदप्रतीतिरिति ।** व्यभिचाराभावविशिष्ट–सहचाराप्रतीतिरित्यर्थः । **तत्रेति ।** उदाहरणवाक्य इत्यर्थः। अवयवग्रन्थे पक्षद्वयस्याप्युक्तेः, वीप्साऽस्तीति मते नास्तीति मत इति मतद्वयोक्तिः । **सूत्रेण** व्याकरणसूत्रेणेत्यर्थः ।

सूत्रस्थवीप्साशब्दार्थमाह—**व्याप्तीति । आदिष्टस्य** आदेशतया विहितस्य । व्याकरणेऽष्टमाध्यायाद्यपादे ''नित्यवीप्सयोः'' इत्यत्र

''सर्वस्य द्वे'' इत्यधिकारसूत्रस्थपदद्वयानुवर्तनेन क्रियापौनःपुन्यरूपनित्येऽर्थे, वीप्सायां च वर्तमानस्य सर्वस्य=वर्णसमुदायरूपपूर्वतनशब्दस्य द्वे भवत इत्यर्थः ।

अत्र च पक्षद्वयं सम्भवति । पूर्वस्थितशब्दस्य स्थाने शब्दतोऽर्थतश्च समानशब्दरूपे द्वे आदेशौ भवत इति वा, पूर्वतनशब्दस्य द्विरुच्चारणं भवतीति वा । तत्राद्यपक्षस्यैव भाष्ये मञ्जर्यां च स्थिरत्वोक्तेरादिष्टस्येत्युक्तम् । तत्र स्थानिवद्भावेनार्थवत्त्वात् प्रातिपदिकत्वम् । अर्थैक्यात् समुदायस्यैकपदत्वं चेति भावेनैकार्थ्येत्याद्युक्तिः ।

**शब्दस्येति ।** वाचकत्वेत्यन्वयः । वीप्सितशब्देन यावत्साधनाधिकरणोपस्थितौ तत्र साध्यवत्त्वविधानात् यावत् स्वाश्रयाश्रितसाध्यसम्बन्धरूपव्याप्तिप्रतीतेः तस्या एवानुमित्यङ्गत्वनिर्णयादिति भावः ।।

ಅಯವಯ ಗ್ರಂಥದಲ್ಲಿ ವೀಪ್ಸಾ ಇರುವ, ಇಲ್ಲದಿರುವ ಎರಡೂ ಪಕ್ಷಗಳನ್ನೂ ಹೇಳಲಾಗಿದೆ.

ಅವಯವಗ್ರಂಥದ 'ದೃಷ್ಟಾಂತ' ನಿರೂಪಣ ಸಂದರ್ಭದಲ್ಲಿ ಮಣಿವಾಕ್ಯ ಹೀಗಿದೆ—

**अत्र च व्यभिचारवारणाय वीप्सामाहुः । यत्र च सामानाधिकरण्यादेव व्याप्तिः तत्र न वीप्सा केवलान्वयिनि, अभेदानुमाने च । वीप्सायामपि व्यभिचारतादवस्थ्यमिति वयम् । वीप्सा च यत्पदे एव, न तु तत्पदेऽपि ।।**

''ಎರಡು ಬಾರಿ ಯತ್‌ಪದವನ್ನು ಪ್ರಯೋಗ ಮಾಡಿದರೂ ಆ ಪದಗಳಿಗೆ ಸಕಲ ಸಾಧನಾಧಿಕರಣಪರತ್ವಜ್ಞಾನವಿಲ್ಲದಿದ್ದರೆ ವ್ಯಭಿಚಾರ ಸಂದೇಹವು ಪರಿಹಾರವಾಗುವುದಿಲ್ಲ. ಆದ್ದರಿಂದ ಸಕಲಾಧಿಕರಣಪರತ್ವಜ್ಞಾನವು ಇರಬೇಕು. ಇದಕ್ಕಿಂತ ಯತ್‌ಪದಯೋಗ ಮತ್ತು ಪ್ರಾಥಮ್ಯಗಳಿಂದಾಗಿ ಹೇತುವಾಚಕ ಪದಕ್ಕೆ ಲಕ್ಷಣಯಾ ವ್ಯಾಪ್ತಿಪರತ್ವವನ್ನೇ ಹೇಳಬಹುದು. ಇದರಿಂದ ವ್ಯಾಪ್ತಿಜ್ಞಾನಕ್ಕೆ ಶಾಬ್ದತ್ವವೂ ಉಪಪನ್ನವಾಗುತ್ತದೆ. ಆದ್ದರಿಂದ ದ್ವಿರುಕ್ತಿಯ ಅಗತ್ಯವಿಲ್ಲ. ಆದ್ದರಿಂದಲೇ ಪ್ರಾಚೀನರು 'ಯನ್ನೈವಂ ತನ್ನೈವಂ'' ಎಂದಿಷ್ಟೇ ಉದಾಹರಣವಾಕ್ಯವನ್ನು ಪ್ರಯೋಗಿಸುತ್ತಾರೆ.''

''ಸರ್ವಸ್ಯದ್ವೇ'' ಎಂದು ಅಧಿಕಾರಸೂತ್ರ. ಆ ಅಧಿಕಾರದಲ್ಲಿ 'ನಿತ್ಯವೀಪ್ಸಯೋಃ' ಎಂಬ

ಸೂತ್ರವಿದೆ. ಕ್ರಿಯಾಪೌನಃಪುನ್ಯವೇ ನಿತ್ಯತ್ವ. ಈ ಅರ್ಥವಿರುವ ಹಾಗೂ ವ್ಯಾಪ್ತೀಚ್ಛೆಯಿಂದ ಉಚ್ಚರಿತವಾದ ಎಲ್ಲಾ ಪದಗಳಿಗೂ ದ್ವಿತ್ವವು ಬರುತ್ತದೆ, ಎಂದು ಸೂತ್ರದ ಅರ್ಥ. (ಕ್ರಿಯಾಪೌನಃ ಪುನ್ಯಕ್ಕೆ ''ಸ್ಮಾರಂ ಸ್ಮಾರಂ ನಮತಿ'' ಎಂದು ಉದಾಹರಣೆ.) ವೀಪ್ಸಾ ಎಂದರೆ ವ್ಯಾಪ್ತಿವಿಷಯಕ ಇಚ್ಛಾ. (ವ್ಯಾಪ್ತುಂ ಇಚ್ಛಾ-ವೀಪ್ಸಾ, ವ್ಯಾಪ್ತಿಪ್ರತಿಪಾದನೇಚ್ಛಾ। ವ್ಯಾಪ್ತಿರೇವತು ಶಾಬ್ದಬೋಧವಿಷಯಃ ಇತಿ ಭಾಷ್ಯಸ್ವರಸಃ-ಬಾಲಮನೋರಮಾ।) ಆ ಇಚ್ಛೆ ಇದ್ದಾಗ ಒಂದು ಶಬ್ದ ಎರಡಾಗುತ್ತದೆ.

'ದ್ವೆ' ಎನ್ನುವ ಶಬ್ದವಿವರಣೆಯಲ್ಲಿ ವೈಯಾಕರಣರಲ್ಲೇ ಪಕ್ಷದ್ವಯಗಳಿವೆ. ಮೊದಲಿದ್ದ ಶಬ್ದದ ಸ್ಥಾನದಲ್ಲಿ ಅದೇ ಅರ್ಥದಲ್ಲಿ ಅದೇ ಶಬ್ದದ ಎರಡು ರೂಪಗಳು ಅಖಂಡ ಶಬ್ದವಾಗಿ ಆದೇಶವಾಗಿ ಬರುತ್ತವೆ, ಎಂದು ಒಂದು ಪಕ್ಷ. ಮೊದಲಿದ್ದ ಶಬ್ದದ ಉಚ್ಚಾರಣೆಯನ್ನು ಎರಡು ಬಾರಿ ಮಾಡಬೇಕು, ಎಂದು ಇನ್ನೊಂದು ಪಕ್ಷ. ಇವೆರಡರಲ್ಲಿ ಮೊದಲನೆಯ ಪಕ್ಷವನ್ನೇ ಭಾಷ್ಯ ಮತ್ತು ಪದಮಂಜರಿಯಲ್ಲಿ ಸಾಧುವೆಂದು ಹೇಳಲಾಗಿದೆ. ಅದಕ್ಕನುಗುಣವಾಗಿ ಮೂಲದಲ್ಲಿ ''ಆದಿಷ್ಟಸ್ಯ'' ಎಂಬ ಪದವನ್ನು ಬಳಸಲಾಗಿದೆ. ಒಂದು ಪದದ ಸ್ಥಾನದಲ್ಲಿ ಏಕಪದತ್ವಾಪನ್ನವಾದ ಎರಡು ಪದಗಳ ಆದೇಶ, ಎಂದರ್ಥ. ಸ್ಥಾನಿವದ್ಭಾವೇನ 'ಯೋಯಃ' ಎಂಬ ಸಮುದಾಯಕ್ಕೂ ಪ್ರಾತಿಪದಿಕಸಂಜ್ಞೆ ಇದೆ. ವ್ಯಾಪ್ತಿ ಎಂಬ ಒಂದೇ ಅರ್ಥವಿರುವುದರಿಂದ ಸಮುದಾಯವೂ ಏಕಪದವೆನಿಸುತ್ತದೆ. ಇದನ್ನು ತಿಳಿಸಲು ಮೂಲದಲ್ಲಿ 'ಏಕಾರ್ಥವಾಚಕತ್ವೇನ ಏಕಪದರೂಪಸ್ಯ' ಎನ್ನಲಾಗಿದೆ.

ವೀಪ್ಸಾ ಇರುವ (ದ್ವಿರುಕ್ತಿ ಇರುವ) 'ಯೋ ಯಃ' ಎಂಬ ಶಬ್ದದಿಂದ ಸಾಧನಕ್ಕೆ ಆಶ್ರಯವಾದ ಎಲ್ಲ ಅಧಿಕರಣಗಳೂ ಉಪಸ್ಥಿತವಾಗತ್ತವೆ. 'ಸಃ ಸಃ ಸಾಧ್ಯವಾನ್' ಎಂಬ ಉತ್ತರವಾಕ್ಯದಿಂದ ಅವುಗಳಲ್ಲೆಲ್ಲ ಸಾಧ್ಯವಿದೆ, ಎಂದು ವಿಧಾನಮಾಡಲಾಗಿದೆ. ಇದರಿಂದ ಹೇತ್ವಾಶ್ರಯವಾದ ಎಲ್ಲದರಲ್ಲೂ ಸಾಧ್ಯವಿದೆ, ಅಂತಹ ಸಾಧ್ಯಸಂಬಂಧವು ಹೇತುವಿನಲ್ಲಿದೆ, ಎಂದು ಅರ್ಥಾತ್ ಸಿದ್ಧವಾಗುತ್ತದೆ. ಇದೇ ಅನುಮಿತ್ಯಂಗವಾದ ವ್ಯಾಪ್ತಿ. ಅಂತಹ ವ್ಯಾಪ್ತಿಯ ಲಾಭ ದೃಷ್ಟಾಂತವಾಕ್ಯದಿಂದ ಆಗುತ್ತದೆ.

## ನ್ಯಾಯದೀಪ

**यत्तु, मणावुदाहरणनिरूणप्रस्तावे ''वीप्सायामपि व्यभिचार-तादवस्थ्यम् इति तु वयम्'' इत्युक्तम्। तदयुक्तम्। व्याप्ति-प्रतिपादनेच्छायामादिष्टस्य 'योय' इत्यस्य यावत्साधनाधिकरणे साध्यसम्वन्धवोधनशक्तेर्व्युत्पन्नत्वेन व्यभिचारशङ्कानवकाशात्।।**

ಮಣಿಗ್ರಂಥದಲ್ಲಿ ಉದಾಹರಣೆಯನ್ನು ನಿರೂಪಿಸುವ ಸಂದರ್ಭದಲ್ಲಿ ಮಣಿಕಾರ ''ವೀಪ್ಸಾ

ಇದ್ದರೂ ವ್ಯಭಿಚಾರಸಂದೇಹವು ಬರಬಹುದು, ಎಂದು ನಾವು ಹೇಳುತ್ತೇವೆ'' ಎಂದಿರುತ್ತಾನೆ. ಮಣಿಕಾರನ ಈ ನಿಲುವು ಸರಿಯಲ್ಲ. ವ್ಯಾಪ್ತಿಪ್ರತಿಪಾದಿಸುವ ಇಚ್ಛಾರ್ಥದಲ್ಲಿ 'ಯೋಯಃ' ಎಂಬ ಆದೇಶವನ್ನು ಸೂತ್ರದಲ್ಲಿ ಹೇಳಲಾಗಿದೆ. ಅದಕ್ಕೆ ಸಾಧನವುಳ್ಳ ಎಲ್ಲ ಅಧಿಕರಣಗಳಲ್ಲೂ ಸಾಧ್ಯದ ಸಂಬಂಧವನ್ನು ತಿಳಿಸುವ 'ಶಕ್ತಿ' ಇದೆ. ಆ ಶಬ್ದವು ಆ ಅರ್ಥದಲ್ಲಿ ವ್ಯುತ್ಪನ್ನವಾಗಿರುವಾಗ ವ್ಯಭಿಚಾರಸಂದೇಹಕ್ಕೆ ಅವಕಾಶವೇ ಇಲ್ಲ.

## ಅವತಾರಿಕೆ

एवं नीलधूमादिसाधारण्येन व्याप्तिमुपपाद्येदानीं, नीलधूमादौ व्याप्त्यभावेऽपि शरीराजन्यत्वेऽस्ति । नच शरीरपदस्यासिद्धिवारकतया व्यभिचारावारकत्वेन व्यर्थत्वात् कथं व्यर्थविशेषणवति व्याप्तिरित्यतो व्याप्त्याश्रयविकासकतया व्याप्तिग्रहौपयिकत्वेन न व्यर्थविशेषणत्वमिति भावेन तां तत्रोपपादयति—**किञ्चेत्यादिना ।**

ಹೀಗೆ ನೀಲಧೂಮದಲ್ಲಿ ಮತ್ತು ಶರೀರಾಜನ್ಯತ್ವದಲ್ಲೂ ವ್ಯಾಪ್ತಿ ಇದೆ, ಎಂದು ಇದುವರೆಗೆ ಮೂಲದಲ್ಲಿ ಸಮರ್ಥಿಸಲಾಗಿದೆ. ಮುಂದಿನ ಭಾಗದಲ್ಲಿ, ವ್ಯರ್ಥವಿಶೇಷಣಘಟಿತವಾದ ನೀಲಧೂಮದಲ್ಲಿ ವ್ಯಾಪ್ತಿ ಇಲ್ಲದಿದ್ದರೂ ಶರೀರಾಜನ್ಯತ್ವದಲ್ಲಿ ವ್ಯಾಪ್ತಿ ಇದೆ, ಎಂದು ಸಮರ್ಥಿಸಲಾಗಿದೆ.

**ಆಕ್ಷೇಪ**—ಶರೀರ ಎಂಬ ಹೇತುವಿಶೇಷಣವು ಅಸಿದ್ಧಿವಾರಕವಾದರೂ ವ್ಯಭಿಚಾರವಾರಕವಾಗಿಲ್ಲ. ಅಕರ್ತೃಕತ್ವದ ವ್ಯಾಪ್ತಿಯು ಶರೀರವಿಶೇಷಣ ಅಘಟಿತವಾದ ಅಜನ್ಯತ್ವದಲ್ಲೇ ಇದೆ. ಹೀಗೆ ಶರೀರ ವಿಶೇಷಣವು ವ್ಯರ್ಥವಾಗಿದೆ. ತಾದೃಶವಿಶೇಷಣಘಟಿತವಾದ ಹೇತುವಿನಲ್ಲಿ ವ್ಯಾಪ್ತಿ ಇರುವುದು ಹೇಗೆ ಸಾಧ್ಯ?

**ಸಮಾಧಾನ**—ಶರೀರ ವಿಶೇಷಣವು ವ್ಯಾಪ್ತ್ಯಾಶ್ರಯದ ವಿಕಾಸಕವಾಗುವ ಮೂಲಕ ವ್ಯಾಪ್ತಿಗ್ರಹಕ್ಕೆ ಉಪಯೋಗಿಯಾಗಿದೆ. ಅದು ವ್ಯರ್ಥವಲ್ಲ. ಹೀಗೆ ಶರೀರಾಜನ್ಯತ್ವಹೇತುವಿನಲ್ಲಿ ವ್ಯಾಪ್ತಿಯನ್ನು ಸಮರ್ಥಿಸುತ್ತಾರೆ—

**किञ्च हेतुशरीरघटकं द्विविधम् । किंचित् संकोचकम् । यथा नीलधूमादित्यत्र नीलत्वम् । किंचिद्विकासकम् । यथा प्रमात्वाश्रयविषयत्वादित्यर्थके प्रमेयत्वादित्यत्राश्रयविषयत्वम् ।**

**प्रमात्वादित्युक्तेऽपि व्यभिचाराभावात् । तत्र संकोचकविपरीतस्यान्त्यस्य स्वेन विकासितदेशे व्याप्तिग्रहौपयिकत्वान्न व्यर्थता । अन्यथा लक्षणरूपे व्यतिरेकिणि भागासिद्धिरूपाव्याप्तिहरणाय विशेषणं न प्रयुज्येत । शरीरपदं चाजन्यत्वस्यांकुरादावसंभावितस्य विकासकमिति न व्यर्थम् ।।**

ಹೇತುಶರೀರದಲ್ಲಿ ಘಟಕವಾದ ವಿಶೇಷಣಗಳು ಎರಡುವಿಧವಾಗಿರುತ್ತವೆ—ಕೆಲವು ವಿಶೇಷಣಗಳು ವ್ಯಾಪ್ತಿಯ ಅಧಿಕರಣದ ಸಂಕೋಚಕ್ಕೆ ಕಾರಣವಾದರೆ ಇನ್ನುಕೆಲವು, ವಿಕಾಸಕ್ಕೆ ಕಾರಣವಾಗುತ್ತವೆ. 'ನೀಲಧೂಮಾತ್' ಎಂಬ ಹೇತುವಿನಲ್ಲಿರುವ 'ನೀಲ' ಎಂಬ ವಿಶೇಷಣವು ನೀಲೇತರಧೂಮಗಳನ್ನು ವ್ಯಾವೃತ್ತಿಮಾಡಿ ವ್ಯಾಪ್ತಿಗೆ ಆಶ್ರಯವಾದ ಕ್ಷೇತ್ರವನ್ನು ನೀಲಧೂಮಕ್ಕೆ ಸೀಮಿತಗೊಳಿಸಿದೆ. ಎರಡನೆಯದಕ್ಕೆ ಉದಾಹರಣೆ— ಘಟಃ ಅಭಿಧೇಯಃ, ಪ್ರಮಾತ್ವಾಶ್ರಯ ವಿಷಯತ್ವಾತ್, ಎನ್ನುವುದು. 'ಪ್ರಮಾತ್ವಾತ್' ಎಂದಿಷ್ಟೇ ಹೇಳಿದರೆ ಅದಕ್ಕೆ ಆಶ್ರಯವಾದುದು ಪ್ರಮಾ ಮಾತ್ರ. ಪ್ರಮಾತ್ವಾಶ್ರಯ (ಪ್ರಮಾ) ವಿಷಯತ್ವಾತ್ ಎಂದರೆ ಪ್ರಮೇಯತ್ವಾತ್ ಎಂದರ್ಥ. ಅದಕ್ಕೆ ಆಶ್ರಯವಾದುದು ಅನಂತಪದಾರ್ಥಗಳಿವೆ. ಇದರಿಂದ ಹೇತುಸಾಧ್ಯಗಳ ಸಹಚಾರಗ್ರಹಕ್ಕೆ ಅನೇಕ ಅಧಿಕರಣಗಳು ಸಿಕ್ಕಂತಾಗಿ ವ್ಯಾಪ್ತಿಜ್ಞಾನ ದೃಢವಾಗುತ್ತದೆ. ಇದು ಸಂಕೋಚಕ ವಿಶೇಷಣಕ್ಕಿಂತಲೂ ವಿಕಾಸಕವಿಶೇಷಣದಲ್ಲಿರುವ ವೈಶಿಷ್ಟ್ಯ. ಆದ್ದರಿಂದಲೇ ಅಂತಹ ವಿಶೇಷಣವು ಸಾರ್ಥಕ. ಹೀಗೆ ಅಂಗೀಕರಿಸದಿದ್ದಲ್ಲಿ ಭಾಗಾಸಿದ್ಧಿವಾರಕವಿಶೇಷಣವೂ ವ್ಯರ್ಥವಾದೀತು. ಉದಾಹರಣೆಗೆ—ಗುಣಾಶ್ರಯಃ ದ್ರವ್ಯಂ, ಇದನ್ನು ವ್ಯತಿರೇಕಮುಖದಿಂದ ಹೇಳುವುದಾದಲ್ಲಿ– ಗುಣಾತ್ಯಂತಾಭಾವಾನಧಿಕರಣತ್ವಮ್, ಎಂದು ದ್ರವ್ಯಲಕ್ಷಣವಾಗುತ್ತದೆ. ಈ ಲಕ್ಷಣದಲ್ಲಿ ಅತ್ಯಂತಾಭಾವಪದವನ್ನು ಬಿಟ್ಟರೆ–ಗುಣಾನಧಿಕರಣತ್ವಂ–ಎಂದಾಗುತ್ತದೆ. ಈ ಲಕ್ಷಣವು ಅನಿತ್ಯದ್ರವ್ಯಗಳಲ್ಲಿ ಉತ್ಪತ್ತಿಕ್ಷಣದಲ್ಲಿ ಇದೆ. ಆದರೂ, ಅದೇ ದ್ರವ್ಯಗಳ ದ್ವಿತೀಯಕ್ಷಣದಲ್ಲಿ ಇರುವುದಿಲ್ಲ. ಲಕ್ಷಣಕ್ಕೆ ಅವ್ಯಾಪ್ತಿ ಬರುತ್ತದೆ. ಇದರಿಂದ 'ದ್ರವ್ಯಂ, ಇತರೇಭ್ಯಃ ಭಿದ್ಯತೇ, ಗುಣಾನಧಿ ಕರಣತ್ವಾತ್, ಎಂದು ಅನುಮಾನ ಮಾಡಿದಾಗ ದ್ವಿತೀಯಕ್ಷಣಸ್ಥಘಟದಲ್ಲಿ ಭಾಗಾಸಿದ್ಧಿದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಅತ್ಯಂತಾಭಾವಪದವನ್ನು ಸೇರಿಸಿ ಗುಣಾತ್ಯಂತಾಭಾವಾನಧಿ ಕರಣತ್ವಾತ್, ಎಂದೇ ಹೇತುವನ್ನು ಮಾಡಬೇಕು. ಹೀಗೆ ಭಾಗಾಸಿದ್ಧಿಪರಿಹಾರಕವಾದ ವಿಶೇಷಣಕ್ಕೂ ಸಾರ್ಥಕ್ಯವು ಕಂಡಿದೆ. ಪ್ರಕೃತ ಶರೀರಪದವನ್ನು ಬಿಟ್ಟರೆ ಅಜನ್ಯತ್ವಾತ್ ಎಂದಿಷ್ಟೇ ಹೇತುವಾಗುತ್ತದೆ. ಆ ಹೇತು ಗಗನಾದಿಗಳಲ್ಲಿ ಮಾತ್ರವೇ ಇದೆ. ಶರೀರಪದವನ್ನು ಸೇರಿಸಿದರೆ ಆ ಹೇತು ಅಂಕುರಾದಿಗಳಲ್ಲೂ ಬರುತ್ತದೆ. ಇದರಿಂದ ಶರೀರಪದವು ವಿಕಾಸಕವಿಶೇಷಣ. ಅದು ವ್ಯರ್ಥವಲ್ಲ.

## ನ್ಯಾಯದೀಪ

**संकोचकमिति ।** हेतुलक्षणस्य व्याप्यधिकरणस्याल्पत्वसम्पादकम् । धूमादित्यनेन नीलानीलसाधारणधूमत्वाधिकरणमात्रस्य व्याप्याश्रयत्वं लभ्यते। नीलत्वविशेषणे तु नीलधूममात्रस्येति नीलत्वं व्याप्यधिकरणसंकोचकम् । 'घटोऽभिधेयः प्रमात्वाश्रयविषयत्वात्' इत्यत्र प्रमात्वादित्युक्ते तन्मात्रस्यैव व्याप्याश्रयत्वलाभो, नान्यस्य । विशेष्यभागस्याप्युक्तौ तु प्रमेयत्वमात्रस्यापि तथात्वलाभाद् व्याप्यधिकरणविकासकमित्यर्थः ।

ततः किमित्यत आह—**तत्रेति ।** द्वयोर्हेतुशरीरघटकयोर्मध्य इत्यर्थः । **अन्त्यस्येति ।** व्याप्याश्रयविकासकस्येत्यर्थः । असिद्धिवारकस्यापीति शेषः । **अन्यथेति ।** असिद्धिवारकत्वेनैव व्यर्थत्वे गुणाश्रयो द्रव्यमित्यत्र गुणात्यन्ताभावानधिकरणत्वरूपद्रव्यलक्षणे गुणानधिकरणत्वस्याद्यक्षणस्थितघटादौ सत्त्वेऽपि द्वितीयादिक्षणस्थे तस्मिन्नभावेन अव्याप्तिवारणायात्यन्ताभावेति विशेषणं नोपादीयेत । तस्य 'द्रव्यमितरेभ्यो भिद्यते, गुणात्यन्ताभावानधिकरणत्वात्, व्यतिरेकेण गुणादिवत्' इत्यत्र द्वितीयादिक्षणस्थघटादौ भागासिद्धिवारकत्वात् । लक्षणमपि केवलव्यतिरेकीत्युक्तत्वेन व्यावृत्तिव्यवहारयोः साधने लक्षणस्य केवलव्यतिरेकित्वादिति भावः ।

यद्वा गुणाभावानधिकरणत्वादित्युक्तावाद्यक्षणस्थघटे भागासिद्धिवारणायात्यन्तेति विशेषणं नोपादीयेतेत्यर्थः ।

अस्त्वेवं, प्रकृते किमित्यत आह—**शरीरेति ।** अजन्यत्वादित्येवोक्तावङ्कुरादावसम्भावनया हेत्वसिद्धिशङ्कायां तत्रापि हेतुसत्त्वोपपादकत्वेन हेत्वधिकरणवाहुळ्यसम्पादकत्वेन हेतुविकासकम्। तत्रादृष्टा-

**द्वारकशरीरजन्यत्वाभावस्य प्रत्यक्षत एवावगमसम्भवात् । अतो न व्यर्थं शरीरविशेषणमित्यर्थः ।।**

ಸಂಕೋಚಕ ಎಂದರೆ ಹೇತುರೂಪವಾದ ವ್ಯಾಪ್ಯಧಿಕರಣದ ಅಲ್ಪತ್ವಸಂಪಾದಕ, ಎಂದರ್ಥ. 'ಧೂಮಾತ್' ಎಂದಾಗ ನೀಲ–ಅನೀಲ ಎರಡೂ ಧೂಮಗಳು ಲಭ್ಯವಾಗುತ್ತವೆ. ಅವೆಲ್ಲವೂ ವ್ಯಾಪ್ತಿಗೆ ಆಶ್ರಯಗಳಾಗಿ ತಿಳಿಯಲ್ಪಡುತ್ತವೆ. ನೀಲಪದವು ಅನೀಲಧೂಮಕ್ಕೆ ವ್ಯಾವರ್ತಕವಾದುದ ರಿಂದ ಆ ವಿಶೇಷಣವನ್ನು ಸೇರಿದಾಗ ವ್ಯಾಪ್ಯಾಶ್ರಯಗಳು ಕಡಿಮೆಯಾಗುತ್ತವೆ. (ನೀಲ ವಿಶೇಷಣ ಅವ್ಯಾವತರ್ಕವಲ್ಲ. ಅನೀಲಧೂಮವ್ಯಾವರ್ತಕ. ''ನೀಲಧೂಮತ್ವಂ ಧೂಮಮಾತ್ರನಿಷ್ಠವ್ಯಾಪ್ತೌ ನ್ಯೂನತ್ವಾದೇವ ನಾವಚ್ಛೇದಕಮ್'' ಎಂದು ಆಲೋಕ ವ್ಯಾಖ್ಯಾನ.) ಹೀಗೆ 'ನೀಲ' ಎಂಬ ವಿಶೇಷಣವು ವ್ಯಾಪ್ಯಧಿಕರಣ ಸಂಕೋಚಕವಾಗಿದೆ.

ಮೂಲದಲ್ಲಿ 'ಲಕ್ಷಣರೂಪೇ ಕೇವಲವ್ಯತಿರೇಕಿಣಿ' ಎಂದಿದೆ. ''ಲಕ್ಷಣವೂ, ವ್ಯಾವೃತ್ತಿ ಅಥವಾ ವ್ಯವಹಾರವನ್ನು ಸಾಧನೆ ಮಾಡುವಾಗ ಕೇವಲ ವ್ಯತಿರೇಕಿಯಾಗುತ್ತದೆ'' ಎಂದು ನೈಯಾಯಿಕರು ಹೇಳುತ್ತಾರೆ. ಅದಕ್ಕನುಗುಣವಾಗಿದೆ ಮೂಲ.

'ಗುಣಾತ್ಯಂತಾಭಾವಾನಧಿಕರಣತ್ವಾತ್' ಎಂಬ ಹೇತುವಿನಲ್ಲಿ ಅತ್ಯಂತಪದವು ಭಾಗಾಸಿದ್ಧಿ ವಾರಕ ಎಂದೂ ಹೇಳಬಹುದು. ಅಥವಾ 'ಅತ್ಯಂತಾಭಾವ' ಪದವು ಭಾಗಾಸಿದ್ಧಿವಾರಕವೆಂದೂ ಹೇಳಬಹುದು. ಅತ್ಯಂತಪದವನ್ನು ಬಿಟ್ಟರೆ 'ಗುಣಾಭಾವಾನಧಿಕರಣತ್ವಾತ್' ಎಂದಿಷ್ಟೇ ಹೇತುವಾಗುತ್ತದೆ. ಆದ್ಯಕ್ಷಣದಲ್ಲಿ ಘಟವು ಗುಣಪ್ರಾಗಭಾವಕ್ಕೆ ಅಧಿಕರಣವಾಗಿರುವುದರಿಂದ ಅದರಲ್ಲಿ ಹೇತು ಬರುವುದಿಲ್ಲ. ಅತ್ಯಂತಪದವಿದ್ದರೆ ''ಧ್ವಂಸ–ಪ್ರಾಗಭಾವಾಧಿಕರಣೇ ನಾತ್ಯಂತಾಭಾವಃ'' ಎಂಬ ನಿಯಮದಂತೆ ಅದರಲ್ಲಿ ಅತ್ಯಂತಾಭಾವವು ಇಲ್ಲದಿರುವುದರಿಂದ ಭಾಗಾಸಿದ್ಧಿ ಪರಿಹಾರವಾಗುತ್ತದೆ. ಅದರಂತೆ, ಅತ್ಯಂತಾಭಾವಪದವನ್ನೇ ಬಿಟ್ಟರೆ 'ಗುಣಾನಧಿ ಕರಣತ್ವಾತ್' ಎಂದಂತಾಗುತ್ತದೆ. ಈ ಹೇತು ದ್ವಿತೀಯಕ್ಷಣಾವಚ್ಛಿನ್ನಘಟದಲ್ಲಿ ಇಲ್ಲ. ಭಾಗಾಸಿದ್ಧಿ. ಅದನ್ನು ಲಕ್ಷಣವೆಂದು ಪರಿಗಣಿಸಿದರೆ, ಅವ್ಯಾಪ್ತಿ.

ಪ್ರಕೃತದಲ್ಲಿ ಶರೀರವಿಶೇಷಣವು ವಿಕಾಸಕವಿಶೇಷಣ. 'ಅಜನ್ಯತ್ವಾತ್' ಎಂದಿಷ್ಟೇ ಹೇಳಿದರೆ ಅಂಕುರಾದಿಗಳಲ್ಲಿ ಅದು ಅಸಂಭಾವಿತವೆಂದು ತಿಳಿದು ಹೇತ್ವಸಿದ್ಧಿಯ ಆಕ್ಷೇಪ ಬರುತ್ತದೆ. ಅದರಲ್ಲೂ ಹೇತು ಬರುವಂತೆ ಮಾಡಲು ಆ ಮೂಲಕ ಹೇತ್ವಧಿಕರಣಬಾಹುಲ್ಯ ಸಂಪಾದಕವಾದುದರಿಂದ ಶರೀರವಿಶೇಷಣವು ವಿಕಾಸಕ. ಆ ವಿಶೇಷಣವಿದ್ದಾಗ ಅಂಕುರಾದಿಗಳು ಅದೃಷ್ಟಾದ್ವಾರಕ ಶರೀರಜನ್ಯಗಳಲ್ಲ ಎಂದು ಪ್ರತ್ಯಕ್ಷಸಿದ್ಧವಾದುದರಿಂದ ಹೇತ್ವಸಿದ್ಧಿ–ಆಕ್ಷೇಪಕ್ಕೆ ಅವಕಾಶವಿಲ್ಲ. ಹೀಗೆ, ಶರೀರವಿಶೇಷಣವು ವ್ಯರ್ಥವಲ್ಲ.

## ಅವತಾರಿಕೆ

**न केवलं हेतुविकासकत्वेन शरीरपदमर्थवत्। किन्तु ''विशिष्टस्योपाधेः साध्यव्यापकत्वमस्त्येव। उपाध्यभावश्चात्र प्रतिपक्षत्वेनोक्तः'' इति तत्त्वनिर्णयटीकोक्तदिशा विशिष्टाभावरूपहेतुस्वरूपोपस्थापकतयापि व्याप्तिग्रहौपयिकत्वेनेत्याह—अपिचेति।**

ಹೇತುವಿಕಾಸಕವಾದುದರಿಂದಷ್ಟೇ ಶರೀರವಿಶೇಷಣವು ಸಾರ್ಥಕವಲ್ಲ. ಕಿಂತು, ವಿಶಿಷ್ಟಾಭಾವ ಸಂಪಾದಕತ್ವೇನಾಪಿ. ಇದನ್ನು ತತ್ತ್ವನಿರ್ಣಯದಲ್ಲಿ ಹೀಗೆ ಹೇಳಲಾಗಿದೆ— ''ಶರೀರಜನ್ಯತ್ವಾಭಾವ ಇದು ವಿಶಿಷ್ಟವಾದ ಅಖಂಡವಾದ ಒಂದು ಅಭಾವ. ಅದರಲ್ಲಿ ಜನ್ಯತ್ವಾಭಾವ ಎಂಬ ಲಘುರೂಪವು ಘಟಕವಾಗಿಲ್ಲ. ಶರೀರಜನ್ಯತ್ವ ಎಂಬ ಉಪಾಧಿಗೂ ಸಾಧ್ಯವ್ಯಾಪಕತ್ವವು ಇದೆ. ತದಭಾವವನ್ನೇ ಪ್ರತಿಪಕ್ಷವನ್ನಾಗಿ ಈಶ್ವರಾನುಮಾನದಲ್ಲಿ ಹೇಳಲಾಗಿದೆ'' ಎಂದು. ಈ ಪರಿಹಾರವನ್ನೇ ಮುಂದಿನ ಮೂಲದಲ್ಲಿ ಹೇಳಲಾಗಿದೆ.

**अपिच शरीराजन्यत्वादित्यत्र शरीरविशिष्टोऽभावो न हेतुः। किन्तु शरीरविशिष्टस्य जन्यत्वस्याभावः। स च विशेषणविशेष्ययोरभावाभ्यां भिन्न एव। विशेषणविशेष्यसम्बन्धो विशिष्टमिति मते, पदार्थान्तरमिति मते च प्रतियोगिभेदात्। विशेषणावच्छिन्नं विशेष्यमेव विशिष्टमिति मते प्रतियोगितावच्छेकभेदात्। तादृशविशिष्टाभावधीश्च न विशेषणज्ञानं विना युक्ता। प्रतियोगितावच्छेदकप्रकारकप्रतियोगिज्ञानसाध्यत्वादभाव-ज्ञानस्य। एवंच शरीरविशेषणं विशेष्याभावविपरीत–व्याप्त्याश्रयीभूत–विशिष्टाभावोपस्थापनौपयिकं व्याप्तिग्रहौपयिकमेव। आश्रयज्ञानं विना व्याप्तेरग्रहात्॥**

'ಶರೀರಾಜನ್ಯತ್ವಾತ್' ಎಂಬ ಪ್ರತಿಪಕ್ಷ ಹೇತುವಿಗೆ 'ಶರೀರವಿಶಿಷ್ಟವಾದ ಜನ್ಯತ್ವಾಭಾವ' ಎಂದು ಅರ್ಥವಲ್ಲ. ಅದು ಹೇತುವಾಗಿದ್ದಲ್ಲಿ ತದ್ಘಟಕವಾದ ಜನ್ಯತ್ವಾಭಾವವೇ ಗಗನಾದಿಗಳಲ್ಲಿ ಅಕರ್ತೃಕತ್ವರೂಪಸಾಧ್ಯಕ್ಕೆ ವ್ಯಾಪಕವಾದುದರಿಂದ ಶರೀರವಿಶೇಷಣವು ವ್ಯರ್ಥ, ಎಂದು ಆಕ್ಷೇಪ ಮಾಡಬಹುದಿತ್ತು. ಕಿಂತು ಶರೀರವಿಶಿಷ್ಟವಾದ ಜನ್ಯತ್ವದ ಅಭಾವ ಹೇತು. ಶರೀರಪದವು ಜನ್ಯತ್ವಕ್ಕೆ ವಿಶೇಷಣ ಹೊರತು, ಅಭಾವಕ್ಕಲ್ಲ. ಆ ವಿಶಿಷ್ಟಾಭಾವವು ಶರೀರಾಭಾವ ಎಂಬ ವಿಶೇಷ್ಯಾಭಾವ

ರೂಪವೂ ಅಲ್ಲ; ಜನ್ಯತ್ವಾಭಾವ ಎಂಬ ವಿಶೇಷ್ಯಾಭಾವರೂಪವೂ ಅಲ್ಲ. ಕೆಲವರ ಮತದಲ್ಲಿ ವಿಶೇಷಣ ಮತ್ತು ವಿಶೇಷ್ಯಗಳ ಸಂಬಂಧವೇ ವಿಶಿಷ್ಟಪದಾರ್ಥ. ದ್ವೈತದರ್ಶನದಲ್ಲಿ ವಿಶೇಷ್ಯಾಶ್ರಿತವಾದ ಪದಾರ್ಥಾಂತರವು ವಿಶಿಷ್ಟ. ಆದ್ದರಿಂದ ಉಭಯಮತದಲ್ಲೂ ವಿಶಿಷ್ಟಾಭಾವವು ವಿಶೇಷಣಾಭಾವ–ವಿಶೇಷ್ಯಾಭಾವಗಳಿಗಿಂತ ಭಿನ್ನವಾದ ಪ್ರತ್ಯೇಕಾಭಾವ. ಏಕೆಂದರೆ, ಪ್ರತಿಯೋಗಿ ಭೇದಾತ್ ಅಭಾವಭೇದಃ, ಎಂದು ಸಿದ್ಧಾಂತ.

ವಿಶೇಷಣಾವಚ್ಛಿನ್ನವಾದ ವಿಶೇಷ್ಯವೇ ವಿಶಿಷ್ಟ ಎಂಬ ತಾರ್ಕಿಕಮತದಂತೆ ವಿಶಿಷ್ಟ–ವಿಶೇಷ್ಯಗಳಿಗೆ ಅಭೇದವಿರುವುದರಿಂದ ಪ್ರತಿಯೋಗಿಭೇದವಿಲ್ಲದಿದ್ದರೂ ವಿಶಿಷ್ಟಾಭಾವೀಯಪ್ರತಿಯೋಗಿತಾವಚ್ಛೇದಕವು (ಶರೀರವಿಶಿಷ್ಟಜನ್ಯತ್ವತ್ವ) ವಿಶೇಷ್ಯವಿಶೇಷಣಾಭಾವಪ್ರತಿಯೋಗಿತಾವಚ್ಛೇದಕಗಳಿಂದ ಭಿನ್ನವಾದುದರಿಂದ ಅಭಾವವು ಭಿನ್ನವಾಗುತ್ತದೆ.

ಇಂತಹ ವಿಶಿಷ್ಟಾಭಾವಜ್ಞಾನವು ವಿಶೇಷಣವಾದ ಶರೀರಜ್ಞಾನವು ಇಲ್ಲದಿದ್ದರೆ ಬರುವುದಿಲ್ಲ. ಪ್ರತಿಯೋಗಿತಾವಚ್ಛೇದಕ–ಪ್ರಕಾರಕ–ಪ್ರತಿಯೋಗಿಜ್ಞಾನವು ಅಭಾವಜ್ಞಾನಕ್ಕೆ ಕಾರಣ. ಶರೀರಜನ್ಯತ್ವಾಭಾವಕ್ಕೆ ಪ್ರತಿಯೋಗಿಯಾದ ಶರೀರಜನ್ಯತ್ವದ ಜ್ಞಾನಬರಬೇಕಾದರೆ ಶರೀರಜ್ಞಾನವು ಬರಲೇಬೇಕು. ಏವಂ ಚ, ಜನ್ಯತ್ವಾಭಾವಕ್ಕಿಂತ ಭಿನ್ನವಾದ ಶರೀರಜನ್ಯತ್ವಾಭಾವದ ಉಪಸ್ಥಾಪಕವಾಗಿದೆ ಶರೀರ ವಿಶೇಷಣ. ಹೀಗೆ ವ್ಯಾಪ್ತ್ಯಾಶ್ರಯೋಪಪಾದಕವಾಗಿರುವುದರಿಂದ ವ್ಯಾಪ್ತಿಗ್ರಹಕ್ಕೆ ಉಪಯುಕವಾಗಿದೆ ಶರೀರವಿಶೇಷಣ. ಆಶ್ರಯಜ್ಞಾನವಿಲ್ಲದೆ ವ್ಯಾಪ್ತಿಜ್ಞಾನ ಬರಲು ಸಾಧ್ಯವಿಲ್ಲ. ಆದ್ದರಿಂದ ಬಹುಲೋರ್ಧ್ವತ್ವಾದಿ ಧೂಮವಿಶೇಷಣದಂತೆ ಶರೀರವಿಶೇಷಣವೂ ಸಾರ್ಥಕವಾಗಿದೆ.

**नच गगनादौ व्याप्तिग्रहार्थं विशिष्टाभावग्रहकाले विशेष्याभावस्यापि ग्रहनियमाल्लाघवेन तत्रैव व्याप्तिग्रहान्न विशिष्टाभावे तद्ग्रह इति वाच्यम्। विशेष्याभावाग्रहणेऽपि शब्दादिना विशिष्टाभावग्रहणेन नियमाभावात् । क्वचिदुपस्थितिमात्रेण लाघवादरे 'अयं घटो जन्यः कृतकत्वात्'इत्यत्र लघुनि शीघ्रोपस्थितिके च घटत्वे सत्यपि कृतकत्वनिष्ठव्याप्तिग्रहं प्रतीव प्रकृतेऽपि लघौ विशेष्याभावे सत्यपि विशिष्टाभावनिष्ठव्याप्तिग्रहं प्रति भिन्नविषयत्वेन गौरवस्याप्रतिबन्धकत्वात् । नहि नीलधूमनिष्ठा व्याप्तिर्धूमत्वेनेव विशिष्टाभावनिष्ठा व्याप्तिर्विशेष्याभावत्वेनावच्छेत्तुं शक्या । तत्र तदभावात् । येनावच्छेदकांशे लाघवं सहकारि स्यात् ।।**

**ಆಕ್ಷೇಪ**—ಶರೀರವಿಶಿಷ್ಟಜನ್ಯತ್ವದ ಅಭಾವಜ್ಞಾನಬರುವಾಗ ಜನ್ಯತ್ವಾಭಾವರೂಪ-ವಿಶೇಷ್ಯಾಭಾವದ ಜ್ಞಾನವೂ ಬರುತ್ತದೆ. ಏವಂಚ ಸಾಧ್ಯ-ಹೇತುಗಳಿಗೆ ಗಗನಾದಿಗಳಲ್ಲಿ ವ್ಯಾಪ್ತಿಜ್ಞಾನ ಬರುವಾಗ ಲಾಘವಾತ್ ಜನ್ಯತ್ವಾಭಾವದಲ್ಲೇ ವ್ಯಾಪ್ತಿಗ್ರಹವಾಗುತ್ತದೆ. ವಿಶಿಷ್ಟಾಭಾವದಲ್ಲಿ ವ್ಯಾಪ್ತಿಜ್ಞಾನ ಬರುವುದೇ ಇಲ್ಲ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿ.

**ಸಮಾಧಾನ**—ವಿಶಿಷ್ಟಾಭಾವಜ್ಞಾನ ಬಂದಾಗ ವಿಶೇಷ್ಯಾಭಾವದ ಜ್ಞಾನವು ಬಂದೇ ಬರುತ್ತದೆ, ಎಂಬ ನಿಯಮವೇನೂ ಇಲ್ಲ. ''ಶರೀರಜನ್ಯತ್ವಾಭಾವವದ್ ಗಗನಮ್'' ಎಂಬ ಶಬ್ದದಿಂದ ವಿಶಿಷ್ಟಾಭಾವಜ್ಞಾನಬಂದಾಗ ಜನ್ಯತ್ವಾಭಾವದ ಜ್ಞಾನವು ಬರುವುದಿಲ್ಲ, ತದ್ಬೋಧಕ ಶಬ್ದವಿಲ್ಲವಾದುದರಿಂದ. ಕೆಲವು ಕಡೆ ವಿಶಿಷ್ಟಾಭಾವಜ್ಞಾನಬಂದಾಗ ವಿಶೇಷ್ಯಾಭಾವದ ಜ್ಞಾನ ಬರುವ ಮಾತ್ರದಿಂದ ಲಾಘವವನ್ನು ಅನುಸರಿಸಿದರೆ ಅತಿಪ್ರಸಂಗವಿದೆ— 'ಅಯಂ ಘಟಃ ಜನ್ಯಃ, ಕೃತಕತ್ವಾತ್' ಎಂದು ಅನುಮಾನ. ಇಲ್ಲಿ ಕೃತಕತ್ವಹೇತುವಿಗಿಂತ ಘಟತ್ವಹೇತುವು ಜಾತಿಯಾದುದರಿಂದ ಲಘುವಾಗಿದೆ. ಪಕ್ಷಜ್ಞಾನ ಬರುವಾಗಲೇ ಅದರ ಜ್ಞಾನವೂ ಬರುವುದರಿಂದ ಶೀಘ್ರೋಪಸ್ಥಿತಿಕವಾಗಿದೆ. ಆದರೂ, ಕೃತಕತ್ವದಲ್ಲಿ ವ್ಯಾಪ್ತಿಗ್ರಹಕ್ಕೆ ಈ ಲಾಘವವು ಪ್ರತಿಬಂಧಕವಾಗುವುದಿಲ್ಲ. ಅದರಂತೆ, ಪ್ರಕೃತದಲ್ಲೂ ಲಘುವಾದ ವಿಶೇಷ್ಯಾಭಾವ(ಜನ್ಯತ್ವಾಭಾವ) ಉಪಸ್ಥಿತವಾದರೂ ಶರೀರಜನ್ಯತ್ವಾಭಾವರೂಪವಾದ ವಿಶಿಷ್ಟಾಭಾವದಲ್ಲಿ ವ್ಯಾಪ್ತಿಗ್ರಹಕ್ಕೆ ಭಿನ್ನವಿಷಯತ್ವೇನ ಗೌರವವು ಪ್ರತಿಬಂಧಕವಾಗುವುದಿಲ್ಲ.

**ಆಕ್ಷೇಪ**—ಶರೀರಜನ್ಯತ್ವಾಭಾವವು ಜನ್ಯತ್ವಾಭಾವದಿಂದ ಅಘಟಿತವಾದರೂ ಶರೀರಜನ್ಯತ್ವಾಭಾವನಿಷ್ಠವ್ಯಾಪ್ಯತಾದಲ್ಲಿ ಜನ್ಯತ್ವಾಭಾವತ್ವವೆಂಬ ಲಘುಧರ್ಮವು ಅವಚ್ಛೇದಕವಾಗುವಾಗ ಶರೀರಜನ್ಯತ್ವಾಭಾವತ್ವ ಎಂಬ ಗುರುಧರ್ಮವು ಅವಚ್ಛೇದಕವಾಗುವುದಿಲ್ಲ. ಇದರಿಂದ ವ್ಯಾಪ್ಯತಾವಚ್ಛೇದಕಂ ಯದ್ಧೇತುತಾವಚ್ಛೇದಕಂ, ತದ್ವತ್ವರೂಪ ವ್ಯಾಪ್ತಿಯು ಶರೀರಜನ್ಯತ್ವಾಭಾವದಲ್ಲಿ ಬರುವುದಿಲ್ಲ.

**ಸಮಾಧಾನ**—ಇದು ಸರಿಯಲ್ಲ. ನೀಲಧೂಮದಲ್ಲಿ ಧೂಮತ್ವವು ಇರುವುದರಿಂದ ನೀಲಧೂಮನಿಷ್ಠವ್ಯಾಪ್ಯತಾದಲ್ಲಿ ಧೂಮತ್ವವು ಅವಚ್ಛೇದಕವಾಗುತ್ತದೆ. ಇದರಂತೆ ಶರೀರಜನ್ಯತ್ವಾಭಾವದಲ್ಲಿ ಜನ್ಯತ್ವಾಭಾವತ್ವವು ಇಲ್ಲ. ಅವೆರಡು ಅಭಾವಗಳು ವಿಭಿನ್ನವಾದುದರಿಂದ. ಹೀಗಾಗಿ ವಿಶಿಷ್ಟಾಭಾವನಿಷ್ಠವ್ಯಾಪ್ಯತಾದಲ್ಲಿ ವಿಶೇಷ್ಯಾಭಾವತ್ವವು ಅವಚ್ಛೇದಕವಾಗುವುದಿಲ್ಲ. ಹಾಗಿದ್ದಿದ್ದರೆ ಅವಚ್ಛೇದಕಾಂಶೇ ಲಾಘವವನ್ನು ಹೇಳಬಹುದಿತ್ತು. ಆದ್ದರಿಂದ ನೀಲಧೂಮದಲ್ಲಿ ವ್ಯಾಪ್ತಿ ಇಲ್ಲದಿದ್ದರೂ ಶರೀರಾಜನ್ಯತ್ವದಲ್ಲಿ ವ್ಯಾಪ್ತಿ ಇದ್ದೇ ಇದೆ. ವ್ಯಾಪ್ಯತ್ವಾಸಿದ್ಧಿ ಇಲ್ಲ.

## ನ್ಯಾಯದೀಪ

**अभाव इति।** जन्यत्वाभाव इत्यर्थः। **न हेतुरिति। तथात्वे हि**

जन्यत्वाभावमात्रस्य गगनादावकर्तृकत्वेन व्याप्तस्य हेतुस्वरूपस्याजन्यत्वपदेनैवोपस्थितिसम्भवेन शरीरपदं व्यर्थं स्यात् । नचैवमित्यर्थः । 'स च भिन्न एवे'त्यन्वयः । यदि न भिन्नस्तदा लाघवेन विशेष्याभावादेरेव व्याप्यतया विशिष्टाभावो न व्याप्यः स्यात् । नचैवमित्यर्थः ।

कुत इत्यतस्तद् व्यनक्ति— **विशेषणेति** । प्रतिवादिमतानुरोधेनाह— **पदार्थान्तरमितीति** । अस्त्वतिरिक्तोऽभावस्ततः किमित्यत आह— **तादृशेति** । प्रतियोगिनिर्विकल्पकादभावबुद्धेरभावाद् वास्तवमुपेत्याह —**प्रतियोगितावच्छेदकप्रकारकेति** । तथाच शरीरजन्यत्वत्वेन शरीरजन्यत्वज्ञानं न शरीरज्ञानं विना युक्तमित्यर्थः । ततः किमित्यत आह—**एवंचेति** ।।

'ನ ಹೇತುಃ' ಎಂದಿದೆ ಮೂಲದಲ್ಲಿ. ಅದರ ಭಾವಾರ್ಥ- ಶರೀರವಿಶಿಷ್ಟವಾದ ಜನ್ಯತ್ವಾಭಾವವೇ ಒಂದುವೇಳೆ ಹೇತುವಾಗಿದ್ದಲ್ಲಿ ತದ್ಘಟಕವಾದ ಜನ್ಯತ್ವಾಭಾವ ಎಂಬ ಲಘುವಾದ ಧರ್ಮವೇ ಗಗನಾದಿಗಳಲ್ಲಿ ಸಕರ್ತೃಕತ್ವವ್ಯಾಪ್ಯತ್ವೇನ ಗೃಹೀತವಾದುದರಿಂದ ಶರೀರಪದವು ವ್ಯರ್ಥ ಎನ್ನಬಹುದಿತ್ತು. ಆದರೆ ಶರೀರ ಎಂಬ ವಿಶೇಷಣ ಅಭಾವಕ್ಕಲ್ಲ, ಜನ್ಯತ್ವಕ್ಕೆ. ಏವಂಚ ಶರೀರ ವಿಶಿಷ್ಟವಾದ ಜನ್ಯತ್ವದ ಅಭಾವವು ಶುದ್ಧಜನ್ಯತ್ವದ ಅಭಾವಕ್ಕಿಂತ ಭಿನ್ನವಾದುದು. ಅವೆರಡೂ ಒಂದೇ ಆಗಿದ್ದಲ್ಲಿ ವಿಶೇಷ್ಯಾಭಾವವೇ ವ್ಯಾಪ್ಯವಾಗುವಾಗ ವಿಶಿಷ್ಟಾಭಾವವು ವ್ಯಾಪ್ಯವಲ್ಲ, ಎನ್ನಬಹುದಿತ್ತು ಎಂದು.

ಅಭಾವಜ್ಞಾನಕ್ಕೆ ಪ್ರತಿಯೋಗಿಯ ನಿರ್ವಿಕಲ್ಪಕಜ್ಞಾನವು ಕಾರಣವಲ್ಲ. ಅದಕ್ಕಾಗಿ ಮೂಲದಲ್ಲಿ ಪ್ರತಿಯೋಗಿತಾವಚ್ಛೇದಕ-ಪ್ರಕಾರಕ-ಪ್ರತಿಯೋಗಿಜ್ಞಾನದಿಂದಲೇ ಅಭಾವಜ್ಞಾನವು ಬರುತ್ತದೆ, ಎನ್ನಲಾಗಿದೆ.

## ನ್ಯಾಯದೀಪ

यदत्रोक्तं मणौ ''शरीरजन्यत्वाभावो नाखण्डो हेतुः । यदि हि शरीरजन्यत्वं सकर्तृकत्वप्रयोजकं स्यात् तदा तदभावप्रयुक्तः

सकर्तृकत्वाभाव इति तस्य साध्यव्याप्यता स्यात् । नचैवम् । किन्तु जन्यत्वम्। लाघवात्'' इत्यदि । तत्तु ''अदृष्टाद्वारकशरीरजन्यत्व-मुपाधिश्च'' इत्यादिनोपाधेः सकर्तृकत्वप्रयोजकत्वप्रतिपादन-परपूर्वग्रन्थेनैव निरस्तमित्यभिप्रेत्य लाघवेन विशेष्याभावस्यैव व्याप्यत्वं, न विशिष्टाभावस्येति विशिष्टाभावस्य व्याप्यत्वासिद्धिचोद्यं निराह—**नचेत्यादिना ।** सामग्रीवशेनाजन्यत्वस्यापि क्वचिदुपस्थि-तिसम्भवादस्तु विशिष्टाभावस्याव्याप्यत्वमित्यत आह—**क्वचिदिति । भिन्नविषयत्वेनेति ।** विशिष्टाभावमध्ये विशेष्याभावस्याप्रवेशात् । अत एव पूर्वं ''विशेषणविशेष्ययोरभावाभ्यां भिन्न एव'' इत्युक्तमिति भावः ।

नन्वखण्डस्य व्याप्यत्वेऽप्यखण्डनिष्ठा व्याप्तिर्जन्यत्वाभावत्वेनैवा-वच्छिद्यते । नीलधूमनिष्ठा व्याप्तिर्धूमत्वेनेव । तथाच हेतुस्वरू-पोपस्थितौ विशेष्याभावविशिष्टाभावयोर्भिन्नत्वेन लाघवासहकारेऽप्यव-च्छेदकग्रहे लाघवं सहकारि स्यादेवेत्यत आह—**नहीति । तत्रेति ।** विशिष्टाभावे जन्यत्वाभावत्वाभावादित्यर्थः ।।

ಶರೀರಜನ್ಯತ್ವಾಭಾವ ಜನ್ಯತ್ವಾಭಾವಾತಿರಿಕ್ತವಾದ ಅಖಂಡಾಭಾವ, ಎನ್ನುವ ಬಗ್ಗೆ ಮಣಿಕಾರ ಹೀಗೆ ಆಕ್ಷೇಪಿಸಿದ್ದಾನೆ—(ಪು.73) ''ಶರೀರಜನ್ಯತ್ವಾಭಾವರೂಪವಾದ ಅಖಂಡಾಭಾವವೇ ಅಕರ್ತೃಕತ್ವಸಾಧಕ ಹೇತು, ಎನ್ನುವುದು ಸರಿಯಲ್ಲ. ಒಂದುವೇಳೆ ಶರೀರಜನ್ಯತ್ವವು ಸಕರ್ತೃಕತ್ವಕ್ಕೆ ಪ್ರಯೋಜಕವಾಗಿದ್ದಲ್ಲಿ ಸಕರ್ತೃಕತ್ವಾಭಾವವು ಶರೀರಜನ್ಯತ್ವಾಭಾವಪ್ರಯುಕ್ತವಾಗುತ್ತಿತ್ತು. ಶರೀರ ಜನ್ಯತ್ವಾಭಾವವು ಪ್ರತಿಪಕ್ಷಾನುಮಾನದ ಸಾಧ್ಯವ್ಯಾಪ್ಯವೂ ಆಗುತ್ತಿತ್ತು. ಆದರೆ, ಜನ್ಯತ್ವವೇ ಸಕರ್ತೃಕತ್ವಪ್ರಯೋಜಕ, ಲಾಘವಾತ್'' ಎಂದು.

ಮಣಿಕಾರನ ಈ ಆಕ್ಷೇಪವನ್ನು ಉಪಾಧಿದೋಷವನ್ನು ಹೇಳುವಾಗಲೇ (ಪು.282) ನಿರಾಕರಿಸಲಾಗಿದೆ. ಘಟಾದಿಗಳಲ್ಲಿ ಜನ್ಯತ್ವಕ್ಕೆ ಶರೀರಜನ್ಯತ್ವವೇ ಪ್ರಯೋಜಕವೆಂದು ದೃಷ್ಟವಾಗಿದೆ, ಎಂದು. ಆದ್ದರಿಂದ ಇಲ್ಲಿ ಅದನ್ನು ನಿರಾಕರಿಸದೆ 'ಲಾಘವಾತ್ ವಿಶೇಷ್ಯಾಭಾವವೇ ವ್ಯಾಪ್ಯ, ವಿಶಿಷ್ಟಾಭಾವವು ವ್ಯಾಪ್ಯವಲ್ಲ' ಎನ್ನುವ ಅಂಶವನ್ನಷ್ಟೇ 'ನ ಚ' ಇತ್ಯಾದಿ ಮೂಲದಲ್ಲಿ ನಿರಾಕರಿಸಲಾಗಿದೆ.

ಮೂಲದಲ್ಲಿ ವ್ಯಾಪ್ತಿಗ್ರಹವು 'ಭಿನ್ನವಿಷಯತ್ವೇನ' ಎಂದಿದೆ. ಅದಕ್ಕೆ ಕಾರಣ– ವಿಶಿಷ್ಟಾಭಾವದಲ್ಲಿ ವ್ಯಾಪ್ತಿಜ್ಞಾನವು ವಿಶೇಷ್ಯಾಭಾವವಿಷಯಕವಲ್ಲ. ಏಕೆಂದರೆ, ವಿಶಿಷ್ಟಾಭಾವದಲ್ಲಿ ವಿಶೇಷ್ಯಾಭಾವವು ಸೇರಿಲ್ಲ. ಆದ್ದರಿಂದಲೇ ಇಲ್ಲೇ ಹಿಂದೆ ''ವಿಶಿಷ್ಟಾಭಾವವು ವಿಶೇಷಣ–ವಿಶೇಷ್ಯಗಳ ಅಭಾವಕ್ಕಿಂತ ಭಿನ್ನವಾಗಿದೆ'' ಎಂದು ಹೇಳಲಾಗಿದೆ.

## ಅವತಾರಿಕೆ

### उक्तार्थे बाधकमाशङ्क्येष्टापत्त्या निराह—**नन्वित्यादिना ।**

ವಿಶಿಷ್ಟಾಭಾವನಿಷ್ಠವಾದ ವ್ಯಾಪ್ತಿಯಲ್ಲಿ ವಿಶೇಷ್ಯಾಭಾವತ್ವವು ಅವಚ್ಛೇದಕವಲ್ಲ, ಎಂಬ ವಿಷಯದಲ್ಲಿ ಬಾಧಕವನ್ನು ಶಂಕೆಮಾಡಿ ಆ ಶಂಕೆಯನ್ನು ಇಷ್ಟಾಪತ್ತಿಯ ಮೂಲಕ ಮುಂದಿನ ಗ್ರಂಥದಲ್ಲಿ ಪರಿಹರಿಸಲಾಗಿದೆ.

**नन्वेवं वह्न्यनुमापके धूमप्रागभावादौ, पृथिव्या इतरभेदानुमापके पृथिवीत्वसमवाये च, त्वदभिमता व्यर्थविशेष्यता न स्यात् । धूमपृथिवीत्वादिनिष्ठव्याप्तितो धूमप्रागभाव–पृथिवीत्वसमवायनिष्ठ-व्याप्तेर्भिन्नत्वेन तस्याः धूमपृथिवीत्ववृत्तिधर्माभ्याम् अवच्छेत्तुमशक्य-त्वादिति चेन्न । इष्टापत्तेः ।।**

ವಿಶಿಷ್ಟಾಭಾವಸಂಪಾದಕತಯಾ ವಿಶೇಷಣಗಳಿಗೆ ಸಾರ್ಥಕ್ಯವನ್ನು ಹೇಳಿದರೆ ಅತಿಪ್ರಸಂಗ ಬರುತ್ತದೆ—''ಗಿರಿಃ ವಹ್ನಿಮಾನ್ ವಹ್ನಿಪ್ರಾಗಭಾವಾತ್'' ''ಪೃಥಿವೀ ಇತರಭಿನ್ನಾ, ಪೃಥಿವೀತ್ವಸಮವಾಯಾತ್'' ಈ ಅನುಮಾನಗಳಲ್ಲಿ ವ್ಯರ್ಥವಿಶೇಷ್ಯತಾ ದೋಷವಾಗಲಿಕ್ಕಿಲ್ಲ. ಮೊದಲನೆಯ ಅನುಮಾನದಲ್ಲಿ, ಧೂಮವೇ ಹೇತುವಾಗುವಾಗ ಧೂಮಪ್ರಾಗಭಾವವು ಗುರುಭೂತ ಎನ್ನಬೇಕು. ಆದರೆ, ಧೂಮಕ್ಕಿಂತ ಧೂಮಪ್ರಾಗಭಾವವು ಭಿನ್ನವಾದುದರಿಂದ ಧೂಮಪ್ರಾಗಭಾವನಿಷ್ಠವ್ಯಾಪ್ತತಾದಲ್ಲಿ ಧೂಮತ್ವವು ಅವಚ್ಛೇದಕವಲ್ಲ. ಎರಡನೆಯ ಅನುಮಾನದಲ್ಲಿ, ಪೃಥಿವೀತ್ವಾಪೇಕ್ಷಯಾ ಪೃಥಿವೀತ್ವಸಮವಾಯುವು ಗುರುಭೂತ, ಎನ್ನಬೇಕು. ಆದರೆ, ಅವೆರಡೂ ಭಿನ್ನಧರ್ಮಗಳಾದುದರಿಂದ ಪೃಥಿವೀಸಮವಾಯನಿಷ್ಠವ್ಯಾಪ್ತಿಯಲ್ಲಿ ಪೃಥಿವೀತತ್ವವು ಅವಚ್ಛೇದಕವಲ್ಲ. ತಥಾಚ, ಅವಚ್ಛೇದಕಾಂಶೇ ಲಾಘವಕ್ಕೆ ಅವಕಾಶವಿಲ್ಲದುದರಿಂದ ವ್ಯರ್ಥವಿಶೇಷ್ಯತಾದೋಷವಾಗಲಿಕ್ಕಿಲ್ಲ, ಎಂದರೆ, ಇಷ್ಟಾಪತ್ತಿ. ಆ ಎರಡೂ ಅನುಮಾನಗಳೂ ಸದನುಮಾನಗಳೇ ಆಗಿವೆ.

**व्यर्थविशेष्योदाहरणन्तु 'अयमभिधेयवान् प्रमेयवत्वे सति धूमवत्वादि'त्यादिकम् । नीलधूमादित्यादौ विशेषणाश्रयनिष्ठव्याप्तेर्विशेष्यतावच्छेदकेन धूमत्वेनावच्छेदसम्भवरूपव्यर्थविशेषणतादुष्टिबीजस्येव प्रकृतेऽपि विशेष्यतावच्छेदकावच्छिन्ननिष्ठव्याप्तेर्विशेषणतावच्छेदकेन प्रमेयत्वत्वेनावच्छेदसम्भवरूपस्य व्यर्थविशेष्यता–दुष्टिबीजस्य सम्भवात् ॥**

ವ್ಯರ್ಥವಿಶೇಷ್ಯತ್ವಕ್ಕೆ ಉದಾಹರಣೆ ಇದು—"ಅಯಂ ಅಭಿಧೇಯವಾನ್, ಪ್ರಮೇಯವತ್ವೇ ಸತಿ ಧೂಮವತ್ವಾತ್" ಇತ್ಯಾದಿ. ಹೇಗೆ 'ನೀಲಧೂಮಾತ್' ಎಂಬ ಹೇತುವು ವ್ಯರ್ಥವಿಶೇಷಣಕವೋ ಅದರಂತೆ, ಪ್ರಕೃತಹೇತು ವ್ಯರ್ಥವಿಶೇಷ್ಯಕವಾಗಿದೆ. ನೀಲಧೂಮ ನಿಷ್ಠವಾದ ವ್ಯಾಪ್ತಿಯು ವಿಶೇಷ್ಯತಾವಚ್ಛೇದಕ–ಧೂಮತ್ವಾವಚ್ಛಿನ್ನವಾದುದರಿಂದ ನೀಲ ಎಂಬ ವಿಶೇಷಣವು ಹೇಗೆ ವ್ಯರ್ಥವೋ ಅದರಂತೆ, ಪ್ರಕೃತದಲ್ಲೂ ವಿಶೇಷ್ಯವಾದ ಧೂಮವತ್ವನಿಷ್ಠವಾದ ವ್ಯಾಪ್ತಿಯು ವಿಶೇಷಣತಾವಚ್ಛೇದಕವಾದ ಪ್ರಮೇಯತ್ವದಿಂದ ಅವಚ್ಛಿನ್ನವಾದುದರಿಂದ ವಿಶೇಷ್ಯಾಂಶವು ವ್ಯರ್ಥ.

**तस्माद् व्यर्थविशेषणस्य न क्वापि व्याप्यत्वासिद्धित्वेन दूषणता । किन्तु विशिष्टस्य हेतुत्वाभिप्रायेण प्रयोगेऽधिकत्वेन । हेतुद्वयोक्तौ द्वितीये प्रथमेन कृतकार्यत्वस्येव विशिष्टेऽपि विशेष्येण कृत-कार्यत्वस्य दुष्टि(ष्ट)बीजस्य सत्त्वात् । विशेष्यस्यैव हेतुत्वाभिप्राये त्वर्थान्तरत्वेन । प्रकृते तु विशिष्टाभावरूप–हेतुकार्यस्यान्येनाकरणान्नाधिकत्वम् ॥**

ನೀಲಧೂಮದಲ್ಲೂ ವ್ಯಾಪ್ತಿಯು ಇದೆ. ಎಂದು ಸಮರ್ಥನೆ ಮಾಡಿರುವುದರಿಂದ ವ್ಯರ್ಥವಿಶೇಷಣತ್ವವು ವ್ಯಾಪ್ಯತ್ವಾಸಿದ್ಧಿಮೂಲಕವಾಗಿ ದೋಷವಲ್ಲ. ಹೊರತು, ಅಂತಹ ವಿಶೇಷಣದಿಂದ ವಿಶಿಷ್ಟವಾದುದನ್ನು, ಹೇತು ಎಂಬ ಅಭಿಪ್ರಾಯದಿಂದ, ಪ್ರಯೋಗಮಾಡಿದಾಗ ಅಧಿಕ ಎಂಬ ನಿಗ್ರಹಸ್ಥಾನಪ್ರಯುಕ್ತವಾಗಿ ಅದು ದೋಷವೆನಿಸುತ್ತದೆ. "ಧೂಮವತ್ವಾತ್" "ಆಲೋಕವತ್ವಾತ್" ಎಂದು ಎರಡನ್ನು ಹೇತುಮಾಡಿದಾಗ ಮೊದಲ ಹೇತುವಿನಿಂದಲೇ ಸಾಧ್ಯಪ್ರಮಿತಿ ಬರುವಾಗ ಎರಡನೆಯ ಹೇತು ವ್ಯರ್ಥವಾಗುವಂತೆ ಪ್ರಮೇಯಧೂಮವತ್ವಾತ್, ಎಂದು ವಿಶಿಷ್ಟವನ್ನು ಹೇತುಮಾಡಿದಾಗಲೂ ವಿಶೇಷ್ಯಮಾತ್ರದಿಂದಲೇ ಸಾಧ್ಯಪ್ರಮಿತಿರೂಪವಾದ ಕಾರ್ಯವು ಸಿದ್ಧವಾಗುವುದರಿಂದ ವಿಶಿಷ್ಟವು ವ್ಯರ್ಥವಾಗುತ್ತದೆ. ಅವೆರಡರಲ್ಲೂ ದೋಷಕಾರಣವು

ಸಮಾನ. (ಎರಡು ಹೇತುಗಳನ್ನು ಮಾಡಿದಾಗ ವ್ಯಾಪ್ಯತ್ವಾಸಿದ್ಧಿ ಇಲ್ಲವೆನ್ನುವುದು ಉಭಯಸಮ್ಮತ. ತತ್ಸಮಶೀಲವಾದುದರಿಂದ ವ್ಯರ್ಥವಿಶೇಷಣವಿಶಿಷ್ಟದಲ್ಲೂ ವ್ಯಾಪ್ಯತ್ವಾಸಿದ್ಧಿ ಇಲ್ಲ.)

ವಿಶಿಷ್ಟಹೇತುವನ್ನು ಪ್ರಯೋಗ ಮಾಡಿದರೂ ವಿಶೇಷ್ಯಭಾಗದಲ್ಲಿ ಮಾತ್ರ ತಾತ್ಪರ್ಯವಿದ್ದರೆ ಅರ್ಥಾಂತರತಾದೋಷ. ಪ್ರಕೃತಾನುಪಯುಕ್ತೋಕ್ತಿಯೇ ಅರ್ಥಾಂತರತಾ. ಅದೇ ನಿಗ್ರಹಸ್ಥಾನ.

ಪ್ರಕೃತ ಶರೀರಾಜನ್ಯತ್ವಹೇತುವನ್ನು ಪ್ರಯೋಗಿಸಿದಾಗ ಈ ದೋಷಗಳೂ ಇಲ್ಲ. ಶರೀರಜನ್ಯತ್ವಾಭಾವರೂಪ ಹೇತುವಿನ ಕಾರ್ಯವು ತದ್ಘಟಕವಾದ ಯಾವುದೇ ಭಾಗಾಂತರದಿಂದ ಸಿದ್ಧವಾಗುವುದಿಲ್ಲ. ಆದ್ದರಿಂದ ಆಧಿಕ್ಯದೋಷವೂ ಇಲ್ಲ.

**न च विशिष्टाभावकार्यं विशेष्याभावेन कर्तुं शक्यम्। विशिष्टोपस्थितौ विशेष्यस्योपस्थितिनियमवत्, विशिष्टस्य हेतुत्वे विशेषणस्य हेतुत्वनियमवच्च, विशिष्टाभावोपस्थितौ विशेष्याभावोपस्थितिनियमस्य, तस्य हेतुत्वान्वये विशेष्याभावस्य हेतुत्वान्वयनियमस्य चाभावात् ॥**

ವಿಶಿಷ್ಟದ ಕಾರ್ಯವು ವಿಶೇಷ್ಯದಿಂದ ಆಗುವಂತೆ ವಿಶಿಷ್ಟಾಭಾವದ ಕಾರ್ಯವು ವಿಶೇಷ್ಯಾಭಾವದಿಂದ ಆಗಲು ಸಾಧ್ಯವಿಲ್ಲ. ಏಕೆಂದರೆ, ವಿಶಿಷ್ಟೋಪಸ್ಥಿತಿ ಬರುವಾಗ ವಿಶೇಷ್ಯವು ನಿಯಮೇನ ಉಪಸ್ಥಿತವಾಗುವಂತೆ, ವಿಶಿಷ್ಟವು ಹೇತುವಾದಾಗ ವಿಶೇಷ್ಯವೂ ನಿಯಮೇನ ಹೇತುವಾಗುವಂತೆ, ವಿಶಿಷ್ಟಾಭಾವದ ಜ್ಞಾನ ಬಂದಾಗ ವಿಶೇಷ್ಯಾಭಾವದ ಜ್ಞಾನವು ನಿಯಮೇನ ಬರಬೇಕೆಂದಿಲ್ಲ. ಅದರಂತೆಯೇ, ವಿಶಿಷ್ಟಾಭಾವವು ಹೇತುವಾದಾಗ ವಿಶೇಷ್ಯಾಭಾವವೂ ಹೇತುವಾಗಬೇಕೆಂದೇನಿಲ್ಲ. (ಪ್ರಕೃತದಲ್ಲಿ, ಶರೀರವಿಶಿಷ್ಟಜನ್ಯತ್ವದ ಅಭಾವವು ತಿಳಿಯಲ್ಪಟ್ಟಾಗ ಜನ್ಯತ್ವಾಭಾವವೂ ತಿಳಿಯಲ್ಪಡಬೇಕೆಂದಾಗಲೀ, ತಾದೃಶಾಭಾವವು ಹೇತುವಾದಾಗ ಜನ್ಯತ್ವಾಭಾವವೂ ಹೇತುವಾಗಬೇಕೆಂದಾಗಲೀ ನಿಯಮವಿಲ್ಲ.) ಆದ್ದರಿಂದ ಆಧಿಕ್ಯವಿಲ್ಲ.

**नाप्यर्थान्तरम् । असिद्धिवारकत्वेन प्रकृतोपयोगात्। एतदेवाभिप्रेत्योक्तं टीकाकारैः ''पक्षधर्मतासिद्ध्यर्थत्वात्'' इति । तस्मात् सत्प्रतिपक्षत्वं दुष्परिहरम् ॥**

ಅರ್ಥಾಂತರದೋಷವೂ ಇಲ್ಲ. ಶರೀರವಿಶೇಷಣವು ಪ್ರಕೃತಾನುಪಯುಕ್ತವಾದಲ್ಲಿ ಅರ್ಥಾಂತರದೋಷಕ್ಕೆ ಅವಕಾಶವಾಗುತ್ತಿತ್ತು. ಶರೀರವಿಶೇಷಣವು ಅಸಿದ್ಧಿವಾರಕತ್ವೇನ ಪ್ರಕೃತದಲ್ಲಿ ಉಪಯುಕ್ತವಾಗಿದೆ.

ಈ ಅಭಿಪ್ರಾಯದಿಂದಲೇ ತತ್ತ್ವನಿರ್ಣಯಟೀಕಾದಲ್ಲಿ ಟೀಕಾಕಾರರು— "ವಿಮತಂ ವಿಕರ್ತೃಕಂ ಅಸ್ಮತ್‌ಸಮ್ಮತಕರ್ತೃರಹಿತ್ವಾತ್" ಎಂಬ ಅನುಮಾನಕ್ಕೆ ಸಂಬಂಧಪಟ್ಟಂತೆ ಹೀಗೆ ಹೇಳಿದ್ದಾರೆ— ಶರೀರವಿಶೇಷಣವು ಹೇತುವಿಗೆ ಪಕ್ಷಧರ್ಮತಾಸಿದ್ಧಿಗಾಗಿ ಸಾರ್ಥಕವಾಗಿದೆ, ಎಂದು.

ಆದ್ದರಿಂದ ಈಶ್ವರಾನುಮಾನಕ್ಕೆ ಸತ್ಪ್ರತಿಪಕ್ಷದೋಷವನ್ನು ಪರಿಹಾರ ಮಾಡಲು ಸಾಧ್ಯವಿಲ್ಲ.

## न्यायदीप

**वह्नीति ।** गिरिर्वह्निमान् धूमप्रागभाववत्त्वात्, पृथिवी इतरभिन्ना पृथिवीत्वसमवायवत्त्वादित्यादावित्यर्थः । तर्हि व्यर्थविशेष्यत्वं क्वापि दोषो न स्यादित्यत आह—**व्यर्थेति ।** आदिपदेन तादृशालोकवत्त्वादिग्रहः ।

नन्वत्राप्यखण्डं विशेष्यमात्रादन्यदेव व्याप्तमिति सुवचनमित्यतो व्यर्थविशेषणस्थल इवात्रापि दूषकताबीजप्रदर्शनेन व्यर्थविशेष्यतां व्यनक्ति—**नीलेति । विशेषणाश्रयनिष्ठेति ।** नैल्यरूपविशेषणयुक्तधूमनिष्ठेत्यर्थः । विशिष्टस्य पदार्थान्तरत्वाभावमतेनैवमुक्तिः। विशेष्यतावच्छेदकेन=धूमत्वेनेत्यर्थः । **सम्भवेति ।** व्यभिचाराभावादिति भावः । **दुष्टीति ।** विशेषणस्य दुष्टताबीजस्येत्यर्थः । **प्रकृतेऽपि** प्रमेयवत्त्वे सति धूमवत्त्वादित्यादावित्यर्थः । **सम्भवरूपस्येति ।** प्रमेयवत्त्वादित्युक्तेऽपि व्यभिचाराभावादिति भावः ।।

ಮೂಲದಲ್ಲಿ ವ್ಯರ್ಥವಿಶೇಷ್ಯತ್ವಕ್ಕೆ "ಪ್ರಮೇಯವತ್ತ್ವೇ ಸತಿ ಧೂಮವತ್ವಾತ್" ಎಂಬ ಉದಾಹರಣೆಯನ್ನು ಕೊಡಲಾಗಿದೆ. ಆದರೆ ಶರೀರಜನ್ಯತ್ವಾಭಾವದಲ್ಲಿ ಹೇಳಿದಂತೆ ಪ್ರಕೃತದಲ್ಲೂ ವಿಶೇಷ್ಯಮಾತ್ರಕ್ಕಿಂತ ಭಿನ್ನವಾದ ವಿಶಿಷ್ಟವೇ ಸಾಧ್ಯವ್ಯಾಪ್ಯವಾಗಿದೆ. ಆದ್ದರಿಂದ ಇದೂ ವ್ಯರ್ಥವಿಶೇಷ್ಯತ್ವಕ್ಕೆ ಉದಾಹರಣೆಯಾಗುವುದಿಲ್ಲ. ಈ ಆಕ್ಷೇಪ ಬಂದಾಗ ನೀಲಧೂಮಾತ್ ಇತ್ಯಾದಿ ವ್ಯರ್ಥವಿಶೇಷಣ ಸ್ಥಲದಂತೆ ಪ್ರಮೇಯತ್ವೇ ಸತಿ ಧೂಮಾತ್, ಎಂಬ ಹೇತುವಿನಲ್ಲೂ ದೂಷಕತಾಬೀಜವು ಸಮಾನವಾಗಿದೆ, ಎಂದು ತೋರಿಸಿ ವ್ಯರ್ಥವಿಶೇಷ್ಯತ್ವವನ್ನು "ನೀಲಧೂಮಾತ್" ಎಂಬ ವಾಕ್ಯದಲ್ಲಿ ಸಮರ್ಥಿಸಲಾಗಿದೆ.

ಮೂಲದಲ್ಲಿ ವಿಶೇಷಣಾಶ್ರಯನಿಷ್ಠವಾದ ವ್ಯಾಪ್ತಿಯು ವಿಶೇಷ್ಯತಾವಚ್ಛೇದಕಾವಚ್ಛಿನ್ನವಾಗಿದೆ, ಎಂದಿರುವುದು 'ವಿಶಿಷ್ಟವು ಪದಾರ್ಥಾಂತರ' ಎಂಬ ಮತವನ್ನು ಅಂಗೀಕರಿಸದ ತಾರ್ಕಿಕರ

ಮತದಂತೆ. ದ್ವೈತದರ್ಶನದಲ್ಲಿ ವಿಶಿಷ್ಟವು ಪದಾರ್ಥಾಂತರವಾದುದರಿಂದ ಹೀಗೆ ಹೇಳಲು ಆಗುವುದಿಲ್ಲ.

## ನ್ಯಾಯದೀಪ

व्यर्थविशेषणस्य दूषणताबीजं निर्धारयन्नेव शरीराजन्यत्वे तन्नास्तीत्युपपादयति– **तस्मादिति ।** नीलधूमादेरपि व्याप्यताया उपपादनादित्यर्थः । **अधिकत्वेनेति ।** दूषणतेत्यनुषङ्गः । आधिक्यरूपनिग्रहस्थानत्वेन हेतुनेत्यर्थः ।।

'ತಸ್ಮಾತ್' ಎಂಬ ಮೂಲಗ್ರಂಥದಲ್ಲಿ ವ್ಯರ್ಥವಿಶೇಷಣತ್ವ ದೋಷವೆನಿಸಲು ಕಾರಣವನ್ನು ಕೊಟ್ಟು ಶರೀರಾಜನ್ಯತ್ವಹೇತುವಿನಲ್ಲಿ ಆ ದೋಷವೂ ಇಲ್ಲ, ಎಂದು ಹೇಳಲಾಗಿದೆ.

## ನ್ಯಾಯದೀಪ

अन्वितोपयुक्तापुनरुक्तकृतकार्यप्रयोगस्याधिकत्वात् कथमत्रान्येन कृतकार्यत्वमित्यत आह— **हेतुद्वयेति ।** धूमवत्त्वादालोकवत्त्वाच्चेत्येवं रूपेणेति भावः । **अर्थान्तरत्वेनेति ।** प्रकृतानुपयुक्तान्वितोक्तिरर्थान्तरम् इत्युक्तार्थान्तररूपनिग्रहस्थानत्वेनेत्यर्थः । अत्रापि, दूषणता व्यर्थविशेषणस्येत्यनुषङ्गः । शरीरेति विशेषणस्येति शेषः । **एतदेवाभिप्रेत्योक्तमिति ।** विमतं विकर्तृकं अस्मत्सम्मतकर्तृरहितत्वादिति तत्त्वनिर्णयटीकायामुक्तमित्यर्थः । [1]**असिद्धिवारकत्वेनेति ।** शरीरेति विशेषणस्येति शेषः ।।

'ನೀಲಧೂಮಾತ್' ಎಂದು ಹೇತು ಪ್ರಯೋಗ ಮಾಡಿದಾಗ ವ್ಯಾಪ್ಯತ್ವಾಸಿದ್ಧಿದೋಷ ಇಲ್ಲ, ಅಧಿಕ್ಯ ಎಂಬ ನಿಗ್ರಹಸ್ಥಾನದೋಷ, ಎಂದು ಮೂಲದಲ್ಲಿದೆ. ಆದರೆ, ಅಧಿಕ್ಯಬರಬೇಕಾದರೆ "ಅನ್ವಿತ ಕೃತಕಾರ್ಯದ ಪ್ರಯೋಗ"ವಾಗಿರಬೇಕು. "ಅನ್ವಿತ–ಉಪಯುಕ್ತ–ಅಪುನರುಕ್ತ–ಕೃತಕಾರ್ಯಪ್ರಯೋಗಃ ಅಧಿಕ್ಯಂ" ಎಂದು ಅಧಿಕ್ಯದ ಲಕ್ಷಣ. ಅಧಿಕೋಕ್ತಿಯು

---

1. ಪ್ರಚಲಿತ ಪಾಠದಲ್ಲಿ ಈ ಪ್ರತೀಕಗ್ರಹಣ ಇಲ್ಲ.

ಅನ್ವಿತವಾಗಿರಬೇಕು–ಅನನ್ವಿತವಾಗಿರಬಾರದು. ಪ್ರಕೃತೋಪಯುಕ್ತವಾಗಿರಬೇಕು. ಪುನರುಕ್ತ ವಾಗಿರಬಾರದು. ಅಪಾರ್ಥಕಾದಿಗಳ ವ್ಯಾವೃತ್ತಿಗಾಗಿ ಈ ವಿಶೇಷಣಗಳನ್ನು ಕೊಡಲಾಗಿದೆ. (ಅಪಾರ್ಥಕೇ, ಅರ್ಥಾಂತರೇ, ಅಸಾಧುಪ್ರಯೋಗೇ ಚಾನತಿವ್ಯಾಪ್ತಯೇ ಕ್ರಮಾದ್ವಿಶೇಷಣಾನಿ– ರಾ.ಟಿ.ಪದ್ಧತಿ.) ''ಪರ್ವತಃ ವಹ್ನಿಮಾನ್, ಧೂಮಾತ್'' ಎಂದು ಒಂದು ಹೇತುವನ್ನು ಹೇಳಿ ''ಆಲೋಕಾತ್'' ಎಂದು ಇನ್ನೊಂದು ಹೇತುವನ್ನು ಹೇಳುವುದು ಆಧಿಕ್ಯಕ್ಕೆ ಉದಾಹರಣೆ. ಅದನ್ನು ಮೂಲದಲ್ಲಿ ''ಹೇತು ದ್ವಯೋಕ್ತೌ'' ಎಂದು ಹೇಳಲಾಗಿದೆ.

ಇದರಂತೆ ''ಪಕೃತಕ್ಕೆ ಅನುಪಯುಕ್ತವಾದ, ಅನ್ವಿತವಾದ ಉಕ್ತಿಯೇ'' ಅರ್ಥಾಂತರ. ಆ ಉಕ್ತಿಯೂ ಅನನ್ವಿತವಾಗಿರಬಾರದು.

## ಅವತಾರಿಕೆ

**यदपि मणौ ''ननु क्षित्यादावेककर्तृसिद्धिः कुतः'' इत्यादिना ''उच्यते'' इत्यन्तेनैककर्तृसिद्धिमाक्षिप्य ''यत्र प्रमाणे लघुगुरु-विषयता''इत्यादिना समाधानमुक्तं तदपि निराह—तदेवमिति ।**

ಈಶ್ವರಾನುಮಾನಮಣಿಗ್ರಂಥದಲ್ಲಿ ''ಕ್ಷಿತ್ಯಾದಿಗಳಲ್ಲಿ ಏಕಕರ್ತೃ ಸಿದ್ಧಿಯಾಗುವುದು ಹೇಗೆ?'' ಎಂದು ಪ್ರಶ್ನಿಸಿ ಏಕಕರ್ತೃಸಿದ್ಧಿಯಾಗುವುದಿಲ್ಲ ಎಂದು ಆಕ್ಷೇಪಿಸಿ ಕೊನೆಗೆ 'ಉಚ್ಯತೇ' ಎಂದು ಹೇಳಿ ''ಪ್ರತ್ಯಕ್ಷಾದಿಪ್ರಮಾಣಗಳಲ್ಲಿ ಲಘುಗುರುವಿಷಯಕತ್ವವು ಇರುವಾಗ ಲಾಘವಸಹಕಾರವು ನಿರ್ಣಾಯಕ'' **''ಯತ್ರ ಪ್ರಮಾಣೇ ಲಘುಗುರುವಿಷಯತಾ ಸಂಭವತಿ ತತ್ರ ಲಾಘವ ಸಹಕಾರಿತಾ । ಕಾರಣತಾ–ಕಾರ್ಯತಾ–ವ್ಯಾಪ್ಯತಾದಿಗ್ರಾಹಕೇ ಪ್ರತ್ಯಕ್ಷೇ, ಪ್ರವೃತ್ತಿನಿಮಿತ್ತಗ್ರಾಹಕೇ ಉಪಮಾನೇ, ತಥಾವಿಧಪ್ರಮಾಣಮಾತ್ರೇ ಸಕಲತಾಂತ್ರಿಕೈಃ ಸಹಕಾರಿತ್ವಕಲ್ಪನಾತ್ । ಏವಂ ಲಾಘವಂ, ಏವಂ ಗೌರವಮಿತಿ ಜ್ಞಾನಾನಂತರಂ, ಬಾಧಕಂ ವಿನಾ ಲಘೂನಾಮೇವ ಕಾರಣತ್ವ–ಕಾರ್ಯತ್ವ–ಪ್ರವೃತ್ತಿನಿಮಿತ್ತತ್ವ–ಶಬ್ದಶಕ್ಯತ್ವಾನಾಂ ಜ್ಞಾನದರ್ಶನಾತ್ ।''** (ಪು.78) ಎಂದು ಏಕೇಶ್ವರಸಿದ್ಧಿಯನ್ನು ಸಮರ್ಥಿಸಲಾಗಿದೆ. ಅದನ್ನು ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

## ಕರ್ತೃವಿಗೆ ಏಕತ್ವಸಿದ್ಧಿ ನಿರಾಸ

**तदेवं कार्यत्वहेतोर्दुष्टतया प्रमित्यनुन्मुखत्वात् लघवतर्कानुगृहीतेन तेन कर्त्रैक्यसिद्धिरिति निरस्तम् । कार्यसामान्यस्य कर्तृमात्रसापेक्षत्वेऽपि तद्विशेषस्य घटस्य कुलालरूपकर्तृसापेक्षत्ववत्, वेदस्य शरीर-**

**सहकृतेश्वरसापेक्षत्ववच्च गुरुतरकार्यस्य सजातीयकारकसहितकर्तृसापेक्षत्वदर्शनेन त्वदुक्तैककर्तृकत्वविपरीतानेक–कर्तृकत्वेनाप्यनुमातुं शक्यत्वाच्च ।**

**वैदिकेश्वरस्य तु वेदेनैव सर्वं सिद्धम् । तस्मान्न कार्यत्वहेतुनेश्वरसिद्धिः ॥**

ಹೀಗೆ ಈಶ್ವರಸಾಧಕವಾದ ಕಾರ್ಯತ್ವಹೇತುವು ದುಷ್ಟವಾದುದರಿಂದ ಆ ಹೇತು ಸಾಧನಸಮರ್ಥವಾಗುವುದಿಲ್ಲ. ಆದ್ದರಿಂದ 'ಲಾಘವತರ್ಕಾನುಗ್ರಹೀತವಾದ ಆ ಹೇತುವಿನಿಂದ ಕ್ಷಿತ್ಯಾದಿಗಳು ಏಕಕರ್ತೃಕ ಎಂದು ಸಿದ್ಧವಾಗುತ್ತದೆ, ಎನ್ನುವ ತಾರ್ಕಿಕರವಾದವು ಸರಿಯಲ್ಲ.

ಅಷ್ಟೇ ಅಲ್ಲ, ಕರ್ತೃಗಳು ಅನೇಕರೆಂದೇ ಸಿದ್ಧವಾಗುತ್ತದೆ–ಕಾರ್ಯಸಾಮಾನ್ಯಕ್ಕೆ ಒಬ್ಬ ಕರ್ತೃ ಇರಬೇಕು, ಎಂದು ನಿಯಮ. ಆದರೂ ಕಾರ್ಯವಿಶೇಷವಾದ ಘಟಕ್ಕೆ ಕುಲಾಲನೇ ಕರ್ತೃ ಎಂದು ಕರ್ತೃವಿಶೇಷವು ಸಿದ್ಧವಾಗುತ್ತದೆ. ವೇದಕ್ಕೊಬ್ಬ ಈಶ್ವರಕರ್ತೃ ಎಂದು ಸಿದ್ಧವಾದರೂ ಮೀನಾದಿಶರೀರ ಸಹಕೃತನಾದ ಈಶ್ವರನೇ ಕರ್ತೃ, ಎಂದು ಸಿದ್ಧವಾಗುತ್ತದೆ. ಇದರಂತೆ, ಲೋಕದಲ್ಲಿ ಬೃಹದಾಕಾರದ ಕಾರ್ಯವು ಆಗಬೇಕಾದರೆ ಸಜಾತೀಯ ಕರ್ತ್ರಂತರರ ಸಹಕಾರವು ಕಂಡಿರುವುದರಿಂದ ಲೋಕಾನುಸಾರವಾಗಿ ಗುರುತರ ಕಾರ್ಯವಾದ ಕ್ಷಿತ್ಯಾದಿಗಳಿಗೆ ಅನೇಕ ಕರ್ತೃಗಳಿದ್ದಾರೆಂದೇ ಸಿದ್ಧವಾಗುತ್ತದೆ. ಏಕಕರ್ತೃಕತ್ವವು ಸಿದ್ಧವಾಗುವುದಿಲ್ಲ.

ಅನುಮಾನದಿಂದಲೇ ಈಶ್ವರನನ್ನು ಸಾಧನೆ ಮಾಡಿದಾಗ ಈ ಎಲ್ಲ ಅನುಪಪತ್ತಿಗಳು ಬರುತ್ತವೆ. ವೇದದಿಂದ ಈಶ್ವರಸಿದ್ಧಿ ಎಂದಾಗ ಈ ಅನುಪಪತ್ತಿಗಳಿಗೆ ಅವಕಾಶವಿಲ್ಲ. ''ದ್ಯಾವಾಭೂಮೀ ಜನಯನ್ ದೇವ ಏಕಃ'' ಎಂಬ ಶ್ರುತಿಯಿಂದಲೇ ಏಕತ್ವಾದಿಗಳು ಈಶ್ವರನಿಗೆ ಸಿದ್ಧವಾಗುತ್ತವೆ. ಹೀಗೆ, ಕಾರ್ಯತ್ವಹೇತುವಿನಿಂದ ಈಶ್ವರಸಿದ್ಧಿಯು ಆಗುವುದಿಲ್ಲ.

## ನ್ಯಾಯದೀಪ

**तद्विशेषस्येति ।** कार्यविशेषस्येत्यर्थः । **शरीरेति ।** ''सर्गादावदृष्टभेदान्मीनशरीरोत्पत्तावदृष्टवदात्मसंयोगात्, अदृष्टसहकृतप्रयत्नवदीश्वरसंयोगाद्वा सकलवेदार्थगोचरज्ञानविवक्षा–सहकृतान्मीनकण्ठताल्वादिक्रिया–तज्जन्यसंयोगाद् वेदोत्पत्तिः'' इति मण्युक्तेरिति भावः । **गुरुतरेति ।** प्रासादादिरूपेत्यर्थः । **सजातीयकारकेति ।** कर्त्रन्तरा-

दिरूपेत्यर्थः । मूलारूढत्वायाह—**त्वदुक्तेत्यादि** । 'विमतमनेककर्तृकं गुरुतरकार्यत्वात्, प्रासादादिकार्यवत्' इत्यनुमातुं शक्यत्वादित्यर्थः । नन्वेवं त्वन्मतेऽपीश्वरसिद्धिः, कर्त्रैक्यसिद्धिः, नित्यज्ञानादिसिद्धिश्च न स्यात् । अनुमानस्य त्वया दूषितत्वादित्यतः "वैदिकेश्वरस्य तु वेदेनैव सर्वशक्तित्वोक्तेः सर्वमुपपद्यते" इति भाष्यवाक्यं(२.२.१२) हृदि कृत्वाह–**वैदिकेति** । वेदैकसमधिगम्येत्यर्थः । **वेदेनेति** । "द्यावा भूमी जनयन् देव एकः, परास्य शक्तिर्विविधैव श्रूयते स्वाभाविकी ज्ञानबलक्रिया च, यदात्मको भगवांस्तदात्मिका व्यक्तिः" इत्यादि-भाष्याद्युक्तवेदेनेत्यर्थः ॥

ಈಶ್ವರವಾದ ಮಣಿಗ್ರಂಥದಲ್ಲಿ (ಪು.84) ವೇದೋತ್ಪತ್ತಿಯು ಈಶ್ವರನಿಂದ ಆಗುವ ಕ್ರಮವನ್ನು ನಿರೂಪಿಸಲಾಗಿದೆ— ಸೃಷ್ಟಿಯ ಆರಂಭದಲ್ಲಿ ಅದೃಷ್ಟ ವಿಶೇಷದಿಂದ ಒಬ್ಬ ಜೀವನಿಗೆ ಮೀನಶರೀರವು ಬರುತ್ತದೆ. ಆ ಶರೀರದಲ್ಲಿ ಅದೃಷ್ಟಉಳ್ಳ ಒಬ್ಬ ಆತ್ಮನ ಸಂಯೋಗದಿಂದ ಅಥವಾ ಜೀವಾದೃಷ್ಟಸಹಕೃತ ಈಶ ಪ್ರಯತ್ನದಿಂದ ಮತ್ತು ವೇದಾರ್ಥವಿಷಯಗಳನ್ನು ಮತ್ತೊಬ್ಬರಿಗೆ ತಿಳಿಸಬೇಕೆಂಬ ಇಚ್ಛೆಯಿಂದ ಮೀನದ ವರ್ಣೋತ್ಪತ್ತಿ ಸ್ಥಾನಗಳಿಂದ ವೇದವು ಉಚರಿಸಲ್ಪಡುತ್ತದೆ.

## ಅವತಾರಿಕೆ

एवं—

"कार्यायोजनधृत्यादेः पदात् प्रत्ययतः श्रुतेः ।
वाक्यात् सङ्ख्याविशेषाच्च" ।

इति कुसुमाञ्जलिसङ्गृहीतेश्वरसाधकहेतूनां मध्ये मण्युक्तकार्यत्वहेतुप्रपञ्चनं निरस्येदानीं "अनयैव दिशा सर्वाणि जगत्कारणमात्रसाधनानि स्वतन्त्रानुमानानि निरसनीयानि" इति शास्त्रयोनिसूत्रसुधोक्तिं विवृण्वानः कुसुमाञ्जल्युक्तहेत्वन्तराण्यपि क्रमेण निराह— **एतेनेत्यादिना** ।

ಕುಸುಮಾಂಜಲಿ ಗ್ರಂಥದಲ್ಲಿ ಈಶ್ವರಸಾಧಕವಾದ ಎಂಟು ಹೇತುಗಳನ್ನು 'ಕಾರ್ಯಾಯೋಜನ'' ಇತ್ಯಾದಿಕಾರಿಕೆಯಲ್ಲಿ ಸಂಗ್ರಹಿಸಲಾಗಿದೆ. ಮಣಿಗ್ರಂಥದಲ್ಲಿ ಮೊದಲನೆಯ ಕಾರ್ಯತ್ವಹೇತುವನ್ನು ಹೇಳಿ ಅದರಿಂದ ಈಶ್ವರನನ್ನು ಸಾಧಿಸಲಾಗಿದೆ. ಅದನ್ನು ಇದುವರೆಗೆ ನಿರಾಕರಿಸಲಾಗಿದೆ. ಸುಧಾದಲ್ಲಿ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಕಾರ್ಯತ್ವಹೇತುವನ್ನು ನಿರಾಕರಿಸಿ ''ಇದೇ ರೀತಿಯಲ್ಲಿ ಜಗತ್ಕಾರಣತ್ವಸಾಧಕವಾದ ಎಲ್ಲಾ ಅನುಮಾನಗಳನ್ನೂ ನಿರಾಕರಿಸಬೇಕು'' ಎಂದು ಹೇಳಲಾಗಿದೆ. ಅದರ ವಿವರಣರೂಪವಾಗಿ ಕುಸುಮಾಂಜಲಿಗ್ರಂಥದಲ್ಲಿ ಹೇಳಿರುವ ಇತರ ಹೇತುಗಳನ್ನೂ ಮುಂದೆ ನಿರಾಕರಿಸುತ್ತಾರೆ.

## ದ್ವಿತೀಯಾನುಮಾನ ನಿರಾಸ

**एतेन, अस्तु तर्हि परमाण्वोर्द्व्यारम्भकसंयोगहेतुक्रियारूपकार्यायोजनेनेश्वरसिद्धिः । 'विमतं परमाण्वादि, चेतनाधिष्ठितं स्पन्दते, जडत्वात् शरीरवत्'इत्यनुमानात् । अन्यथा जडत्वहानेरिति निरस्तम् । उक्तरीत्या त्वदुक्तविपरीतस्यास्मदादीनामेवादृष्टद्वाराप्यधिष्ठातृत्वस्य सम्भवेन सिद्धसाधनात् । अदृष्टाद्वारकेति विशेषणेऽप्रयोजकत्वात् । अनेनेश्वरसार्वज्ञ्यासिद्धेश्च । इदमुत्तरानुमानेष्वपि द्रष्टव्यम् ।।**

ಈಶ್ವರಸಾಧಕವಾದ ಎರಡನೆಯ ಹೇತು—ಆಯೋಜನ. ಆಯೋಜನೆ ಎಂದರೆ ಕ್ರಿಯೆ. ವಿಶ್ವಸೃಷ್ಟಿಗೆ ಕಾರಣವಾದ, ಸರ್ಗಾದ್ಯಕಾಲೀನ ಪರಮಾಣುಕ್ರಿಯೆ. ಆ ಕ್ರಿಯೆಯಿಂದ ಪರಮಾಣು ದ್ವಯಸಂಯೋಗವಾಗಿ ಅದರಿಂದ ದ್ವ್ಯಣುಕವೆಂಬಕಾರ್ಯವು ಹುಟ್ಟುತ್ತದೆ. ಮೂಲದಲ್ಲಿ 'ಸಂಯೋಗಹೇತುಕ್ರಿಯಾ' ಎಂದು ಈ ಕ್ರಿಯೆಯನ್ನು ಹೇಳಲಾಗಿದೆ. ಕುಸುಮಾಂಜಲಿಯಲ್ಲಿ ಹೇಳಿರುವ 'ಕಾರ್ಯಾಯೋಜನ' ಎಂಬ ಕಾರಿಕೆಯಲ್ಲಿರುವ ಕಾರ್ಯಾಯೋಜನ ಪದದ ಅರ್ಥವನ್ನು ಹೀಗೆ ಹೇಳಲಾಗಿದೆ— 'ಕಾರ್ಯಸ್ಯ ಆಯೋಜನಂ=ಆಯೋಜಕಂ–ಕರ್ಮ' ಎಂದು. ಕಾರ್ಯ ಎಂದರೆ ದ್ವ್ಯಣುಕ. ಅದಕ್ಕೆ ಜನಕವಾದ ಕ್ರಿಯೆ, ಎಂದು ಅರ್ಥ. ಕುಸುಮಾಂಜಲಿಯಲ್ಲಿ 'ಕಾರ್ಯ–ಆಯೋಜನ' ಎಂದು ಪ್ರತ್ಯೇಕವಾಗಿ ಎರಡು ಹೇತುಗಳನ್ನಾಗಿ ಪರಿಗಣಿಸಲಾಗಿದೆ. ಇಲ್ಲಿ ಅದನ್ನು ಅಖಂಡವಾಗಿ ಒಂದೇ ಹೇತುವನ್ನಾಗಿ ವ್ಯಾಖ್ಯಾನಿಸಲಾಗಿದೆ. ಅನುಮಾನ ಮಾಡುವ ಕ್ರಮ ಹೀಗೆ—

ಪಕ್ಷ—ವಿಮತವಾದ ಪರಮಾಣ್ವಾದಿಗಳು.

ಸಾಧ್ಯ—ಚೇತನದಿಂದ ಅಧಿಷ್ಠಿತವಾಗಿ ಕ್ರಿಯಾಶೀಲವಾಗಿವೆ.

**ಹೇತು**—ಜಡವಾದುದರಿಂದ.

**ದೃಷ್ಟಾಂತ**—ಶರೀರದಂತೆ.

ಚೇತನ ಅನಧಿಷ್ಠಿತವಾಗಿಯೂ ಕ್ರಿಯೆ ಬಂದರೆ ಪರಮಾಣು ಜಡವೇ ಆಗಲಿಕ್ಕಿಲ್ಲ.

ಈ ಅನುಮಾನವೂ ಸರಿಯಲ್ಲ-ಕಾರ್ಯತ್ವಾನುಮಾನದ ವಿಮರ್ಶೆಯಲ್ಲಿ ಹೇಳಿರುವಂತೆ ಭೋಕ್ತೃಗಳಾದ ಜೀವರೇ ಅದೃಷ್ಟದ್ವಾರಾ ಪರಮಾಣುಗಳಿಗೆ ಅಧಿಷ್ಠಾತೃಗಳಾಗಬಹುದು. (ಆತ್ಮನು ವಿಭುವಾದುದರಿಂದ) ಆದ್ದರಿಂದ ಸಿದ್ಧಸಾಧನತಾ.

ಇದರ ಪರಿಹಾರಕ್ಕಾಗಿ ಅದೃಷ್ಟ-ಅದ್ವಾರಕಚೇತನಾಧಿಷ್ಠಿತಂ, ಎಂದು ಸಾಧನೆ ಮಾಡಿದರೆ ಹೇತು ಅಪ್ರಯೋಜಕವಾಗುತ್ತದೆ. ಪರಮಾಣುಗಳು ಜಡವಾದುದರಿಂದ ಕ್ರಿಯೆಯಾಗ ಬೇಕಾಗಿರುವುದು ಮುಖ್ಯ. ಅದು ಈಶ್ವರಾಧಿಷ್ಠಿತವಾಗಿಯೂ ಆಗಬಹುದು, ಅದೃಷ್ಟದ್ವಾರಾ ಜೀವಾಧಿಷ್ಠಿತವಾದುದರಿಂದಲೂ ಆಗಬಹುದು. ಈಶ್ವರಾಧಿಷ್ಠಿತವಾದರೆ ಆವನ ಇಚ್ಛೆಯಿಂದ ಕ್ರಿಯೆ ಉಂಟಾಗುತ್ತದೆ. ಜೀವಾಧಿಷ್ಠಿತವಾದಾಗಲೂ ಜೀವರ ಭೋಗಾದೃಷ್ಟದಿಂದಲೇ ಕ್ರಿಯೆ ಉಂಟಾಗಬಹುದು. ಆದ್ದರಿಂದ ಹೇತುವು ಅಪ್ರಯೋಜಕವಾಗುತ್ತದೆ. ಅಲ್ಲದೆ, ಹೀಗೆ ಈಶ್ವರನನ್ನು ಸಾಧನೆಮಾಡಿದರೆ ಆವನಿಗೆ ಸರ್ವಜ್ಞತ್ವ ಸಿದ್ಧವಾಗುವುದಿಲ್ಲ. ಈ ದೋಷ ಮುಂದಿನ ಎಲ್ಲಾ ಅನುಮಾನಗಳಲ್ಲೂ ಸಮಾನ.

## ನ್ಯಾಯದೀಪ

**कार्यायोजनेति ।** यद्यपि कुसुमाञ्जलौ ''आयोजना खल्वपि'' इत्यादिना आयोजनमेव हेतुरुपात्तः । कार्येति कार्यत्वं हेतुः । तथापि ''युज्यते संयुज्यते अन्योन्यं द्रव्यमनेनेत्यायोजनं=द्व्यणुकारम्भकसंयोगजनकं सर्गाद्यकालीनपरमाणुकर्म'' इति वर्धमानोक्त्या कार्यपदेन द्व्यणुकादिकार्यायोजनमित्यप्यन्वयमुपेत्य कार्यायोजनेनेत्युक्तमिति ज्ञेयम् । क्वचित्तु ''आयोजनेनेत्येव'' पाठः ।

सिद्धिरित्युक्तं प्रयोगोक्त्या व्यनक्ति– **विमतमिति ।** तत् किमित्यतः– **परमाण्वादीति ।** आदिपदेन द्व्यणुकादिग्रहः । चेतनाधिष्ठितं सदेव स्पन्दत इति साध्यार्थः । अप्रयोजकत्वं हेतोर्निराह— **अन्यथेति ।**

चेतनवत् स्वत एव स्पन्दवत्त्व इत्यर्थः। एतेनेत्युक्तं व्यनक्ति—**उक्तरीत्येति ।।**

उक्तदोषनिरासायादृष्टाद्वारकचेतनेति विशेषणमाशङ्क्य निराह–**अदृष्टेति ।** जडत्वहेतोरदृष्टद्वारकचेतनाधिष्ठितत्वेनाप्युपपत्तेरप्रयोजको हेतुरिति भावेनाह—**अप्रयोजकत्वादिति ।।**

ತರ್ಕತಾಂಡವದಲ್ಲಿ ''ಕಾರ್ಯಾಯೋಜನ'' ಎಂದು ಅಖಂಡವಾಗಿ ಒಂದೇ ಹೇತು ಎಂದು ಪರಿಗಣಿಸಲಾಗಿದೆ. ಆದರೆ, ಕುಸುಮಾಂಜಲಿ ಗ್ರಂಥದಲ್ಲಿ ''ಆಯೋಜನಾ ಖಲ್ವಪಿ'' ಎಂದು 'ಆಯೋಜನೆಯು' ಪ್ರತ್ಯೇಕಹೇತುವಾಗಿ ಪರಿಗಣಿಸಲ್ಪಟ್ಟಿದೆ. 'ಕಾರ್ಯಾ' ಎಂಬ ಕಾರಿಕೆಯಲ್ಲಿ ಹೇಳಿರುವ ಕಾರ್ಯತ್ವವು ಒಂದು ಪ್ರತ್ಯೇಕಹೇತು. ಆದರೂ ತರ್ಕತಾಂಡವದಲ್ಲಿ 'ವರ್ಧಮಾನೋಪಾಧ್ಯಾಯ' ಎಂಬ ನೈಯಾಯಿಕನ ಅಭಿಪ್ರಾಯವನ್ನು ಅನುಸರಿಸಲಾಗಿದೆ. ಅವನು ಆಯೋಜನ ಎಂಬ ಪದಕ್ಕೆ ಹೀಗೆ ಅರ್ಥ ಹೇಳಿದ್ದಾನೆ—'ಯುಜ್ಯತೇ ಅನೇನೇತಿ ಆಯೋಜನಂ'' ಎರಡು ಪರಮಾಣುಗಳ ಸಂಯೋಗಕ್ಕೆ ಕಾರಣವಾದುದು ಆಯೋಜನ. ಅಂದರೆ ಪರಮಾಣುಕ್ರಿಯೆ. ಅದರಿಂದ ಪರಮಾಣುದ್ವಯಸಂಯೋಗವಾಗಿ ದ್ವ್ಯಣುಕವು ಹುಟ್ಟುತ್ತದೆ. ಕಾರ್ಯ ಎಂದರೆ ಹುಟ್ಟುವ ದ್ವ್ಯಣುಕ. ''ಕಾರ್ಯಸ್ಯ=ದ್ವ್ಯಣುಕಸ್ಯ ಆಯೋಜನಂ=ಆರಂಭಕಂ ಕರ್ಮ'' ಎಂದು ಮೂಲದಲ್ಲಿ ಅಖಂಡಪದವನ್ನಾಗಿ ತೆಗೆದುಕೊಳ್ಳಲಾಗಿದೆ. ಕೆಲವೆಡೆ ಕಾರ್ಯಪದವಿಲ್ಲದೆ, ''ಆಯೋಜನೇನ'' ಎಂಬಿಷ್ಟೇ ಮೂಲಪಾಠವೂ ಇದೆ.

## ನ್ಯಾಯದೀಪ

ननु अदृष्टस्यापि केनचिदधिष्ठातृचेतनेन भाव्यमिति स एवेश्वर इति चेन्न। तत्राधिष्ठातुः कृत्याभावात्। न तावन्नोदनादिकम्। अद्रव्यत्वात्। नचातिशयाधानम्। स किं गुणः, अतीन्द्रियः कश्चिच्छक्तिविशेषः ? न द्वयमपि। त्वया गुणे गुणान्तरानङ्गीकारात्। शक्त्यनभ्युपगमाच्च। नापि सहकारिसमवधानम्। अदृष्टादेव तदुपपत्तेः। नापि कार्यकारित्वम्। तस्यादृष्टस्वभावत्वात्। एककार्योत्पत्त्यनन्तरं कार्यान्तरानुत्पादनं च प्रबलादृष्टान्तरप्रतिबन्धेनोपपत्तेरिति सुधायामेव व्यक्तत्वादिति भावेन दोषान्तरमाह

**—अनेनेति।** उक्तानुमानेन कस्यचिच्चेतनस्यैव सिद्ध्या तत्सार्वज्ञ्यासिद्धेः। सार्वज्ञ्यस्य धर्मिग्राहकमानसिद्धत्वादितीश्वरवादोपक्रमात् पूर्वं त्वदुक्तमयुक्तमिति भावः। **इदमिति।** सार्वज्ञ्यासिद्धिदूषणमित्यर्थः॥

**ಆಕ್ಷೇಪ**—ಅದೃಷ್ಟದ್ವಾರಾ ಜೀವರೇ ಪರಮಾಣುಗಳಲ್ಲಿ ಅಧಿಷ್ಠಾತೃಗಳಾಗಿದ್ದು ಅವುಗಳಲ್ಲಿ ಕ್ರಿಯೆ ಉಂಟಾಗುತ್ತದೆ. ಆದ್ದರಿಂದ ಸಿದ್ಧಸಾಧನತಾ, ಎನ್ನಲಾಯಿತು. ಆದರೆ, ಅದೃಷ್ಟವಾದರೂ ಜಡವಾದುದರಿಂದ ಕಾರ್ಯಕಾರಿಯಾಗಬೇಕಾದರೆ ಚೇತನಾಧಿಷ್ಠಿತವಾಗಿರಬೇಕು. ಅದರಿಂದ ಈಶ್ವರ ಸಿದ್ಧನಾಗುತ್ತಾನೆ.

**ಸಮಾಧಾನ**—ಅದೃಷ್ಟವು ಕಾರ್ಯೋನ್ಮುಖವಾಗಲು ಚೇತನಾಧಿಷ್ಠಾನದ ಅಗತ್ಯವಿಲ್ಲ. ಅಲ್ಲಿ ಅಧಿಷ್ಠಾತೃಚೇತನರಿಗೆ ಕೆಲಸವೇ ಇಲ್ಲ. ಅದೃಷ್ಟಕ್ಕೆ ಈಶನೊಂದಿಗೆ 'ನೋದನ' ಸಂಯೋಗವೇ ಅಧಿಷ್ಠಾತೃವಿನ ಕೃತ್ಯ, ಎನ್ನಬೇಕು. ಆದರೆ, ಅದೃಷ್ಟ ದ್ರವ್ಯವಲ್ಲ, ಗುಣ. ಅದರಲ್ಲಿ ಸಂಯೋಗ ಎಂಬ ಗುಣಾಂತರವು ಬರುವುದಕ್ಕೆ ಸಾಧ್ಯವಿಲ್ಲ.

ಅದೃಷ್ಟದಲ್ಲಿ ಅತಿಶಯವಿಶೇಷಬರುವುದಕ್ಕಾಗಿ ಅಧಿಷ್ಠಾತೃಬೇಕು ಎನ್ನುವುದಾದರೆ ಅಂತಹ ಅತಿಶಯ ಯಾವ ರೂಪವಾದುದು? ಗುಣವೋ, ಅತೀಂದ್ರಿಯವಾದ ಆಧೇಯ ಶಕ್ತಿವಿಶೇಷವೋ? ಇವೆರಡೂ ಸಾಧ್ಯವಿಲ್ಲ. ಗುಣದಲ್ಲಿ ಗುಣಾಂತರವನ್ನು ನೈಯಾಯಿಕರು ಅಂಗೀಕರಿಸಿಲ್ಲ. ಅವರು ಶಕ್ತಿ ಎಂಬ ಪದಾರ್ಥವನ್ನೇ ಒಪ್ಪಿಲ್ಲ ಕೂಡ. ಕಾರ್ಯಕ್ಕೆ ಬೇಕಾಗಿರುವ ಸಹಕಾರಿಗಳ ಸಂಪತ್ತಿಗಾಗಿಯೂ ಅಧಿಷ್ಠಾತೃವಿನ ಅಗತ್ಯವಿಲ್ಲ. ಸರ್ವತ್ರ ಅದೃಷ್ಟವೇ ಸಹಕಾರಿಸಂಪಾದಕ. ಅದಕ್ಕೆ ಯಾರ ಸಹಾಯದ ಅಗತ್ಯವೂ ಇಲ್ಲ.

ಕಾರ್ಯಕಾರಿತ್ವಸಿದ್ಧಿಗಾಗಿಯೂ ಅಧಿಷ್ಠಾತೃ ಬೇಕಾಗಿಲ್ಲ. ಅದು ಅದೃಷ್ಟದ ಸ್ವಭಾವ. ಅದೃಷ್ಟದಿಂದ ಒಂದು ಕಾರ್ಯವಾದ ಮೇಲೆ ಕಾರ್ಯಾಂತರವು ಹುಟ್ಟದಿರುವಂತೆ ಮಾಡಲೂ ಅಧಿಷ್ಠಾತೃಬೇಕಾಗಿಲ್ಲ. ಪ್ರಬಲವಾದ ಇನ್ನೊಂದು ಅದೃಷ್ಟವು ಪ್ರತಿಬಂಧಕವಾಗಿರುವುದರಿಂದಲೇ ಕಾರ್ಯಾಂತರಾನುತ್ಪಾದವಾಗುತ್ತದೆ.[1] (ಈ ಆಕ್ಷೇಪದ ಬದಲು ಸುಧಾದಲ್ಲಿ ಬೇರೆಯೇ ಆಕ್ಷೇಪವಿದೆ—

**"तर्हि उत्पत्यनंतरमेव किं न कुर्यात्, इति चेत् प्रबलादृष्टांतर प्रतिबंधात् ।"** ಜೀವರ ಅದೃಷ್ಟವೇ ಪರಮಾಣುಕ್ರಿಯೆಗೆ ಕಾರಣವಾದರೆ ಜೀವರಲ್ಲಿ ಆ ಅದೃಷ್ಟ ಹುಟ್ಟಿದಕೂಡಲೇ ಪರಮಾಣುಗಳಲ್ಲಿ ಕ್ರಿಯೆ ಏಕಾಗಿಲ್ಲ? ಅದಕ್ಕೆ ಉತ್ತರ—ಪ್ರಬಲವಾದ ಅದೃಷ್ಟಾಂತರವು ಪ್ರತಿಬಂಧಕವಾದುದರಿಂದ ಕ್ರಿಯೆ ಉಂಟಾಗುವುದಿಲ್ಲ, ಎಂದು. ಸುಧಾದ ಈ ವಾಕ್ಯಕ್ಕೆ ರಾಯರು ಪರಿಮಳದಲ್ಲಿ "ಸ್ವೋತ್ಪತ್ತ್ಯುತ್ತರಕ್ಷಣೇ ಏವ" ಎಂದು ಅರ್ಥವನ್ನೂ ಬರೆದಿರುತ್ತಾರೆ.)

1. ಇಲ್ಲಿ ನ್ಯಾಯದೀಪದ ಪಂಕ್ತಿ ಸುಧಾನುಸಾರವಾಗಿ ಬೇರೆಯೇ ಇರಬೇಕು. ಕಾರ್ಯಾಂತರಾನುತ್ಪಾದಕ್ಕೆ ಕರ್ತೃವಿನ ಅಗತ್ಯವಿಲ್ಲವಾದ ಕಾರಣ ಈ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ.

ಈ ಎಲ್ಲ ದೋಷಗಳೂ ಸುಧಾದಲ್ಲೇ (ಶಾಸ್ತ್ರಯೋನಿತ್ವಾಧಿಕರಣ) ಸ್ಪಷ್ಟವಾಗಿರುವುದರಿಂದ ಮೂಲದಲ್ಲಿ 'ಅನೇನ' ಎಂಬ ವಾಕ್ಯದಿಂದ ದೋಷಾಂತರವನ್ನು ಹೇಳಲಾಗಿದೆ. ಈಶ್ವರನಿಗೆ ಸರ್ವಜ್ಞತ್ವಾಸಿದ್ಧಿಯೇ ದೋಷಾಂತರ. ಈ ಅನುಮಾನದಿಂದ ಈಶ್ವರನು ಸಿದ್ಧನಾದರೂ ಅವನು ಸರ್ವಜ್ಞ, ಎಂದು ಸಿದ್ಧನಾಗುವುದಿಲ್ಲ. ಆದರೆ ನೈಯಾಯಿಕರು 'ಸರ್ವಜ್ಞತ್ವವು ಧರ್ಮಿಗ್ರಾಹಕ ಪ್ರಮಾಣಸಿದ್ಧ' ಎನ್ನುತ್ತಾರೆ. ಅದು ತಪ್ಪಾಗುತ್ತದೆ.

## ಅವತಾರಿಕೆ

**धृतिरूपं हेत्वन्तरमपि कुसुमाञ्जल्युक्तदिशाऽनूद्य निराह—एतेनेति ।**

ಈಶ್ವರಸಾಧಕವಾದ ಮೂರನೆಯ ಹೇತು 'ಧೃತಿ' (ಧಾರಣೆ). ಆ ಹೇತುವಿನಿಂದ ಈಶ್ವರ ಸಿದ್ಧಿಕ್ರಮವನ್ನು ಕುಸುಮಾಂಜಲಿಯಲ್ಲಿ ಹೇಳಿರುವಂತೆ ಮುಂದಿನ ಗ್ರಂಥದಲ್ಲಿ ಅನುವಾದ ಮಾಡಿ ನಿರಾಕರಿಸಲಾಗಿದೆ.

## ತೃತೀಯಾನುಮಾನ ನಿರಾಸ

**एतेनैव, विमतं ब्रह्माण्डादि धारकप्रयत्नवता धृतम्, गुरुत्वे सत्यपातित्वात्, वियति विहङ्गमशरीरवत् । विमतं ब्रह्माण्डादि प्रयत्नवद्विनाश्यं, विनाशित्वात्, पाट्यमानपटवदिति निरस्तम् । उक्तसिद्धसाधनाप्रयोजकत्वान्यतरानिस्तारात् ॥**

ಈಶ್ವರಸಾಧಕವಾದ ಮೂರನೆಯ ಹೇತು–ಧೃತಿ. ಧೃತಿ ಎಂದರೆ ಧಾರಣೆ. ಭಾರವಾದ ಈ ಬ್ರಹ್ಮಾಂಡವು ಬೀಳದೇ ನಿಲ್ಲಲು ಧಾರಕಪ್ರಯತ್ನಬೇಕು. ಅವನೇ ಈಶ್ವರ, ಎಂದು ಅನುಮಾನದ ಅಭಿಪ್ರಾಯ. ಅನುಮಾನ ಮಾಡುವ ಕ್ರಮ ಹೀಗೆ—

**ಪಕ್ಷ**—ವಿಮತವಾದ ಬ್ರಹ್ಮಾಂಡ ಹಾಗೂ ಪೃಥಿವ್ಯಾದಿ ಲೋಕಗಳು.

**ಸಾಧ್ಯ**—ಧಾರಕವಾದ ಯತ್ನವುಳ್ಳ–ವ್ಯಕ್ತಿಯಿಂದ ಧರಿಸಲ್ಪಟ್ಟಿವೆ.

**ಹೇತು**—ಭಾರವಿದ್ದರೂ ಬೀಳದಿರುವುದರಿಂದ.

**ದೃಷ್ಟಾಂತ**—ಆಕಾಶದಲ್ಲಿ ಹಾರುವ ಹಕ್ಕಿಯ ಶರೀರದಂತೆ.

ಕಾರಿಕೆಯಲ್ಲಿ 'ಧೃತ್ಯಾದೇಃ' ಎಂದು ಆದಿಪದದಿಂದ ಬ್ರಹ್ಮಾಂಡಾದಿಗಳ ಲಯವೂ ಈಶ್ವರಸಾಧಕವಾದ ಹೇತುವೆಂದು ವಿವಕ್ಷಿತವಾಗಿದೆ. ಆ ಅನುಮಾನ ಹೀಗೆ—

**ಪಕ್ಷ**—ವಿಮತವಾದ ಈ ಬ್ರಹ್ಮಾಂಡಾದಿಗಳು.

**ಸಾಧ್ಯ**—ಪ್ರಯತ್ನಪೂರ್ವಕವಾದ ವ್ಯಕ್ತಿಯಿಂದ ನಾಶವಾಗುತ್ತವೆ.

**ಹೇತು**—ವಿನಾಶವಾದುದರಿಂದ.

**ದೃಷ್ಟಾಂತ**—ಹರಿಯಲ್ಪಡುವ ಬಟ್ಟೆಯಂತೆ.

ಈ ಎರಡು ಅನುಮಾನಗಳಲ್ಲೂ ಹಿಂದೆ ಹೇಳಿರುವ ಸಿದ್ಧಸಾಧನತಾ ಮತ್ತು ಅಪ್ರಯೋಜಕತ್ವ ದೋಷಗಳಿವೆ. ಜೀವಾತ್ಮರ ಅದೃಷ್ಟದ್ವಾರಕವಾದ ಯತ್ನದಿಂದಾಗಿಯೇ ಬ್ರಹ್ಮಾಂಡದ ಧಾರಣೆ, ನಾಶಗಳು ಆಗಬಹುದು. ಈ ಬ್ರಹ್ಮಾಂಡವನ್ನು ಅವಲಂಬಿಸಿರುವ ಜೀವರ ಅದೃಷ್ಟದಿಂದಾಗಿ ಅದು ಬೀಳುತ್ತಿಲ್ಲ. ಆ ಅದೃಷ್ಟಹುಟ್ಟಬೇಕಾದರೆ ಜೀವರು ಯಜ್ಞಾದಿಸತ್ಕರ್ಮಗಳನ್ನು ಮಾಡಲು ಪ್ರಯತ್ನ ಮಾಡಬೇಕು. ಆ ಪ್ರಯತ್ನವೇ ಅದೃಷ್ಟದ್ವಾರಾ ಬ್ರಹ್ಮಾಂಡಾದಿಪತನಾಭಾವಕ್ಕೆ ಕಾರಣ. ಆದ್ದರಿಂದ ಸಿದ್ಧಸಾಧನತಾ. ಇದರ ಪರಿಹಾರಕ್ಕೆ ಅದೃಷ್ಟ ಅದ್ವಾರಾ ಎಂದು ವಿಶೇಷಣ ಕೊಟ್ಟರೆ ಅಪ್ರಯೋಜಕತ್ವ.

## ನ್ಯಾಯದೀಪ

ब्रह्माण्डादीत्यादिपदेन पृथिव्यादिग्रहः । साध्ये व्यापकतासम्पत्तये धारकेति प्रयत्ने विशेषणम् । अन्यादृशप्रयत्नस्यापतनाहेतुत्वात् । लघुवस्तुन्यपतनवति व्यभिचारवारणाय गुरुत्वे सतीति हेतुविशेषणम् । पतमाने गुरुत्ववति तन्निरासाय विशेष्यम् । **वियतीति ।** गगने विहरत्पक्षिशरीरं यथा प्रयत्नवता चेतनेन विहगजीवेन धृतं तथा ब्रह्माण्डादिधारकः कश्चन चेतनः सिद्ध्यति । स एवेश्वर इति भावः ।

धृत्यादेरित्यत्रापिपदोपात्तानुमानं व्यनक्ति— **विमतमिति । उक्तेति ।** एतच्चोपलक्षणम् । प्रबलादृष्टप्रतिबन्धेन गुरुत्ववतोऽप्यपतनोपपत्याप्यप्रयोजकत्वम् अपातित्वहेतोः । सन्दिग्धासिद्धत्वं च ''पततोऽपि तस्य महत्त्वेन पतनानुपलम्भसम्भवात्'' इति सुधोक्तमपि ध्येयम् ।।

ಪ್ರಥಮಾನುಮಾನದ ಸಾಧ್ಯ ''ಧಾರಕಪ್ರಯತ್ನವತಾ ಧೃತಮ್'' ಎಂದು. ಇಲ್ಲಿ ''ಧಾರಕ ಎಂಬುವುದು ಪ್ರಯತ್ನಕ್ಕೆ ವಿಶೇಷಣ. ಹೊರತು, ಪ್ರಯತ್ನವತ್ತಾದ ವ್ಯಕ್ತಿಗೆ ವಿಶೇಷಣವಲ್ಲ.

ಸಾಧಾರಣವಾದ ಪ್ರಯತ್ನವು ಅಪತನಕ್ಕೆ ಕಾರಣವಾಗುವುದಿಲ್ಲವಾದಕಾರಣ ಅದು ಹೇತುವ್ಯಾಪಕ ವಾಗುವುದಿಲ್ಲ. ಲೋಕೋತ್ತರವಾದ ಪ್ರಯತ್ನವೇ ಬೇಕು, ಎಂದು ತಿಳಿಸುವುದಕ್ಕಾಗಿ ಆ ವಿಶೇಷಣವಿದೆ.

ಭಾರವಿಲ್ಲದ ವಸ್ತುವಿನ ಪತನಾಭಾವಕ್ಕೆ ಯಾರ ಪ್ರಯತ್ನದ ಅಗತ್ಯವೂ ಇಲ್ಲವಾದುದರಿಂದ ಅಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಹೇತುವಿನಲ್ಲಿ 'ಗುರುತ್ವವತಾಂ' ಎಂಬ ವಿಶೇಷಣವಿದೆ.

ಭಾರವಿದ್ದು ಬೀಳುತ್ತಲಿರುವ ವಸ್ತುವಿನಲ್ಲಿ ಗುರುತ್ವರೂಪಹೇತುವಿದೆ, ಸಾಧ್ಯವಿಲ್ಲ, ವ್ಯಭಿಚಾರ. ಅದರ ಪರಿಹಾರಕ್ಕಾಗಿ 'ಅಪಾತಿತ್ವಾತ್' ಎಂಬ ವಿಶೇಷ್ಯಾಂಶವನ್ನು ಹೇತುವಿನಲ್ಲಿ ಸೇರಿಸಲಾಗಿದೆ.

ದೃಷ್ಟಾಂತದಲ್ಲಿ ಸಾಧ್ಯಹೇತುಗಳ ಸಮನ್ವಯ ಹೀಗೆ— ಆಕಾಶದಲ್ಲಿ ವಿಹಾರ ಮಾಡುವ ಹಕ್ಕಿಯ ದೇಹವು ಪ್ರಯತ್ನ ಇರುವ ಹಕ್ಕಿಜೀವದಿಂದ ಧರಿಸಲ್ಪಟ್ಟಿದೆ. ಇದರಂತೆ, ಬ್ರಹ್ಮಾಂಡಾದಿ ಧಾರಕನಾದ ಒಬ್ಬ ಚೇತನ ಈ ಅನುಮಾನದಿಂದ ಸಿದ್ಧನಾಗುತ್ತಾನೆ. ಅವನೇ ಈಶ್ವರ.

ಮೂಲದಲ್ಲಿ ಹೇಳಿರುವ ಎರಡು ದೋಷಗಳು ಉಪಲಕ್ಷಣ. ಸುಧಾದಲ್ಲಿ (ಶಾಸ್ತ್ರಯೋನಿತ್ವಾಧಿ ಕರಣ) ಹೇಳಿರುವ ಈ ದೋಷಗಳೂ ಇವೆ—ಬ್ರಹ್ಮಾಂಡಾದಿಗಳು ಬೀಳದಿರಲು ಪ್ರಬಲವಾದ ಅದೃಷ್ಟವು ಪ್ರತಿಬಂಧಕವಾಗಿರಬಹುದು. ಆದರಿಂದಾಗಿಯೇ ಅಪತನವು ಆಗುತ್ತಿರಲು ಧಾರಕಪ್ರಯತ್ನ ಬೇಕಾಗಿಲ್ಲ. ಅನುಮಾನ ಅಪ್ರಯೋಜಕ.

ಅಥವಾ, ಬ್ರಹ್ಮಾಂಡವು ಬೀಳುತ್ತಲಿದೆ. ಆದರೂ ಅದು ಅತ್ಯಂತ ದೊಡ್ಡದಾದುದರಿಂದ ಬೀಳುವ ಅನುಭವ ಆಗದಿರಬಹುದು. (ಭೂಮಿ ಸುತ್ತುತ್ತಿದ್ದರೂ ಅನುಭವ ಬರದಿರುವಂತೆ) ಹೀಗೆ ಪತನಾಭಾವಹೇತುವು ಸಂದಿಗ್ಧವಾದುದು.

## ಅವತಾರಿಕೆ

**''पद्यते=गम्यते व्यवहाराङ्गमर्थोऽनेनेति वृद्धव्यवहार एव पदशब्दे-नोच्यते । ततोऽपीश्वरसिद्धिः । तथाहि— यदेतत्पटादिनिर्माणनैपुण्यम् कुविन्दादीनां, वाग्व्यवहारश्च''इत्यादिकुसुमाञ्जल्युक्तिं हृदि कृत्वा पदादीश्वरसिद्धिरित्येतदपि निराह–नचेत्यादिना ।**

'ಪದಾತ್' ಎಂದು ಈಶ್ವರಸಾಧಕವಾದ ನಾಲ್ಕನೆಯ ಹೇತು. ಪದ ಎಂದರೆ ವೃದ್ಧವ್ಯವಹಾರ. 'ಪದ್ಯತೇ=ಗಮ್ಯತೇ ಇತಿ ಪದಂ' ಎಂದು ವ್ಯುತ್ಪತ್ತಿ. ವ್ಯವಹಾರಕ್ಕೆ ಅಂಗವಾದ ವಿಷಯವು

ಯಾವುದರಿಂದ ತಿಳಿಯುವುದೋ ಅದು ಪದ. ಅದೇ ವೃದ್ಧರ ವಾಕ್ಯ. ಅದರಿಂದಲೂ ಈಶ್ವರಸಿದ್ಧಿಯಾಗುತ್ತದೆ. ಅಥವಾ ಮಾನಸ ವ್ಯವಹಾರ ಎಂದರೆ, ಪಟಾದಿವಸ್ತುಗಳ ನಿರ್ಮಾಣ ನೈಪುಣ್ಯ. ಇದೂ ಈಶ್ವರಸಾಧಕವಾಗುತ್ತದೆ.' ಇದು ಕುಸುಮಾಂಜಲಿ ಗ್ರಂಥದ ಪಂಚಮಸ್ತಬಕದಲ್ಲಿ ಮಾಡಿರುವ ವಿವರಣೆ. ಅದನ್ನು ಅನುವಾದ ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

## ಚತುರ್ಥಾನುಮಾನ ನಿರಾಸ

**नच, घटादिनिर्माणं स्वतन्त्रपुरुषविश्रान्तं, निर्माणत्वात्, इदानींतनापूर्ववस्तुनिर्माणवत् । घटादिशब्दव्यवहारः स्वतन्त्रपुरुष-विश्रान्तः । व्यवहारत्वात् डित्थादिशब्दव्यवहारवत् । लिपिव्यवहारः स्वतन्त्रपुरुषविश्रान्तः, व्यवहारत्वात् इदानीन्तननूतनलिपिव्यवहारवत् इत्याद्यनुमानैस्तत्सिद्धिरिति वाच्यम् । लाघवेन सर्गादिभवानां सुप्तप्रबुद्धन्यायेन त्वदभिमतविपरीतस्य कल्पान्तरीयसंस्कारोद्बोधमात्रस्य कल्पनादेव घटादिनिर्माणादेरुपपत्त्या हेतूनामप्रयोजकत्वात् । अन्यथा ईश्वरस्य, द्व्यणुकादिक्रमेणारब्ध-तदीयानन्तशरीरादेश्च कल्पने गौरवात् ॥**

1. ಪದರಬ್ದದಿಂದ ವಸ್ತುಗಳ ನಿರ್ಮಾಣ ನೈಪುಣ್ಯ ಎಂಬ ಮಾನಸ ವ್ಯವಹಾರವು ತಿಳಿಯುತ್ತದೆ. ಅದರಿಂದಲೂ ಈಶ್ವರನನ್ನು ಸಾಧಿಸಬಹುದು. ಅನುಮಾನದ ಕ್ರಮ ಹೀಗೆ—

**ಪಕ್ಷ**—ಪಟಾದಿ ನಿರ್ಮಾಣವು.

**ಸಾಧ್ಯ**—ಸ್ವತಂತ್ರ ಪುರುಷನಿಂದ ಪ್ರಾರಂಭವಾಗಿದೆ.

**ಹೇತು**—ನಿರ್ಮಾಣವಾದುದರಿಂದ.

**ದೃಷ್ಟಾಂತ**—ಆಧುನಿಕವಾದ ನೂತನ ವಸ್ತುವಿನ ನಿರ್ಮಾಣದಂತೆ. ಹೊಸದಾದ ವಸ್ತುವನ್ನು ಮೊದಲು ಒಬ್ಬ ನಿರ್ಮಿಸುತ್ತಾನೆ. ಆಮೇಲೆ ಅದನ್ನು ನೋಡಿ ಮುಂದೆ ಆ ವಸ್ತುವಿನ ನಿರ್ಮಾಣ ನಡೆಯುತ್ತದೆ. ಘಟಪಟವಸ್ತುಗಳನ್ನೂ ಮೊದಲು ನಿರ್ಮಾಣಮಾಡಿರುವ ವ್ಯಕ್ತಿಯೊಬ್ಬ ಇರಬೇಕು. ಅವನೇ ಈಶ್ವರ.

2. ಪದರಬ್ದಕ್ಕೆ ವೃದ್ಧವ್ಯವಹಾರವೆಂದೂ ಅರ್ಥ. ಈ ವಾಚನಿಕವ್ಯವಹಾರದಿಂದಲೂ ಈಶ್ವರನನ್ನು ಅನುಮಾನ ಮಾಡಬಹುದು–

**ಪಕ್ಷ**—ಘಟ–ಪಟ ಮುಂತಾದ ರಬ್ದಗಳ ಪ್ರಯೋಗವು.

**ಸಾಧ್ಯ**—ಸ್ವತಂತ್ರಪುರುಷನಿಂದ ಆರಂಭವಾಗಿದೆ.

**ಹೇತು**—ಶಬ್ದಪ್ರಯೋಗವಾದುದರಿಂದ.

**ಉದಾಹರಣೆ**—'ಡಿತ್ಥ' ಎಂಬ ಶಬ್ದವನ್ನು ಹೊಸದಾಗಿ ತಯಾರಿಸಿದ ಗೊಂಬೆಗೆ ಮೊದಲು ನಾಮಕರಣ ಮಾಡುವಂತೆ.

ಯಾವುದೇ ಶಬ್ದವು ಆಡುಮಾತಿನಲ್ಲಿ ಬಳಕೆಯಾಗಬೇಕಾದರೆ ಆಶಬ್ದವನ್ನು ನಿರ್ದಿಷ್ಟವಸ್ತುವಿನಲ್ಲಿ ಮೊದಲು ಒಬ್ಬರು ಪ್ರಯೋಗ ಮಾಡಬೇಕು. ಘಟಾದಿ ಶಬ್ದಗಳೂ ಹೀಗೆಯೇ ಸ್ವತಂತ್ರಪುರುಷನೊಬ್ಬನಿಂದ ಆರಂಭಗೊಂಡಿವೆ. ಅವನೇ ಈಶ್ವರ.

3. ಪದ ಎಂದರೆ ಲಿಪಿಗಳು. ಇದು ಕಾಯಿಕ ವ್ಯವಹಾರ. ಲಿಪಿಯು ಅಕ್ಷರಕ್ಕೆ ಅಥವಾ ಭಾಷಾ ಶಬ್ದಗಳಿಗೆ ಸಂಕೇತ. ಇಂತಹ ಅಕ್ಷರಕ್ಕೆ ಈ ರೇಖೆ (ಲಿಪಿ) ಸಂಕೇತ, ಎಂದು ಮೊದಲು ತಿಳಿಸುವ ವ್ಯಕ್ತಿಯೊಬ್ಬರು ಇರಬೇಕು. ಅವನೇ ಈಶ್ವರ.

**ಪಕ್ಷ**—ಲಿಪಿ ವ್ಯವಹಾರವು.

**ಸಾಧ್ಯ**—ಸ್ವತಂತ್ರಪುರುಷನಿಂದ ಆರಂಭಗೊಂಡಿದೆ.

**ಹೇತು**—ವ್ಯವಹಾರವಾದುದರಿಂದ.

**ದೃಷ್ಟಾಂತ**—ಆಧುನಿಕವಾದ ನೂತನಲಿಪಿಯ ವ್ಯವಹಾರದಂತೆ.

ಹೀಗೆ ಈ ಅನುಮಾನಗಳಿಂದ ಈಶ್ವರನು ಸಿದ್ಧನಾಗುತ್ತಾನೆ, ಎಂದು ಉದಯನಾಚಾರ್ಯರು ಹೇಳಿದ್ದಾರೆ. ಇದೂ ಸರಿಯಲ್ಲ. ಈ ಅನುಮಾನಗಳೂ ಅಪ್ರಯೋಜಕಗಳು. ಘಟಾದಿ ನಿರ್ಮಾಣವನ್ನು, ಅವುಗಳಿಗೆ ಹೆಸರನ್ನು ದೇವರೇ ಮಾಡಬೇಕೆಂದೇನಿಲ್ಲ. ಸೃಷ್ಟಿಯ ಆರಂಭದಲ್ಲಿರುವ ಕೆಲವು ಮಹಾತ್ಮರು, ಮಲಗಿ ಎದ್ದ ವ್ಯಕ್ತಿಯು ಮೊದಲು ಅನುಭವಿಸಿರುವ ವಿಷಯಗಳನ್ನು ಸ್ಮರಿಸಿಕೊಳ್ಳುವಂತೆ, ಪ್ರಲಯಪೂರ್ವಕಾಲದಲ್ಲಿ ಇದ್ದ ವಸ್ತುಗಳ ನಿರ್ಮಾಣಕ್ರಮವನ್ನು ಮತ್ತು ಅವುಗಳ ಹೆಸರುಗಳನ್ನು ಉದ್ಬುದ್ಧಸಂಸ್ಕಾರದಿಂದ ಸ್ಮರಿಸಿಕೊಂಡು, ಆ ವಸ್ತುಗಳನ್ನು ನಿರ್ಮಿಸಿ ಹೆಸರಿಡುತ್ತಾರೆ. ಹೀಗೆಯೇ ಹೇಳಬಹುದಾದ್ದರಿಂದ ಈಶ್ವರನು ಘಟಾದಿಗಳನ್ನು ನಿರ್ಮಿಸಿ ಅವುಗಳಿಗೆ ನಾಮಕರಣ ಮಾಡುತ್ತಾನೆ, ಎಂದು ಕಲ್ಪಿಸಬೇಕಾಗಿಲ್ಲ. ಹಾಗೆ ಕಲ್ಪನೆ ಮಾಡುವಾಗ ಈಶ್ವರನಿಗೆ ಕುಲಾಲ-ಕುವಿಂದಾದಿ ಅನೇಕ ಶರೀರಗಳು ದ್ವ್ಯಣುಕಾದಿಕ್ರಮೇಣ ಹುಟ್ಟುತ್ತವೆ, ಎಂಬ ಗುರುತರ-ಕಲ್ಪನೆಯನ್ನು ಮಾಡಬೇಕಾಗುತ್ತದೆ. ಇದಕ್ಕಿಂತ ಇತರ ವ್ಯಕ್ತಿಗಳೇ ಸಂಸ್ಕಾರವಿಶೇಷವಶಾತ್ ಈ ಕೆಲಸಗಳನ್ನು ಮಾಡುತ್ತಾರೆ, ಎಂದು ಕಲ್ಪಿಸುವುದು ಲಾಘವ. ಹೀಗೆ, ಈ ಅನುಮಾನಗಳಿಂದಲೂ ಈಶ್ವರಸಿದ್ಧಿಯಾಗುವುದಿಲ್ಲ.

## ನ್ಯಾಯದೀಪ

**स्वतन्त्रेति ।** तज्जातीयनिर्माणानुपजीवित्वं पुरुषस्य स्वातन्त्र्यम् ।

द्वितीये तु तज्जातीयव्यवहारानुपजीवित्वम् । तत्र पर्यवसितत्वं=तत्र विश्रान्तत्वम् । अस्मदादिपुरुषविश्रान्तत्वबाधवारणाय– **स्वतन्त्रेति ।** लाघवेनेत्यस्य कल्पनादित्यन्वयः । **सुप्तेति ।** पूर्वकालैकेति समासः । सुप्तः सन् यः पश्चात् प्रबुद्धः स यथा सुप्तेः पूर्वमनुभूतं स्मृत्वा घटनिर्माणादि करोति । तथैव सृष्ट्यादावदृष्टादिवशेन लब्धदेहः सर्गाद्यकालीनकुलालादिरेव प्रळयात् पूर्वकालीनानुभवजन्यसंस्कारोद्बोधेन प्रागनुभूतं स्मृत्वा सर्गादौ घटादिनिर्माणं, तद्व्यवहारं च करोतीत्युपपत्त्या त्वदभिमतस्वतन्त्रपुरुषकृतत्वासिद्धेरप्रयोजकत्वादित्यर्थः ।

तर्कपराहतिं चाह—**अन्यथेति ।** स्वतन्त्रपुरुषेणैव घटादिनानाचित्रनिर्माणानां सृष्ट्यादौ कृतत्वे कुलालकुविन्दादिनानाशरीराणां धारणेनेश्वर एव तानितानि विचित्रनिर्माणानि करोतीत्यनन्तदेहकल्पनमीश्वरस्य स्यात् । तानि च द्व्यणुकादिक्रमेण जन्यानीति कल्पनीयमित्यप्रामाणिकानेककल्पनाद् गौरवमित्यर्थः ।।

'ಸ್ವತಂತ್ರಪುರುಷವಿಶ್ರಾಂತ' ಎಂದು ಸಾಧ್ಯನಿರ್ದೇಶ. ಪುರುಷನಲ್ಲಿ ಸ್ವಾತಂತ್ರ್ಯವೆಂದರೆ ಪುರುಷಾಂತರ ಮಾಡಿರುವ ನಿರ್ಮಾಣವನ್ನು ಅವಲಂಬಿಸದೇ ಇರುವುದು. ಒಬ್ಬ ಮೊದಲು ಒಂದು ವಸ್ತುವನ್ನು ನಿರ್ಮಾಣಮಾಡುವಾಗ ಅವನು ಮತ್ತೊಬ್ಬರು ಮಾಡಿರುವ ನಿರ್ಮಾಣವನ್ನು ಅವಲಂಬಿಸಿರುವುದಿಲ್ಲ. ಮುಂದಿನವರು ಮಾತ್ರ ಅವನು ಮಾಡಿದ್ದನ್ನು ನೋಡಿ ಮಾಡುತ್ತಾರೆ. ಅವರು ಅಸ್ವತಂತ್ರರು, ಮೊದಲನೆಯವನು ಸ್ವತಂತ್ರ.

ವಿಶ್ರಾಂತ, ಎಂದರೆ ಪರ್ಯವಸಾನಹೊಂದಿದೆ, ಎಂದರ್ಥ. ಕುಲಾಲ ತನ್ನ ತಂದೆಯನ್ನು, ತಂದೆ ಅವನ ತಂದೆಯನ್ನು ಹೀಗೆ ಹಿಂದೆ ಹಿಂದೆ ಹೋದಾಗ ಕೊನೆಯ ಒಬ್ಬ ವ್ಯಕ್ತಿ ಯಾರನ್ನೂ ಅನುಸರಿಸದೆ ನಿರ್ಮಾಣಮಾಡಿರುತ್ತಾನೆ. ಹೀಗೆ ನಿರ್ಮಾತೃಪರಂಪರೆಯು ಯಾರಲ್ಲಿ ಕೊನೆಗೊಳ್ಳುವುದೋ ಅವನು ಸ್ವತಂತ್ರಪುರುಷ ಎಂದು ಹೇಳಬೇಕು. ಆ ನಿರ್ಮಾಣ ನಮ್ಮಲ್ಲೇ ವಿಶ್ರಾಂತವಾಗಿರುವುದರಿಂದ ಅರ್ಥಾಂತರತಾ ಬರುತ್ತದೆ. ಅದರ ಪರಿಹಾರಕ್ಕಾಗಿ 'ಸ್ವತಂತ್ರ' ಶಬ್ದವಿದೆ. ನಾವಾರೂ ಘಟಾದಿಗಳ ನಿರ್ಮಾಣದಲ್ಲಿ ಸ್ವತಂತ್ರರಲ್ಲ. ಅಂತಹ ಸ್ವತಂತ್ರ ಪುರುಷ ಈಶ್ವರ.

ವ್ಯವಹಾರದಲ್ಲಿ ಸ್ವಾತಂತ್ರ್ಯವೆಂದರೆ—ಘಟಾದಿ ಶಬ್ದಗಳನ್ನು ನಾವು ಪ್ರಯೋಗಿಸುವುದು, ಮತ್ತೊಬ್ಬರು ಅದೇ ರೀತಿಯ ಶಬ್ದವನ್ನು ಘಟದಲ್ಲಿ ಪ್ರಯೋಗ ಮಾಡಿರುವುದನ್ನು ನೋಡಿ. ಆ ರೀತಿಯ ಮತ್ತೊಬ್ಬರ ಪ್ರಯೋಗವನ್ನು ಅವಲಂಬಿಸದೆಯೇ ಮಾಡುವ ವ್ಯವಹಾರ ಸ್ವತಂತ್ರವ್ಯವಹಾರ.

'ಸುಪ್ತಪ್ರಬುದ್ಧ' ಎಂಬ ಸಮಾಸ ''ಪೂರ್ವಕಾಲೈಕ'' ಇತ್ಯಾದಿ ಪಾಣಿನಿಯ ಸೂತ್ರದಿಂದ ಆಗಿದೆ. 'ಪೂರ್ವಂ ಸುಪ್ತಃ ಅನಂತರಂ ಪ್ರಬುದ್ಧಃ' ಎಂದು ವಿಗ್ರಹವಾಕ್ಯ. ನಿದ್ದೆಯಿಂದ ಎದ್ದವನು ಹೇಗೆ ಮೊದಲಿನ ಸಂಗತಿಗಳನ್ನು ಸ್ಮರಿಸಿಕೊಳ್ಳುವನೋ ಹಾಗೆ ಸೃಷ್ಟಿಯ ಆರಂಭದಲ್ಲಿರುವ ಬ್ರಹ್ಮಾದಿದೇವತೆಗಳು ಪ್ರಲಯಪೂರ್ವಕಾಲದ ವಸ್ತುನಿರ್ಮಾಣಕ್ರಮ, ವ್ಯವಹಾರಗಳನ್ನು ಸ್ಮರಿಸಿಕೊಳ್ಳುತ್ತಾರೆ. ಸ್ಮರಿಸಿ, ಘಟಾದಿಗಳನ್ನು ನಿರ್ಮಾಣಮಾಡಿ ಅವುಗಳಿಗೆ ಹೆಸರುಗಳನ್ನು ಇಡುತ್ತಾರೆ.

'ಅನ್ಯಥಾ' ಇತ್ಯಾದಿ ಮೂಲವಾಕ್ಯದಲ್ಲಿ ಅನುಮಾನಕ್ಕೆ ಗೌರವತರ್ಕಪರಾಹತಿಯನ್ನು ಹೇಳಲಾಗಿದೆ. ಈಶ್ವರನೇ ಘಟಾದಿನಾನಾವಿಚಿತ್ರವಸ್ತುಗಳನ್ನು ನಿರ್ಮಿಸುವುದಾದಲ್ಲಿ ಅವನಿಗೆ ಕುಲಾಲ-ಕುವಿಂದಾದಿ ಅನೇಕ ಶರೀರಗಳನ್ನೂ ಆ ಶರೀರಗಳಿಗೆ ದ್ವ್ಯಣುಕಾದಿಕ್ರಮೇಣ ಉತ್ಪತ್ತಿಯನ್ನೂ ಅಂಗೀಕರಿಸಬೇಕಾಗುತ್ತದೆ. ಅದು ಗೌರವ.

## ಅವತಾರಿಕೆ

**''प्रत्ययपदेन अत्राश्वासविषयः प्रामाण्यमुच्यते'' इत्यादिना ''नचासर्वज्ञो धर्माधर्मयोः स्वातन्त्र्येण प्रभवति'' इत्यन्तेन कुसुमाञ्जलिग्रन्थेनोक्तं प्रत्ययादीश्वरसिद्धिरित्येतत् प्रमेयमपि निष्कृष्यानूद्य निराह— नच वाच्यमित्यादिना ।**

ಐದನೆಯ ಈಶ್ವರಸಾಧಕ ಹೇತು–ಪ್ರತ್ಯಯ. ಪ್ರತ್ಯಯಪದಕ್ಕೆ ''ನಂಬಿಕೆಗೆ ಕಾರಣವಾದ ಪ್ರಾಮಾಣ್ಯ' ಎಂದು ಪ್ರಕೃತದಲ್ಲಿ ಅರ್ಥ, ಎಂದು ಕುಸುಮಾಂಜಲಿಯಲ್ಲಿ ಹೇಳಲಾಗಿದೆ. ವೇದದಲ್ಲಿ ಪ್ರಾಮಾಣ್ಯನಿಶ್ಚಯ ಮಾಡಬೇಕಾದರೆ ವೇದದಲ್ಲಿ ಹೇಳಿರುವ ಧರ್ಮಾಧರ್ಮಾದಿಗಳನ್ನು ತಿಳಿದಿರುವ ಒಬ್ಬ ವ್ಯಕ್ತಿಯೇ ಅವುಗಳನ್ನು ರಚಿಸಿದ್ದಾನೆ, ಎಂದು ಹೇಳಬೇಕಾಗುತ್ತದೆ. ಅಂತಹ ವ್ಯಕ್ತಿಯೇ ಈಶ್ವರ. ''ಅಸರ್ವಜ್ಞರಾದ ಜೀವರು ಧರ್ಮಾಧರ್ಮಗಳನ್ನು ಸ್ವತಂತ್ರವಾಗಿ ತಿಳಿಯಲಾರರು'' ಎಂದು ಕುಸುಮಾಂಜಲಿಯಲ್ಲಿ ಈಶ್ವರನನ್ನು ಸಾಧಿಸಲಾಗಿದೆ. ಇದನ್ನು ಅನುವಾದ ಮಾಡಿ ಮುಂದಿನ ಮೂಲದಲ್ಲಿ ನಿರಾಕರಿಸಲಾಗಿದೆ.

## ಪಂಚಮಾನುಮಾನ ನಿರಾಸ

**नच वाच्यं सर्गादौ ब्राह्मणत्वादेरधिकारस्याज्ञाने कर्मानुष्ठानासंभवात् स्वतस्तदभिज्ञः कश्चित् स्वीकार्य इति । स्तनपानप्रवृत्तिहेत्विष्टसाधनतानुमितिहेतु–व्याप्तिस्मृतिवत् सर्गादिभवानां प्राचीनकल्पानुष्ठितस्य ब्राह्मण्यादिहेतोः कर्मणः, तस्य ब्राह्मणत्वाविनाभावस्य च, स्मृतिसंभवात् ॥**

ಸೃಷ್ಟಿಯ ಪ್ರಾರಂಭದಲ್ಲಿ, ವೈದಿಕಕರ್ಮಗಳನ್ನು ಮಾಡಲು ಬ್ರಾಹ್ಮಣತ್ವಾದಿಜಾತಿಗಳ ಜ್ಞಾನವು ಇರುವುದಿಲ್ಲ. ಆದಕ್ಕಾಗಿ, ಬ್ರಾಹ್ಮಣ್ಯ ಮತ್ತು ತದುಚಿತವಾದ ಕರ್ಮಗಳನ್ನು ತಿಳಿದಿರುವ ಸರ್ವಜ್ಞನೊಬ್ಬ ಇರಬೇಕು. ಹಾಗಿಲ್ಲದಿದ್ದಲ್ಲಿ ನಂಬಿಕೆ ಇಲ್ಲದೆ ಇರುವುದರಿಂದ ಕರ್ಮಾನುಷ್ಠಾನವೇ ಲೋಪವಾಗಬೇಕಾದೀತು. ಹೀಗೆ ವಿಶ್ವಾಸಾರ್ಹನಾದ ಈಶ್ವರನು ಸಿದ್ಧನಾಗುತ್ತಾನೆ

ಈ ಅನುಮಾನವೂ ಸರಿಯಲ್ಲ. ಮಗು ಪ್ರಥಮಸ್ತನಪಾನಮಾಡಬೇಕಾದರೆ ಅದಕ್ಕೆ 'ಇದಂ ಇಷ್ಟಸಾಧನಂ, ಸ್ತನಪಾನತ್ವಾತ್' ಎಂದು ಅನುಮಿತಿ ಬರಬೇಕು. ಈ ಅನುಮಿತಿಗೆ 'ಯತ್ ಸ್ತನಪಾನಂ ತದಿಷ್ಟಸಾಧನಂ'' ಎಂಬ ವ್ಯಾಪ್ತಿಜ್ಞಾನಬರಬೇಕು. ಅದು ಹಿಂದಿನ ಜನ್ಮದ ಅನುಭವಜನ್ಯ ಸ್ಮರಣೆ. ಅದರಂತೆ, ಸೃಷ್ಟಿಯ ಆರಂಭದಲ್ಲಿರುವ ಬ್ರಹ್ಮಾದಿ ದೇವತೆಗಳಿಗೆ ಹಿಂದಿನ ಜನ್ಮದಲ್ಲಿ ತಾವು ಆಚರಿಸಿರುವ ಬ್ರಾಹ್ಮಣಾದಿಜಾತಿಗಳಿಗೆ ಯೋಗ್ಯವಾದ ಕರ್ಮಗಳು ಹಾಗೂ ಆ ಕರ್ಮಾಚರಣೆಗೂ ಬ್ರಾಹ್ಮಣ್ಯಾದಿಗಳಿಗೂ ಇರುವ ಅವಿನಾಭಾವಸಂಬಂಧ ಇವುಗಳು ಸ್ಮರಣೆಗೆ ಬರುತ್ತವೆ. ಆದರಿಂದ ತತ್ತಜ್ಜಾತಿಯೋಗ್ಯವಾದ ವೈದಿಕ ಕರ್ಮಗಳ ಅನುಷ್ಠಾನವು ಸಾಧ್ಯವಾಗುತ್ತದೆ. ಆದಕ್ಕಾಗಿ ಈಶ್ವರನ ಅಗತ್ಯವಿಲ್ಲ.

## ನ್ಯಾಯದೀಪ

**स्वतस्तदभिज्ञ इति ।** अन्यथाऽनाश्वासेनानुष्ठानलोपापत्तेरिति भावः । **स्तनेति ।** स्तनपानप्रवृत्तिहेतुर्या इष्टसाधनतानुमितिः तद्धेतुव्याप्तिस्मृतिवदित्यर्थः। **सर्गेति ।** सर्गादावुत्पन्नानां ब्राह्मणादीनामित्यर्थः । **तस्येति ।** कर्मण इत्यर्थः ॥

ಸರ್ಗಾದಿಭುವಾಂ ಎಂದರೆ ಸೃಷ್ಟಿಯ ಆರಂಭದಲ್ಲಿ ಹುಟ್ಟಿದ ಬ್ರಾಹ್ಮಣಾದಿಗಳಿಗೆ, ಎಂದರ್ಥ.

ಅಂತಹವರಿಗೆ ಪೂರ್ವದಲ್ಲಿದ್ದ ಬ್ರಾಹ್ಮಣಾನುಷ್ಠಾನಯೋಗ್ಯವಾದ ಕರ್ಮಗಳ ಸ್ಮರಣೆ ಬರುತ್ತದೆ, ಎಂದರ್ಥ.

## ಅವತಾರಿಕೆ

**श्रुतेरिति हेतोर्ह्ययमर्थः। 'वेदाः सर्वज्ञप्रणीताः, वेदत्वाद् व्यतिरेकेण पामरवाक्यवत्'इति श्रुतिरूपकार्येण व्यतिरेकिहेतुनेश्वरसिद्धिरिति। वाक्यादित्यस्य तु 'वेदवाक्यानि पौरुषेयाणि, वाक्यत्वाद् अस्मदादिवाक्यवत्'इत्यन्वयिना वाक्यत्वहेतुनेश्वरसिद्धिरिति। तदुभयमपि वेदापौरुषेयत्ववादे निरस्तमित्युपेत्य ''सङ्ख्याविशेषाच्च साध्यो विश्वकृदव्ययः'' इत्यस्य प्रपञ्चनपरेण ''सङ्ख्याविशेषात् खल्वपि'' इत्यादिना कुसुमाञ्जलिग्रन्थेनोक्तं निष्कृष्यानुवदन् शङ्कते— नन्वित्यादिना।**

ಕಾರಿಕೆಯಲ್ಲಿ ಹೇಳಿರುವ, ಈಶ್ವರಸಾಧಕವಾದ ಆರನೆಯ ಹೇತು 'ಶ್ರುತೇಃ' ಎಂದು. ಅದಕ್ಕೆ ಅರ್ಥ ಹೀಗೆ- ವೇದಗಳಿಂದ ಈಶ್ವರನನ್ನು ಅನುಮಾನಮಾಡಬಹುದು— 'ವೇದಾಃ ಸರ್ವಜ್ಞಪ್ರಣೀತಾಃ, ವೇದತ್ವಾತ್' ಎಂದು. ಇದಕ್ಕೆ ವ್ಯತಿರೇಕ್ಯುದಾಹರಣೆ ಪಾಮರಪ್ರಣೀತವಾಕ್ಯ. ಹೀಗೆ ಶ್ರುತಿರೂಪವಾದ ವ್ಯತಿರೇಕಿ ಹೇತುವಿನಿಂದ ಈಶ್ವರನು ಸಿದ್ಧನಾಗುತ್ತಾನೆ.

ಮುಂದಿನ ಹೇತು 'ವಾಕ್ಯಾತ್' ಎಂದು. ವಾಕ್ಯವೆಂದರೆ ಶ್ರುತಿವಾಕ್ಯವೇ. 'ವೇದವಾಕ್ಯಾನಿ ಪೌರುಷೇಯಾಣಿ, ವಾಕ್ಯತ್ವಾತ್, ಅಸ್ಮದಾದಿವಾಕ್ಯವತ್' ಎಂದೇ ಮುಂದಿನ ಅನುಮಾನ. ಆದರೆ, ಇದು ಅನ್ವಯಿ, ಅದು ವ್ಯತಿರೇಕಿ ಇಷ್ಟೇ ವ್ಯತ್ಯಾಸ.

ಈ ಎರಡೂ ಅನುಮಾನಗಳನ್ನೂ ವೇದಾಪೌರುಷೇಯತ್ವಪ್ರಕರಣದಲ್ಲಿ ನಿರಾಕರಿಸಲಾಗಿದೆ. ಆದ್ದರಿಂದ ಅವೆರಡನ್ನು ಬಿಟ್ಟು ಮುಂದಿನ 'ಸಂಖ್ಯಾವಿಶೇಷಾತ್' ಎಂಬ ಹೇತುವನ್ನು ಕುಸುಮಾಂಜಲಿಯಲ್ಲಿ ಹೇಗೆ ವಿವರಿಸಲಾಗಿದೆಯೋ ಅದನ್ನು ಅನುವಾದ ಮಾಡಿ ಮುಂದೆ ನಿರಾಕರಿಸಲಾಗಿದೆ—

## 'ಸಂಖ್ಯಾವಿಶೇಷಾತ್' ಹೇತುವಿನ ನಿರಾಸ

**ननु, त्र्यणुकपरिमाणं सङ्ख्याऽसमवायिकारणकं, परिमाणप्रचयाजन्य-**

**जन्यपरिमाणत्वात् । एतद्घटारम्भक–कपालद्वयसमानपरिमाणक–कपालत्रयारब्धघटान्तरगतातिशयितपरिमाणवत्। नच विशेषणासिद्धिः । त्र्यणुकपरिमाणस्य द्व्यणुकपरिमाणजन्यत्वे(त्ववत्) तद्वदेवाणुत्वापत्तेः । निरवयवावयवारब्धे द्व्यणुके द्व्यणुकान्तरनिष्ठभूयोवयवासंयोगित्वे सति तत्संयोगित्वरूपस्य प्रचयस्याप्यसम्भवात् । तस्मात् त्र्ययणुकपरिमाणं प्रति द्व्यणुकवृत्तित्रित्वसङ्ख्यैवासमवायिकारणम् ।**

**एवं परमाणु-परिमाणं न परिमाणारम्भकं, अणुपरिमाणत्वात् द्व्यणुकपरिमाणवत् । नचाप्रयोजकता । व्यणुकपरिमाणस्य परमाणु-परिमाणादणुतमत्वापत्तेः । तस्मात् परिशेषाद् द्व्यणुकपरिमाणस्य परमाणुनिष्ठद्वित्वसङ्ख्यैवासमवायिकारणम् । ते च त्रित्व-द्वित्वे अपेक्षा-बुद्धिजन्ये, अनेकवृत्तिसङ्ख्यात्वात् घटवृत्तिद्वित्वादिवत् । अपेक्षाबुद्धिश्चास्मदादिष्वसंभविनी तदाधारमीश्वरं कल्पयतीति चेत् ।।**

ದ್ವ್ಯಣುಕದಲ್ಲಿರುವ ತ್ರಿತ್ವಸಂಖ್ಯೆ ಹಾಗೂ ಪರಮಾಣುಗಳ ದ್ವಿತ್ವಸಂಖ್ಯೆಗಳಿಂದ ಈಶ್ವರನನ್ನು ಸಾಧಿಸಬೇಕು. ಅದಕ್ಕಾಗಿ ಮೊದಲು ಆ ಸಂಖ್ಯೆಗಳ ಅವಶ್ಯಕತೆಯನ್ನು ಮೂಲದಲ್ಲಿ ಸಾಧಿಸಲಾಗಿದೆ. ಅದನ್ನು ಸಾಧಿಸುವ ಅನುಮಾನಗಳು ಹೀಗೆ—

**ಪಕ್ಷ**—ತ್ರ್ಯಣುಕಪರಿಮಾಣವು

**ಸಾಧ್ಯ**—ಸಂಖ್ಯಾರೂಪವಾದ ಅಸಮವಾಯಿಕಾರಣದಿಂದ ಹುಟ್ಟಿದೆ.

**ಹೇತು**—ಏಕೆಂದರೆ, ಆ ಪರಿಮಾಣವು ಅವಯವಪರಿಮಾಣದಿಂದಾಗಲೀ ಪ್ರಚಯದಿಂದಾಗಲೀ ಜನ್ಯವಾಗಿಲ್ಲ.

**ಉದಾಹರಣೆ**—ಎರಡು ಕಪಾಲಗಳಿಂದ ಒಂದು ಘಟ ಹುಟ್ಟಿದೆ. ಅಷ್ಟೇ ಗಾತ್ರದ ಮೂರು ಕಪಾಲಗಳಿಂದ ಇನ್ನೊಂದು ಘಟ ಹುಟ್ಟಿದೆ. ಎರಡನೆಯ ಘಟದ ಪರಿಮಾಣವು ದೊಡ್ಡದಾಗಿರುತ್ತದೆ. ಅದಕ್ಕೆ ಕಾರಣ ಅವಯವಸಂಖ್ಯೆ. ಅದರಂತೆಯೇ ತ್ರ್ಯಣುಕ ಮತ್ತು ದ್ವ್ಯಣುಕಗಳ ಪರಿಮಾಣಗಳೂ ಅವಯವಸಂಖ್ಯೆಗಳಿಂದಾಗಿ ಹುಟ್ಟಿವೆ.

ಈ ಅನುಮಾನದ ಹೇತು 'ಪರಿಮಾಣ–ಪ್ರಚಯಾಜನ್ಯಪರಿಮಾಣತ್ವ'. ತ್ರ್ಯಣುಕಗತ ಪರಿಮಾಣಕ್ಕೆ ದ್ವ್ಯಣುಗತಪರಿಮಾಣವಾಗಲೀ ಅವಯವಸಂಯೋಗವಿಶೇಷರೂಪವಾದ

ಪ್ರಚಯವಾಗಲೀ ಕಾರಣವಲ್ಲ, ಎಂದು ಅದರ ಭಾವಾರ್ಥ. ಇದು ಅಸಿದ್ಧ, ಎಂದು ಆಕ್ಷೇಪ. ತ್ರ್ಯಣುಕಪರಿಮಾಣವು ಅವಯವಪರಿಮಾಣದಿಂದ ಅಥವಾ ಪ್ರಚಯದಿಂದ ಏಕೆ ಜನ್ಯವಲ್ಲ? ಎಂದು ಆಕ್ಷೇಪದ ಅಭಿಪ್ರಾಯ.

ಇದಕ್ಕೆ ಹೀಗೆ ಸಮಾಧಾನ— ತ್ರ್ಯಣುಕಪರಿಮಾಣ ಮಹತ್ವರೂಪವಾದುದು. ದ್ವ್ಯಣುಕದ ಪರಿಮಾಣ ಅಣುತ್ವರೂಪವಾದುದು. ಈ ಅಣುತ್ವಪರಿಮಾಣದಿಂದ ತ್ರ್ಯಣುಕದ ಪರಿಮಾಣವು ಜನ್ಯವಾದರೆ ಅದರಲ್ಲೂ ಅಣುತ್ವವೇ ಬರಬೇಕಾದೀತು. ಆಗ ತ್ರ್ಯಣುಕದ ಪ್ರತ್ಯಕ್ಷ ಬರಲಿಕ್ಕಿಲ್ಲ.

ಇನ್ನು ಪ್ರಚಯದಿಂದ ಮಹತ್ವಬರುವ ಸಂಭವವಿದೆ. ಪ್ರಚಯವೆಂದರೆ ಅವಯವಾಂತರ ನಿಷ್ಠಭೂಯೋಽವಯವಾಸಂಯೋಗಿತ್ವೇಸತಿ ತತ್ಸಂಯೋಗಿತ್ವಂ. ಒಂದು ಅವಯಕ್ಕೆ ಅನೇಕ ಅವಯವಗಳಿದ್ದು ಆ ಎಲ್ಲಾ ಅವಯವಗಳ ಸಂಯೋಗವು ಇನ್ನೊಂದು ಅವಯವಕ್ಕೆ ಇಲ್ಲದೆ ಆ ಅವಯವದ ಕಿಂಚಿದವಯವಸಂಯೋಗ ಮಾತ್ರ ಇದ್ದರೆ 'ಪ್ರಚಯ' ಎನಿಸುತ್ತದೆ. ಇಂತಹ ಪ್ರಚಯವೂ ದ್ವ್ಯಣುಕದಲ್ಲಿರಲು ಸಾಧ್ಯವಿಲ್ಲ. ದ್ವ್ಯಣುಕಾವಯವ ಪರಮಾಣು. ಅದು ನಿರವಯವ. ಪ್ರಶಿಥಿಲಾವಯವ ಸಂಯೋಗವೇ ಪ್ರಚಯ. ಎರಡು ಅವಯವಗಳಿಂದ ಒಂದು ಅವಯವಿ ಹುಟ್ಟಿದರೆ ಆ ಎರಡು ಅವಯವಗಳ ಸಂಯೋಗವು, ಅವಯವಗಳ ಅನೇಕಾವಯವಾವಚ್ಛೇದೇನ ಇದ್ದರೆ ಅದು ನಿಬಿಡಾವಯವ ಸಂಯೋಗ. ಕಬ್ಬಿಣದ ಎರಡು ಅವಯವಗಳಿಗೆ ಆಗುವ ಸಂಯೋಗ ಆ ಅವಯವಗಳ ಅನೇಕಾವಯವಾವಚ್ಛೇದೇನ ಇದೆ. ಅದು ನಿಬಿಡಾವಯವಸಂಯೋಗ ವಾಗುತ್ತದೆ. ಹತ್ತಿಯ ಎರಡು ಅವಯವಗಳು ಆ ಅವಯವಗಳ ಕಿಂಚಿದವಚ್ಛೇದೇನ ಸಂಯುಕ್ತವಾಗುತ್ತವೆ. ಅದು ಶಿಥಿಲಾವಯವ ಸಂಯೋಗ. ದಿನಕರಿಯಲ್ಲಿ ಪ್ರಚಯ ಲಕ್ಷಣವನ್ನು ಹೀಗೆಯೇ ನಿರೂಪಿಸಲಾಗಿದೆ—''ಭೂಯೋಽವಯವಾವಚ್ಛೇದೇನ ಅವಯವಾಂತರ–ಅಸಂಯೋಗಿನಿ ಅವಯವೇ ವರ್ತಮಾನಃ ಸಂಯೋಗಃ ಪ್ರಚಯಃ। ತೇನ ಪರಮಾಣುಸಂಯೋಗಃ, ದ್ವ್ಯಣುಕಸಂಯೋಗೋ ವಾ ನ ಪ್ರಚಯಃ ಇತ್ಯಪರೇ।'' ತ್ರ್ಯಣುಕದ ಅವಯವಗಳು ದ್ವ್ಯಣುಕಗಳು. ಅವುಗಳಿಗೆ ನಿರವಯವವಾದ ಎರಡು ಪರಮಾಣುಗಳು ಮಾತ್ರ ಅವಯವಗಳು. ಭೂಯೋ ಅವಯವಗಳೇ ಇಲ್ಲ, ಆದ್ದರಿಂದ ''ಭೂಯೋಽವಯವಾವಚ್ಛೇದೇನ ಸಂಯೋಗಾಭಾವವಾನ್ ಅವಯವಃ'' ಎಂದು ಹೇಳಲಾಗದು. ಅದರಂತೆ, ಪರಮಾಣುಗಳಲ್ಲೂ ಇಂತಹ ಪ್ರಚಯವು ಇರಲು ಸಾಧ್ಯವಿಲ್ಲ. ಆದರೆ, ತ್ರ್ಯಣುಕವು ಮೂರು ದ್ವ್ಯಣುಕಗಳಿಂದ ಆರಬ್ಧವಾಗಿರುವುದರಿಂದ ಅದಕ್ಕೆ ಭೂಯಃ ಅವಯವಗಳಿವೆ. ಆ ಎಲ್ಲಾ ಅವಯವಾವಚ್ಛೇದೇನ ತ್ರ್ಯಣುಕಾಂತರದ ಸಂಯೋಗವಿಲ್ಲದೆ, ಒಂದು ತ್ರ್ಯಣುಕದಲ್ಲಿ ಇನ್ನೊಂದು ತ್ರ್ಯಣುಕದ ಏಕಾವಯವಾವಚ್ಛೇದೇನ ಸಂಯೋಗವಾದಾಗ ಆ ಸಂಯೋಗವು ಪ್ರಚಯವೆನಿಸುತ್ತದೆ. ಆದ್ದರಿಂದ ಚತುರಣುಕದಲ್ಲಿ ಪ್ರಚಯಜನ್ಯವಾದ ಮಹತ್ವವು ಬರಬಹುದು.

ಹೀಗೆ ತ್ರ್ಯಣುಕದ ಪರಿಮಾಣವು ಅವಯವ ಪರಿಮಾಣದಿಂದಾಗಲೀ ಪ್ರಚಯದಿಂದಾಗಲೀ ಜನ್ಯವಲ್ಲ. ತದಜನ್ಯಪರಿಮಾಣತ್ವರೂಪಹೇತು ತ್ರ್ಯಣುಕದಲ್ಲಿ ಇದೆ. ಆದ್ದರಿಂದ ಅಸಿದ್ಧಿ ಇಲ್ಲ.

ಆದ್ದರಿಂದ ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕಗತವಾದ ತ್ರಿತ್ವಸಂಖ್ಯೆಯೇ ಅಸಮವಾಯಿ ಕಾರಣ, ಎಂದು ಹೇಳಬೇಕು.

ವರ್ಧಮಾನೋಪಾಧ್ಯಾಯರು ಇನ್ನೊಂದು ಅನುಮಾನವನ್ನು ಮಾಡಿದ್ದಾರೆ—

**ಪಕ್ಷ**—ಪರಮಾಣು ಪರಿಮಾಣ.

**ಸಾಧ್ಯ**—(ದ್ವ್ಯಣುಕದ) ಪರಿಮಾಣಕ್ಕೆ ಕಾರಣವಾಗುವುದಿಲ್ಲ.

**ಹೇತು**—ಅಣು ಪರಿಮಾಣವಾದುದರಿಂದ.

**ದೃಷ್ಟಾಂತ**—ದ್ವ್ಯಣುಕ ಪರಿಮಾಣದಂತೆ.

ಹಿಂದೆ ಹೇಳಿದ ರೀತಿಯಿಂದ ದ್ವ್ಯಣುಕಗತಪರಿಮಾಣವು ತ್ರ್ಯಣುಕಗತ ಪರಿಮಾಣಕ್ಕೆ ಕಾರಣವಲ್ಲ. ಅದರಂತೆಯೇ ಪರಮಾಣುಪರಿಮಾಣವೂ ದ್ವ್ಯಣುಕದ ಪರಿಮಾಣಕ್ಕೆ ಕಾರಣವಲ್ಲ. ಪರಮಾಣುಪರಿಮಾಣದಿಂದ ದ್ವ್ಯಣುಕಪರಿಮಾಣವು ಹುಟ್ಟಿದರೆ ಅದು ಪರಮಾಣು ಪರಿಮಾಣಕ್ಕಿಂತಲೂ ಅಣುತಮವಾಗಬೇಕು. ಮಹಜ್ಜನ್ಯವಾದುದು ಮಹತ್ತರವಾಗುವಂತೆ ಅಣುಜನ್ಯವಾದುದು ಅಣುತರವಾಗಬೇಕು.

ಪರಿಶೇಷಾತ್ ದ್ವ್ಯಣುಕಪರಿಮಾಣಕ್ಕೂ ಪರಮಾಣುಗತವಾದ ದ್ವಿತ್ವಸಂಖ್ಯೆಯೇ ಅಸಮವಾಯಿಕಾರಣ. ದ್ವ್ಯಣುಕದಲ್ಲಿ ತ್ರಿತ್ವ, ಪರಮಾಣುಗಳಲ್ಲಿ ದ್ವಿತ್ವ ಇವೆರಡೂ ಅಪೇಕ್ಷಾಬುದ್ಧಿ ಜನ್ಯವಾಗಿವೆ. ಏಕೆಂದರೆ, ಆ ಸಂಖ್ಯೆಗಳು ಅನೇಕವೃತ್ತಿಯಾಗಿವೆ. ಘಟದಲ್ಲಿರುವ ಇಂತಹ ಸಂಖ್ಯೆಗಳು ಅಪೇಕ್ಷಾಬುದ್ಧಿಯಿಂದ ಜನ್ಯವಾಗಿವೆ. ಸೃಷ್ಟಿಕಾಲದಲ್ಲಿ ಜೀವರಿಗೆ, ಅದೃಶ್ಯವಾದ ಪರಮಾಣು–ದ್ವ್ಯಣುಕಗಳಲ್ಲಿ 'ಇದಮೇಕಂ' ಎಂಬ ಅಪೇಕ್ಷಾಬುದ್ಧಿ ಬರಲು ಸಾಧ್ಯವಿಲ್ಲ. ಅದು ಈಶ್ವರನಿಗೆ ಮಾತ್ರ ಇರಲು ಸಾಧ್ಯ. ಹೀಗೆ, ತಾದೃಶ–ಅಪೇಕ್ಷಾಬುದ್ಧ್ಯಾಶ್ರಯತಯಾ ಈಶ್ವರಸಿದ್ಧನಾಗುತ್ತಾನೆ.

## ನ್ಯಾಯದೀಪ

**द्रव्यत्वेन हेतुना त्र्यणुकस्य परिमाणवत्त्वे सिद्धे, तस्य परिमाणस्य कार्यगुणत्वेन जन्यत्वे च सति, भावकार्यस्य च कारणत्रयजन्यतया त्र्यणुकस्य समवायिकारणस्य अदृष्टादेः निमितस्य च भावेऽप्यसमवायि-कारणं द्व्यणुकगतत्रित्वसङ्ख्या वाच्या । त्रिभिर्द्व्यणु-कैस्त्र्यणुकारम्भादिति भावेन सङ्ख्याजन्यत्वं तावद् वर्धमानोक्त-प्रयोगोक्त्या साधयति—त्र्यणुकपरिमाणमिति । तदुक्तरीत्या,**

द्व्यणुकपरिमाणस्य पक्षतोपगमेनोक्तरूपसाध्यसाधनेऽपि वक्ष्यमाणदिशा परमाणुगतद्वित्व-रूपसङ्ख्यानिमित्तकारणापेक्षाबुध्याश्रयत्वेन ईश्वर-सिद्धिरस्ति । तथापि परमाणुद्व्यणुकपरिमाणयोः द्वयोरप्यणुपरिमाण-त्वात् द्व्यणुकपरिमाणपक्षतापक्षे हेतोर्विशेषणासिद्धेर्वक्ष्यमाणदिशा परिहर्तुमशक्यत्वात् त्र्यणुकपरिमाणस्य पक्षत्वोक्तिः ।

हेतौ परिमाणाजन्येत्युक्त्या घटादिपरिमाणे, प्रचयाजन्येत्युक्त्या तूलपिण्डपरिमाणे,जन्येत्युक्त्या परमाण्वादिपरिमाणे,गुणत्वादित्यनुक्त्वा परिमाणेत्युक्त्या घटगतरूपादौ व्यभिचारशङ्का निरस्ता ।

नच हेतोरप्रयोजकत्वं शङ्क्यम् । जन्यपरिमाणस्य सङ्ख्या–परिमाण–प्रचयरूपत्रितयजन्यत्वात्, द्वाभ्यामजन्यत्वे सति जन्यत्वस्य सङ्ख्या-जन्यत्वेन विनाऽनुपपत्तेरिति भावः।।

ತ್ರ್ಯಣುಕವು ದ್ರವ್ಯವಾದ ಕಾರಣ ಅದರಲ್ಲಿ ಪರಿಮಾಣವು ಸಿದ್ಧವಾಗುತ್ತದೆ. ಅಂತಹ ಪರಿಮಾಣವು ಕಾರ್ಯವಾದ ತ್ರ್ಯಣುಕದ ಗುಣವಾದುದರಿಂದ ಜನ್ಯವೂ ಆಗಬೇಕು. ಅದು ಭಾವಕಾರ್ಯವಾದುದರಿಂದ ಸಮವಾಯಿ–ಅಸಮವಾಯಿ–ನಿಮಿತ್ತರೂಪ ಕಾರಣತ್ರಿತಯಜನ್ಯವಾಗಬೇಕು. ಅದಕ್ಕೆ ಸಮವಾಯಿಕಾರಣ ತ್ರ್ಯಣುಕ, ನಿಮಿತ್ತಕಾರಣ ಅದೃಷ್ಟ. (ಇಲ್ಲಿ 'ಅದೃಷ್ಟಾನಿರ್ಮಿತಸ್ಯ' ಎಂಬ ಮುದ್ರಿತ ಪಾಠವಿದೆ. 'ಅದೃಷ್ಟಾದೇರ್ನಿಮಿತ್ತಸ್ಯ' ಎಂದು ಊಹೆ ಮಾಡಲಾಗಿದೆ.) ಅಸಮವಾಯಿಕಾರಣ ದ್ವ್ಯಣುಕದಲ್ಲಿರುವ ತ್ರಿತ್ವಸಂಖ್ಯೆ. ''ತ್ರಿಭಿಃ ದ್ವ್ಯಣುಕೈಃ ತ್ರ್ಯಣುಕಂ' ಎಂದು ನೈಯಾಯಿಕರ ಸಿದ್ಧಾಂತ. ಹೀಗೆ, ತ್ರ್ಯಣುಕಪರಿಮಾಣವು ಸಂಖ್ಯಾಜನ್ಯವೆಂಬುದನ್ನು ವರ್ಧಮಾನೋಪಾಧ್ಯಾಯರು ಹೇಳಿರುವ ಅನುಮಾನದ ಮೂಲಕ 'ತ್ರ್ಯಣುಕಪರಿಮಾಣಂ' ಎಂಬ ಮೂಲದಲ್ಲಿ ಸಾಧಿಸಲಾಗಿದೆ.

ಯದ್ಯಪಿ ವರ್ಧಮಾನೋಪಾಧ್ಯಾಯರು (ವರ್ಧಮಾನೋಪಾಧ್ಯಾಯ 14ನೇ ಶತಕದಲ್ಲಿದ್ದ ನ್ಯಾಯವಿದ್ವಾಂಸ. ಇವನು ನ್ಯಾಯಕುಸುಮಾಂಜಲಿಗೆ ವ್ಯಾಖ್ಯಾನ ಬರೆದಿದ್ದಾನೆ. ಅದರಲ್ಲಿ ದ್ವ್ಯಣುಕಪರಿಮಾಣ ಕಾರಣತಯಾ ಈಶ್ವರಸಿದ್ಧಿಯನ್ನು ಮಾಡಿದ್ದಾನೆ. ತರ್ಕತಾಂಡವದಲ್ಲಿ ಈ ಪಕ್ಷವನ್ನೇ ಮುಂದೆ ನಿರಾಕರಿಸಲಾಗಿದೆ.) ದ್ವ್ಯಣುಕಪರಿಮಾಣವನ್ನು ಪಕ್ಷವನ್ನಾಗಿ ಮಾಡಿ ಅದಕ್ಕೆ ಪರಮಾಣುಗತದ್ವಿತ್ವ ಸಂಖ್ಯೆಯು ಕಾರಣ ಎಂದು ಸಾಧಿಸಿದ್ದಾರೆ. ಹಾಗೆ ಮಾಡಿದರೂ ದ್ವಿತ್ವಸಂಖ್ಯೆಗೆ ಕಾರಣವಾದ ಅಪೇಕ್ಷಾಬುದ್ಧಿಗೆ ಆಶ್ರಯನಾಗಿ ಈಶ್ವರ ಸಿದ್ಧನಾಗುತ್ತಾನೆ. ಆದರೂ ಮೂಲದಲ್ಲಿ

ತ್ರ್ಯಣುಕ ಪರಿಮಾಣಕ್ಕೆ ಕಾರಣವಾಗಿ ತ್ರಿತ್ವಸಂಖ್ಯೆಯನ್ನು ಅನುಮಾನ ಮಾಡಿ, ಅದಕ್ಕೆ ಕಾರಣವಾದ ಅಪೇಕ್ಷಾಬುದ್ಧ್ಯಾಶ್ರಯತ್ವೇನ ಈಶ್ವರಸಾಧನೆಯನ್ನು ಮಾಡಲಾಗಿದೆ. ಅದಕ್ಕೆ ಕಾರಣ—ಮೂಲದಲ್ಲಿ ಪರಿಮಾಣಕ್ಕೆ ಸಂಖ್ಯಾಕಾರಣ ಎಂದು ಸಾಧಿಸಲು ''ಪರಿಮಾಣ-ಪ್ರಚಯಾಜನ್ಯ-ಜನ್ಯಪರಿಮಾಣತ್ವಾತ್' ಎಂದು ಹೇತುವನ್ನು ಮಾಡಲಾಗಿದೆ. ಪರಮಾಣುಪರಿಮಾಣ ಮತ್ತು ದ್ವ್ಯಣುಕಪರಿಮಾಣಗಳೆರಡೂ ಅಣುತ್ವಪರಿಮಾಣಗಳಾದುದರಿಂದ ಪರಮಾಣು ಪರಿಮಾಣದಿಂದಲೇ ದ್ವ್ಯಣುಕಪರಿಮಾಣವು ಹುಟ್ಟಬಹುದು. ಹೀಗಾಗಿ, ಹೇತುವಿನ ವಿಶೇಷಣಾಂಶವು (ಪರಿಮಾಣಾಜನ್ಯತ್ವ) ಅಸಿದ್ಧವಾಗುತ್ತದೆ. ದ್ವ್ಯಣುಕಪರಿಮಾಣವು ಪರಮಾಣುಪರಿಮಾಣದಿಂದ ಜನ್ಯವೇ ಆಗಿದೆ. ಪರಿಮಾಣಾಜನ್ಯತ್ವ ರೂಪವಾದ ವಿಶೇಷಣಾಂಶ ಅದರಲ್ಲಿ ಬರುವುದಿಲ್ಲ. ಆದಕ್ಕಾಗಿ, ತ್ರ್ಯಣುಕಪರಿಮಾಣವನ್ನು ಪಕ್ಷವನ್ನಾಗಿ ಮಾಡಲಾಗಿದೆ. ದ್ವ್ಯಣುಕ-ತ್ರ್ಯಣುಕಪರಿಮಾಣಗಳು ವಿಜಾತೀಯಗಳಾದುದರಿಂದ ಜನ್ಯ-ಜನಕಭಾವ ಇಲ್ಲ. ಆದ್ದರಿಂದ ತ್ರ್ಯಣುಕಪರಿಮಾಣದಲ್ಲಿ ವಿಶೇಷಣಾಂಶವೂ ಇದೆ.

ತ್ರ್ಯಣುಕಪರಿಮಾಣವು ಸಂಖ್ಯಾಜನ್ಯ ಎಂದು ಸಾಧಿಸಲು ಮೂಲದಲ್ಲಿ ಹೇಳಿರುವ ಹೇತು ''ಪರಿಮಾಣ-ಪ್ರಚಯಾಜನ್ಯ-ಜನ್ಯಪರಿಮಾಣತ್ವಾತ್'' ಎಂದು. ಈ ಹೇತುವಿನಲ್ಲಿ ಘಟಕವಾದ ವಿಶೇಷಣಗಳಿಗೆ ಕೃತ್ಯವನ್ನು ಹೀಗೆ ತಿಳಿಸಲಾಗಿದೆ— ಪರಿಮಾಣಾಜನ್ಯ-ಪ್ರಚಯಾಜನ್ಯ-ಜನ್ಯಪರಿಮಾಣತ್ವಾತ್, ಎಂದು ಹೇತುವಿನ ವಿವರಣೆ. ಮೊದಲ ವಿಶೇಷಣವನ್ನು ಬಿಟ್ಟರೆ ಕಪಾಲ ಪರಿಮಾಣಜನ್ಯವಾದ ಘಟಪರಿಮಾಣದಲ್ಲಿ ವ್ಯಭಿಚಾರ. ಆದರಲ್ಲಿ ಸಂಖ್ಯಾಜನ್ಯತ್ವ ಇಲ್ಲವಾದುದರಿಂದ. ಎರಡನೆಯ ವಿಶೇಷಣ ಪ್ರಚಯಜನ್ಯವಾದ ತೂಲಪರಿಮಾಣದಲ್ಲಿ ವ್ಯಭಿಚಾರ ಪರಿಹಾರಕ್ಕಾಗಿ. ಜನ್ಯಪದವನ್ನು ಬಿಟ್ಟರೆ ಪರಮಾಣುಪರಿಮಾಣದಲ್ಲಿ ವ್ಯಭಿಚಾರ. ಗುಣತ್ವಾತ್ ಎಂದು ಹೇತುಮಾಡಿದರೆ ಘಟರೂಪದಲ್ಲಿ ವ್ಯಭಿಚಾರ. ಅದರ ಪರಿಹಾರಕ್ಕಾಗಿ ಪರಿಮಾಣತ್ವಾತ್, ಎಂದು ಹೇತುಮಾಡಲಾಗಿದೆ.

ಈ ಹೇತು ಅಪ್ರಯೋಜಕವಲ್ಲ. ಜನ್ಯಪರಿಮಾಣಕ್ಕೆ ಸಂಖ್ಯಾ-ಪರಿಮಾಣ-ಪ್ರಚಯ ಈ ಮೂರರಲ್ಲಿ ಒಂದು ಕಾರಣವಾಗಬೇಕು. ತ್ರ್ಯಣುಕಪರಿಮಾಣಕ್ಕೆ ಪರಿಮಾಣ-ಪ್ರಚಯಗಳು ಕಾರಣವಲ್ಲವೆಂದಾದರೆ ಪರಿಶೇಷಾತ್ ಸಂಖ್ಯಾವೇ ಕಾರಣವಾಗಬೇಕು.

## ನ್ಯಾಯದೀಪ

वर्धमानाद्यनुक्तमपि दृष्टान्तं स्वयं दर्शयति–**एतद्घटेति ।** कश्चिद् बुद्धिस्थो घट एतद्घटपदेनोच्यते । घटान्तरगतातिशयितपरिमाणे कपालस्थत्रित्वसङ्ख्याजन्यत्वरूपसाध्यस्य उक्तरूपहेतोश्च सत्त्वं व्यक्त-

मिति भावः । **अणुत्वापत्तेरिति** । तथाच त्र्यणुकस्याप्रत्यक्षतापत्तेरिति भावः ।

प्रचयस्वरूपं वदन्नेव तदजन्यत्वं व्यनक्ति–**निरवयवेति।** निरवयवाभ्यां परमाणुरूपावयवाभ्यामारब्ध इत्यर्थः । वर्धमानोक्त-प्रयोगान्तरमाह—**एवमिति ।** सङ्ख्याया एव जनकत्वेन द्व्यणु-कपरिमाणस्याजनकत्वे सतीत्यर्थः । परमाणुगतद्वित्वसङ्ख्ययैव द्व्यणु-कपरिमाणजन्म नतु तत्परिमाणेनेति न बाधो, द्व्यणुकपरि-माणानुत्पादो वा शङ्क्य इति भावः । अयं च प्रयोगो द्व्यणुकपरिमाणे । तत्रोक्तप्रयोगोऽत्रापि ध्येयः ।।

ವರ್ಧಮಾನೋಪಾಧ್ಯಾಯರು ಸಂಖ್ಯಾಜನ್ಯತ್ವವನ್ನು ಸಾಧಿಸುವ ಅನುಮಾನಕ್ಕೆ ದೃಷ್ಟಾಂತವನ್ನು ಹೇಳಿಲ್ಲ. ಆದರೂ ಮೂಲದಲ್ಲಿ ಘಟವಿಶೇಷವನ್ನು ದೃಷ್ಟಾಂತವನ್ನಾಗಿ ತೋರಿಸಲಾಗಿದೆ. ಅಲ್ಲಿ, ಏತದ್ ಘಟ ಎಂದರೆ ಬುದ್ಧಿಸ್ಥವಾದ ಘಟವಿಶೇಷ.

ಕಪಾಲತ್ರಯಾರಬ್ಧಘಟದಲ್ಲಿ ಬುದ್ಧಿಸ್ಥಘಟಕ್ಕಿಂತ ಅಧಿಕಪರಿಮಾಣ ಬಂದಿರುವುದು ಕಪಾಲಗತತ್ರಿತ್ವ ಸಂಖ್ಯೆಯಿಂದ ಎಂಬುದು ಸ್ಪಷ್ಟ. ಆದ್ದರಿಂದಲೇ ಆ ಘಟಪರಿಮಾಣದಲ್ಲಿ ಸಾಧ್ಯಹೇತುಗಳು ಇವೆ.

ವರ್ಧಮಾನ ಮಾಡಿರುವ, ಇನ್ನೊಂದು ಅನುಮಾನವನ್ನು 'ಏವಂ' ಇತ್ಯಾದಿಯಾಗಿ ಮೂಲದಲ್ಲಿ ಹೇಳಲಾಗಿದೆ. ಏವಂ ಎಂದರೆ ತ್ರ್ಯಣುಕಪರಿಮಾಣಕ್ಕೆ ಸಂಖ್ಯೆಯೇ ಜನಕ, ಹೊರತು, ಪರಿಮಾಣವು ಜನಕವಲ್ಲವಾದ ಕಾರಣದಿಂದ, ಎಂದರ್ಥ.

ಪರಮಾಣುಗತವಾದ ದ್ವಿತ್ವಸಂಖ್ಯೆಯಿಂದಲೇ ದ್ವ್ಯಣುಕಗತಪರಿಮಾಣವು ಹುಟ್ಟುತ್ತದೆ. ಹೀಗೆ ಸಂಖ್ಯಾಜನ್ಯತ್ವವು ಇರುವುದರಿಂದ ಬಾಧ ಇಲ್ಲ. ಅಥವಾ, ಕಾರಣವೇ ಇಲ್ಲದಿರುವುದರಿಂದ ದ್ವ್ಯಣುಕದಲ್ಲಿ ಪರಿಮಾಣವೇ ಹುಟ್ಟಲಾರದು, ಎಂಬ ಶಂಕೆಯೂ ಇಲ್ಲ.

## ನ್ಯಾಯದೀಪ

द्व्यणुकपरिमाणेऽणुत्वस्योपगमेनेष्टापत्तिनिरासायाह—**अणुतमत्वेति ।** **तस्मादिति ।** परिमाणस्याजनकत्वात्, प्रचयस्य च प्रागुक्त-

रूपस्यासम्भवादित्यर्थः। ततश्च किमीश्वरसिद्धावागतमित्यतः कुसुमाञ्जल्युक्तप्रयोगमाह—**ते चेति**। त्र्यणुक-द्व्यणुकगते इत्यर्थः। एकत्वे व्यभिचारवारणाय हेतावनेकवृत्तीन्युक्तिः। संयोगादौ तद्वारणाय सङ्ख्यात्वादित्युक्तिः। **तदाधारमीश्वरमिति**। द्वित्वस्य निमित्तकारणभूतापेक्षाबुद्धिनाशनाश्यत्वनियमेऽपीश्वरबुद्धेर्नित्यतया कारणान्तरनाशप्रयुक्त एव परमाण्वादिगततद्वित्वादिनाश इति न तस्य नित्यत्वशङ्केति भावः॥

ತ್ರಿತ್ವ-ದ್ವಿತ್ವಗಳು ಅಪೇಕ್ಷಾಬುದ್ಧಿಜನ್ಯ ಎಂದು ಸಾಧಿಸಲು ಮೂಲದಲ್ಲಿ ಅನೇಕವೃತ್ತಿ ಸಂಖ್ಯಾತ್ವವನ್ನು ಹೇತುವನ್ನಾಗಿ ಹೇಳಲಾಗಿದೆ. ಹೇತುವಿನಲ್ಲಿ ಅನೇಕವೃತ್ತಿ ಎಂಬ ವಿಶೇಷಣವನ್ನು ಬಿಟ್ಟರೆ ಸಂಖ್ಯಾತ್ವಾತ್, ಎಂದಿಷ್ಟೇ ಹೇತುವಾಗುತ್ತದೆ. ಅದು ಏಕತ್ವದಲ್ಲಿದೆ. ಅದರಲ್ಲಿ ಅಪೇಕ್ಷಾಬುದ್ಧಿ ಜನ್ಯತ್ವ ಇಲ್ಲ. ವ್ಯಭಿಚಾರ. ಅನೇಕವೃತ್ತಿತ್ವಾತ್ ಎಂದು ಹೇತುಮಾಡಿದರೆ ಸಂಯೋಗದಲ್ಲಿ ವ್ಯಭಿಚಾರ.

ಪರಮಾಣುಗತದ್ವಿತ್ವಕ್ಕೆ ಈಶ್ವರನ ಅಪೇಕ್ಷಾಬುದ್ಧಿಯೇ ಕಾರಣ ಎಂದು ತಾರ್ಕಿಕರು ಸಿದ್ಧಾಂತಿಸಿದ್ದಾರೆ. ಅಪೇಕ್ಷಾಬುದ್ಧಿನಾಶಾತ್ ದ್ವಿತ್ವನಾಶಬೇಕು. ಈಶ್ವರನ ಅಪೇಕ್ಷಾಬುದ್ಧಿ ನಿತ್ಯ. ಹಾಗಾದರೆ ಪರಮಾಣುಗತವಾದ ದ್ವಿತ್ವದ ನಾಶ ಹೇಗೆ? ಕಾರಣಾಂತರನಾಶಪ್ರಯುಕ್ತ ದ್ವಿತ್ವನಾಶ ಎಂದು ರಾಯರು ಹೇಳಿದ್ದಾರೆ. (ಇದನ್ನು ಮುಂದೆ ಖಂಡನಗ್ರಂಥದಲ್ಲಿ (ಪು.368) ವಿಮರ್ಶಿಸಲಾಗಿದೆ. ಅದೃಷ್ಟಸಹಕೃತವಾದ ಅಪೇಕ್ಷಾಬುದ್ಧಿಯು ದ್ವಿತ್ವಜನಕ. ಅದೃಷ್ಟನಾಶಾತ್ ದ್ವಿತ್ವನಾಶವಾಗುತ್ತದೆ, ಎಂದು.)

## ಅವತಾರಿಕೆ

आद्यहेतोरन्यथोपपत्त्या त्वदभिमतापेक्षाबुद्ध्याश्रयत्वेन नेश्वरसाधकता इत्यप्रयोजकत्वमिति भावेन सिद्धान्तयति— **मैवमित्यादिना**।

ದ್ವ್ಯಣುಕಪರಿಮಾಣಕ್ಕೆ ಸಂಖ್ಯಾಜನ್ಯತ್ವಸಾಧಕವಾದ ಮೊದಲನೆಯ ಹೇತು ಅಪೇಕ್ಷಾಬುದ್ಧಿಂ ಅನ್ಯಥಾಪಿ ಉಪಪನ್ನವಾಗುತ್ತದೆ. ಆದ್ದರಿಂದ ಪರಾಭಿಮತವಾದ ಅಪೇಕ್ಷಾಬುದ್ಧ್ಯಾಶ್ರಯತ್ವೇನ ಈಶ್ವರಸಾಧಕವಾಗುವುದಿಲ್ಲ. ಹೀಗೆ, ಆ ಹೇತು ಅಪ್ರಯೋಜಕ ಎಂಬ ಅಭಿಪ್ರಾಯದಿಂದ ಮುಂದಿನ ಗ್ರಂಥದಲ್ಲಿ ನಿರ್ಣಯಿಸಲಾಗಿದೆ.

**मैवम् । सङ्ख्यायोनित्वेऽपि द्व्यणुकपरिमाणं प्रति त्वदुक्तपरमाणुगतद्वित्वविपरीतयोः परमाणुगतैकत्वयोः, त्र्यणुकपरिमाणं च प्रति द्व्यणुकनिष्ठैकत्वानाम् असमवायिकारणत्वसंभवात् । एकत्वानामनेकत्वेऽपि क्लृप्तत्वात् । द्वित्वत्रित्वयोस्तु प्रत्येकमेकत्वेऽपि कल्प्यत्वात् ॥**

ದ್ವ್ಯಣುಕಪರಿಮಾಣಕ್ಕೆ ಪರಮಾಣುಸಂಖ್ಯೆಯೇ ಕಾರಣವಾದರೂ ತಾರ್ಕಿಕರು ಹೇಳುವ ದ್ವಿತ್ವಸಂಖ್ಯೆಗೆ ಬದಲಾಗಿ ಪರಮಾಣುಗತವಾದ ಎರಡು ಏಕತ್ವಗಳು ಕಾರಣಗಳೆಂದು ಹೇಳಬಹುದು. (ದ್ವಿತ್ವವು ಅಪೇಕ್ಷಾ ಬುದ್ಧಿಜನ್ಯವಾದರೂ ಏಕತ್ವ ನಿತ್ಯ.)

ಅದರಂತೆ ತ್ರ್ಯಣುಕಪರಿಮಾಣಕ್ಕೂ ಮೂರು ದ್ವ್ಯಣುಕಗಳಲ್ಲಿರುವ ಮೂರು ಏಕತ್ವಗಳೇ ಅಸಮವಾಯಿಕಾರಣವಾಗಬಹುದು. ತ್ರಿತ್ವವನ್ನು ಅಂಗೀಕರಿಸಬೇಕಾಗಿಲ್ಲ. ಅದರಿಂದಾಗಿ ಈಶ್ವರನ ಅಪೇಕ್ಷಾಬುದ್ಧಿಯ ಅಗತ್ಯವಿಲ್ಲ.

ಏಕತ್ವಗಳು ಅನೇಕ, ದ್ವಿತ್ವ–ತ್ರಿತ್ವಗಳು ಏಕೈಕ, ಎಂಬ ಲಾಘವ ಇದ್ದರೂ ಏಕತ್ವಗಳು ಕ್ಲೃಪ್ತ, ದ್ವಿತ್ವ–ತ್ರಿತ್ವಗಳು ಕಲ್ಪ್ಯ. ಆದ್ದರಿಂದ ಗೌರವ. ಹೀಗೆ ಏಕತ್ವದ್ವಯದಿಂದ ದ್ವ್ಯಣುಕಪರಿಮಾಣ, ಏಕತ್ವ ತ್ರಯದಿಂದ ತ್ರ್ಯಣುಕಪರಿಮಾಣ ಹುಟ್ಟಬಹುದಾದ್ದರಿಂದ ಅಪೇಕ್ಷಾಬುದ್ಧಿಯ ಅಗತ್ಯವೇ ಇಲ್ಲ. ತದಾಶ್ರಯತಯಾ ಈಶ್ವರಸಿದ್ಧಿ ಆಗುವುದಿಲ್ಲ.

**नच त्र्यणुकपरिमाणस्य द्व्यणुकगतानेकैकत्वासमवायिकारणकत्वे द्व्यणुकपरिमाणवदणुत्वं स्यादिति वाच्यम् । अणुत्वरूपं विशेषं प्रति नित्यसङ्ख्यात्वेन, महत्वरूपं विशेषं प्रति जन्यसङ्ख्यात्वेन हेतुत्वोपपत्तेः ॥**

ಆಕ್ಷೇಪ—ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕದಲ್ಲಿರುವ ಅನೇಕ ಏಕತ್ವಗಳು ಅಸಮವಾಯಿ ಕಾರಣಗಳಾದರೆ, ಏಕತ್ವಜನ್ಯವಾದ ದ್ವ್ಯಣುಕಪರಿಮಾಣದಂತೆ, ತ್ರ್ಯಣುಕಪರಿಮಾಣವೂ ಅಣುತ್ವ ಎಂದಾದೀತು.

ಸಮಾಧಾನ—ಅಣುತ್ವರೂಪ ಪರಿಮಾಣವಿಶೇಷಕ್ಕೆ ನಿತ್ಯಸಂಖ್ಯಾಕಾರಣ. ಪರಮಾಣುಗತ ಏಕತ್ವಸಂಖ್ಯಾ ನಿತ್ಯ. ಮಹತ್ವರೂಪಪರಿಮಾಣವಿಶೇಷಕ್ಕೆ ಜನ್ಯಸಂಖ್ಯಾಕಾರಣ. ದ್ವ್ಯಣುಕವು ಜನ್ಯವಾದುದರಿಂದ ತದ್ಗತವಾದ ಏಕತ್ವವೂ ಜನ್ಯವಾಗಿದೆ. ಹೀಗೆ ಏಕತ್ವಗಳಲ್ಲಿ ನಿತ್ಯತ್ವ–ಅನಿತ್ಯತ್ವ ಎಂಬ ವೈಚಿತ್ರ್ಯವಿರುವುದರಿಂದ ತಜ್ಜನ್ಯಪರಿಮಾಣಗಳಲ್ಲೂ ಅಣುತ್ವ–ಮಹತ್ವರೂಪವಾದ ವೈಜಾತ್ಯವು ಬರಬಹುದು.

## ನ್ಯಾಯದೀಪ

**संख्यायोनित्वेऽपीति ।** द्व्यणुकत्र्यणुकपरिमाणयोः परमाणुद्व्यणुकगतसङ्ख्याजन्यत्वेऽपीत्यर्थः । अपीत्यभ्युपगमवादः । **द्व्यणुकेति ।** द्व्यणुकत्रयनिष्ठेत्यर्थः ।

ननु नैवं सम्भवति । एकत्वानामनेकत्वात् । द्वित्वत्रित्वयोस्तु प्रत्येकमेकैकत्वेन लाघवाद् । द्व्यणुकत्र्यणुकगतपरिमाणयोर्द्वयोरपि स्वावयवगतैकत्वसङ्ख्याजन्यत्वाविशेषेण त्र्यणुकपरिमाणस्याप्यणुत्वापत्तेश्चेत्यत आद्यं निराह—**एकत्वानामिति ।** अन्त्यमाशङ्क्य निराह—**नचेति । नित्येति ।** परमाणुगतैकत्वयोः नित्यत्वात् तज्जन्यं द्व्यणुकपरिमाणमणु । द्व्यणुकगतानां त्रयाणामेकत्वानां जन्यत्वात् तज्जन्यं त्र्यणुकपरिमाणं महदित्युपपत्तेरित्यर्थः ॥

ಮೂಲದಲ್ಲಿ ದ್ವ್ಯಣುಕ–ತ್ರ್ಯಣುಕ ಪರಿಮಾಣಗಳೆರಡೂ ಏಕತ್ವಸಂಖ್ಯಾಜನ್ಯಗಳಾಗಲಿ, ಎಂದು ಆಪಾದನೆ ಮಾಡಿರುವುದು ಸರಿಯಲ್ಲ. ಆಗ ಎರಡು ಅನುಪಪತ್ತಿಗಳು ಬರುತ್ತವೆ. 1. ಏಕತ್ವಗಳು ಅನೇಕಗಳಾದುದರಿಂದ ಗೌರವ. ದ್ವಿತ್ವ–ತ್ರಿತ್ವಗಳು ಒಂದೊಂದೇ ಆದುದರಿಂದ ಲಾಘವ.

2. ದ್ವ್ಯಣುಕ–ತ್ರ್ಯಣುಕಗತವಾದ ಎರಡೂ ಪರಿಮಾಣಗಳಲ್ಲಿ ಏಕತ್ವಸಂಖ್ಯಾಜನ್ಯತ್ವವು ಸಮಾನವೆಂದಾದಮೇಲೆ ಅವುಗಳಲ್ಲಿ ಅಣುತ್ವ–ಮಹತ್ವ ಎಂಬ ವ್ಯತ್ಯಾಸ ಬರಲು ನಿಮಿತ್ತ ಯಾವುದು? ದ್ವ್ಯಣುಕದಂತೆ ತ್ರ್ಯಣುಕದಲ್ಲೂ ಅಣುತ್ವವೇ ಬರಲಿ, ಎಂದು ಎರಡನೆಯ ಆಕ್ಷೇಪ.

ಇವುಗಳಲ್ಲಿ ಮೊದಲನೆಯದಕ್ಕೆ ಪರಿಹಾರ—ಏಕತ್ವವು ಕ್ಲೃಪ್ತ, ದ್ವಿತ್ವ–ತ್ರಿತ್ವಗಳು ಕಲ್ಪ್ಯ ಎಂದು. ಎರಡನೆಯ ಆಕ್ಷೇಪಕ್ಕೆ ಪರಿಹಾರ–ಪರಮಾಣುಗತವಾದ ಏಕತ್ವವು ನಿತ್ಯ, ದ್ವ್ಯಣುಕಗತವಾದುದು ಅನಿತ್ಯ. ಹೀಗೆ, ಕಾರಣಗಳಲ್ಲಿ ವೈಜಾತ್ಯವಿರುವುದರಿಂದ ಕಾರ್ಯಗಳಲ್ಲಿ ವೈಜಾತ್ಯ ಬರಬಹುದು, ಎಂದು.

## ನ್ಯಾಯದೀಪ

यद्यपि त्रिभिरेकत्वैर्जन्यत्वादेव त्र्यणुकपरिमाणं महत्, एकत्वद्वयजन्यत्वाद् द्व्यणुकपरिमाणम् अण्विति सुवचम् । तथापि

**मैवम् । सङ्ख्यायोनित्वेऽपि द्व्यणुकपरिमाणं प्रति त्वदुक्तपरमाणुगतद्वित्वविपरीतयोः परमाणुगतैकत्वयोः, त्र्यणुकपरिमाणं च प्रति द्व्यणुकनिष्ठैकत्वानाम् असमवायिकारणत्वसंभवात् । एकत्वानामनेकत्वेऽपि क्लृप्तत्वात् । द्वित्वत्रित्वयोस्तु प್रत्येकमेकत्वेऽपि कल्प्यत्वात् ॥**

ದ್ವ್ಯಣುಕಪರಿಮಾಣಕ್ಕೆ ಪರಮಾಣುಸಂಖ್ಯೆಯೇ ಕಾರಣವಾದರೂ ತಾರ್ಕಿಕರು ಹೇಳುವ ದ್ವಿತ್ವಸಂಖ್ಯೆಗೆ ಬದಲಾಗಿ ಪರಮಾಣುಗತವಾದ ಎರಡು ಏಕತ್ವಗಳು ಕಾರಣಗಳೆಂದು ಹೇಳಬಹುದು. (ದ್ವಿತ್ವವು ಅಪೇಕ್ಷಾ ಬುದ್ಧಿಜನ್ಯವಾದರೂ ಏಕತ್ವ ನಿತ್ಯ.)

ಅದರಂತೆ ತ್ರ್ಯಣುಕಪರಿಮಾಣಕ್ಕೂ ಮೂರು ದ್ವ್ಯಣುಕಗಳಲ್ಲಿರುವ ಮೂರು ಏಕತ್ವಗಳೇ ಅಸಮವಾಯಿಕಾರಣವಾಗಬಹುದು. ತ್ರಿತ್ವವನ್ನು ಅಂಗೀಕರಿಸಬೇಕಾಗಿಲ್ಲ. ಅದರಿಂದಾಗಿ ಈಶ್ವರನ ಅಪೇಕ್ಷಾಬುದ್ಧಿಯ ಅಗತ್ಯವಿಲ್ಲ.

ಏಕತ್ವಗಳು ಅನೇಕ, ದ್ವಿತ್ವ-ತ್ರಿತ್ವಗಳು ಏಕೈಕ, ಎಂಬ ಲಾಘವ ಇದ್ದರೂ ಏಕತ್ವಗಳು ಕ್ಲೃಪ್ತ, ದ್ವಿತ್ವ-ತ್ರಿತ್ವಗಳು ಕಲ್ಪ್ಯ. ಆದ್ದರಿಂದ ಗೌರವ. ಹೀಗೆ ಏಕತ್ವದ್ವಯದಿಂದ ದ್ವ್ಯಣುಕಪರಿಮಾಣ, ಏಕತ್ವ ತ್ರಯದಿಂದ ತ್ರ್ಯಣುಕಪರಿಮಾಣ ಹುಟ್ಟಬಹುದಾದ್ದರಿಂದ ಅಪೇಕ್ಷಾಬುದ್ಧಿಯ ಅಗತ್ಯವೇ ಇಲ್ಲ. ತದಾಶ್ರಯತಯಾ ಈಶ್ವರಸಿದ್ಧಿ ಆಗುವುದಿಲ್ಲ.

**नच त्र्यणुकपरिमाणस्य द्व्यणुकगतानेकैकत्वासमवायिकारणकत्वे द्व्यणुकपरिमाणवदणुत्वं स्यादिति वाच्यम् । अणुत्वरूपं विशेषं प्रति नित्यसङ्ख्यात्वेन, महत्वरूपं विशेषं प्रति जन्यसङ्ख्यात्वेन हेतुत्वोपपत्तेः ॥**

**ಆಕ್ಷೇಪ**—ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕದಲ್ಲಿರುವ ಅನೇಕ ಏಕತ್ವಗಳು ಅಸಮವಾಯಿ ಕಾರಣಗಳಾದರೆ, ಏಕತ್ವಜನ್ಯವಾದ ದ್ವ್ಯಣುಕಪರಿಮಾಣದಂತೆ, ತ್ರ್ಯಣುಕಪರಿಮಾಣವೂ ಅಣುತ್ವ ಎಂದಾದೀತು.

**ಸಮಾಧಾನ**—ಅಣುತ್ವರೂಪ ಪರಿಮಾಣವಿಶೇಷಕ್ಕೆ ನಿತ್ಯಸಂಖ್ಯಾಕಾರಣ. ಪರಮಾಣುಗತ ಏಕತ್ವಸಂಖ್ಯಾ ನಿತ್ಯ. ಮಹತ್ವರೂಪಪರಿಮಾಣವಿಶೇಷಕ್ಕೆ ಜನ್ಯಸಂಖ್ಯಾಕಾರಣ. ದ್ವ್ಯಣುಕವು ಜನ್ಯವಾದುದರಿಂದ ತದ್ಗತವಾದ ಏಕತ್ವವೂ ಜನ್ಯವಾಗಿದೆ. ಹೀಗೆ ಏಕತ್ವಗಳಲ್ಲಿ ನಿತ್ಯತ್ವ-ಅನಿತ್ಯತ್ವ ಎಂಬ ವೈಚಿತ್ರ್ಯವಿರುವುದರಿಂದ ತಜ್ಜನ್ಯಪರಿಮಾಣಗಳಲ್ಲೂ ಅಣುತ್ವ-ಮಹತ್ವರೂಪವಾದ ವೈಜಾತ್ಯವು ಬರಬಹುದು.

## ನ್ಯಾಯದೀಪ

**संख्यायोनित्वेऽपीति ।** द्व्यणुकत्र्यणुकपरिमाणयोः परमाणुद्व्यणुकगतसङ्ख्याजन्यत्वेऽपीत्यर्थः । अपीत्यभ्युपगमवादः । **द्व्यणुकेति ।** द्व्यणुकत्रयनिष्ठेत्यर्थः ।

ननु नैवं सम्भवति । एकत्वानामनेकत्वात् । द्वित्वत्रित्वयोस्तु प्रत्येकमेकैकत्वेन लाघवाद् । द्व्यणुकत्र्यणुकगतपरिमाणयोर्द्वयोरपि स्वावयवगतैकत्वसङ्ख्याजन्यत्वाविशेषेण त्र्यणुकपरिमाणस्याप्यणुत्वापत्तेश्चेत्यत आद्यं निराह—**एकत्वानामिति ।** अन्त्यमाशङ्क्य निराह—**नचेति ।** **नित्येति ।** परमाणुगतैकत्वयोः नित्यत्वात् तज्जन्यं द्व्यणुकपरिमाणमणु । द्व्यणुकगतानां त्रयाणामेकत्वानां जन्यत्वात् तज्जन्यं त्र्यणुकपरिमाणं महदित्युपपत्तेरित्यर्थः ॥

ಮೂಲದಲ್ಲಿ ದ್ವ್ಯಣುಕ–ತ್ರ್ಯಣುಕ ಪರಿಮಾಣಗಳೆರಡೂ ಏಕತ್ವಸಂಖ್ಯಾಜನ್ಯಗಳಾಗಲಿ, ಎಂದು ಆಪಾದನೆ ಮಾಡಿರುವುದು ಸರಿಯಲ್ಲ. ಆಗ ಎರಡು ಅನುಪಪತ್ತಿಗಳು ಬರುತ್ತವೆ. 1. ಏಕತ್ವಗಳು ಅನೇಕಗಳಾದುದರಿಂದ ಗೌರವ. ದ್ವಿತ್ವ–ತ್ರಿತ್ವಗಳು ಒಂದೊಂದೇ ಆದುದರಿಂದ ಲಾಘವ.

2. ದ್ವ್ಯಣುಕ–ತ್ರ್ಯಣುಕಗತವಾದ ಎರಡೂ ಪರಿಮಾಣಗಳಲ್ಲಿ ಏಕತ್ವಸಂಖ್ಯಾಜನ್ಯತ್ವವು ಸಮಾನವೆಂದಾದಮೇಲೆ ಅವುಗಳಲ್ಲಿ ಅಣುತ್ವ–ಮಹತ್ವ ಎಂಬ ವ್ಯತ್ಯಾಸ ಬರಲು ನಿಮಿತ್ತ ಯಾವುದು? ದ್ವ್ಯಣುಕದಂತೆ ತ್ರ್ಯಣುಕದಲ್ಲೂ ಅಣುತ್ವವೇ ಬರಲಿ, ಎಂದು ಎರಡನೆಯ ಆಕ್ಷೇಪ.

ಇವುಗಳಲ್ಲಿ ಮೊದಲನೆಯದಕ್ಕೆ ಪರಿಹಾರ—ಏಕತ್ವವು ಕ್ಲೃಪ್ತ, ದ್ವಿತ್ವ–ತ್ರಿತ್ವಗಳು ಕಲ್ಪ್ಯ ಎಂದು. ಎರಡನೆಯ ಆಕ್ಷೇಪಕ್ಕೆ ಪರಿಹಾರ–ಪರಮಾಣುಗತವಾದ ಏಕತ್ವವು ನಿತ್ಯ, ದ್ವ್ಯಣುಕಗತವಾದುದು ಅನಿತ್ಯ. ಹೀಗೆ, ಕಾರಣಗಳಲ್ಲಿ ವೈಜಾತ್ಯವಿರುವುದರಿಂದ ಕಾರ್ಯಗಳಲ್ಲಿ ವೈಜಾತ್ಯ ಬರಬಹುದು, ಎಂದು.

## ನ್ಯಾಯದೀಪ

यद्यपि त्रिभिरेकत्वैर्जन्यत्वादेव त्र्यणुकपरिमाणं महत्, एकत्वद्वयजन्यत्वाद् द्व्यणुकपरिमाणम् अण्विति सुवचम् । तथापि

चतुरणुकादिपरिमाणस्यापि सङ्ख्यात एव जननोपपत्तेरिति वैशेषिकाधिकरणसुधोक्तदिशा सर्वकार्यपरिमाणानामप्येकरूपत्वलाभेन क्लृप्ततत्तत्समवायिकारणगतानेकैकत्वसङ्ख्याजन्यत्वमेव स्यात् । त्र्यणुकादिकार्यगतपरिमाणस्य सर्वस्यापि त्वन्मते महत्त्वेन जन्यसङ्ख्योत्पन्नत्वेनाणुपरिमाणवैलक्षण्योपपत्तेरिति भावेनैव जन्यसङ्ख्यात्वेनेत्येवमुक्तम् ॥

ವಸ್ತುತಃ ಏಕತ್ವಗಳಲ್ಲಿ ನಿತ್ಯತ್ವ–ಅನಿತ್ಯತ್ವರೂಪ ವೈಲಕ್ಷಣ್ಯವನ್ನು ಹೇಳುವುದಕ್ಕಿಂತಲೂ ದ್ವಿತ್ವ–ಬಹುತ್ವ ವೈಲಕ್ಷಣವನ್ನು ಹೇಳಿ ಕಾರ್ಯಪರಿಮಾಣಗಳಲ್ಲಿ ವೈಲಕ್ಷಣ್ಯವನ್ನು ಹೇಳಬಹುದಿತ್ತು. ಪರಮಾಣದ್ವಯಗತವಾದ ಎರಡು ಏಕತ್ವಗಳಿಂದ ದ್ವ್ಯಣುಕಪರಿಮಾಣ ಹುಟ್ಟಿರುವುದರಿಂದ ಅದು ಅಣುತ್ವ ರೂಪವಾಗಿದೆ. ದ್ವ್ಯಣುಕತ್ರಯಗಳಲ್ಲಿರುವ ಮೂರು ಏಕತ್ವಗಳಿಂದ ಜನ್ಯವಾಗಿರುವುದರಿಂದ ತ್ರ್ಯಣುಕಪರಿಮಾಣ ಮಹತ್ವರೂಪವಾಗಿದೆ, ಎಂದು ಹೇಳಬಹುದು. ಆದರೆ ಹೀಗೆ ಹೇಳಿದರೆ, ಚತುರಣುಕಾದಿಗತವಾದ ಮಹತ್ವಗಳೂ ತ್ರ್ಯಣುಕಗತವಾದ ಮಹತ್ವ ಸಜಾತೀಯವಾಗಿವೆ. ಅವುಗಳೆಲ್ಲವೂ ಅನೇಕ ಏಕತ್ವಜನ್ಯವೂ ಆಗಿವೆ. ಸುಧಾದ ವೈಶೇಷಿಕಾಧಿಕರಣದಲ್ಲಿ ಚತುರಣುಕಾದಿ ಪರಿಮಾಣಗಳೂ ತತ್ತದವಯವಗತವಾದ ಸಂಖ್ಯೆಯಿಂದಲೇ ಹುಟ್ಟಬಹುದು, ಎಂದು ಹೇಳಲಾಗಿದೆ. (ಚತುರಣುಕಾದಿಪರಿಮಾಣಸ್ಯಾಪಿ ಸಂಖ್ಯಾತ ಏವ ಜನ್ಮೋಪಪತ್ತೇಃ।) ದ್ವ್ಯಣುಕಗತವಾದ ಅಣುತ್ವವೂ ಅನೇಕ ಏಕತ್ವಜನ್ಯವಾಗಿರುವುದರಿಂದ ತ್ರ್ಯಣುಕಾದಿ ಪರಿಮಾಣಗಳಲ್ಲಿ ಅಣುತ್ವಪರಿಮಾಣಕ್ಕಿಂತ ವೈಲಕ್ಷಣ್ಯ ಬರಲಾರದು. ಸಂಖ್ಯಾದಲ್ಲಿ ನಿತ್ಯತ್ವಾನಿತ್ಯತ್ವಗಳು ಅಣುತ್ವ–ಮಹತ್ವಗಳಿಗೆ ಕಾರಣ, ಎಂದು ಹೇಳಿದಾಗ ನಿತ್ಯಸಂಖ್ಯಾಜನ್ಯವಾದುದು ಅಣುತ್ವ, ಅನಿತ್ಯಸಂಖ್ಯಾಜನ್ಯವಾದುದೆಲ್ಲ ಮಹತ್ವ ಪರಿಮಾಣ ಎಂದು ವೈಲಕ್ಷಣ್ಯವನ್ನು ಹೇಳಬಹುದು. ಇದರಿಂದ ತ್ರ್ಯಣುಕಾದಿ– ಸರ್ವಪರಿಮಾಣಗಳಿಗೂ ಸಂಖ್ಯಾರೂಪವಾದ ಅನುಗತಕಾರಣವನ್ನೂ ಹೇಳಿದಂತಾಗುತ್ತದೆ. ಅದಕ್ಕಾಗಿ ನಿತ್ಯತ್ವಾ–ನಿತ್ಯತ್ವ ವೈಲಕ್ಷಣ್ಯವನ್ನೇ ಏಕತ್ವಗಳಲ್ಲಿ ಹೇಳಲಾಗಿದೆ.

## ನ್ಯಾಯದೀಪ

ननु कारणगतैकत्वसङ्ख्यायाः कार्यगतपरिमाणं प्रति नियतपूर्ववृत्तित्वेऽपि द्वित्वत्रित्वादिसङ्ख्यां प्रत्यसमवायिकारणतया क्लृप्तत्वेन तन्तुरूपादेरिवान्यथासिद्धत्वान्न परिमाणकारणत्वम्, कुतस्तद्विशेषासमवायिकारणत्वमिति चेन्न । अन्यत्र तथात्वेऽपि परमाणुगतैकत्वसङ्ख्याया-

**असम्भावितापेक्षाबुद्धिजन्यपरमाण्वादिगतद्वित्वबहुत्वसंख्ये प्रत्यसमवायित्वकल्पनापेक्षया परिमाणासमवायिकारणत्वकल्पनस्यैवोचितत्वात् । तद्धेतोरेवास्तु हेतुत्वं किं तेनेति न्यायात् । अनेकत्वं तु क्लृप्तत्वात् कल्प्यद्वित्वाद्यपेक्षया लघ्वित्युक्तम् ।।**

**ಆಕ್ಷೇಪ**—ಪರಮಾಣು ಮತ್ತು ದ್ವ್ಯಣುಕರೂಪವಾದ ಕಾರಣಗಳಲ್ಲಿ ಇರುವ ಏಕತ್ವಸಂಖ್ಯೆಗಳು ಕಾರ್ಯಗತವಾದ ಅಣುತ್ವ-ಮಹತ್ವಗಳಿಗೆ ಪೂರ್ವವೃತ್ತಿಯಾಗಿವೆ, ಎನ್ನುವುದು ಸಿದ್ಧವಾಗಿದೆ. ಆದರೂ ಪರಮಾಣುಗತ ಏಕತ್ವವು ತದ್ಗತವಾದ ದ್ವಿತ್ವಸಂಖ್ಯೆಗೂ, ದ್ವ್ಯಣುಕಗತ ಏಕತ್ವವು, ತದ್ಗತ ತ್ರಿತ್ವಕ್ಕೂ ಅಸಮವಾಯಿಕಾರಣವೆಂದು ಕ್ಲೃಪ್ತವಾಗಿದೆಯಾದ್ದರಿಂದ, ಆ ಏಕತ್ವವು ಪರಿಮಾಣಕ್ಕೆ, ತಂತುರೂಪದಂತೆ, ಅನ್ಯಥಾಸಿದ್ಧವಾಗುತ್ತದೆ. ಹೀಗೆ, ಅದು ಪರಿಮಾಣಕ್ಕೆ ಕಾರಣವೇ ಅಲ್ಲವೆಂದಾದ ಮೇಲೆ ಕಾರಣವಿಶೇಷವಾದ ಅಸಮವಾಯಿಕಾರಣತ್ವವೂ ಅದಕ್ಕೆ ದೂರತೋಪಾಸ್ತ.

**ಸಮಾಧಾನ**—ತ್ರ್ಯಣುಕಾದಿಗಳು ಪ್ರತ್ಯಕ್ಷಗಳಾದುದರಿಂದ ಅಲ್ಲಿ ದ್ವಿತ್ವ-ಬಹುತ್ವಾದಿ ಬುದ್ಧಿಯು ಪ್ರಾಮಾಣಿಕ. ಆದರಿಂದ ಅವುಗಳಲ್ಲಿರುವ ಏಕತ್ವಾದಿಗಳು ದ್ವಿತ್ವಾದಿಗಳಿಗೆ ಅಸಮವಾಯಿಕಾರಣ, ಎನ್ನುವುದು ಕ್ಲೃಪ್ತ. ಆದ್ದರಿಂದ ಅವುಗಳು ಪರಿಮಾಣಕ್ಕೆ ಅನ್ಯಥಾಸಿದ್ಧಗಳು, ಎಂದು ಹೇಳಬಹುದು. ಆದರೆ ಅತೀಂದ್ರಿಯವಾದ ದ್ವ್ಯಣುಕ ಮತ್ತು ಪರಮಾಣುಗಳಲ್ಲಿ ತ್ರಿತ್ವ-ದ್ವಿತ್ವಗಳು ಸಿದ್ಧಗಳಲ್ಲ, ಕಲ್ಪನೀಯ. ಅವುಗಳಿಗೆ ಕಾರಣವಾದ ಅಪೇಕ್ಷಾ ಬುದ್ಧಿಯೂ, ಈಶ್ವರ ಸಿದ್ಧನಲ್ಲವಾದ ಕಾರಣ, ಅಸಂಭಾವಿತ. ಹೀಗೆ ಅಪ್ರಾಮಾಣಿಕವಾದ ದ್ವಿತ್ವ-ತ್ರಿತ್ವಸಂಖ್ಯೆಗಳಿಗೆ ಏಕತ್ವಸಂಖ್ಯೆಯು ಕಾರಣವೆಂದು ಕ್ಲೃಪ್ತವಾಗಿಲ್ಲ. ಆ ಏಕತ್ವ ಸಂಖ್ಯೆಗಳಿಗೆ ದ್ವಿತ್ವಾದಿಕಾರಣತ್ವವನ್ನು ಒಪ್ಪಿ, ಆ ದ್ವಿತ್ವಾದಿಗಳಿಂದ ಪರಿಮಾಣೋತ್ಪತ್ತಿಯನ್ನು ಕಲ್ಪನೆ ಮಾಡುವುದಕ್ಕಿಂತಲೂ ಆ ಏಕತ್ವಾದಿ ಸಂಖ್ಯೆಗಳೇ ಸಾಕ್ಷಾತ್ತಾಗಿ ಪರಿಮಾಣಗಳಿಗೆ ಕಾರಣ, ಎಂದು ಕಲ್ಪಿಸುವುದು ಉಚಿತ. ಇದು 'ತದ್ಧೇತೋರೇವ ತದ್ಧೇತುತ್ವೇ ಮಧ್ಯೇ ಕಿಂ ತೇನ' ಎಂಬ ನ್ಯಾಯಕ್ಕೆ ಸಮ್ಮತವಾಗುತ್ತದೆ. ದ್ವಿತ್ವತ್ರಿತ್ವಾದಿ ಗಳಿಗೆ ಹೇತುವಾಗಿರುವ ಏಕತ್ವವೇ ಸಾಕ್ಷಾತ್ತಾಗಿ ಪರಿಮಾಣಕ್ಕೆ ಹೇತು ಎಂದು ಹೇಳಲು ಬರುವಾಗ ಅವೆರಡರ ಮಧ್ಯದಲ್ಲಿ ದ್ವಿತ್ವಾದಿಗಳ ಅಗತ್ಯವೇನು? ಎಂದು ಆ ನ್ಯಾಯದ ಪ್ರಕೃತಸಮನ್ವಯ.

ದ್ವಿತ್ವ-ತ್ರಿತ್ವಗಳು ಏಕೈಕ, ಏಕತ್ವಾದಿಗಳು ಅನೇಕ, ಎಂಬ ಗೌರವಕ್ಕೆ ಹಿಂದೆಯೇ ಸಮಾಧಾನ ಹೇಳಲಾಗಿದೆ—ಅನೇಕವಾದರೂ ಏಕತ್ವಗಳು ಕ್ಲೃಪ್ತಗಳಾಗಿವೆ, ದ್ವಿತ್ವ-ತ್ರಿತ್ವಗಳು ಕಲ್ಪ್ಯ, ಎಂದು. ಆದ್ದರಿಂದ ಅಪೇಕ್ಷಾಬುದ್ಧಿಯ ಅಗತ್ಯವಿಲ್ಲದೆಯೇ ಅಣುತ್ವ-ಮಹತ್ವಗಳ ಉತ್ಪತ್ತಿಯನ್ನು ಸಾಧಿಸ ಬಹುದಾದ್ದರಿಂದ ಈಶ್ವರಸಾಧಕಾನುಮಾನ ಅಪ್ರಯೋಜಕ.

## ಅವತಾರಿಕೆ

**यद्येकत्वानामनेकत्वेनापरितोषं मन्यसे तर्हि क्लृप्तत्वाद् द्रव्यारम्भकमेव परिमाणारम्भकमस्तु । किं सङ्ख्ययाऽपीत्याह—किञ्चेति ।**

ಒಂದುವೇಳೆ ಏಕತ್ವಗಳು ಅನೇಕವಾಗಿವೆ, ಅವುಗಳಿಗೆ ಪರಿಮಾಣಹೇತುತ್ವ-ಕಲ್ಪನೆ ಗೌರವ, ಎಂಬ ಅಸಮಾಧಾನವಿದ್ದಲ್ಲಿ ಏಕತ್ವಗಳು ಕಾರಣವಾಗುವುದು ಬೇಡ. ದ್ರವ್ಯಜನಕತ್ವೇನ ಕ್ಲೃಪ್ತವಾದ ಅವಯವಸಂಯೋಗಗಳೇ ಪರಿಮಾಣಗಳಿಗೆ ಕಾರಣ, ಎಂದು ಹೇಳಿದರಾಯಿತು. ಏವಂ ಚ ದ್ವ್ಯಣುಕ ಪರಿಮಾಣಕ್ಕೆ ಪರಮಾಣುದ್ವಯಸಂಯೋಗ ಕಾರಣ, ತ್ರ್ಯಣುಕಪರಿಮಾಣಕ್ಕೆ ದ್ವ್ಯಣುಕಗಳ ಸಂಯೋಗವು ಕಾರಣವೆಂದಾಗಲಿ. ಸಂಖ್ಯಾದ ಅಗತ್ಯವಿಲ್ಲ, ಎಂದು 'ಕಿಂಚ' ಎಂಬ ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किंच, द्रव्यारम्भकत्वेन क्लृप्तस्य त्वदुक्तसङ्ख्याविपरीतस्यैकस्य संयोगस्यैव परिमाणहेतुता कल्प्या । नियतपूर्ववृत्तित्वेन क्लृप्ते तस्मिन्ननन्यथासिद्धिमात्रकल्पने लाघवात् । नतु द्वित्वस्य । तत्स्वरूपस्य, अनन्यथासिद्धि–नियम–पूर्ववृत्तित्वानां च कल्पने गौरवात् ।।**

ಇಷ್ಟೇ ಅಲ್ಲ, ದ್ವಿತ್ವ ಸಂಖ್ಯೆಗಿಂತಲೂ ದ್ವ್ಯಣಕ್ಕೆ ಆರಂಭಕವಾಗಿ ಸಿದ್ಧವಾದ ಪರಮಾಣುದ್ವಯ ಸಂಯೋಗವನ್ನೇ ತದ್ಗತವಾದ ಪರಿಮಾಣಕ್ಕೂ ಕಾರಣವೆಂದು ಹೇಳುವುದು ಲಾಘವ. ಏಕೆಂದರೆ, ಆ ಸಂಯೋಗವು ಪರಿಮಾಣನಿಯತಪೂರ್ವವೃತ್ತಿಯೆಂದು ಸಿದ್ಧವಾಗಿದೆ, ಅದರಲ್ಲಿ ಅನನ್ಯಥಾ ಸಿದ್ಧತ್ವವನ್ನಷ್ಟೇ ಕಲ್ಪನೆ ಮಾಡುವುದು ಲಾಘವ. ದ್ವಿತ್ವಕ್ಕೆ ಪರಿಮಾಣ ಕಾರಣತ್ವಕಲ್ಪನೆ ಗೌರವ. ದ್ವಿತ್ವದ ಸ್ವರೂಪವನ್ನೂ ಅದಕ್ಕೆ ಅನನ್ಯಥಾಸಿದ್ಧತ್ವವನ್ನೂ ನಿಯತತ್ವವನ್ನೂ ಪೂರ್ವವೃತ್ತಿತ್ವವನ್ನೂ ಕಲ್ಪಿಸಬೇಕಾಗುತ್ತದೆ, ಅದು ಗೌರವ. ಆದ್ದರಿಂದಲೂ ಈಶ್ವರಾನುಮಾನ ಅಪ್ರಯೋಜಕ.

## ನ್ಯಾಯದೀಪ

**एकस्येति ।** त्र्यणुकारम्भक–द्व्यणुकत्रयसंयोगस्यानेकत्वेऽपि द्व्यणुकारम्भक–परमाणुद्वयसंयोगस्यैकत्वादेकस्येत्युक्तम् । अत एवाग्रे ''नतु द्वित्वस्य'' इत्येवोक्तिः ।।

**ननु द्रव्योत्पत्तावन्यथासिद्धस्य कथं परिमाणहेतुतेत्यत आह— नियतेति । अनन्यथेति । अनन्यथासिद्धिश्च नियमश्च पूर्ववृत्तित्वं च तेषामिति विग्रहः ।**

ತ್ರ್ಯಣುಕಕ್ಕೆ ಜನಕವಾಗಿರುವ ದ್ವ್ಯಣುಕತ್ರಯಗಳ ಸಂಯೋಗಗಳು ಅನೇಕಗಳಾದರೂ ದ್ವ್ಯಣುಕಕ್ಕೆ ಕಾರಣವಾದ ಪರಮಾಣುದ್ವಯಸಂಯೋಗವು ಒಂದೇ ಆಗಿದೆ. ಆದ್ದರಿಂದ ಮೂಲದಲ್ಲಿ 'ಏಕಸ್ಯ ಸಂಯೋಗಸ್ಯ' ಎನ್ನಲಾಗಿದೆ. ಗೌರವವನ್ನು ಹೇಳುವಾಗಲೂ 'ನ ತು ದ್ವಿತ್ವಸ್ಯ' ಎಂದು ಮಾತ್ರ ಹೇಳಲಾಗಿದೆ. ತ್ರಿತ್ವವನ್ನು ಹೇಳಿಲ್ಲ. ಹೀಗೆ, ಇಲ್ಲಿ ದ್ವಿತ್ವಕ್ಕೆ ಮಾತ್ರ ಆರಂಭಕತ್ವವನ್ನು ನಿರಾಕರಿಸಲಾಗಿದೆ.

ಪರಮಾಣುದ್ವಯಸಂಯೋಗವು ದ್ವ್ಯಣುಕರೂಪದ್ರವ್ಯದ ಉತ್ಪತ್ತಿಗೆ ಕಾರಣವಾಗಿ ಕ್ಲೃಪ್ತ ವಾಗಿರುವುದರಿಂದ ಅದು ಪರಿಮಾಣಕ್ಕೆ ಅನ್ಯಥಾಸಿದ್ಧವಾಗಿದೆ. ಅಂದಮೇಲೆ ಅದಕ್ಕೆ ಪರಿಮಾಣ ಕಾರಣತ್ವವನ್ನು ಹೇಳುವುದು ಹೇಗೆ? ಅದಕ್ಕೆ ಮೂಲದಲ್ಲಿ ಸಮಾಧಾನ—'ನಿಯತಪೂರ್ವ' ಇತ್ಯಾದಿವಾಕ್ಯ. ಅದಕ್ಕೆ ನಿಯತಪೂರ್ವವೃತ್ತಿತ್ವವು ಸಿದ್ಧವಾಗಿರುವುದರಿಂದ ಅನನ್ಯಥಾಸಿದ್ಧತ್ವವನ್ನು ಮಾತ್ರ ಕಲ್ಪನೆಮಾಡಿದರೆ ಸಾಕು, ಎಂದು ಭಾವ.

## ಅವತಾರಿಕೆ

**द्वित्वजन्यत्वेऽपि परिमाणस्य नेश्वरसिद्धिरित्याह-किञ्चेदानींतनेति ।**

ದ್ವ್ಯಣುಕಪರಿಮಾಣವು ಪರಮಾಣುಗತದ್ವಿತ್ವದಿಂದಲೇ ಹುಟ್ಟಿದೆ, ಎಂದು ಅಂಗೀಕರಿಸಿದರೂ ಉಕ್ತಾನುಮಾನದಿಂದ ಈಶ್ವರಸಿದ್ಧಿಯಾಗುವುದಿಲ್ಲ ಎಂದು ಮುಂದಿನ ಮೂಲದಲ್ಲಿ ಹೇಳಲಾಗಿದೆ.

**किञ्च, इदानींतनब्राह्मणस्य ब्राह्मणपूर्वकत्वेऽपि सर्गादिकालीनस्य तस्यादृष्टविशेषोपहितभूतपूर्वकत्ववत् इदानींतनद्वित्वादेः अपेक्षाबुद्धिजन्यत्वेऽप्यादिकालीनस्य अदृष्टविशेषोपहितपरमाणुमात्रपूर्वकत्वमस्तु । अन्यथा नित्यापेक्षाबुद्धिवन्नित्यब्राह्मणोऽपि कल्प्यः स्यात् ॥**

ಇನ್ನೊಂದು ರೀತಿಯಿಂದಲೂ ಅಪ್ರಯೋಜಕತ್ವವನ್ನು ಹೇಳಬಹುದು— ಸೃಷ್ಟಿಯ ಅನಂತರದಲ್ಲಿ ಇರುವ ಬ್ರಾಹ್ಮಣನಿಗೆ ಬ್ರಾಹ್ಮಣನೇ ತಂದೆಯಾದರೂ ಆರಂಭದ ಬ್ರಾಹ್ಮಣನಿಗೆ ಬ್ರಾಹ್ಮಣ ತಂದೆ ಇಲ್ಲ. ಅದೃಷ್ಟವಿಶೇಷಸಹಕೃತವಾದ ಪಂಚಭೂತಗಳಿಂದಲೇ ಬ್ರಾಹ್ಮಣಶರೀರವು ಹುಟ್ಟುತ್ತದೆ, ಎಂದು ತಾರ್ಕಿಕರು ಹೇಳಬೇಕಾಗುತ್ತದೆ. ಅದರಂತೆ, ಸೃಷ್ಟ್ಯುತ್ತರಕಾಲದ ದ್ವಿತ್ವವು ಅಪೇಕ್ಷಾಬುದ್ಧಿಯಿಂದ ಜನ್ಯವಾದರೂ ಸೃಷ್ಟಿಕಾಲದ ಪರಮಾಣುಗತವಾದ ದ್ವಿತ್ವವು

ಅದೃಷ್ಟವಿಶೇಷಸಹಿತವಾದ ಪರಮಾಣುಗಳಿಂದಲೇ ಹುಟ್ಟುತ್ತದೆ. ಅಪೇಕ್ಷಾಬುದ್ಧಿಯೇ ಬೇಕಾಗಿಲ್ಲ. ಅಲ್ಲಿ ಅಪೇಕ್ಷಾಬುದ್ಧಿಯೇ ಬೇಕೆಂದು ಆಗ್ರಹಮಾಡಿ ಈಶ್ವರನಿಗೆ ನಿತ್ಯವಾದ ಅಪೇಕ್ಷಾಬುದ್ಧಿಯನ್ನು ಕಲ್ಪನೆ ಮಾಡುವುದಾದಲ್ಲಿ ಆರಂಭದ ಬ್ರಾಹ್ಮಣನಿಗೆ ಕಾರಣವಾದ ನಿತ್ಯಬ್ರಾಹ್ಮಣನನ್ನೂ ತುಲ್ಯನ್ಯಾಯೇನ ಕಲ್ಪಿಸಬೇಕಾದೀತು!

**युक्तं चैतत् । अन्यथा समवाय्यपेक्षाबुद्धिनाशरूपयोः परमाणुवृत्ति-द्वित्वनाशहेत्वोरभावेन तन्नाशाभावापातात् । अदृष्टविशेषोपहिताया ईश्वरनिष्ठापेक्षाबुद्धेर्हेतुत्वेन तन्नाशाद् द्वित्वनाशे आवश्यकत्वात् अदृष्ट-विशेष एव हेतुरस्तु । नचैवमननुगमः । ब्राह्मणवद् वैजात्यसंभवात् ॥**

ದ್ವಿತ್ವವು ಅಪೇಕ್ಷಾಬುದ್ಧಿಜನ್ಯವಲ್ಲ, ಎಂದು ಕಲ್ಪನೆ ಮಾಡುವುದೇ ಉಚಿತ. ಅದು ಅಪೇಕ್ಷಾಬುದ್ಧಿಜನ್ಯವಾದರೆ ಆ ಬುದ್ಧಿ ಈಶ್ವರನದಾದ್ದರಿಂದ ಅದು ನಿತ್ಯವೆನ್ನಬೇಕು. ಅಲ್ಲಿಗೆ ದ್ವಿತ್ವನಿಮಿತ್ತವಾದ ಅಪೇಕ್ಷಾಬುದ್ಧಿಯೂ ನಿತ್ಯ, ಸಮವಾಯಿಕಾರಣವಾದ ಪರಮಾಣುಗಳೂ ನಿತ್ಯ. ಅವೆರಡರ ನಾಶವೂ ಇಲ್ಲವಾದುದರಿಂದ ದ್ವಿತ್ವನಾಶಕ್ಕೆ ಕಾರಣವೇ ಇಲ್ಲ. ಆಗ ದ್ವಿತ್ವದ ನಾಶವೇ ಇಲ್ಲ, ಎನ್ನಬೇಕಾಗುತ್ತದೆ.

**ಆಕ್ಷೇಪ**—ಪರಮಾಣುದ್ವಿತ್ವಕ್ಕೆ ಅದೃಷ್ಟೋಪಹಿತವಾದ ಈಶ್ವರಾಪೇಕ್ಷಾಬುದ್ಧಿಯೇ ಕಾರಣ. ಆ ಅದೃಷ್ಟವಿಶೇಷದ ನಾಶದಿಂದ ದ್ವಿತ್ವವೂ ನಾಶವಾಗುತ್ತದೆ.

**ಸಮಾಧಾನ**—ಹೀಗೆ ಅದೃಷ್ಟವು ಅನಿವಾರ್ಯವೆಂದಾದ ಮೇಲೆ ಆ ಅದೃಷ್ಟವನ್ನೇ ದ್ವಿತ್ವಕ್ಕೆ ನಿಮಿತ್ತಕಾರಣ ಎಂದರಾಯ್ತು, ಅಪೇಕ್ಷಾಬುದ್ಧಿಯ ಅಗತ್ಯವೇನು?

**ಆಕ್ಷೇಪ**—ಹೀಗೆ ಹೇಳಿದರೆ, ಅನನುಗಮದೋಷ ಬರುತ್ತದೆ. ಆದ್ಯಕಾಲೀನ ದ್ವಿತ್ವಕ್ಕೆ ಅದೃಷ್ಟವಿಶೇಷವು ಕಾರಣ, ಮುಂದಿನ ದ್ವಿತ್ವಗಳಿಗೆ ಅಪೇಕ್ಷಾಬುದ್ಧಿಯು ಕಾರಣ. ಹೀಗೆ, ಒಂದೇ ಕಾರ್ಯಕ್ಕೆ ವಿಲಕ್ಷಣಕಾರಣದ್ವಯಗಳನ್ನು ಅಂಗೀಕರಿಸಬೇಕಾಗುತ್ತದೆ.

**ಸಮಾಧಾನ**—ಇದನ್ನು ಅನಿವಾರ್ಯವಾಗಿ ಒಪ್ಪಲೇಬೇಕು. ಸರ್ಗಾದ್ಯಕಾಲೀನ ಬ್ರಾಹ್ಮಣ ದೇಹಕ್ಕೆ ಅದೃಷ್ಟಸಹಕೃತ-ಪಂಚಭೂತಗಳು ಕಾರಣಗಳು. ಅನಂತರದ ಬ್ರಾಹ್ಮಣಶರೀರಗಳಿಗೆ ಬ್ರಾಹ್ಮಣದಂಪತಿಗಳು ಕಾರಣ, ಎಂದು.

ಹೀಗೆ ದ್ವ್ಯಣುಕಪರಿಮಾಣವು ದ್ವಿತ್ವಜನ್ಯವೆಂದಾದರೂ ಅದಕ್ಕೆ ಅಪೇಕ್ಷಾಬುದ್ಧಿಯನ್ನು ಕಾರಣ, ಎಂದು ಹೇಳಬೇಕಾಗಿಲ್ಲ.

## न्यायदीप

''ब्राह्मण्यां ब्राह्मणाज्जातो ब्राह्मणः परिकीर्तितः'' ।

इति स्मृतेराह–**ब्राह्मणस्येति** । **भूतेति** । पृथिव्यादिपञ्चमहाभूतेत्यर्थः । 'सर्गादावदृष्टोपगृहीतभूतभेदान्मीनादिशरीरोत्पत्तौ'इत्यादिमणिकृदाद्युक्तेरिति भावः ।

वैजात्ये समानेऽपि कोऽत्र पक्षे विशेष इत्यत आह—**युक्तं चैतदिति** । **अन्यथेति** । नित्येश्वरापेक्षाबुद्धिजन्यत्व इत्यर्थः । **तन्नाशेति** । द्वित्वनाशेत्यर्थः । ईश्वरापेक्षाबुद्धेर्नित्यत्वादविनाशेऽपि तदुत्पादित द्वित्वादेः निमित्तान्तरनाशेन नाश इति वर्धमानोक्तमाशङ्क्य निराह— **अदृष्टेति** । **तन्नाशेति** । अदृष्टनाशेत्यर्थः । **नचैवमिति** । क्वचिद् अदृष्टोपहितपरमाणुपूर्वकत्वे क्वचिदपेक्षाबुद्धिपूर्वकत्वे च सतीत्यर्थः । **ब्राह्मणवदिति** । आदिकालीनब्राह्मणस्य कारणवैजात्यवदिहापि संभवादित्यर्थः । यद्वा, तृणारणिमणिन्यायेन, अदिकालीनेदानींतनयोर्ब्राह्मणयोर्भिन्नकारणजन्ययोः वैजात्यवदिहाप्युपपत्तेरित्यर्थः ।

ಬ್ರಾಹ್ಮಣನಿಂದ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದವನು ಬ್ರಾಹ್ಮಣನೆನಿಸುತ್ತಾನೆ, ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ ಮೂಲದಲ್ಲಿ 'ಬ್ರಾಹ್ಮಣಸ್ಯ ಬ್ರಾಹ್ಮಣಪೂರ್ವಕತ್ವೇಽಪಿ' ಎಂದು ಹೇಳಲಾಗಿದೆ.

ದ್ವಿತ್ವಕಾರಣವಾಗಿ ಈಶ್ವರಾಪೇಕ್ಷಾಬುದ್ಧಿಯನ್ನೂ ಕಲ್ಪಿಸಬಹುದು, ಅದೃಷ್ಟವನ್ನೂ ಕಲ್ಪಿಸಬಹುದು. ಇವೆರಡು ಕಲ್ಪನೆಗಳೂ ಸಮಾನವಾಗಿರುವಾಗ ಅದೃಷ್ಟಕಲ್ಪನಾಪಕ್ಷದಲ್ಲಿ ವಿಶೇಷವೇನು? ಅದಕ್ಕೆ ಮೂಲದಲ್ಲಿ 'ಯುಕ್ತಂ ಚೈತತ್' ಎಂದು ಸಮಾಧಾನ ನೀಡಲಾಗಿದೆ. ದ್ವಿತ್ವಕ್ಕೆ ನಾಶವಿಲ್ಲದಾಗಬೇಕಾಗುತ್ತದೆ, ಎನ್ನುವ ಅನುಪಪತ್ತಿ ಇರುವುದರಿಂದ ಅಪೇಕ್ಷಾಬುದ್ಧಿಕಲ್ಪನಾಪಕ್ಷ ಯುಕ್ತವಲ್ಲ, ಎಂದು ಅಭಿಪ್ರಾಯ.

ಕಾರಣವೈಜಾತ್ಯವನ್ನಾದರೂ ದ್ವಿತ್ವಕ್ಕೆ ಕಲ್ಪಿಸಬಹುದು, ಅಥವಾ ತೃಣಾರಣಿಮಣಿನ್ಯಾಯದಂತೆ

ವಹ್ನಿಯಲ್ಲಿ ವೈಜಾತ್ಯವನ್ನು ಕಲ್ಪಿಸುವಂತೆ ದ್ವಿತ್ವರೂಪಕಾರ್ಯದಲ್ಲಾದರೂ ವೈಜಾತ್ಯವನ್ನು ಕಲ್ಪಿಸಬಹುದು.

## ಅವತಾರಿಕೆ

**द्वित्वादेरपेक्षाबुद्धिजन्यत्वमभ्युपेत्योक्तम् । वस्तुतस्तदेव नास्ति । येन तदाश्रयतयेश्वरसिद्धिः स्यादित्याह—किञ्चेति ।**

ಇದುವರೆಗೆ ದ್ವಿತ್ವಾದಿಸಂಖ್ಯೆಗಳು ಅಪೇಕ್ಷಾಬುದ್ಧಿಯಿಂದ ಜನ್ಯವಾಗುತ್ತವೆ, ಎನ್ನುವ ತಾರ್ಕಿಕಸಿದ್ಧಾಂತವನ್ನು ಅಂಗೀಕರಿಸಿ ಈಶ್ವರಾನುಮಾನವನ್ನು ನಿರಾಕರಿಸಲಾಗಿದೆ. ವಸ್ತುತಃ ಈ ಸಿದ್ಧಾಂತವೇ ಸರಿಯಲ್ಲ. ಅದು ಸರಿಯಾಗಿದ್ದಿದ್ದರೆ ತದಾಶ್ರಯತಯಾ ಈಶ್ವರ ಸಿದ್ಧಿಯಾಗುತ್ತಿತ್ತು, ಎಂದು ಮುಂದಿನ ಗ್ರಂಥದಲ್ಲಿ ಹೇಳಲಾಗಿದೆ.

**किंच, द्वित्वादेरपेक्षाबुद्धिजन्यतैव न। अन्वयव्यतिरेकानुविधानस्य व्यञ्जकत्वेनाप्युपपत्तेः । नचाविनिगमः । सेनादिबुद्ध्यालम्बनस्येयत्तयाऽनिश्चितानेकैकत्वबुद्धिजन्यस्य बहुत्वस्य सत्त्वेऽपि इयत्तया विनिश्चितैकत्वबुद्धिरूपव्यञ्जकाभावेन शतत्वाद्यप्रतीत्या व्यञ्जकत्वस्य त्वयाऽपि स्वीकारात् ।।**

ವಸ್ತುತಃ, ದ್ವಿತ್ವಾದಿಸಂಖ್ಯೆಗಳು ಅಪೇಕ್ಷಾಬುದ್ಧಿಯಿಂದ ಜನ್ಯವಾಗುತ್ತವೆ, ಎನ್ನುವುದೇ ಸರಿಯಲ್ಲ. ಯದ್ಯಪಿ, ಅಪೇಕ್ಷಾಬುದ್ಧಿ ಇದ್ದರೆ ಮಾತ್ರ ದ್ವಿತ್ವಜ್ಞಾನ ಬರುತ್ತದೆ. ತಾವತಾ ಅಪೇಕ್ಷಾ ಬುದ್ಧಿಯು ದ್ವಿತ್ವಕ್ಕೆ ಕಾರಣ, ಎಂದೇನೂ ಹೇಳಬೇಕಾಗಿಲ್ಲ. ದ್ವಿತ್ವಜ್ಞಾನಕ್ಕೆ ಅದು ಕಾರಣವಾಗಿರುವುದರಿಂದಲೇ ಅನ್ವಯ–ವ್ಯತಿರೇಕಗಳನ್ನು ಕೂಡಿಸಬಹುದು.

**ಆಕ್ಷೇಪ**—ಇದಕ್ಕೆ ವಿನಿಗಮಕವೇನು? ಅನ್ವಯ–ವ್ಯತಿರೇಕವಿರುವುದರಿಂದ ಅಪೇಕ್ಷಾ ಬುದ್ಧಿಯು ದ್ವಿತ್ವಜ್ಞಾನಕ್ಕೇ ಕಾರಣ, ದ್ವಿತ್ವಕ್ಕಲ್ಲ, ಎಂದು ನಿರ್ಧಾರಮಾಡುವುದು ಹೇಗೆ?

**ಸಮಾಧಾನ**—''ಇಯಂ ಮಹತೀ ಸೇನಾ'' ಎಂಬ ಜ್ಞಾನಕ್ಕೆ ಯೋಧರಲ್ಲಿ ಬಹುತ್ವಜ್ಞಾನವು ಕಾರಣ. ಸೇನೆಯಲ್ಲಿರುವ ಯೋಧರಿಗೆ ಇಯತ್ತಾ ಇಲ್ಲದಿರುವುದರಿಂದ 'ಅಯಮೇಕಃ, ಅಯಮೇಕಃ' ಎಂಬ ಏಕತ್ವ ಬುದ್ಧಿಯು ಎಷ್ಟೆಂದು ನಿರ್ಧರಿಸಲು ಸಾಧ್ಯವಿಲ್ಲ. ಆದ್ದರಿಂದ ಅಲ್ಲಿ ಸಂಖ್ಯೆಯ ನಿರ್ಧಾರವಾಗದೆ ಬಹುತ್ವಬುದ್ಧಿಯು ಹುಟ್ಟುತ್ತದೆ. ಆದರೆ, ಶತತ್ವ ಸಂಖ್ಯಾಬುದ್ಧಿ ಹೀಗಲ್ಲ, ಅಲ್ಲಿ 'ಇದಮೇಕಂ' ಎಂಬ ಏಕತ್ವಬುದ್ಧಿಗೆ ಇಯತ್ತಾ ಇದೆ. ಅಂತಹ ನೂರು

ಏಕತ್ವಬುದ್ಧಿಗಳು ಬರದಿದ್ದರೆ ಶತತ್ವಬುದ್ಧಿಯೇ ಹುಟ್ಟುವುದಿಲ್ಲ. ಇಂತಹ ಸಂದರ್ಭದಲ್ಲಿ ಅಪೇಕ್ಷಾಬುದ್ಧಿಯು ಶತತ್ವಬುದ್ಧಿಗೇ ವ್ಯಂಜಕ, ಎಂದು ತಾರ್ಕಿಕರೂ ಒಪ್ಪಿದ್ದಾರೆ. ಇದರಂತೆಯೆ, ಅಪೇಕ್ಷಾಬುದ್ಧಿಯು ದ್ವಿತ್ವಾದಿಬುದ್ಧಿಗೇ ಕಾರಣ ಹೊರತು, ದ್ವಿತ್ವಾದಿಸಂಖ್ಯೆಗಳಿಗೆ ಕಾರಣವಲ್ಲ.

## ನ್ಯಾಯದೀಪ

**तदन्वयाद्यनुविधानात् कथमित्यत आह—अन्वयेति ।**

ದ್ವಿತ್ವಾದಿಗಳೊಂದಿಗೆ ಅಪೇಕ್ಷಾಬುದ್ಧಿಯ ಅನ್ವಯ-ವ್ಯತಿರೇಕಾನುವಿಧಾನವಿದೆ. ಹೀಗಿರುವಾಗ ಅಪೇಕ್ಷಾಬುದ್ಧಿಯು ದ್ವಿತ್ವಾದಿಗಳಿಗೆ ಕಾರಣವಲ್ಲ ಎನ್ನುವುದು ಹೇಗೆ? ಅದಕ್ಕೆ 'ಅನ್ವಯ-ವ್ಯತಿರೇಕ' ಎಂಬ ವಾಕ್ಯ ಉತ್ತರ.

## ಅವತಾರಿಕೆ

**एवमुत्प्रेक्ष्य स्वयं पक्षचतुष्टयमुक्त्वा इदानीं—**

**''महत्त्वं चैव दीर्घत्वं त्र्यणुकाद्येषु कल्पितम् ।**
**तस्माच्च सदृशं कार्यं तत्कार्येषूपजायते ।।**
**यथा तथैव ह्रस्वत्वात् पारिमाण्डल्यतोऽपि हि ।**
**जायेत सदृशं कार्ये परिमाणं समत्वतः'' ।।**

**इत्यादिवैशेषिकाधिकरणानुव्याख्यानोक्तसमाधिमाह—वस्तुतस्त्वि-ति ।**

ಹೀಗೆ ಗ್ರಂಥಕಾರರು ಸ್ವೋತ್ಪ್ರೇಕ್ಷಿತವಾದ ನಾಲ್ಕು ಪಕ್ಷಗಳನ್ನು ಇದುವರೆಗೆ ಹೇಳಿದ್ದಾರೆ—

1. ದ್ವ್ಯಣುಕ-ತ್ರ್ಯಣುಕಪರಿಮಾಣಗಳಿಗೆ ಏಕತ್ವಗಳೇ ಕಾರಣ.
2. ಸಂಖ್ಯಾಕಾರಣವೇ ಅಲ್ಲ. ದ್ರವ್ಯಾರಂಭಕತ್ವೇನ ಕ್ಲೃಪ್ತವಾದ ಅವಯವ ಸಂಯೋಗವೇ ಕಾರಣ.
3. ಇಂದಿನ ದ್ವಿತ್ವಾದಿಗಳಿಗೆ ಅಪೇಕ್ಷಾಬುದ್ಧಿಕಾರಣವಾದರೂ ಸರ್ಗಾದ್ಯಕಾಲೀನ ದ್ವಿತ್ವಕ್ಕೆ ಅದೃಷ್ಟವಿಶೇಷಸಹಕೃತವಾದ ಪರಮಾಣುಗಳೇ ಕಾರಣ.
4. ಅಪೇಕ್ಷಾಬುದ್ಧಿಯು ದ್ವಿತ್ವಕ್ಕೆ ಕಾರಣವಲ್ಲ, ದ್ವಿತ್ವಜ್ಞಾನಕ್ಕೆ ಕಾರಣ.

ಮುಂದೆ ಅನುವ್ಯಾಖ್ಯಾನದಲ್ಲಿ (2.2.11) ಆಚಾರ್ಯರು ಹೇಳಿರುವ ವಾಸ್ತವ ಕಾರಣವನ್ನು ಹೇಳಿದ್ದಾರೆ. ವೈಶೇಷಿಕಾಧಿಕರಣದಲ್ಲಿರುವ ಅನುವ್ಯಾಖ್ಯಾನದ ಭಾವಾರ್ಥ ಹೀಗಿದೆ— "ತ್ರ್ಯಣುಕಾದಿದ್ರವ್ಯಗಳಲ್ಲಿ ಮಹತ್ವ ಮತ್ತು ದೀರ್ಘತ್ವಗಳನ್ನು ನಾವು ಕಲ್ಪಿಸಿದ್ದು. ಅವುಗಳಲ್ಲಿ ದ್ರವ್ಯಾಂತರಾಪೇಕ್ಷಯಾ ಅಣುತ್ವ-ಹ್ರಸ್ವತ್ವಗಳೂ ಇವೆ. ಅವುಗಳಿಂದ ತ್ರ್ಯಣುಕದ ಕಾರ್ಯವಾದ ಚತುರಣುಕದಲ್ಲಿ ತತ್‌ಪರಿಮಾಣ ಸದೃಶವಾದ ಪರಿಮಾಣವು ಹುಟ್ಟುತ್ತದೆ. ಇದರಂತೆ, ಎಲ್ಲಾ ಕಾರ್ಯದ್ರವ್ಯಗಳಲ್ಲಿ ಕಾರಣದ್ರವ್ಯಪರಿಮಾಣ-ಸದೃಶಪರಿಮಾಣಗಳು ಹುಟ್ಟುತ್ತವೆ.

ಹೀಗೆ, ಮಹದ್ದ್ರವ್ಯಗಳಲ್ಲಿ ಹೇಗೋ ಹಾಗೆಯೇ ಪರಮಾಣು ಮತ್ತು ದ್ವ್ಯಣುಕಗಳಲ್ಲಿರುವ ಅಣುತ್ವ-ಹ್ರಸ್ವತ್ವಗಳಿಂದಲೇ ತತ್ತತ್ಕಾರ್ಯಗಳಲ್ಲಿ ಸದೃಶವಾದ ಪರಿಮಾಣಗಳು ಹುಟ್ಟುತ್ತವೆ" ಎಂದು.

**वस्तुतस्तु, द्व्यणुकादिपरिमाणं त्वदुक्तसङ्ख्याविपरीतपरिमाण-जन्यमेव। 'परमाणुद्व्यणुकपरिमाणं परिमाणारम्भकं, द्रव्यसमवायि-कारणपरिमाणत्वात्, त्र्यणुकपरिमाणवत्'इत्याद्यनुमानात् ।।**

ವಸ್ತುತಃ, ದ್ವ್ಯಣುಕ-ತ್ರ್ಯಣುಕ ಪರಿಮಾಣಗಳೂ ನೈಯಾಯಿಕರು ಹೇಳುವಂತೆ ಸಂಖ್ಯಾಜನ್ಯಗಳಲ್ಲ. ಎಲ್ಲ ಪರಿಮಾಣಗಳಂತೆ ಅವುಗಳಿಗೂ ತತ್ತದವಯವ-ಪರಿಮಾಣಗಳೇ ಕಾರಣಗಳು. ಅದನ್ನು ಹೀಗೆ ಅನುಮಾನ ಮಾಡಬಹುದು—

**ಪಕ್ಷ**—ಪರಮಾಣುಗತ ಪರಿಮಾಣ ಮತ್ತು ದ್ವ್ಯಣುಕಗತಪರಿಮಾಣಗಳು.

**ಸಾಧ್ಯ**—ಪರಿಮಾಣ ಜನಕವಾಗಿವೆ.

**ಹೇತು**—ದ್ರವ್ಯಕ್ಕೆ ಸಮವಾಯಿಕಾರಣವಾದ ದ್ರವ್ಯದಲ್ಲಿರುವ ಪರಿಮಾಣಗಳಾದುದರಿಂದ.

**ವಿವರಣೆ**—ಪರಮಾಣು ದ್ವ್ಯಣುಕಕ್ಕೆ ಉಪಾದಾನ, ದ್ವ್ಯಣುಕ ತ್ರ್ಯಣುಕಕ್ಕೆ ಸಮವಾಯಿ ಕಾರಣ. ಹೀಗೆ, ಪರಮಾಣುಪರಿಮಾಣ ಮತ್ತು ದ್ವ್ಯಣುಕಪರಿಮಾಣಗಳೆರಡೂ ಸಮವಾಯಿ ಕಾರಣಗತವಾದ ಪರಿಮಾಣಗಳಾಗಿವೆ. ಅಂತಹ ಪರಿಮಾಣಗಳು ಸ್ವಾರಬ್ಧದ್ರವ್ಯಪರಿಮಾಣಕ್ಕೆ ಕಾರಣವಾಗಿರುವುದು ಕಂಡಿದೆ. ಉದಾಹರಣೆಗೆ, ತ್ರ್ಯಣುಕಪರಿಮಾಣ. ಅದರಿಂದ ಆರಬ್ಧವಾದ ದ್ರವ್ಯ ಚತುರಣುಕ. ತದ್ಗತಪರಿಮಾಣಕ್ಕೆ ತ್ರ್ಯಣುಕಪರಿಮಾಣವು ಕಾರಣವಾಗಿದೆ. ಅದರಂತೆ, ಪರಮಾಣು ಪರಿಮಾಣ ದ್ವ್ಯಣುಕ ಪರಿಮಾಣಕ್ಕೆ, ದ್ವ್ಯಣುಕಪರಿಮಾಣವು ತ್ರ್ಯಣುಕಪರಿಮಾಣಕ್ಕೆ ಕಾರಣವಾಗಬೇಕು. ನೈಯಾಯಿಕರು, ಅವುಗಳು ಅಣುತ್ವಾದಿನಾ ಸಜಾತೀಯಗಳಲ್ಲವಾದುದರಿಂದ ಪರಿಮಾಣಾರಂಭಕಗಳಲ್ಲ ಎನ್ನುತ್ತಾರೆ. ಆದರೆ, ಅಣುತ್ವ ಮಹತ್ವಗಳು ಸಾಪೇಕ್ಷಗಳು. ಒಂದೇ ವಸ್ತು ಮಹತ್ ಪದಾರ್ಥಾಪೇಕ್ಷಯಾ ಅಣುವಾದರೆ ಅಣುವಸ್ತುವಿನ ಅಪೇಕ್ಷಯಾ ಅದೇ

ವಸ್ತು ಮಹತ್ತಾಗಬಹುದು. ಆದ್ದರಿಂದ ಒಂದು ವಸ್ತುವಿನಲ್ಲಿ ಯಾವುದೇ ಪರಿಮಾಣವು ನಿರ್ದಿಷ್ಟವಾದುದಲ್ಲ. ಇದು ವೈಶೇಷಿಕಾಧಿಕರಣ ಸುಧೋಕ್ತಾನುಮಾನದ ಅಭಿಪ್ರಾಯ.

**नच 'परमाणुपरिमाणं परिमाणानारम्भकं, नित्यपरिमाणत्वात् गगनपरिमाणवत्, अणुपरिमाणत्वात् मनःपरिमाणवत्'इत्यनेन सत्प्रतिपक्षता । द्रव्यसमवायिकारण–परिमाणत्वाभावस्योपाधित्वात्।।**

**ಆಕ್ಷೇಪ**—ಹಿಂದಿನ ಅನುಮಾನಕ್ಕೆ ಪ್ರತಿಕೂಲವಾಗಿ ಎರಡು ಅನುಮಾನಗಳಿವೆ.

**ಪಕ್ಷ**—ಪರಮಾಣು ಪರಿಮಾಣವು.

**ಸಾಧ್ಯ**—ಪರಿಮಾಣಕ್ಕೆ ಜನಕವಲ್ಲ.

**ಹೇತು**—ನಿತ್ಯಪರಿಮಾಣವಾದುದರಿಂದ.

**ದೃಷ್ಟಾಂತ**—ಗಗನಪರಿಮಾಣದಂತೆ.

**ಹೇತು-2**—ಅಣು ಪರಿಮಾಣವಾದುದರಿಂದ.

**ಉದಾಹರಣೆ**—ಮನಸ್ಸಿನ ಪರಿಮಾಣದಂತೆ.

**ಸಮಾಧಾನ**—ಈ ಎರಡೂ ಅನುಮಾನಗಳಿಗೆ ಉಪಾಧಿದೋಷವಿದೆ. 'ದ್ರವ್ಯಸಮವಾಯಿ ಕಾರಣ—ಪರಿಮಾಣತ್ವಾಭಾವ' ಇದು ಉಪಾಧಿ. ಗಗನವಾಗಲೀ, ಮನಸ್ಸಾಗಲೀ ದ್ರವ್ಯಾಂತರಕ್ಕೆ ಸಮವಾಯಿಕಾರಣಗಳಾಗಿಲ್ಲ. ಆಗಿದ್ದಲ್ಲಿ ತದಾರಬ್ಧ–ದ್ರವ್ಯಪರಿಮಾಣಕ್ಕೆ ಗಗನ ಮತ್ತು ಮನಸ್ಸಿನ ಪರಿಮಾಣಗಳು ಕಾರಣಗಳಾಗುತ್ತಿದ್ದವು. ಆದ್ದರಿಂದ, ಅವುಗಳಲ್ಲಿ ದ್ರವ್ಯಸಮವಾಯಿಕಾರಣ ಪರಿಮಾಣತ್ವಾಭಾವ ಇದೆ, ಪರಿಮಾಣಾನಾರಂಭಕತ್ವವೂ ಇದೆ.

ಆದರೆ, ಪರಮಾಣು ದ್ರವ್ಯಾರಂಭಕವಾಗಿದೆ, ದ್ವ್ಯಣುಕವೂ ತ್ರ್ಯಣುಕರೂಪ ದ್ರವ್ಯಕ್ಕೆ ಆರಂಭಕವಾಗಿದೆ. ಅವುಗಳ ಪರಿಮಾಣಗಳಲ್ಲಿ ದ್ರವ್ಯಸಮವಾಯಿ–ಕಾರಣಗತಪರಿಮಾಣತ್ವವಿದೆ. ಅಂದರೆ, ಉಪಾಧಿ ಇಲ್ಲ, ಆದರಿಂದಾಗಿ, ಸಾಧ್ಯವೂ ಇಲ್ಲ. ಅವುಗಳು ಪರಿಮಾಣಾರಂಭಕಗಳಾಗಿವೆ.

**नचाप्रयोजको हेतुः । कारणगतगुणानां कार्यगुणं प्रति सजातीयत्वेन आरम्भकत्वस्यौत्सर्गिकत्वात् । परिमाणसामान्यं प्रति कारणत्वग्रहदशायां परिमाणत्वस्य नियमेनोपस्थितेश्च ।।**

**ಆಕ್ಷೇಪ**—ಸಿದ್ಧಾಂತಿಗಳು ಹೇಳಿರುವ ದ್ರವ್ಯಸಮವಾಯಿಕಾರಣ–ಪರಿಮಾಣತ್ವ ಹೇತು ಅಪ್ರಯೋಜಕ. ಪರಮಾಣು–ಪರಿಮಾಣವು ದ್ವ್ಯಣುಕರೂಪದ್ರವ್ಯಕ್ಕೆ ಸಮವಾಯಿಕಾರಣವಾದ ಪರಮಾಣುವಿನ ಪರಿಮಾಣವಾದರೆ ಪರಿಮಾಣಾರಂಭಕ ಏಕಾಗಬೇಕು?

**ಸಮಾಧಾನ**—ಕಾರಣಗತವಾದ ಗುಣಗಳು ಕಾರ್ಯಗತವಾದ, ಸಜಾತೀಯವಾದ ಗುಣಗಳಿಗೆ ಆರಂಭಕವಾಗುತ್ತವೆ, ಎನ್ನುವುದು ಔತ್ಸರ್ಗಿಕನಿಯಮ. ಉತ್ಸರ್ಗತಃ ಪ್ರಾಪ್ತವಾದ ಈ ನಿಯಮವನ್ನು ಪರಮಾಣು ಪರಿಮಾಣದಲ್ಲಿ ಪರಿತ್ಯಾಗ ಮಾಡುವುದಕ್ಕೆ ಬಾಧಕಗಳೇನೂ ಇಲ್ಲ. ಅಲ್ಲದೆ, ಪರಿಮಾಣಸಾಮಾನ್ಯಕ್ಕೆ ಯಾವುದು ಕಾರಣ, ಎಂಬ ಜಿಜ್ಞಾಸೆ ಬಂದಾಗ ಅವಯವ ಪರಿಮಾಣವು ಪರಿಮಾಣತ್ವೇನ ಉಪಸ್ಥಿತವಾಗುತ್ತದೆ. ಪರಿಮಾಣತ್ವವ್ಯಾಪ್ಯವಾದ ಅಣುತ್ವಾದಿನಾ ಪರಿಮಾಣವು ಉಪಸ್ಥಿತವಾಗುವುದಿಲ್ಲ. ಆದ್ದರಿಂದ ಪರಮಾಣ–ದ್ವ್ಯಣುಕ ಪರಿಮಾಣಗಳೂ ಪರಿಮಾಣತ್ವೇನ ಸ್ವಾರಬ್ಧ–ದ್ರವ್ಯಪರಿಮಾಣಕ್ಕೆ ಜನಕವಾಗುತ್ತವೆ. ಆದ್ದರಿಂದ ಹೇತು ಅಪ್ರಯೋಜಕವಲ್ಲ.

## ನ್ಯಾಯದೀಪ

'विपर्ययेणापि'इत्यादिवाक्यारूढत्वाय त्वदुक्तसङ्ख्याविपरीतेत्युक्तिः ।

सुधोक्तप्रयोगमाह—**परमाणुद्व्यणुकपरिमाणमिति** । समुदायाभिप्राय-मेकवचनम् । परिमाणे इत्यर्थः । स्वस्वकार्यद्व्यणुकत्र्यणुकगत-परिमाणारम्भके इति साध्यार्थः । द्रव्यसमवायिकारणगतपरिमाण-त्वादिति हेत्वर्थः । अत्र द्रव्येत्युक्त्या शब्दसमवायिकारणगतगगनपरि-माणे, समवायीत्युक्त्या घटकारणदण्डादिपरिमाणे, गुणत्वादित्यनुक्त्वा परिमाणत्वादित्युक्त्या परमाण्वादिगतरूपादौ व्यभिचारशङ्कानिरासः । आदिपदेन''द्व्यणुकत्र्यणुकपरिमाणे स्वाश्रयसमवायिकारणगतपरिमाणा-रब्धे, कार्यगतपरिमाणत्वात् चतुरणुकादिपरिमाणवत्'' इत्यादि सुधोक्तग्रहः । इत्याद्यनुमानात् परिमाणजन्यमेवानुमीयत इति पूर्वेणान्वयः ॥

ಮೂಲದಲ್ಲಿ 'ಪರಿಮಾಣೇ' ಎಂದು ದ್ವಿವಚನದ ಬದಲು 'ಪರಿಮಾಣಂ' ಎಂಬ ಏಕವಚನಪ್ರಯೋಗ ಸಮುದಾಯಾರ್ಥದಲ್ಲಿ.

'ದ್ರವ್ಯಸಮವಾಯಿಕಾರಣಗತ ಪರಿಮಾಣತ್ವಾತ್' ಎಂದು ಅನುಮಾನದ ಹೇತು. 'ದ್ರವ್ಯ' ಎಂಬ ಪದದಿಂದ ಶಬ್ದಕ್ಕೆ ಸಮವಾಯಿಕಾರಣವಾದ ಗಗನ ಪರಿಮಾಣದಲ್ಲಿ ವ್ಯಭಿಚಾರ

ಪರಿಹಾರವಾಗುತ್ತದೆ. ಅದು ಪರಿಮಾಣಾಂತರಾರಂಭಕವಲ್ಲವಾದುದರಿಂದ ಅದರಲ್ಲಿ ಸಾಧ್ಯ ಇಲ್ಲ. ದ್ರವ್ಯಪದಕೊಟ್ಟರೆ, ನ್ಯಾಯಮತದಂತೆ ಶಬ್ದವು ದ್ರವ್ಯವಲ್ಲವಾದುದರಿಂದ ಹೇತುವೂ ಬರುವುದಿಲ್ಲ.

'ಸಮವಾಯಿ' ಎಂಬ ವಿಶೇಷಣದಿಂದ ದಂಡಪರಿಮಾಣದಲ್ಲಿ ವ್ಯಭಿಚಾರ ಪರಿಹಾರ ವಾಗುತ್ತದೆ. ದಂಡವು ಅಂತ್ಯಾವಯವಿಯಾದುದರಿಂದ ಅದರ ಪರಿಮಾಣವು ಪರಿಮಾಣಾಂತರಕ್ಕೆ ಆರಂಭಕವಲ್ಲ. ಸಾಧ್ಯ ಇಲ್ಲ. ಹೇತು ಇದೆ–ದಂಡವು ಘಟದ್ರವ್ಯಕ್ಕೆ ಆರಂಭಕವಾಗಿದೆ. ಅದರ ಪರಿಹಾರಕ್ಕಾಗಿ ಸಮವಾಯಿಪದಬೇಕು. ದಂಡವು ಘಟಕ್ಕೆ ಸಮವಾಯಿಕಾರಣವಲ್ಲ.

ಪರಿಮಾಣತ್ವಾತ್ ಎನ್ನುವ ಬದಲು ಗುಣತ್ವಾತ್ ಎಂದು ಹೇತುಮಾಡಿದರೆ ಪರಮಾಣು ರೂಪದಲ್ಲಿ ವ್ಯಭಿಚಾರ. ಅದು ಪರಿಮಾಣಾರಂಭಕವಲ್ಲ. ಪರಿಮಾಣತ್ವಾತ್ ಎಂದು ಹೇತುಮಾಡಿದರೆ ಆ ಹೇತು ರೂಪದಲ್ಲಿ ಇಲ್ಲವಾದುದರಿಂದ ವ್ಯಭಿಚಾರ ಪರಿಹಾರವಾಗುತ್ತದೆ.

ಸುಧಾದಲ್ಲಿ ಕಾರ್ಯಪರಿಮಾಣ–ಪಕ್ಷಕಾನುಮಾನವನ್ನೂ ತೋರಿಸಲಾಗಿದೆ. ಮೂಲ ದಲ್ಲಿರುವ ಆದಿಪದದಿಂದ ಆ ಅನುಮಾನವು ಸಂಗ್ರಹೀತವಾಗಿದೆ. ಅದರ ಭಾವಾರ್ಥ ಹೀಗೆ– ದ್ವ್ಯಣುಕ ಮತ್ತು ತ್ರ್ಯಣುಕಗಳಲ್ಲಿರುವ ಅಣುತ್ವ–ಮಹತ್ವ ಪರಿಮಾಣಗಳು ಅವೆರಡಕ್ಕೆ ಕ್ರಮಶಃ ಸಮವಾಯಿ ಕಾರಣವಾಗಿರುವ ಪರಮಾಣು ಮತ್ತು ದ್ವ್ಯಣುಕಗಳಲ್ಲಿರುವ ಪರಿಮಾಣಗಳಿಂದ ಹುಟ್ಟಿವೆ. ಏಕೆಂದರೆ, ಚತುರಣಕಪರಿಮಾಣದಂತೆ ಅವುಗಳೂ ಜನ್ಯಪರಿಮಾಣಗಳಾಗಿವೆ, ಆದ್ದರಿಂದ.

## ನ್ಯಾಯದೀಪ

सुधोक्ते एव प्रतिपक्षशङ्का–तत्समाधाने चाह— **नचेत्यादिना** । मृत्पिण्डादिपरिमाणे व्यभिचारवारणाय हेतौ नित्येत्युक्तिः । **द्रव्येति** ।। गगन–कालादिपरिमाणे साध्यव्यापकत्वात्, साधनवति पक्षेऽभावेन साधनाव्यापकत्वादिति भावः ।

नच पूर्वसाधनव्यतिरेकत्वान्नायमुपाधिः, प्रतिपक्षमात्रोच्छेदापत्तेरिति वाच्यम् । प्राचीनहेतोरनुकूलतर्कवत्त्वेन साध्यव्याप्यत्वनिश्चये सति तद्व्यतिरेकस्य प्रतिपक्षानुमाने साध्यव्यापकत्वनिश्चयात् । यत्रतु स्थापनाया आभासत्वं तत्रैव विशेषादर्शनदशायां सत्प्रतिपक्षे पूर्वसाधनव्यतिरेकस्य साध्याव्यापकत्वेनानुपाधित्वम् । यथा 'शब्दोऽनित्यः गुणत्वात्'इत्यत्र 'शब्दो नित्यो व्योमैकगुणत्वात्'

इत्यनेन सत्प्रतिपक्षे गुणत्वाभावो नोपाधिः । जलपरमाणुरूपे साध्याव्यापकत्वात् । अत्र पूर्वसाधनव्यतिरेकस्याप्युपाधित्वे न कोऽपि दोष इति भावेन स्थापनायां निरुपाधिसहचार–कार्यकारणभावग्रह-रूपानुकूलतर्कौ व्यनक्ति— **नचाप्रयोजको हेतुरित्यादिना । औत्सर्गिकत्वादिति ।** जातित एव प्राप्तत्वात् अपवादाभावे तस्यापि प्रमाणत्वात् । बाधकस्य चेहाग्रे निरसिष्यमाणत्वात् अस्याप्युत्सर्गविषयत्वमेवेति भावः ।।

ಮೂಲದಲ್ಲಿ ಹೇಳಿರುವ ಎರಡು ಪ್ರತಿಪಕ್ಷಾನುಮಾನಗಳ ಶಂಕೆ ಮತ್ತು ಅದಕ್ಕೆ ಸಮಾಧಾನ ಸುಧಾದಲ್ಲಿ ಉಕ್ತವಾಗಿವೆ. ಮೊದಲನೆಯ ಅನುಮಾನದ ಹೇತುವಿನಲ್ಲಿ 'ನಿತ್ಯ' ಪದವನ್ನು ಬಿಟ್ಟರೆ ಮೃತ್ಪಿಂಡಪರಿಮಾಣದಲ್ಲಿ ವ್ಯಭಿಚಾರ ಬರುತ್ತದೆ. ಅದು ಘಟಪರಿಮಾಣಕ್ಕೆ ಆರಂಭಕವಾಗಿದೆಯಾದ್ದರಿಂದ. ಅದರ ಪರಿಹಾರಕ್ಕಾಗಿ ನಿತ್ಯಪರಿಮಾಣತ್ವಾತ್, ಎಂದು ಹೇಳಲಾಗಿದೆ.

ಈ ಪ್ರತಿಪಕ್ಷಾನುಮಾನಗಳಿಗೆ 'ದ್ರವ್ಯಸಮವಾಯಿಕಾರಣ–ಪರಿಮಾಣತ್ವಾಭಾವ' ಎಂಬ ಉಪಾಧಿಯನ್ನು ಹೇಳಲಾಗಿದೆ. ಗಗನಪರಿಮಾಣದಲ್ಲಿ ಈ ಉಪಾಧಿಯು ಸಾಧ್ಯವ್ಯಾಪಕವಾಗಿದೆ. ಅದು ಯಾವ ಪರಿಮಾಣಕ್ಕೂ ಆರಂಭಕವಲ್ಲ, ಸಾಧ್ಯ ಬಂತು. ಗಗನವು ದ್ರವ್ಯಕ್ಕೆ ಸಮವಾಯಿ ಕಾರಣವಲ್ಲವಾದ ಕಾರಣ ಅದರ ಪರಿಮಾಣವು ದ್ರವ್ಯಸಮವಾಯಿ–ಕಾರಣಗತ–ಪರಿಮಾಣವಲ್ಲ. ಆದ್ದರಿಂದ ಉಪಾಧಿಯೂ ಇದೆ. ಪಕ್ಷವಾದ ಪರಮಾಣು–ಪರಿಮಾಣದಲ್ಲಿ ಈ ಉಪಾಧಿ ಇಲ್ಲ. ಪರಮಾಣು ದ್ವ್ಯಣುಕದ್ರವ್ಯಕ್ಕೆ ಸಮವಾಯಿ ಕಾರಣವಾದುದರಿಂದ ಅದರ ಪರಿಮಾಣವು ದ್ರವ್ಯಸಮವಾಯಿಕಾರಣಗತ–ಪರಿಮಾಣವಾಗಿದೆ. ತದಭಾವ ಅಲ್ಲಿಲ್ಲ. ಇದರಿಂದ ಸಾಧನಾವ್ಯಾಪಕತ್ವವೂ ಬರುತ್ತದೆ.

**ಆಕ್ಷೇಪ**—ಈ ಉಪಾಧಿ ಯುಕ್ತವಲ್ಲ. ಸ್ಥಾಪನಾನುಮಾನದ ಹೇತುವಿನ ಅಭಾವರೂಪವಾದುದರಿಂದ. ಪರಮಾಣು–ದ್ವ್ಯಣುಕಪರಿಮಾಣಗಳು ಪರಿಮಾಣಾರಂಭಕಗಳು ಎಂದು ಸಾಧಿಸಲು ಸಿದ್ಧಾಂತಿಗಳು ಹೇಳಿರುವ ಹೇತು–'ದ್ರವ್ಯಸಮವಾಯಿ ಕಾರಣ(ಗತ) ಪರಿಮಾಣತ್ವಾತ್, ಎಂದು. ಈ ಹೇತುವಿನ ಅಭಾವವೇ ಪ್ರಕೃತ ಉಪಾಧಿ. ಈ ರೀತಿಯ ಉಪಾಧಿಯನ್ನೂ ದೋಷವೆಂದು ಪರಿಗಣಿಸಿದರೆ ಸತ್ಪ್ರತಿಪಕ್ಷವು ದೋಷವೇ ಅಲ್ಲವೆಂದಾದೀತು. ಸರ್ವತ್ರ ಸ್ಥಾಪನಾನುಮಾನದ ಹೇತುವಿನ ಅಭಾವವನ್ನೇ ಉಪಾಧಿಯನ್ನಾಗಿ ಹೇಳಿ ಪ್ರತಿಪಕ್ಷಾನುಮಾನವನ್ನು ದುಷ್ಟವನ್ನಾಗಿ ಮಾಡಬಹುದು.

**ಸಮಾಧಾನ**—ಸ್ಥಾಪನಾನುಮಾನದ ಪ್ರಕೃತ ಹೇತುವಿಗೆ ವ್ಯಾಪ್ತಿನಿಶ್ಚಾಯಕವಾದ

ಅನುಕೂಲತರ್ಕ ಇದೆ. ಅದನ್ನು ಮುಂದಿನ ಮೂಲದಲ್ಲಿ ತೋರಿಸಿಕೊಡಲಾಗಿದೆ. ಆ ಅನುಕೂಲತರ್ಕದಿಂದ ಸ್ಥಾಪನಾನುಮಾನದ ಹೇತುವಿನಲ್ಲಿ ವ್ಯಾಪ್ತಿಯು ನಿಶ್ಚಿತವಾಗುತ್ತದೆ. ಪ್ರತಿಪಕ್ಷಾನುಮಾನದಲ್ಲಿ ಸಾಧ್ಯಾಭಾವವನ್ನು ಸಾಧನೆಮಾಡುವಾಗ ಸಾಧ್ಯಾಭಾವವ್ಯಾಪಕತ್ವವು ಹೇತ್ವಭಾವರೂಪವಾದ ಉಪಾಧಿಯಲ್ಲಿ ನಿರ್ಧಾರವಾಗುವುದರಿಂದ ಅದು ಉಪಾಧಿ ಎನಿಸುತ್ತದೆ. ಆದರೆ, ಎಲ್ಲಾ ಸ್ಥಾಪನಾನುಮಾನಗಳಲ್ಲೂ ಅನುಕೂಲತರ್ಕಗಳು ಇರುವುದಿಲ್ಲವಾದುದರಿಂದ ಸತ್ಪ್ರತಿಪಕ್ಷ ದೋಷವಿಲಯ ಪ್ರಸಂಗವಿಲ್ಲ. ಕೆಲವೆಡೆ ಸ್ಥಾಪನಾನುಮಾನ ಆಭಾಸವಾಗಿರುತ್ತದೆ. ಆದರೆ, ಆಭಾಸವೆಂಬ ವಿಶೇಷದರ್ಶನ ಇಲ್ಲದಿರುವುದರಿಂದ ಸ್ಥಾಪನಾನುಮಾನದ ಹೇತ್ವಭಾವವನ್ನು ಪ್ರತಿಪಕ್ಷಾನುಮಾನದಲ್ಲಿ ಉಪಾಧಿಯನ್ನಾಗಿ ಮಾಡಿದರೆ ಸಾಧ್ಯವ್ಯಾಪಕತಾ ನಿಶ್ಚಯವಾಗುವುದಿಲ್ಲವಾದುದರಿಂದ ಅಂತಹ ಕಡೆಗಳಲ್ಲಿ ಪ್ರತಿಪಕ್ಷಾನುಮಾನವು ಉಪಾಧಿ ದೋಷಗ್ರಸ್ತವಾಗುವುದಿಲ್ಲ. ಉದಾಹರಣೆಗೆ—'ಶಬ್ದಃ ಅನಿತ್ಯಃ ಗುಣತ್ವಾತ್' ಎಂದು ಸ್ಥಾಪನಾನುಮಾನ. 'ಶಬ್ದಃ ನಿತ್ಯಃ ಆಕಾಶೈಕಗುಣತ್ವಾತ್' ಎಂದು ಪ್ರತಿಪಕ್ಷಾನುಮಾನ. ಈ ಅನುಮಾನದಲ್ಲಿ ಸ್ಥಾಪನಾನುಮಾನದ ಹೇತ್ವಭಾವ ಅಂದರೆ ಗುಣತ್ವಾಭಾವ ಉಪಾಧಿ ಯಾಗುವುದಿಲ್ಲ. ಜಲಪರಮಾಣುರೂಪದಲ್ಲಿ ನಿತ್ಯತ್ವವು ಇದ್ದರೂ ಅದರಲ್ಲಿ ಗುಣತ್ವಾಭಾವ ಇಲ್ಲ. ಸಾಧ್ಯವ್ಯಾಪಕತ್ವ ಬರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಸತ್ಪ್ರತಿಪಕ್ಷವು ದೋಷವಾಗುತ್ತದೆ. ಪ್ರಕೃತಾನುಮಾನದಲ್ಲಿ, ಸ್ಥಾಪನಾನುಮಾನದ ಹೇತ್ವಭಾವವನ್ನೇ ಪ್ರತಿಪಕ್ಷಾನುಮಾನದಲ್ಲಿ ಉಪಾಧಿ ಯನ್ನಾಗಿ ಮಾಡಿದರೂ ಯಾವ ದೋಷವೂ ಇಲ್ಲ. ಅದಕ್ಕಾಗಿಯೇ 'ನ ಚಾಪ್ರಯೋಜಕಃ ಹೇತುಃ' ಎಂದು ನಿರುಪಾಧಿಕ ಸಹಚಾರಗ್ರಹ ಮತ್ತು ಕಾರ್ಯ-ಕಾರಣಗ್ರಹರೂಪವಾದ ಅನುಕೂಲ ತರ್ಕವನ್ನು ಹೇಳಲಾಗಿದೆ.

'ಔತ್ಸರ್ಗಿಕತ್ವಾತ್' ಎಂಬ ಮೂಲದಲ್ಲಿ ಉತ್ಸರ್ಗ ಎಂದರೆ ಜಾತಿ. ಕಾರಣಗುಣತ್ವರೂಪ ಸಮಾನಧರ್ಮಪ್ರಯುಕ್ತವಾಗಿಯೇ ಆ ನಿಯಮವು, ಅಪವಾದ ಇಲ್ಲದಿರುವುದರಿಂದ, ಪರಮಾಣುಪರಿಮಾಣಕ್ಕೂ ಅನ್ವಯಿಸುತ್ತದೆ. ಅದಕ್ಕೆ ಬರಬಹುದಾದ ಬಾಧಕವನ್ನು ಮುಂದೆ ನಿರಾಕರಿಸಲಾಗಿದೆಯಾದ್ದರಿಂದ ಪರಮಾಣು ಪರಿಮಾಣವೂ ಈ ಉತ್ಸರ್ಗನಿಯಮಕ್ಕೆ ವಿಷಯವಾಗುತ್ತದೆ.

## ನ್ಯಾಯದೀಪ

**नचैवमपि तूलपिण्डादिपरिमाणस्य शिथिलभूयोऽवयवसंयोगरूपप्रचय-मात्रजन्यत्वात् तूलपिण्डसमवायिकारणगतपरिमाणे व्यभिचारी स्थापनाहेतुरिति वाच्यम् । तस्यापि पक्षतुल्यत्वात् ।**

**नचैवं सत्यंशे बाधः। प्रचयकारणताया अप्यनिवारणात्। नचोभयकारणत्वकल्पने गौरवदोषः। "द्वयोरपि क्लृप्तशक्तित्वात्" इति सुधायामेवोक्तत्वात्। नच क्लृप्तशक्तित्वं परिमाणेऽसिद्धम्। कारणगतेत्यादिनोक्ततर्कद्वयसिद्धत्वात्। वक्ष्यमाणदिशा प्रचयसङ्ख्ययोः परिमाणहेतुत्वादिति भावः ॥**

**ಆಕ್ಷೇಪ**—ಸ್ಥಾಪನಾನುಮಾನದ ದ್ರವ್ಯಸಮವಾಯಿಕಾರಣ ಪರಿಮಾಣತ್ವರೂಪ ಹೇತುವು ವ್ಯಭಿಚಾರಿಯಾಗಿದೆ. ತೂಲಪಿಂಡದ ಪರಿಮಾಣವು ತದವಯವಗಳ ಶಿಥಿಲಾವಯವ ಸಂಯೋಗರೂಪವಾದ ಪ್ರಚಯದಿಂದಲೇ ಹುಟ್ಟುತ್ತದೆ, ಅವಯವಪರಿಮಾಣದಿಂದಲ್ಲ. ಏವಂಚ, ಆ ಅವಯವಪರಿಮಾಣದಲ್ಲಿ ದ್ರವ್ಯಸಮವಾಯಿಕಾರಣ-ಪರಿಮಾಣತ್ವರೂಪಹೇತು ಇದೆ. ಆದರೆ, ಪರಿಮಾಣಾರಂಭಕತ್ವರೂಪ ಸಾಧ್ಯ ಇಲ್ಲ. ಹೀಗೆ ವ್ಯಭಿಚಾರದೋಷ ಬರುತ್ತದೆ.

**ಸಮಾಧಾನ**—ಆ ಪರಿಮಾಣವೂ ಪಕ್ಷತುಲ್ಯ. ಆ ಅವಯವಪರಿಮಾಣವೂ ಪಿಂಡಪರಿಮಾಣಕ್ಕೆ ಕಾರಣ, ಎಂದೇ ಸಾಧನೆ ಮಾಡಬೇಕು. "ಪಕ್ಷೇ ವಾ ಪಕ್ಷತುಲ್ಯೇ ವಾ ನ ವ್ಯಭಿಚಾರಃ"

**ಆಕ್ಷೇಪ**—ಅದೂ ಪಕ್ಷದಲ್ಲಿ ಸೇರಿದರೆ ತದಂಶೇ ಬಾಧ ಬರುತ್ತದೆ. ಅಲ್ಲಿ ಪ್ರಚಯವೇ ಪರಿಮಾಣಾರಂಭಕ, ಅವಯವ ಪರಿಮಾಣದಲ್ಲಿ ತದಾರಂಭಕತ್ವ ಇಲ್ಲ.

**ಸಮಾಧಾನ**—ಅಲ್ಲಿ ಪಿಂಡಪರಿಮಾಣಕ್ಕೆ ಪ್ರಚಯವು ಕಾರಣವಲ್ಲ, ಎಂದೇನೂ ಹೇಳುವುದಿಲ್ಲ. ಪ್ರಚಯವೂ ಕಾರಣ, ಅವಯವ ಪರಿಮಾಣವೂ ಕಾರಣ. ಇದರಿಂದ ಗೌರವದೋಷವೇನೂ ಬರುವುದಿಲ್ಲ. ಅವೆರಡಕ್ಕೂ ಕಾರಣತ್ವವು ಕ್ಲೃಪ್ತವಾಗಿದೆ. "ದ್ವಯೋರಪಿ ಕ್ಲೃಪ್ತಶಕ್ತಿತ್ವಾತ್" ಎಂದೇ ಸುಧಾದಲ್ಲಿ (ವೈಶೇಷಿಕಾಧಿಕರಣದಲ್ಲಿ) ಹೇಳಲಾಗಿದೆ.

ಆ ಪರಿಮಾಣಕ್ಕೆ ಪರಿಮಾಣಜನಕತ್ವಶಕ್ತಿಯು ಕ್ಲೃಪ್ತ, ಎಂದು ಸಿದ್ಧವಾಗಿಲ್ಲ, ಎನ್ನಬಾರದು. ಹಿಂದೆ ಅವಯವಗುಣತ್ವೇನ ಸಕಲಪರಿಮಾಣಗಳಿಗೂ ಆರಂಭಕತ್ವವು ಸಿದ್ಧವಾಗುತ್ತದೆ ಹಾಗೂ ಅವಯವಪರಿಮಾಣತ್ವೇನ ಸಕಲ ಪರಿಮಾಣಗಳಿಗೂ ಆರಂಭಕತ್ವವನ್ನು ಹೇಳಬೇಕು, ಎಂದು ಎರಡು ಅನುಕೂಲತರ್ಕಗಳನ್ನು ಹೇಳಲಾಗಿದೆ. ಆದರಿಂದಾಗಿ ತೂಲಪಿಂಡಾವಯವಪರಿಮಾಣಕ್ಕೂ ಪರಿಮಾಣಜನಕತ್ವಶಕ್ತಿಯು ಕ್ಲೃಪ್ತವಾಗಿದೆ. ಮುಂದೆಯೂ ಪ್ರಚಯ ಮತ್ತು ಸಂಖ್ಯೆಗಳೆರಡೂ ಪರಿಮಾಣಕ್ಕೆ ಕಾರಣ ಎಂದು ಹೇಳಲಾಗಿದೆ.

## ಅವತಾರಿಕೆ

**कारणपरिमाणस्य कार्यपरिमाणं प्रतीव प्रचयसङ्ख्ययोरपि कारणत्वं क्लृप्तमिति इह परमाण्वादिगतसङ्ख्यापि कारणं स्यादिति शङ्कते— नन्विति ।**

ಕಾರಣಗತವಾದ ಪರಿಮಾಣವು ಕಾರ್ಯಗತಪರಿಮಾಣಕ್ಕೆ ಕಾರಣ, ಎಂದು ಸಿದ್ಧವಾಗುವಂತೆ ಪ್ರಚಯ ಮತ್ತು ಸಂಖ್ಯೆಗಳೂ ಕಾರ್ಯಪರಿಮಾಣಕ್ಕೆ ಕಾರಣ ಎಂದು ಸಿದ್ಧವಾಗಿದೆ. ಆದ್ದರಿಂದ, ಪರಮಾಣುಗತವಾದ ದ್ವಿತ್ವಸಂಖ್ಯೆಯೂ ದ್ವ್ಯಣುಕಪರಿಮಾಣಕ್ಕೆ ಕಾರಣವಾಗಲಿ. ಇದರಿಂದ ಅಪೇಕ್ಷಾಬುದ್ಧಿಗೆ ಆಶ್ರಯನಾಗಿ ಈಶ್ವರನು ಸಿದ್ಧನಾಗುತ್ತಾನೆ, ಎಂದು 'ನನು' ಎಂಬ ಮೂಲದಲ್ಲಿ ಶಂಕೆ ಮಾಡಲಾಗಿದೆ.

**ननु तूलपिण्डादिपरिमाणे प्रचयाख्यसंयोगविशेषस्य, समान-परिमाणाल्पसङ्ख्याकावयवारब्धापेक्षया तादृशाधिकसंख्याकावयव-वारब्धद्रव्यगतातिशयितपरिमाणे बहुत्वसङ्ख्यायाश्च कारणत्वदर्शनात् सामान्यविशेषन्यायेन परिमाणसामान्यं प्रति संयोगसामान्यस्य संख्यासामान्यस्य वा कारणत्वमस्त्विति चेत् ।**

**ಆಕ್ಷೇಪ**—ಕಾರ್ಯಪರಿಮಾಣಕ್ಕೆ ಪ್ರಚಯ ಮತ್ತು ಸಂಖ್ಯೆಗಳೂ ಕಾರಣಗಳು ಎಂದು ಹೇಳಬೇಕು. ತೂಲಪಿಂಡಗತವಾದ ಮಹತ್ವಪರಿಮಾಣಕ್ಕೆ ತದವಯಗತವಾದ ಪ್ರಚಯಾಖ್ಯ ಸಂಯೋಗವಿಶೇಷವೂ ಕಾರಣ ಎಂದು ಸಿದ್ಧವಾಗಿದೆ.

ಅದರಂತೆ, ಸಮಾನಗಾತ್ರದ ಕೆಲವು ಅವಯವಗಳಿಂದ ಸಿದ್ಧವಾದ ವಸ್ತುವಿಗೂ ಅಷ್ಟೇ ಗಾತ್ರದ ಅನೇಕ ಅವಯವಗಳಿಂದ ಸಿದ್ಧವಾದ ವಸ್ತುವಿಗೂ ಪರಿಮಾಣದಲ್ಲಿ ವ್ಯತ್ಯಾಸ ಕಂಡಿದೆ. ಒಂದು ಚಿಕ್ಕದಾಗಿದ್ದರೆ ಇನ್ನೊಂದು ದೊಡ್ಡದಾಗಿರುತ್ತದೆ. ಇದಕ್ಕೆ ಅವಯವಸಂಖ್ಯಾವೈಷಮ್ಯವೇ ಕಾರಣ. ಆದ್ದರಿಂದ ಬಹುತ್ವ ಸಂಖ್ಯೆಕ್ಕೂ ಪರಿಮಾಣಜನಕತ್ವವನ್ನು ಅಂಗೀಕರಿಸಬೇಕಾಗುತ್ತದೆ. ಆದ್ದರಿಂದ 'ಯದ್ವಿಶೇಷಯೋಃ' ಇತ್ಯಾದಿ ಸಾಮಾನ್ಯವಿಶೇಷನ್ಯಾಯದಿಂದ ಪರಿಮಾಣ ಸಾಮಾನ್ಯಕ್ಕೆ ಪ್ರಚಯ ಮತ್ತು ಸಂಖ್ಯಾಸಾಮಾನ್ಯವು ಕಾರಣವೆಂದಾಗಿ ಪರಮಾಣುಗತದ್ವಿತ್ವಸಂಖ್ಯೆಯೂ ದ್ವ್ಯಣುಕಪರಿಮಾಣಕ್ಕೆ ಕಾರಣವಾಗಿ ಈಶ್ವರ ಸಿದ್ಧನಾಗುತ್ತಾನೆ.

**मैवम् । औत्सर्गिकस्य नियतोपस्थितिकस्य च बाधे सत्येव**

**तद्विपरीते प्रमाणप्रवृत्तेः । नचैवं द्व्यणुकत्र्यणुकपरिमाणयोः परमाणुपरिमाणसाजात्यं स्यादिति वाच्यम्। गुणत्वसाक्षाद्व्याप्यजात्या साजात्यापादन इष्टापत्तेः। तद्व्याप्यव्याप्यजात्या तदापादने तन्तुपरिमाणगतस्य महत्वव्याप्यस्यापकर्षरूपजातिविशेषस्य पटपरिमाणेऽभावेन व्यभिचारात्। अन्यथा संख्यासंयोगजन्यत्वेऽपि महत्समवेतयोः तयोर्महत्त्वजनकत्ववत् अणुसमवेतयोः तयोरणुत्व-जनकत्वं स्यात्।**

**किञ्च द्व्यणुकादिपरिमाणस्य केवलसङ्ख्यायोनित्व एव द्वित्वादिवत् सङ्ख्यात्वेन कारणसाजात्यं स्यात् ॥**

ಈ ಆಕ್ಷೇಪ ಸರಿಯಲ್ಲ. ಅವಯವಪರಿಮಾಣಕ್ಕೆ ಜನಕತ್ವವು ಉತ್ಸರ್ಗತಃ ಸಿದ್ಧ. ಅದು ನಿಯತವಾಗಿ ಉಪಸ್ಥಿತವೂ ಆಗಿದೆ. ಅದಕ್ಕೆ ಬಾಧ ಇದ್ದಲ್ಲಿ ಅದನ್ನು ಬಿಟ್ಟು ತದನ್ಯದಲ್ಲಿ ಪ್ರಮಾಣ ಪ್ರವೃತ್ತಿಯಾಗುತ್ತದೆ. ತೂಲಾದಿಗಳಲ್ಲಿ ಪ್ರತ್ಯಕ್ಷಬಾಧ ಇರುವುದರಿಂದ ಪ್ರಚಯಾದಿಗಳಿಗೂ ಆರಂಭಕತ್ವವನ್ನು ಹೇಳಬೇಕಾಗುತ್ತದೆ. ಪ್ರಕೃತದಲ್ಲಿ ಬಾಧಕವಿಲ್ಲದಿರುವುದರಿಂದ ಉತ್ಸರ್ಗ ನಿಯಮವೇ ಅನ್ವಯಿಸುತ್ತದೆ.

**ಆಕ್ಷೇಪ**—ಪ್ರಕೃತದಲ್ಲಿ ಬಾಧಕವಿದೆ. ಪರಮಾಣುಪರಿಮಾಣ ಮತ್ತು ದ್ವ್ಯಣುಕ ಪರಿಮಾಣಗಳು ಆರಂಭಕಗಳಾದರೆ ತಜ್ಜನ್ಯ ಪರಿಮಾಣಗಳಿಗೆ ಪರಮಾಣುಪರಿಮಾಣಸಮಾನ ಜಾತೀಯತ್ವವು ಬರಬೇಕಾದೀತು. ಇದರಿಂದಾಗಿ ತ್ರ್ಯಣುಕದ ಪ್ರತ್ಯಕ್ಷವು ಬರದೇ ಹೋಗಬೇಕಾದೀತು.

**ಸಮಾಧಾನ**—ತ್ರ್ಯಣುಕಪರಿಮಾಣಕ್ಕೆ ಕೇನರೂಪೇಣ ಸಾಜಾತ್ಯವನ್ನು ಆಪಾದನೆ ಮಾಡಲಾಗುತ್ತದೆ? ಗುಣತ್ವಸಾಕ್ಷಾದ್ವ್ಯಾಪ್ಯಜಾತಿತ್ವೇನ ಸಾಜಾತ್ಯವನ್ನು ಆಪಾದಿಸುವುದಾದಲ್ಲಿ ಇಷ್ಟಾಪತ್ತಿ. ತ್ರ್ಯಣುಕಪರಿಮಾಣದಲ್ಲಿ ಅಂತಹ ಪರಿಮಾಣತ್ವ ಜಾತಿ ಇದೆ. ದ್ವ್ಯಣುಕಪರಿಮಾಣದಲ್ಲೂ ಪರಿಮಾಣತ್ವಜಾತಿ ಇದೆ. ಆದ್ದರಿಂದ ತೇನ ರೂಪೇಣ ಸಾಜಾತ್ಯ ನಮಗೂ ಸಮ್ಮತ.

ಗುಣತ್ವವ್ಯಾಪ್ಯ-ವ್ಯಾಪ್ಯಜಾತಿರೂಪೇಣ ಸಾಮ್ಯವನ್ನು ಆಪಾದಿಸುವುದಾದಲ್ಲಿ ಇಷ್ಟಾಪತ್ತಿ ಇಲ್ಲ. ಏಕೆಂದರೆ, ಪರಿಮಾಣತ್ವವ್ಯಾಪ್ಯಜಾತಿಗಳು ನಾಲ್ಕು. ಅಣುತ್ವತ್ವ-ಮಹತ್ವತ್ವ-ದೀರ್ಘತ್ವತ್ವ-ಹ್ರಸ್ವತ್ವತ್ವ ಎಂದು. ಇವುಗಳಲ್ಲಿ ಪರಮಾಣುವಿನ ಪರಿಮಾಣದಲ್ಲಿ ಅಣುತ್ವತ್ವವಿದೆ. ತ್ರ್ಯಣುಕ ಪರಿಮಾಣದಲ್ಲಿ ಮಹತ್ವತ್ವವಿದೆ. ದ್ವ್ಯಣುಕಪರಿಮಾಣದಲ್ಲಿ ಹ್ರಸ್ವತ್ವತ್ವಪರಿಮಾಣವಿದೆ. ಹೀಗೆ,

ಅವುಗಳಲ್ಲಿ ತೇನರೂಪೇಣ ಸಾಜಾತ್ಯವಿಲ್ಲ. ಆದರೆ, ಅವಯವಪರಿಮಾಣದಿಂದ ಅವಯವಿ ಪರಿಮಾಣವು ಹುಟ್ಟುತ್ತದೆ. ತಂತುಪರಿಮಾಣದಲ್ಲಿ ಮಹತ್ತ್ವವ್ಯಾಪ್ಯವಾದ ಅಪಕರ್ಷಾಖ್ಯಜಾತಿವಿಶೇಷ ಇದೆ. ಆ ಜಾತಿ ಪಟಪರಿಮಾಣದಲ್ಲಿ ಇಲ್ಲ. ಹೀಗೆ ತಂತು–ಪಟಪರಿಮಾಣಗಳಲ್ಲೂ ಸಾಜಾತ್ಯ ಇಲ್ಲದಿರುವುದರಿಂದ ಸಜಾತೀಯತ್ವನಿಯಮಕ್ಕೆ ವ್ಯಭಿಚಾರಬರುತ್ತದೆ. ಅಲ್ಲದೆ, ಪರಿಮಾಣ ಜನ್ಯವಾದಾಗ ಸಾಮ್ಯವನ್ನು ಆಪಾದಿಸಿದಂತೆ ಸಂಖ್ಯಾಪ್ರಚಯಜನ್ಯವಾದಾಗಲೂ ಹೀಗೆಯೇ ಆಪಾದನೆ ಮಾಡಬಹುದು—ಮಹತ್ತಾದ ಅವಯವಗಳಲ್ಲಿ ಸಮವೇತವಾದ ಸಂಖ್ಯಾ-ಪ್ರಚಯಗಳು ಮಹತ್ತ್ವಪರಿಮಾಣಕ್ಕೆ ಕಾರಣವಾಗುವಂತೆ ಅಣುಸಮವೇತವಾದ ಅವುಗಳು ಅಣುತ್ವಕ್ಕೇ ಜನಕವಾಗುತ್ತವೆ. ಏವಂಚ ಸಂಖ್ಯಾಜನ್ಯವಾದರೂ ತ್ರ್ಯಣುಕದಲ್ಲಿ ಮಹತ್ತ್ವಬರಲಾರದು. ಅಣುತ್ವವೇ ಬರಬೇಕು.

ದ್ವ್ಯಣುಕ ಮತ್ತು ತ್ರ್ಯಣುಕಗತ ಪರಿಮಾಣಗಳಿಗೆ ಸಂಖ್ಯೆಯು ಕಾರಣ ಎಂದಾಗಲೇ ಪರಿಮಾಣಸಾಮ್ಯಾಪತ್ತಿ ಪ್ರಸಂಗಕ್ಕೆ ಅವಕಾಶ ಇದೆ. ಏಕೆಂದರೆ, ಆ ಕಾರಣಗಳಿಗೆ ಸಂಖ್ಯಾತ್ವೇನ ಸಾಜಾತ್ಯವಿದೆ. ಆದರಿಂದಾಗಿ ಕಾರ್ಯಪರಿಮಾಣಗಳಲ್ಲೂ ಸಾಜಾತ್ಯವನ್ನು ಆಪಾದಿಸಬಹುದು.

## ನ್ಯಾಯದೀಪ

**संयोगविशेषस्येति ।** कारणत्वदर्शनादित्यन्वयः । प्रचयः प्रसङ्गादुपात्तः । बहुत्वस्य कारणत्वग्रहे स्थलमाह— **समानेति ।** तुल्यपरिमाणकपालद्वयारब्धघटापेक्षया तत्तुल्यपरिमाणकपालत्रयजन्यघटगतपरिमाण इत्यर्थः । **तादृशेति ।** पूर्वद्रव्यावयवसमानपरिमाणेत्यर्थः । **सामान्येति ।** यद्विशेषयोः कार्यकारणभावो बाधकाभावे तत्सामान्ययोरपि कार्यकारणभाव इति न्यायेनेत्यर्थः ।

कार्यगतपरिमाणं प्रति कारणगतपरिमाणमेव सर्वत्र हेतुर्नतु प्रचयादिरपीति सिद्धान्तयति—**मैवमित्यादिना ।** यद्वा अन्यत्र सङ्ख्यायामपि क्लृप्तशक्तित्वमस्तु । प्रकृते तु उत्सर्गतः प्राप्तपरिमाणहेतुत्वमेवास्तु बाधकाभावादित्याह—**मैवमित्यादिना ।** अस्ति परमाण्वादिपरिमाणारम्भवादेऽपि तुल्यपरिमाणापत्तिरेव बाधिकेत्याशङ्क्य

निराह–**नचैवमिति।** परमाण्वादिपरिमाणस्य स्वकार्यगतपरिमाणारम्भकत्व इति 'एवं' शब्दार्थः । **साजात्यमिति ।** तथा चाप्रत्यक्षतापत्तिरिति भावः । **साक्षाद् व्याप्येति ।** परिमाणत्वजात्येत्यर्थः ।।

ಮೂಲದಲ್ಲಿ 'ಸಾಮಾನ್ಯ–ವಿಶೇಷನ್ಯಾಯ' ಎಂದಿದೆ. ವಿಶೇಷಗಳಿಗೆ ಕಾರ್ಯ–ಕಾರಣ ಭಾವವಿದ್ದರೆ ಸಾಮಾನ್ಯಗಳಿಗೂ ಕಾರ್ಯಕಾರಣಭಾವ ಹೇಳಬೇಕು, ಎಂಬ ನ್ಯಾಯದಿಂದ ಪರಿಮಾಣ ಸಾಮಾನ್ಯಕ್ಕೆ ಸಂಖ್ಯಾ–ಪ್ರಚಯಸಾಮಾನ್ಯಗಳೂ ಕಾರಣವಾಗುತ್ತವೆ.

ಈ ಆಕ್ಷೇಪಕ್ಕೆ ಸಿದ್ಧಾಂತಗ್ರಂಥದ ಅಭಿಪ್ರಾಯ–ಕಾರ್ಯಗತಗುಣಕ್ಕೆ ಕಾರಣಗತಗುಣವು ಕಾರಣ ಎಂಬ ಸಾಮಾನ್ಯನಿಯಮದಂತೆ ಕಾರ್ಯಗತಪರಿಮಾಣಕ್ಕೆ ಕಾರಣಗತಪರಿಮಾಣಕಾರಣ ಎಂಬ ಉತ್ಸರ್ಗನಿಯಮ ಪ್ರಾಪ್ತವಾಗುತ್ತದೆ. ಅದಕ್ಕೆ ಅನುಗುಣವಾಗಿ ಅವಯವ ಪರಿಮಾಣವೇ ಸರ್ವತ್ರಕಾರಣ. ಪ್ರಚಯಾದಿಗಳು ಕಾರಣಗಳಲ್ಲ, ಎಂದು.

ಅಥವಾ, ಕೆಲವೆಡೆ ಸಂಖ್ಯಾದಿಗಳಿಗೆ ಪರಿಮಾಣಹೇತುತ್ವಬಂದರೂ ಅದು ಅಪವಾದ. ಅಪವಾದ ಇಲ್ಲದಿದ್ದಾಗ ಉತ್ಸರ್ಗವೇ ಪ್ರಾಪ್ತವಾಗುತ್ತದೆ. ಎಂದು ಸಿದ್ಧಾಂತ.

**तद्व्याप्यव्याप्येति ।** परिमाणं चतुर्विधम् । अणुत्वं, महत्त्वं, दीर्घत्वं, ह्रस्वत्वं चेति । नीलत्वपीतत्वाद्यवान्तरजातिवत् परिमाणत्वावान्तरजातिचतुष्टयमुपेत्य परमाणावेवाणुपरिमाणं, द्व्यणुके ह्रस्वपरिमाणं, त्र्यणुकादौ महत्त्वादीत्यभ्युपगमेन द्व्यणुकेऽप्यणुत्वरूपपरिमाणत्वावान्तरजातिमत्परिमाणं, त्र्यणुके च ह्रस्वत्वरूपपरिमाणत्वव्याप्यजातिमत्परिमाणं स्यादित्यापादने चेत्यर्थः । यद्वा उत्कर्षापकर्षादिरूपया गुणत्वव्याप्यपरिमाणत्वव्याप्यजात्येत्यर्थः ।।

ರೂಪತ್ವವ್ಯಾಪ್ಯಗಳಾದ ನೀಲತ್ವ–ಪೀತತ್ವಾದಿಗಳಂತೆ ಪರಿಮಾಣತ್ವವ್ಯಾಪ್ಯವಾದ ಮಹತ್ತ್ವ–ದೀರ್ಘತ್ವಾದಿ ನಾಲ್ಕು ಧರ್ಮಗಳಿವೆ. ಪರಮಾಣುಗಳಲ್ಲಿ ಮಾತ್ರ ಅಣುಪರಿಮಾಣ. ದ್ವ್ಯಣುಕದಲ್ಲಿ ಹ್ರಸ್ವಪರಿಮಾಣ, ತ್ರ್ಯಣುಕಾದಿಪರಿಮಾಣಗಳಲ್ಲಿ ಮಹತ್ತ್ವ–ದೀರ್ಘತ್ವತ್ವ ಜಾತಿಗಳು. ಹೀಗೆ ನೈಯಾಯಿಕರು ಮಾಡಿರುವ ವ್ಯವಸ್ಥೆ. ದ್ವ್ಯಣುಕಾದಿಪರಿಮಾಣಗಳಿಗೂ ಪರಮಾಣ್ವಾದಿ ಪರಿಮಾಣಗಳೇ ಕಾರಣವೆಂದಾದಲ್ಲಿ ಈ ವ್ಯವಸ್ಥೆಗೆ ಭಂಗ ಬರುತ್ತದೆ. ದ್ವ್ಯಣುಕಪರಿಮಾಣದಲ್ಲಿ ಅಣುತ್ವತ್ವಜಾತಿಯೂ ತ್ರ್ಯಣುಕಪರಿಮಾಣದಲ್ಲಿ ಹ್ರಸ್ವತ್ವತ್ವಜಾತಿಯೂ ಬರಬೇಕಾದೀತು. ಇದು 'ಗುಣತ್ವವ್ಯಾಪ್ಯ–ವ್ಯಾಪ್ಯಜಾತ್ಯಾ ತದಾಪಾದನೇ' ಎಂಬ ಮೂಲದ ಆಶಯ.

ಅಥವಾ, ಗುಣತ್ವವ್ಯಾಪ್ಯಪರಿಮಾಣತ್ವ–ವ್ಯಾಪ್ಯಜಾತಿ ಎಂದರೆ ಉತ್ಕರ್ಷಾಪಕರ್ಷರೂಪ ಜಾತಿಗಳು. ಈ ರೂಪದಿಂದ ಸಾಮ್ಯವನ್ನು ಆಪಾದಿಸಿದರೆ, ಎಂದರ್ಥ.

## ಅವತಾರಿಕೆ

**स्वोत्प्रेक्षितपक्षैः सहोक्तानि पञ्चधा समाधानान्यपि परिमाणप्रवादानुकूलानीति मन्वानः "परमतमाश्रित्य परस्येदं दूषणाभिधानम्" इति सुधोक्तं हृदिकृत्वाह—किञ्च परसिद्धेत्यादि ।**

ಇದುವರೆಗೆ ಒಟ್ಟು ಐದು ಸಮಾಧಾನಗಳನ್ನು, ಉತ್ಪ್ರೇಕ್ಷೆಮಾಡಿ ಹೇಳಲಾಗಿದೆ. ಇವು ನಮ್ಮ ಪರಿಮಾಣವಾದಕ್ಕೆ ಸಮ್ಮತವಾದ ಸಮಾಧಾನಗಳಲ್ಲ. ಪರಮತವನ್ನು ಅವಲಂಬಿಸಿ ಪರರಿಗೆ ಹೇಳಿರುವ ದೋಷಗಳು. ಸುಧಾದಲ್ಲಿ ಹಾಗೆಯೇ ಹೇಳಲಾಗಿದೆ. ಈ ವಿಷಯವನ್ನು ಮುಂದಿನಭಾಗದಲ್ಲಿ ಸ್ಪಷ್ಟೀಕರಿಸಲಾಗಿದೆ.

**किञ्च, परसिद्धं परिमाणत्वावान्तरम् अणुत्वदिजातिभेदमङ्गीकृत्येदमुक्तम् ।**

**वस्तुतस्तु, यथा त्र्यणुकादिषु महत्वमेकजातीयमेवोत्कर्षापकर्षवत्, यथाचाणुत्वं परमाणुद्व्यणुकयोः, एवं परिमाणम् अवान्तरजातिरहितमेव सर्वद्रव्येषूत्कर्षापकर्षवद् वर्तते । एकस्यैवोत्कर्षापकर्षौ च प्रतियोगिभेदेन सन्निकर्षविप्रकर्षाविवाविरुद्धौ । विस्तरस्तु सुधायां द्रष्टव्यः ।।**

ಈವರೆಗೆ ನೈಯಾಯಿಕಮತಸಿದ್ಧವಾದ, ಪರಿಮಾಣತ್ವವ್ಯಾಪ್ಯವಾದ, ಅಣುತ್ವತ್ವ–ಮಹತ್ವತ್ವಾದಿ ಜಾತಿಗಳನ್ನು ಅಂಗೀಕರಿಸಿ ಪರಾಕ್ಷೇಪಗಳಿಗೆ ಸಮಾಧಾನವನ್ನು ಹೇಳಲಾಗಿದೆ. ವಸ್ತುತಸ್ತು ಅಣುತ್ವತ್ವ–ಮಹತ್ವತ್ವಾದಿ ಜಾತಿಗಳೇ ಇಲ್ಲ. ನೈಯಾಯಿಕರ ಮತದಲ್ಲಿ ತ್ರ್ಯಣುಕ ಮತ್ತು ಅದಕ್ಕಿಂತ ದೊಡ್ಡದಾಗಿರುವ ಪದಾರ್ಥಗಳ ಪರಿಮಾಣದಲ್ಲಿ ಮಹತ್ವತ್ವ ಎಂಬ ಒಂದೇ ಜಾತಿಯಾದರೂ ಪರಿಮಾಣಗಳಲ್ಲಿ ಉತ್ಕರ್ಷಾಪಕರ್ಷಗಳು ಇವೆ. ಅದರಂತೆ ಸಕಲ ದ್ರವ್ಯಗಳ ಪರಿಮಾಣಗಳಲ್ಲೂ, ಪರಿಮಾಣತ್ವವ್ಯಾಪ್ಯವಾದ ಅವಾಂತರ ಜಾತಿಗಳು ಇಲ್ಲದಿದ್ದರೂ, ಉತ್ಕರ್ಷಾಪಕರ್ಷಗಳು ಇವೆ. ಅಂದರೆ, ತ್ರ್ಯಣುಕಪರಿಮಾಣವು ಅಣುವೂ ಹೌದು, ಮಹತ್ತೂ ಹೌದು. ಅದರಂತೆ ದ್ವ್ಯಣುಕ–ಪರಮಾಣುಗಳ ಪರಿಮಾಣವೂ ಅಣುತ್ವವೂ ಆಗಿದೆ, ಮಹತ್ವವೂ ಆಗಿದೆ. ಇವೆರಡು ವಿರುದ್ಧಧರ್ಮಗಳಾದರೂ ಪ್ರತಿಯೋಗಿಭೇದೇನ ಒಂದರಲ್ಲೇ ಬರಬಹುದು. ಒಂದೇ ವಸ್ತುವು

ಒಬ್ಬನಿಗೆ ಸಮೀಪ, ಇನ್ನೊಬ್ಬನಿಗೆ ದೂರವಾಗುವಂತೆ ತ್ರ್ಯಣುಕವು ಚತುರಣುಕಾಪೇಕ್ಷಯಾ ಅಣುದ್ರವ್ಯ, ದ್ವ್ಯಣುಕಾಪೇಕ್ಷಯಾ ಮಹತ್. ಅದರಂತೆ ದ್ವ್ಯಣುಕ. ಈ ಬಗ್ಗೆ ವಿಸ್ತೃತವಿವೇಚನೆ ಸುಧಾ ವೈಶೇಷಿಕಾಧಿಕರಣದಲ್ಲಿದೆ.

## ನ್ಯಾಯದೀಪ

**सुधायामिति । वैशेषिकाधिकरणे समयपाद इत्यर्थः ।।**

ನ್ಯಾಯಸುಧಾದ ಸಮಯಪಾದ-ವೈಶೇಷಿಕಾಧಿಕರಣದಲ್ಲಿ ''ಮಹದ್ದೀರ್ಘವದ್ವಾ'' ಎಂಬ ಸೂತ್ರವ್ಯಾಖ್ಯಾನ ಸಂದರ್ಭದಲ್ಲಿ ಪರಿಮಾಣದ ಬಗ್ಗೆ ವಿಮರ್ಶೆ ಇದೆ.

## ನಿಗಮನ

**तस्मादीश्वरस्य सार्वज्ञादेर्वेदनिरपेक्षानुमानेनासिद्धेः कल्पनागौरवं सुस्थम् ।।**

ಹೀಗೆ ಈಶ್ವರನಿಗೆ ಸಾರ್ವಜ್ಞ್ಯಾದಿಗುಣಗಳು ಸ್ವತಂತ್ರಾನುಮಾನಗಳಿಂದ ಸಿದ್ಧವಾಗದಿರುವುದರಿಂದ ಅವುಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಆದ್ದರಿಂದ ವೇದಾಪೌರುಷೇಯತ್ವವನ್ನು ಅಂಗೀಕರಿಸದಿದ್ದಲ್ಲಿ ಕಲ್ಪನಾಗೌರವವು ಅನಿವಾರ್ಯ-''ಗೌರವಂ ಕಲ್ಪನೇಽನ್ಯಥಾ ।''

**ಇಲ್ಲಿಗೆ ಈಶ್ವರವಾದ ಮುಗಿಯಿತು.**

# ಈ ಪ್ರಕರಣದ ಸಾರಾಂಶ

ವೇದಾಪೌರುಷೇಯತ್ವಪ್ರಕರಣಕ್ಕೆ ಸಂಬಂಧಪಟ್ಟಂತೆ, ಈಶ್ವರವಾದವು ತರ್ಕತಾಂಡವದಲ್ಲಿ ಒಂದೇ ಪ್ರಕರಣದಲ್ಲಿ ಪ್ರಸ್ತುತವಾಗಿದೆ. ವೇದಾಪೌರುಷೇಯತ್ವವನ್ನು ಒಪ್ಪದಿದ್ದಲ್ಲಿ ಗೌರವಗಳನ್ನು ಹೇಳುವಾಗ ಈಶ್ವರ, ಅವನಿಗೆ ಸರ್ವಜ್ಞತ್ವಾದಿಗಳನ್ನು ಕಲ್ಪನೆ ಮಾಡಬೇಕಾಗುತ್ತದೆ, ಎಂದು ಆಪಾದಿಸಲಾಗಿದೆ. ಇದಕ್ಕೆ ನೈಯಾಯಿಕರು ಹೇಳುವ ಪರಿಹಾರ–ಕಲ್ಪನೆ ಮಾಡಬೇಕಾಗಿಲ್ಲ, ಅನುಮಾನಪ್ರಮಾಣದಿಂದ ಸರ್ವಜ್ಞನಾದ ಈಶ್ವರನು ಸಿದ್ಧನಾಗುತ್ತಾನೆ, ಎಂದು. ಅನುಮಾನಪ್ರಕರಣ ಮಣಿಗ್ರಂಥದ ಕೊನೆಯಲ್ಲಿ 'ಈಶ್ವರಾನುಮಾನಮ್' ಎಂಬ ಒಂದು ಭಾಗವೇ ಇದಕ್ಕಾಗಿ ಮೀಸಲಾಗಿದೆ.

**ಈಶ್ವರಾನುಮಾನ**—ಘಟಪಟಾದಿ ಕಾರ್ಯಗಳಿಗೆ ಒಬ್ಬ ಕರ್ತೃ ಇರುವಂತೆ ಈ ಭೂ–ಭೂಧರಾದಿಗಳಿಗೂ ಒಬ್ಬ ಕರ್ತೃ ಇರಬೇಕು. ಅವನೇ ಈಶ್ವರ. ಕಾರ್ಯಕ್ಕೆ ಬೇಕಾದ ಕಾರಣಗಳ ಪ್ರತ್ಯಕ್ಷವು ಯಾರಿಗೆ ಇದೆಯೋ ಅವನು ಕರ್ತೃ. ಈ ಅಖಂಡ ಬ್ರಹ್ಮಾಂಡದ ಸೃಷ್ಟಿಗೆ ಬೇಕಾದ ಕಾರಣಗಳ ಜ್ಞಾನವು ಈಶ್ವರನಿಗೆ ಇದ್ದರೆ ಮಾತ್ರ ಅವನು ವಿಶ್ವಕರ್ತನಾಗುತ್ತಾನೆ. ಅಂತಹ ಜ್ಞಾನವಿದ್ದರೆ ಅವನು ಸರ್ವಜ್ಞನೆಂದೇ ಸಿದ್ಧವಾಗುತ್ತದೆ. ಕೇವಲ ಜ್ಞಾನವಿದ್ದರೆ ಸಾಲದು, ಸೃಷ್ಟಿಮಾಡುವ ಇಚ್ಛೆಬೇಕು, ಪ್ರಯತ್ನವೂ ಬೇಕು. ಇದರಿಂದ ಈಶ್ವರನಿಗೆ ಜ್ಞಾನ, ಇಚ್ಛಾ, ಪ್ರಯತ್ನಗಳೆಂಬ ಮೂರು ಗುಣಗಳು ಸಿದ್ಧವಾಗುತ್ತವೆ.

ಹೀಗೆ ಅನುಮಾನ ಮಾಡುವಾಗ ಒಂದು ಸಮಸ್ಯೆ ಇದೆ. ಪ್ರತಿಯೊಂದು ಕಾರ್ಯವಸ್ತುಗಳೂ ಜೀವರ ಸುಖ–ದುಃಖಗಳಿಗೆ ಕಾರಣವಾಗಿವೆ. ಆ ವಸ್ತುಗಳನ್ನು ಆಶ್ರಯಿಸುವ ಮೂಲಕವೊ, ನೋಡುವ ಮೂಲಕವೋ, ಅಥವಾ ತಿನ್ನುವ ಮೂಲಕವೋ ಅವುಗಳನ್ನು ಒಬ್ಬರಲ್ಲ ಒಬ್ಬ ಜೀವರು ಭೋಗಿಸಿ ಸುಖವನ್ನೋ ದುಃಖವನ್ನೊ ಅನುಭವಿಸುತ್ತಾರೆ. ಸುಖ–ದುಃಖಗಳಿಗೆ ಪುಣ್ಯ–ಪಾಪಗಳು ಕಾರಣಗಳು. ಪುಣ್ಯ–ಪಾಪಗಳ ಸಂಪಾದನೆ ಸತ್ಕರ್ಮ–ದುಷ್ಕರ್ಮಗಳಿಂದ ಆಗುತ್ತದೆ. ಆ ಕರ್ಮ ಮಾಡಲು ಜೀವರು ಪ್ರಯತ್ನ ಮಾಡಬೇಕು. ಹೀಗೆ ಈ ವಿಶ್ವ ಒಂದರ್ಥದಲ್ಲಿ ಪರಂಪರಯಾ ಜೀವರ ಪ್ರಯತ್ನದಿಂದಲೇ ಹುಟ್ಟಿದೆ. ಅರ್ಥಾತ್ ಜೀವರೇ ಕರ್ತೃಗಳು. ಈಶ್ವರನ ಅಗತ್ಯವೇನು?

ಈ ಸಮಸ್ಯೆಯನ್ನು ನೈಯಾಯಿಕರು ಹೀಗೆ ಪರಿಹರಿಸಿದ್ದಾರೆ—

ಮನೆ–ಮಠಗಳನ್ನು ಕೆಲವರು ನಿರ್ಮಾಣಮಾಡುತ್ತಾರೆ. ಅವುಗಳನ್ನು ಇತರರು ಕೊಂಡು ಅನುಭವಿಸುತ್ತಾರೆ. ಅಂದರೆ, ವಸ್ತುಗಳ ಉತ್ಪತ್ತಿಗೆ ಅದನ್ನು ತಯಾರಿಸುವ ವ್ಯಕ್ತಿಯ ಪ್ರಯತ್ನವೂ ಬೇಕು, ಅದನ್ನು ಭೋಗಿಸುವವರ ಯತ್ನವೂ ಬೇಕು. ಭೋಗಿಸುವವರ ಪ್ರಯತ್ನ ಅದೃಷ್ಟದ ಮೂಲಕ ಕಾರಣವಾಗುತ್ತದೆ, ನಿರ್ಮಾಣ ಮಾಡುವವರ ಯತ್ನ ಸಾಕ್ಷಾತ್ತಾಗಿ ಕಾರಣವಾಗುತ್ತದೆ. ಈ ವಿಶ್ವದ ನಿರ್ಮಾಣಕ್ಕೂ ಇಂತಹ ಎರಡು ರೀತಿಯ ಪ್ರಯತ್ನಗಳು ಬೇಕು. ಅವುಗಳಲ್ಲಿ ನಿರ್ಮಾಣಕ್ಕೆ ಬೇಕಾದ ನೇರ ಪ್ರಯತ್ನ ಈಶ್ವರನದು. ಹೀಗೆ ವಿಶ್ವಸೃಷ್ಟಿಗೆ ಈಶ್ವರನ ಅನಿವಾರ್ಯತೆ ಇದೆ.

ಇನ್ನೊಂದು ಸಮಸ್ಯೆ–ನಾವು ನೋಡುವ ಗ್ರಹ–ನಕ್ಷತ್ರ–ಮರ–ಗಿಡಗಳಿಗೆ ಯಾರು ಕರ್ತೃಗಳೆಂದು ಗೊತ್ತಿಲ್ಲ. ಅವುಗಳು ತಮಗೆ ತಾವಾಗಿಯೇ, ಸನ್ನಿವೇಶಕ್ಕೆ ತಕ್ಕಂತೆ, ಹುಟ್ಟುತ್ತವೆ, ಸಾಯುತ್ತವೆ. ಹೀಗಿರುವಾಗ ''ಎಲ್ಲ ಕಾರ್ಯಗಳಿಗೂ ಒಬ್ಬ ಕರ್ತೃ ಇರಬೇಕು'' ಎಂದು ನಿರ್ಣಯ ಮಾಡುವುದು ಹೇಗೆ?

ಇದಕ್ಕೆ ತಾರ್ಕಿಕರ ಸಮಾಧಾನ ಹೀಗೆ— ನಾವು ಕಣ್ಣಿನಿಂದ ನೋಡುತ್ತೇವೆ. ಅನೇಕ ವಸ್ತುಗಳನ್ನು ನೋಡಿ ಈ ಅನುಭವ ನಮಗೆ ಬರುತ್ತದೆ. ಇದರ ಆಧಾರದಿಂದ ಸಾಮಾನ್ಯ ನಿಯಮವನ್ನು ಊಹಿಸುತ್ತೇವೆ—ಯಾರಿಗೆ ಕಣ್ಣಿದೆಯೋ ಅವರೆಲ್ಲರೂ ನೋಡುತ್ತಾರೆ, ಎಂದು. ಅದರಂತೆ ನಮ್ಮ ಮುಂದಿರುವ ಮನೆ–ಮಠ–ತೋಟ ಇವುಗಳನ್ನು ಯಾರಾದರೊಬ್ಬ ನಿರ್ಮಾಣ ಮಾಡುವುದನ್ನು ನೋಡುತ್ತೇವೆ. ಅದರ ಆಧಾರದಿಂದ 'ಯಾವುದು ನಿರ್ಮಾಣಗೊಂಡಿದೆಯೋ ಅದಕ್ಕೆಲ್ಲ ಒಬ್ಬ ನಿರ್ಮಾತೃ ಇರಬೇಕು'ಎಂದು ಸಾಮಾನ್ಯನಿಯಮವನ್ನು ಮಾಡಬಹುದು. ವಿಶೇಷಗಳಿಗೆ ಇರುವ ಕಾರ್ಯಕಾರಣಭಾವವು ಸಾಮಾನ್ಯಕ್ಕೂ ಅನ್ವಯಿಸುತ್ತದೆ, ಎಂದು ನೈಯಾಯಿಕರ ಅಭ್ಯುಪಗಮ. ಕಾರ್ಯವಿಶೇಷವಾದ ಮನೆ–ಮಠಗಳಿಗೂ ಕಾರಣವಿಶೇಷಗಳಾದ ಅವುಗಳನ್ನು ನಿರ್ಮಾಣ ಮಾಡಿರುವ ವ್ಯಕ್ತಿಗಳಿಗೂ ಕಾರ್ಯ–ಕಾರಣಭಾವವು ಕಂಡಿರುವುದರಿಂದ ಕಾರ್ಯಸಾಮಾನ್ಯಕ್ಕೂ ಕರ್ತೃಸಾಮಾನ್ಯಕ್ಕೂ ಕಾರ್ಯ–ಕಾರಣಭಾವವು ನಿರ್ಧಾರವಾಗುತ್ತದೆ. ಅದಕ್ಕನುಸಾರವಾಗಿ ಕಾರ್ಯವಾಗಿರುವ ಭೂಮಿ–ಗ್ರಹ–ನಕ್ಷತ್ರಗಳಿಗೂ ಕರ್ತೃವನ್ನು ಅನುಮಾನ ಮಾಡಬೇಕು.

ಈ ಸಂದರ್ಭದಲ್ಲಿ ಮಣಿಕಾರ ಸ್ವಾರಸ್ಯಕರವಾದ ಒಂದು ಚರ್ಚೆಯನ್ನು ಮಾಡಿದ್ದಾನೆ. ಕಾರ್ಯವಾಗಬೇಕಾದರೆ ಕೃತಿ(ಪ್ರಯತ್ನ) ಕಾರಣವೋ ಕರ್ತೃಕಾರಣವೋ? ಎಂದು. ಕರ್ತೃವೇ ಕಾರಣ ಎಂದು ಮಣಿಕಾರನ ಸಿದ್ಧಾಂತ. ಪ್ರಯತ್ನಶೀಲನಾದ ಆತ್ಮನ ಸಂಯೋಗದಿಂದ ಶರೀರದಲ್ಲಿ ಕ್ರಿಯೆ ಹುಟ್ಟುತ್ತದೆ. ಅದರಿಂದ ಘಟಾದಿಕಾರ್ಯಗಳು ಆಗುತ್ತವೆ. ಇಲ್ಲಿ ಶರೀರಕ್ರಿಯೆಗೆ ಆತ್ಮನ ಪ್ರಯತ್ನ ಕಾರಣ ಎನ್ನುವುದು ಸರಿಯಲ್ಲ. ಪ್ರಯತ್ನ ಆತ್ಮನಲ್ಲಿದೆ, ಕ್ರಿಯೆ ಶರೀರದಲ್ಲಿದೆ. ಆವೆರಡೂ ವ್ಯಧಿಕರಣಗಳು. ಅದಕ್ಕಾಗಿ, ಪ್ರಯತ್ನವದಾತ್ಮಸಂಯೋಗವೇ ಕ್ರಿಯೆಗೆ ಕಾರಣ ಎನ್ನಬೇಕು. ಆಗ, ಆತ್ಮನೇ ಕಾರಣ ಎಂದಂತಾಗುತ್ತದೆ. ಗಾಳಿಯ ವೇಗ ಮರ ಅಲುಗಾಡುವುದಕ್ಕೆ ಕಾರಣ. ಇದರ ಅರ್ಥ–ವೇಗವುಳ್ಳ ವಾಯುಸಂಯೋಗ ಮರದ ಚಲನೆಗೆ ಕಾರಣ ಎಂದು. ಅದರಂತೆಯೇ ಪ್ರಕೃತದಲ್ಲೂ ಆತ್ಮಸಂಯೋಗವು ಅರ್ಥಾತ್ ಶರೀರ ಸಂಯುಕ್ತನಾದ ಆತ್ಮ ಕಾರ್ಯಕ್ಕೆ ಕಾರಣ.

ಒಬ್ಬ ವ್ಯಕ್ತಿ ಕರ್ತೃ ಎನಿಸಬೇಕಾದರೆ ಅವನು ತಯಾರಿಸಬೇಕಾದ ವಸ್ತುವಿಗೆ ಬೇಕಾದ ಕಾರಣಗಳ ಅಪರೋಕ್ಷಜ್ಞಾನ, ಅದರಿಂದಾಗಿ ಮಾಡಬೇಕೆಂಬ ಇಚ್ಛೆ, ಅದರಿಂದ ಪ್ರಯತ್ನ ಈ ಮೂರು ಗುಣಗಳು ಅವನಿಗೆ ಇರಬೇಕು. ಇಲ್ಲಿ ಒಂದು ಜಿಜ್ಞಾಸೆ—ಪ್ರಯತ್ನ ಮಾಡಬೇಕಾದರೆ ''ಇದಂ ಕುರ್ಯಾಂ'' ಎಂಬ ಇಚ್ಛೆ ಬೇಕು. ಈ ಇಚ್ಛೆ ತಾನು ಮಾಡುವ ಕೆಲಸ ಇಷ್ಟಸಾಧನ, ಎಂಬ ಜ್ಞಾನದಿಂದ ಬರುತ್ತದೆ. ನಿದ್ರೆಯು ಇಷ್ಟಸಾಧನ ಎಂದು ತಿಳಿದಾಗ ನಿದ್ರೆ ಮಾಡುವ ಇಚ್ಛೆಯುಂಟಾಗುತ್ತದೆ, ಮಲಗುವ ಪ್ರಯತ್ನ ಮಾಡುತ್ತೇವೆ. ಇಷ್ಟಸಾಧನತಾಜ್ಞಾನ

ಅನುಮಿತಿರೂಪವಾದ ಪರೋಕ್ಷಜ್ಞಾನ. ಹಾಗಾದರೆ ಕರ್ತೃವಿಗೆ ಮಾಡುವಕಾರ್ಯವು ಇಷ್ಟಸಾಧನ, ಎಂಬ ಪರೋಕ್ಷಜ್ಞಾನವಿದ್ದರೆ ಸಾಕು, ಅವನು ಪ್ರಯತ್ನಶೀಲನಾಗುತ್ತಾನೆ. ಉಪಾದಾನದ (ಕಾರಣದ) ಅಪರೋಕ್ಷಜ್ಞಾನ ಏಕೆ ಬೇಕು?

ಅಸಿದ್ಧವಾದ ವಸ್ತುವಿನ ಬಗ್ಗೆ ಇಷ್ಟಸಾಧನತಾಜ್ಞಾನದಿಂದ ಸಿದ್ಧವಾದ ವಸ್ತುವಿನ ವಿಷಯದಲ್ಲಿ ಕೃತಿಯು ಉಂಟಾಗುತ್ತದೆ. ಬಟ್ಟೆಯನ್ನು ಮುಂದೆ ನೇಯಬೇಕಾಗಿದೆ. ಅದು ಈಗ ಅಸಿದ್ಧ. ಅದರ ಬಗ್ಗೆ ಇಷ್ಟಸಾಧನತಾಜ್ಞಾನ ಇರಬೇಕು. ಆಗ ಸಿದ್ಧವಾದ ನೂಲನ್ನು ಜೋಡಿಸಲು ಪ್ರಯತ್ನ ಮಾಡುತ್ತಾನೆ. ನೂಲನ್ನು ಜೋಡಿಸಬೇಕಾದರೆ ನೂಲಿನ ಅಪರೋಕ್ಷಜ್ಞಾನಬೇಕು. ಹೀಗೆ ಪ್ರಯತ್ನಕ್ಕೆ ಅಸಿದ್ಧವಸ್ತುವಿನ ಇಷ್ಟಸಾಧನತಾಜ್ಞಾನ, ಸಿದ್ಧವಸ್ತುವಿನ ಅಪರೋಕ್ಷಜ್ಞಾನ ಎರಡೂ ಬೇಕು.

ಇದರ ಮೇಲೆ ಆಕ್ಷೇಪ—ನಮ್ಮ ಮನಸ್ಸು ಕ್ರಿಯಾಶೀಲವಾಗಬೇಕಾದರೆ ಆತ್ಮನ ಪ್ರಯತ್ನ ಕಾರಣ. ಇಲ್ಲಿ ಸಿದ್ಧವಾದುದು ಮನಸ್ಸು. ಅದರ ಅಪರೋಕ್ಷಜ್ಞಾನವೇ ಇಲ್ಲ. ಹೀಗಿರುವಾಗ ಆತ್ಮನಲ್ಲಿ ಮನಸ್ಸಿನ ಕ್ರಿಯೆಗಾಗಿ ಪ್ರಯತ್ನ ಉಂಟಾಗುವುದು ಹೇಗೆ? ಇದಕ್ಕೆ ಮಣಿಕಾರ ಹೀಗೆ ಸಮಾಧಾನ ಹೇಳಿದ್ದಾನೆ—ಮನಸ್ಸಿನಲ್ಲಿ ಕ್ರಿಯೆಬರಬೇಕಾದರೆ ಆತ್ಮ ನೇರವಾಗಿ ಮನೋವಿಷಯಕಪ್ರಯತ್ನ ಮಾಡುವುದಿಲ್ಲ. ಮನಸ್ಸು ಚಲಿಸುವದಾರಿ ದೇಹದ ನಾಡಿಗಳು. ನಾಡಿಗಳ ಬಗ್ಗೆ ಆತ್ಮನು ಪ್ರಯತ್ನ ಮಾಡಿ ಅದರಲ್ಲಿ ಕ್ರಿಯೆಯನ್ನು ಉಂಟುಮಾಡುತ್ತಾನೆ. ಅಂತಹ ಕ್ರಿಯಾಶೀಲವಾದ ನಾಡಿಯ ಬಡಿತದಿಂದ ಅದರೊಳಗಿರುವ ಮನಸ್ಸಿನಲ್ಲಿ ಕ್ರಿಯೆ ಉಂಟಾಗುತ್ತದೆ. ನಾಡಿಗಳ ಅಪರೋಕ್ಷಜ್ಞಾನ ಮನಸ್ಸಿನಿಂದ ಆತ್ಮನಿಗೆ ಬರುತ್ತದೆಯಾದ್ದರಿಂದ ಅನುಪಪತ್ತಿಗೆ ಅವಕಾಶವಿಲ್ಲ.

ಕೃತಿಗೆ ಇಚ್ಛೆಯು ಕಾರಣ, ಎನ್ನುವುದು ಸರಿಯೇ? ಇಚ್ಛೆಯಿಂದ ಕ್ರಿಯಾಶೀಲರಾಗುವಂತೆ ದ್ವೇಷದಿಂದಲೂ ಪ್ರಯತ್ನಶೀಲರಾಗುತ್ತೇವೆ. ದುಃಖದ ಮೇಲಿನ ದ್ವೇಷದಿಂದಾಗಿ ದುಃಖಪರಿಹಾರಕ್ಕೆ ಪ್ರಯತ್ನಿಸುತ್ತೇವೆ. ಹೀಗಿರುವಾಗ ಇಚ್ಛೆಯಿಂದಲೇ ಪ್ರಯತ್ನ ಎನ್ನುವುದು ಹೇಗೆ? ಇದಕ್ಕೆ ಮಣಿಯಲ್ಲಿ ಹೇಳಿದ ಉತ್ತರ–ದುಃಖವು ಅನಿಷ್ಟವಾದುದರಿಂದ ದುಃಖಾಭಾವವು ಇಷ್ಟ. ಅಂತಹ ದುಃಖಾಭಾವಕ್ಕೆ ಸಾಧನವಾದುದರಲ್ಲಿ ಇಷ್ಟಸಾಧನತಾಜ್ಞಾನ ಬಂದೇ ಅದರಲ್ಲಿ ಇಚ್ಛೆ ಉಂಟಾಗಿ ಪ್ರಯತ್ನಮಾಡುತ್ತೇವೆ. ಹೀಗೆ, ಅಲ್ಲೂ ಇಚ್ಛೆಯಿಂದಲೇ ಪ್ರವೃತ್ತಿ, ದ್ವೇಷದಿಂದಲ್ಲ.

ಇಷ್ಟಾದರೂ ಕ್ಷಿತ್ಯಾದಿಗಳಿಗೆ ಪ್ರಯತ್ನಕಾರಣ, ಎನ್ನಲು ಸಾಧ್ಯವಿಲ್ಲ. ಆತ್ಮನ ಪ್ರಯತ್ನವು ನೇರವಾಗಿ ಕಾರ್ಯನಿರ್ಮಾಣಕ್ಕೆ ಕಾರಣವಾಗುವುದಿಲ್ಲ. ಅವನ ಪ್ರಯತ್ನದಿಂದಾಗಿ ಶರೀರದಲ್ಲಿ ಕ್ರಿಯೆ ಉಂಟಾಗುತ್ತದೆ, ಅದರಿಂದ ಕಾರ್ಯವು ನಿರ್ಮಾಣವಾಗುತ್ತದೆ. ಆದರೆ ಕ್ಷಿತ್ಯಾದಿ ನಿರ್ಮಾಣದಲ್ಲಿ ಯಾರ ಶರೀರಕ್ರಿಯೆಯೂ ಇಲ್ಲ. ಮೀಮಾಂಸಕರು ಈಶ್ವರನನ್ನೇ ಅಂಗೀಕರಿಸಿಲ್ಲ. ನೈಯಾಯಿಕರು ಅಂಗೀಕರಿಸಿದ್ದರೂ ಆ ಈಶ್ವರನಿಗೆ ಶರೀರವಿಲ್ಲ, ಎನ್ನುತ್ತಾರೆ. ಹೀಗೆ ಕ್ಷಿತ್ಯಾದಿಗಳು ಕ್ರಿಯಾಜನ್ಯವಲ್ಲವಾದ ಕಾರಣ, ಕೃತಿ ಜನ್ಯಗಳೂ ಅಲ್ಲ. ಇದು ಮೀಮಾಂಸಕರ ಆಕ್ಷೇಪ.

ಇದಕ್ಕೆ ನೈಯಾಯಿಕರ ಸಮಾಧಾನ ಹೀಗೆ—ಕಾರ್ಯಸಾಮಾನ್ಯವು ಶರೀರಕ್ರಿಯಾಜನ್ಯ ಎಂದು ಮೀಮಾಂಸಕರೂ ಹೇಳುವಂತಿಲ್ಲ. ಈ ಪ್ರಪಂಚವು ಕಾರ್ಯವಾದರೂ ಅದನ್ನು

ಶರೀರಕ್ರಿಯಾಜನ್ಯ ಎಂದು ಮೀಮಾಂಸಕರು ಅಂಗೀಕರಿಸಿಲ್ಲ. ಇನ್ನು ಕೃತಿಜನ್ಯವಾದ ವಸ್ತುಗಳೆಲ್ಲವೂ ಕ್ರಿಯಾಜನ್ಯ, ಎಂದು ಮೀಮಾಂಸಕರು ಹೇಳಬಹುದು. ಪ್ರಪಂಚವು ಅವರ ಮತದಂತೆ ಕೃತಿಜನ್ಯವಲ್ಲವಾದ ಕಾರಣ ಅದು ಕ್ರಿಯಾಜನ್ಯವೂ ಅಲ್ಲ. ಕೃತಿಜನ್ಯವಾಗಿರುವ ಮನೆಮಠಗಳೆಲ್ಲವೂ ಕ್ರಿಯಾಜನ್ಯವೂ ಆಗಿವೆ. ಆದ್ದರಿಂದ ಕೃತಿಜನ್ಯವಾದ ಕಾರ್ಯಗಳೆಲ್ಲವೂ ಕ್ರಿಯಾದ್ವಾರಾ ಕೃತಿಯಿಂದ ಜನ್ಯವಾಗುತ್ತವೆ, ಎಂಬ ಈ ನಿಯಮಕ್ಕೆ ಅಪವಾದಗಳೇನೂ ಇಲ್ಲ. ಆದರೂ ಹೀಗೆ ಹೇಳುವುದು ಆತ್ಮಾಶ್ರಯದೋಷಕ್ಕೆ ಕಾರಣವಾಗುತ್ತದೆ. ಏಕೆಂದರೆ, ಇದರ ಪರ್ಯವಸಾನ ಕೃತಿಜನ್ಯವಾದುದೆಲ್ಲ ಕೃತಿಜನ್ಯ, ಎಂದು. ಯಾವುದು ಕೃತಿಜನ್ಯ? ಎಂಬ ಪ್ರಶ್ನೆಗೆ 'ಕೃತಿಜನ್ಯವಾದುದು ಕೃತಿಜನ್ಯ' ಎಂದು ಹೇಳುವುದರಿಂದ ಯಾವ ಉತ್ತರವನ್ನೂ ಕೊಟ್ಟಂತಾಗುವುದಿಲ್ಲ. ಆದ್ದರಿಂದ 'ಮನೆಯೇ ಮೊದಲಾದ ಕಾರ್ಯವಿಶೇಷಗಳಿಗೆ ಕ್ರಿಯಾದ್ವಾರಕ-ಕೃತಿಯು ಕಾರಣ' ಇದು ವಿಶೇಷಕಾರ್ಯಕಾರಣಭಾವ. 'ಕಾರ್ಯಸಾಮಾನ್ಯಕ್ಕೆ ಕೃತಿಸಾಮಾನ್ಯಕಾರಣ' ಇದು ಸಾಮಾನ್ಯ-ಕಾರ್ಯಕಾರಣಭಾವ. ಇದಕ್ಕೆ ಅನುಗುಣವಾಗಿ ವಿಶ್ವಸೃಷ್ಟಿಗೆ ಈಶ್ವರನ ಕೃತಿಮಾತ್ರ ಕಾರಣ ಎಂದು ಸಿದ್ಧವಾಗುತ್ತದೆ. ಕ್ರಿಯೆಯ ಆಗತ್ಯವಿಲ್ಲ. ಆದ್ದರಿಂದ ಕ್ರಿಯೆಗಾಗಿ ಶರೀರದ ಆವಶ್ಯಕತೆಯೂ ಇಲ್ಲ. ಅಶರೀರನಾದ ಈಶ್ವರನು ಸಿದ್ಧನಾಗುತ್ತಾನೆ. ಅವನಿಗೆ ಸೃಷ್ಟಿಗೆ ಬೇಕಾದ ಜ್ಞಾನ, ಇಚ್ಛಾ, ಕೃತಿಗಳು ಕಾರಣಗಳು, ಎಂದೂ ಸಿದ್ಧವಾಗುತ್ತವೆ. ಲಾಘವಾತ್, ಅವನ ಜ್ಞಾನಾದಿಗಳು ನಿತ್ಯವಾಗಿವೆ, ಒಂದೊಂದೇ ಆಗಿವೆ, ಎನ್ನುವುದೂ ಸಿದ್ಧವಾಗುತ್ತದೆ. ಹೀಗೆ ನೈಯಾಯಿಕರು ಆಗಮದ ಉಲ್ಲೇಖವನ್ನೇ ಮಾಡದೆ ಸರ್ವಜ್ಞನಾದ ಈಶ್ವರನನ್ನು ಸಾಧಿಸುತ್ತಾರೆ.

ನೈಯಾಯಿಕರ ಈ ಸಿದ್ಧಾಂತವನ್ನು ತರ್ಕತಾಂಡವದಲ್ಲಿ ವಿಸ್ತೃತವಾಗಿ ವಿಮರ್ಶಿಸಲಾಗಿದೆ. ವೇದಾಂತಿಗಳಾದ ನಾವೂ ಈಶ್ವರನನ್ನು ಅಂಗೀಕರಿಸುತ್ತೇವೆ. ಅದರ ಬಗ್ಗೆ ವಿವಾದ ಇಲ್ಲ. ಆದರೂ ಅವನ ಬಗ್ಗೆ ಉಪನಿಷತ್ತುಗಳೇ ಮೊದಲಪ್ರಮಾಣಗಳು. ಅದನ್ನು ದೃಢಪಡಿಸಿಕೊಳ್ಳಲು ಅನುಮಾನವು ಸಹಕಾರಿಯಾಗುತ್ತದೆ. ಕೇವಲ ಅನುಮಾನದಿಂದಲೇ ಈಶ್ವರ, ಅವನ ಸ್ವರೂಪವನ್ನು ನಿರ್ಣಯಿಸುವುದು ಅನೇಕ ಸಮಸ್ಯೆಗಳಿಗೆ ಕಾರಣವಾಗುತ್ತದೆ, ಎಂದು ವೇದಾಂತಿಗಳ ವಾದ.

**ಸಮಸ್ಯೆ 1**—ಪ್ರಪಂಚಕ್ಕೆ ಕರ್ತೃ ಇದ್ದಾನೆ ಎಂದು ಸಾಧಿಸಬೇಕಾದರೆ ಅದು ಹುಟ್ಟುತ್ತದೆ ಎಂದು ನಿರ್ಧಾರವಾಗಬೇಕು. ಒಂದು ವಸ್ತು ಮೊದಲು ಕಾಣದಾಗಿದ್ದು ಆಮೇಲೆ ಕಾಣಿಸಿದರೆ ಅದು ಹುಟ್ಟಿದೆ, ಎಂದು ನಿರ್ಧರಿಸಬಹುದು. ಉದಾಹರಣೆಗೆ, ಮೊದಲು ಭೂಭಾಗ ಮಾತ್ರ ಇತ್ತು, ಆಮೇಲೆ ಅಲ್ಲಿ ಮನೆಯನ್ನು ಕಂಡಾಗ ಈ ಮನೆ ಇಲ್ಲಿ ನಿರ್ಮಾಣವಾಗಿದೆ, ಎಂದು ನಿರ್ಧರಿಸುತ್ತೇವೆ. ಈ ಪ್ರಪಂಚದ ಉತ್ಪತ್ತಿಯನ್ನು ಹೀಗೆ ನಿರ್ಧರಿಸಲಾಗದು. ಏಕೆಂದರೆ, ಅದು ಇಲ್ಲದಿರುವ ಸ್ಥಿತಿಯನ್ನು ನಾವಾರೂ ನೋಡಲೇ ಇಲ್ಲ. ಹೀಗಿರುವಾಗ ಅದು ಹುಟ್ಟಿದೆ ಎನ್ನುವುದು ಹೇಗೆ?

ಯದ್ಯಪಿ, ಭೂಮಿಯೇ ಮೊದಲಾದ ವಸ್ತುಗಳಲ್ಲಿ ಅವಯವಗಳು (ಭಾಗಗಳು) ಕಂಡಿವೆ. ಆದರೂ, ಆ ಅವಯವಗಳು ನೂಲು ಬಟ್ಟೆಗೆ ಕಾರಣವಾಗುವಂತೆ ಕಾರಣಗಳೆಂದಾಗಬೇಕಿಲ್ಲ. ಆಕಾಶದ ಭಾಗಗಳಂತೆ ಕಾರಣವಾಗದ ಭಾಗಗಳೂ ಆಗಬಹುದು.

ಭೂಮಿಯನ್ನು ಅಗೆದಾಗ ಮೊದಲಿದ್ದ ಭೂಪ್ರದೇಶ ನಾಶವಾಗುತ್ತದೆ, ಹೊಸ ಭೂಪ್ರದೇಶ

ಹುಟ್ಟಿದೆ. ಇದು ಎಲ್ಲರೂ ಕಂಡಿರುವ ದೃಷ್ಟವಾದರೂ ಇದರಿಂದ ಸಮಗ್ರಭೂಮಿಗೆ ಉತ್ಪತ್ತಿವಿನಾಶಗಳು ಸಿದ್ಧವಾಗುವುದಿಲ್ಲ. ಕಾಲದ ಭಾಗಗಳಾದ ಗಳಿಗೆ, ದಿನ, ಮಾಸಗಳಿಗೆ ಉತ್ಪತ್ತಿ–ನಾಶಗಳಿದ್ದರೂ ಅಖಂಡವಾದ ಕಾಲವು ನಿತ್ಯವಾದಂತೆ, ಅಖಂಡಭೂಮಂಡಲ ಅನಾದಿ–ನಿತ್ಯವಾಗಿರಬಹುದು. ಆದ್ದರಿಂದ, ಕರ್ತೃಸಾಧಕವಾದ ಕಾರ್ಯತ್ವಹೇತುವೇ ಕ್ಷಿತ್ಯಾದಿಗಳಲ್ಲಿ ಇಲ್ಲ. ಅರ್ಥಾತ್, ಕ್ಷಿತ್ಯಾದಿಗಳು ಹುಟ್ಟಿವೆ, ಎಂದೇ ನಿರ್ಧರಿಸಲಾಗದು.

**ಸಮಸ್ಯೆ–2.** ಕಾರ್ಯಕ್ಕೆ ಅನೇಕ ಕಾರಣಗಳು ಇರುತ್ತವೆ. ಕರ್ತೃ, ಕರಣ, ಕರ್ಮ ಇತ್ಯಾದಿ. ಕೆಲವು ಕ್ರಿಯೆಗಳಿಗೆ ಕರ್ಮ ಎಂಬ ಕಾರಣವಿರುವುದಿಲ್ಲ. ಶಯನ, ಆಸನ ಈ ಕ್ರಿಯೆಗಳು ಅಕರ್ಮಕಗಳು. ಅವುಗಳಿಗೆ ಕರ್ಮಕಾರಕ ಇಲ್ಲ. ಆದರೂ ಆ ಕ್ರಿಯೆ ನಡೆಯುತ್ತದೆ. ಕರ್ಮದಂತೆ ಕರ್ತೃವೂ ಒಂದು ಕಾರಕ. ಕರ್ಮವಿಲ್ಲದೆಯೂ ಕ್ರಿಯೆಯು ಆಗುವಂತೆ ಕರ್ತೃ ಇಲ್ಲದೆಯೂ ಕಾರ್ಯ ಏಕಾಗಬಾರದು?

ಕರ್ತೃ–ಕರ್ಮಗಳಿಗೆ ವ್ಯತ್ಯಾಸವಿದೆ. ಕರ್ತೃ ಸಾರ್ವತ್ರಿಕ. ಕರ್ಮ ಕ್ವಾಚಿತ್ಕ. ಆದ್ದರಿಂದ ಕರ್ಮವಿಲ್ಲದೆ ಕ್ರಿಯೆ ಇರಬಹುದಾದರೂ ಕರ್ತೃ ಇಲ್ಲದೆ ಕಾರ್ಯ ಇರಲಾರದು. ಹೀಗೆ ಹೇಳುವುದು ಸರಿಯಲ್ಲ. ಕ್ಷಿತ್ಯಾದಿಕಾರ್ಯಗಳಿಗೆ ಒಬ್ಬ ಕರ್ತೃ ಇದ್ದಾನೆ, ಎಂದು ನಿರ್ಧಾರವಾಗಿದ್ದರೆ ಹಾಗೆ ಹೇಳಬಹುದಿತ್ತು. ಅದು ಇನ್ನೂ ಸಂದಿಗ್ಧವಾಗಿರುವಾಗ ಕರ್ತೃ ಸಾರ್ವತ್ರಿಕ, ಎಂಬ ನಿಯಮವೇ ಅನಿಶ್ಚಿತ.

ಹೀಗೆ ಕ್ಷಿತ್ಯಾದಿಗಳು ಕಾರ್ಯಪದಾರ್ಥಗಳಾದರೂ ಕರ್ತೃವಿನ ಅಗತ್ಯವಿಲ್ಲ. ಆದ್ದರಿಂದ ಹೇತು ಅಪ್ರಯೋಜಕ.

**ಸಮಸ್ಯೆ–3.** ಕರ್ತೃವಿಗೆ ಉಪಾದಾನವಸ್ತುವಿನ ಅಪರೋಕ್ಷಜ್ಞಾನವಿರಬೇಕು, ಈಶ್ವರ ಸಕಲಕಾರ್ಯಗಳಿಗೂ ಕರ್ತನಾಗಿರುವುದರಿಂದ ಸಕಲಕಾರ್ಯೋಪಾದಾನಗಳ ಪ್ರತ್ಯಕ್ಷ ಅವನಿಗೆ ಇದೆ. ಆದ್ದರಿಂದ ಈಶ್ವರ ಸರ್ವಜ್ಞನಾಗಿದ್ದಾನೆ, ಎಂದು ನೈಯಾಯಿಕರ ವಾದ.

ಆದರೆ, ಇದೂ ಸರಿಯಲ್ಲ—ಉಪಾದಾನದ ಅಪರೋಕ್ಷಜ್ಞಾನವೇ ಕರ್ತೃವಿಗೆ ಇರಬೇಕೆಂಬ ನಿರ್ಬಂಧವಿಲ್ಲ. ವಾಯವೀಯ ಶರೀರದಲ್ಲಿ ನಡೆಯುವ ಕ್ರಿಯೆಗೆ ಶರೀರವು ಉಪಾದಾನ. ಆದರೆ, ಅದರ ಅಪರೋಕ್ಷಜ್ಞಾನ ಆ ಶರೀರದಲ್ಲಿರುವ ಆತ್ಮನಿಗೆ ಇಲ್ಲ. ಆದರೂ ಅವನು ಆ ಕ್ರಿಯೆಗೆ ಕರ್ತೃವಾಗುತ್ತಾನೆ.

ಉಪಾದಾನದ ಪರೋಕ್ಷಜ್ಞಾನವಿದ್ದರೂ ಸಾಕು ಎನ್ನುವುದಾದಲ್ಲಿ ಪರಮಾಣುಗಳ ಪರೋಕ್ಷ ಜ್ಞಾನ ನಮಗೂ ಇರುವುದರಿಂದ ನಾವೂ ಏಕೆ ದ್ವ್ಯಣುಕಾದಿ ಕಾರ್ಯಗಳಿಗೆ ಕರ್ತೃಗಳಾಗಬಾರದು? ಎಂದು ನೈಯಾಯಿಕರ ಪ್ರಶ್ನೆ.

ಇದಕ್ಕೆ ಹೀಗೆ ಸಮಾಧಾನ—ಉಪಾದಾನವಸ್ತು ನಿರ್ದಿಷ್ಟ ಪ್ರದೇಶದಲ್ಲಿ ಅಥವಾ ನಿರ್ದಿಷ್ಟಕಾಲದಲ್ಲಿ ಇದೆ, ಎನ್ನುವ ಜ್ಞಾನ ಕರ್ತೃವಿಗೆ ಇರಬೇಕು. ಆಗ ಅದರ ಬಗ್ಗೆ ಕರ್ತೃವು ಪ್ರಯತ್ನಮಾಡುತ್ತಾನೆ. ಪ್ರಕೃತ, ಪರಮಾಣು ನಿತ್ಯವಾದುದರಿಂದ ಅದಕ್ಕೆ ಕಾಲವಿಶೇಷವೃತ್ತಿತ್ವವೇ

ಇಲ್ಲ. ಆದ್ದರಿಂದ ತದ್ವಿಷಯಕ ಕೃತಿಯನ್ನು ನಾವು ಮಾಡಲಾಗುವುದಿಲ್ಲ. ಅದರಿಂದಾಗಿ, ದ್ವ್ಯಣುಕ ಕರ್ತೃತ್ವ ನಮ್ಮಲ್ಲಿಲ್ಲ. ಕುರುಡನಿಗೆ ''ಇಲ್ಲಿ ಹಾವಿದೆ'' ಎಂದು ತಿಳಿಸಿದರೆ ಸಾಕು, ಆ ಸ್ಥಳದಿಂದ ಅವನು ದೂರ ಸರಿಯುತ್ತಾನೆ. 'ಇಲ್ಲಿ ಹಣವಿದೆ'' ಎಂದು ಹೇಳಿದಾಗ ಅದನ್ನು ತೆಗೆದುಕೊಳ್ಳಲು ಪ್ರಯತ್ನಮಾಡುತ್ತಾನೆ. ಇದರಿಂದ ವಸ್ತುಗಳ ಪರೋಕ್ಷಜ್ಞಾನವೂ ಪ್ರವೃತ್ತಿ–ನಿವೃತ್ತಿ ಹೇತು, ಎಂದು ತಿಳಿಯುತ್ತದೆ. ಅಪರೋಕ್ಷಜ್ಞಾನವೇ ಇರಬೇಕೆಂಬ ನಿರ್ಬಂಧವಿಲ್ಲ.

ಹೀಗೆ, ಈ ಅನುಮಾನದಿಂದ ಈಶ್ವರನಿಗೆ ಸರ್ವಜ್ಞತ್ವವು ಸಿದ್ಧವಾಗುವುದಿಲ್ಲ.

**ಸಮಸ್ಯೆ-4.** ಈ ಅನುಮಾನದಿಂದ ಈಶ್ವರನಿಗೆ ನಿತ್ಯಜ್ಞಾನವಿದೆ, ಎಂದು ಸಿದ್ಧವಾಗುತ್ತದೆ. ಜ್ಞಾನಗಳೆಲ್ಲವೂ ಅನಿತ್ಯವೇ ಆಗಿರಬೇಕು, ಎಂಬ ನಿರ್ಬಂಧಕ್ಕೆ ಕಾರಣವಿಲ್ಲ, ಎಂದು ನೈಯಾಯಿಕರ ವಾದ. ಈ ವಾದವೂ ಸರಿಯಲ್ಲ. ನೈಯಾಯಿಕರು ಕೃತಿಜನ್ಯತ್ವಕ್ಕೆ ಲಾಘವಾತ್ ಜನ್ಯತ್ವವೇ ಪ್ರಯೋಜಕ, ಶರೀರಜನ್ಯತ್ವವು ಗುರುಧರ್ಮವಾದುದರಿಂದ ಪ್ರಯೋಜಕವಲ್ಲ, ಎನ್ನುತ್ತಾರೆ. ಜನ್ಯವಾದ ವಸ್ತುಗಳು ಕೃತಿಜನ್ಯವಾಗಬೇಕು. ಶರೀರಜನ್ಯವಾದ ವಸ್ತುಗಳು ಕೃತಿಜನ್ಯವಾಗಿರಬೇಕು, ಎಂದು ನಿಯಮವಲ್ಲ, ಎಂದು ಅವರ ಅಭಿಪ್ರಾಯ. ಆದರೆ, ಇದೇ ನ್ಯಾಯದಿಂದ ಮನೋಜನ್ಯತ್ವಕ್ಕೆ ಆತ್ಮವಿಶೇಷಗುಣತ್ವವೇ ಪ್ರಯೋಜಕ. ಅಂದರೆ, ಆತ್ಮನಲ್ಲಿರುವ ಜ್ಞಾನಾದಿ ಗುಣಗಳೆಲ್ಲವೂ ಮನೋಜನ್ಯಗಳಾಗಿವೆ. ಇಲ್ಲಿ ಅಸ್ಮದಾದಿ ಆತ್ಮವಿಶೇಷಗುಣತ್ವವು ಪ್ರಯೋಜಕ ಎಂದು ಹೇಳುವುದು ಗೌರವ. ಅರ್ಥಾತ್, ಜೀವರ ಗುಣವಿಶೇಷಗಳು ಮಾತ್ರ ಮನೋಜನ್ಯಗಳು ಎಂದು ಹೇಳುವುದು ಸರಿಯಲ್ಲ. ಇದರಿಂದಾಗಿ, ಈಶ್ವರನ ಜ್ಞಾನೇಚ್ಛಾಕೃತಿಗಳೂ ಆತ್ಮವಿಶೇಷಗುಣಗಳೇ ಆದುದರಿಂದ ಅವುಗಳೂ ಜನ್ಯಗಳೇ ಆಗಬೇಕು. ನಿತ್ಯಗಳಾಗಬಾರದು. ಹೀಗೆ, ಈ ಅನುಮಾನದಿಂದ ನೈಯಾಯಿಕರ ಅಭಿಮತ ಸಿದ್ಧಿಯಾಗುವುದಿಲ್ಲ.

ಇಷ್ಟೇ ಅಲ್ಲ. 'ಕಾರ್ಯಕ್ಕೆ ಕೃತಿಯು ಕಾರಣ' ಎಂಬ ಸಾಮಾನ್ಯಕಾರ್ಯ–ಕಾರಣಭಾವದಿಂದ ಕ್ಷಿತ್ಯಾದಿಕಾರಣವಾದ ಕೃತಿಗೆ ಆಶ್ರಯನಾಗಿ ಈಶ್ವರನು ಸಿದ್ಧನಾಗುತ್ತಾನೆ, ಎಂದು ನೈಯಾಯಿಕರು ಹೇಳುತ್ತಾರೆ. ಇದರಿಂದ ಕೃತಿಯು ಈಶ್ವರನಲ್ಲಿದೆ ಎಂದು ಸಿದ್ಧವಾದರೂ ಜ್ಞಾನ–ಇಚ್ಛೆಗಳು ಸಿದ್ಧವಾಗುವುದು ಹೇಗೆ? ಈಶ್ವರನ ಕೃತಿಯು ನಿತ್ಯವಾದುದರಿಂದ ಅದು ಇಚ್ಛೆಯಿಂದ ಜನ್ಯವಲ್ಲ. ಇಚ್ಛೆಯೂ ನಿತ್ಯವಾದ ಕಾರಣ ಅದಕ್ಕೂ ಜ್ಞಾನವು ಕಾರಣವಲ್ಲ. ನಾವು ಪ್ರಯತ್ನ ಮಾಡಬೇಕಾದರೆ ಇಷ್ಟಸಾಧನತಾಜ್ಞಾನ ಇರಬೇಕು. ''ಇದು ನನ್ನ ಸುಖಕ್ಕೆ ಕಾರಣವಾಗಿದೆ'' ಎಂದು ತಿಳಿದರೆ ಮಾತ್ರ ಅದನ್ನು ಸಾಧಿಸುವ ಇಚ್ಛೆ ಬಂದು ಪ್ರಯತ್ನಕ್ಕೆ ಇಳಿಯುತ್ತೇವೆ. ಆದರೆ, ಈಶ್ವರನ ಯತ್ನವು ನಿತ್ಯವಾದುದರಿಂದ ಅದಕ್ಕೆ ಜ್ಞಾನ ಇಚ್ಛೆಗಳ ಅಗತ್ಯವಿಲ್ಲ. ಆದ್ದರಿಂದ ಕಾರ್ಯತ್ವಾನುಮಾನದಿಂದ ಕೃತಿಮಾತ್ರ ಸಿದ್ಧವಾದೀತು. ಜ್ಞಾನ ಮತ್ತು ಇಚ್ಛೆಗಳು ಸಿದ್ಧವಾಗುವುದಿಲ್ಲ.

ಹೀಗೆ ಆಗಮವನ್ನು ಬಿಟ್ಟು ಕೇವಲ ಅನುಮಾನವನ್ನು ಅವಲಂಬಿಸಿದರೆ ಈಶ್ವರನ ಅಗತ್ಯವೇ ಇಲ್ಲವೆಂದೂ ವಾದಿಸಬಹುದು. ಈಶ್ವರಸಿದ್ಧನಾದರೂ ನಮಗೆ ವಿವಕ್ಷಿತವಾದ ಈಶ್ವರನ ಸ್ವರೂಪವು ಸಿದ್ಧವಾಗದಿರಬಹುದು. ಆದರೆ, ಆಗಮವನ್ನು ಅವಲಂಬಿಸಿದರೆ ಇಂತಹ ಬೌದ್ಧಿಕ ಕಸರತ್ತುಗಳಿಗೆ ಅವಕಾಶವಿಲ್ಲ.

ತರ್ಕತಾಂಡವದ ಈ ಪ್ರಕರಣದ ವ್ಯರ್ಥವಿಶೇಷಣಘಟಿತವಾದ ಹೇತುವಿನಲ್ಲಿ ವ್ಯಾಪ್ತಿ ಇಲ್ಲ, ಎಂದು ಮಣಿಕಾರ ಸಮರ್ಥನೆ ಮಾಡಿರುವಷ್ಟೇ ಪ್ರಬಲವಾಗಿ ಅದರ ನಿರಾಕರಣೆಯನ್ನೂ ಮಾಡಲಾಗಿದೆ. ಅದು ಶ್ರೀವ್ಯಾಸತೀರ್ಥರ ವೈಚಾರಿಕತೆಗೆ ಸಾಕ್ಷಿಯಂತಿದೆ. ಅದರಂತೆ, ಉದಯನಾಚಾರ್ಯರು ಅಣುಗತವಾದ ದ್ವಿತ್ವಾದಿಸಂಖ್ಯೆಗೆ ಕಾರಣವಾದ ಅಪೇಕ್ಷಾಬುದ್ಧಿಯಿಂದ ಈಶ್ವರನನ್ನು ಸಾಧಿಸಿದ್ದಾರೆ. ಅದರ ವಿಮರ್ಶೆಯೂ ಅತಿಸೂಕ್ಷ್ಮವಾಗಿದೆ.

ಭಾರವಾದ ಭೂಮಿಯು ಬೀಳದಿರುವಂತೆ ಧಾರಣೆ ಮಾಡಿದವನು ಈಶ್ವರ ಎಂಬ ವಾದವನ್ನು ಇಲ್ಲಿ ವೈಜ್ಞಾನಿಕವಾಗಿ ನಿರಾಕರಿಸಲಾಗಿದೆ. ಬೃಹದ್ವಾಸ್ತ್ರದ ವಸ್ತುಬೀಳುತ್ತಿದ್ದರೂ ಅದರಲ್ಲಿರುವವರಿಗೆ ಬೀಳುತ್ತಿರುವ ಸಂವೇದನೆ ಬರಬೇಕಾಗಿಲ್ಲ, ಉದಾಹರಣೆಗೆ, ಭೂಮಿಯು ತಿರುಗುತ್ತಿದ್ದರೂ ಅದರ ಅನುಭವ ಭೂಮಿಯಲ್ಲೇ ಇರುವ ನಮಗೆ ಬರುವುದಿಲ್ಲ, ಎಂದು ಇಲ್ಲಿ ನಿರಾಕರಿಸಲಾಗಿದೆ.

**ರಾಯರ ವ್ಯಾಖ್ಯಾನದ ವಿಶೇಷ**–ಶ್ರೀರಾಘವೇಂದ್ರಸ್ವಾಮಿಗಳು ರಚಿಸಿರುವ ನ್ಯಾಯದೀಪದ ಸಹಾಯವಿಲ್ಲದೆ ಈ ಪ್ರಕರಣವನ್ನು ಅರ್ಥಮಾಡಿಕೊಳ್ಳುವುದು ಸಾಹಸದ ಕೆಲಸ. ಮಣಿಗ್ರಂಥಕ್ಕೆ ಇಂದು ಉಪಲಬ್ಧವಾಗದ ವ್ಯಾಖ್ಯಾನಗಳನ್ನೂ ಸಂದರ್ಭಕ್ಕೆ ತಕ್ಕಂತೆ ಉಲ್ಲೇಖಿಸಿ ಸಮಸ್ಯೆಗಳನ್ನು ಬಗೆಹರಿಸುವುದರ ಜೊತೆಗೆ ತರ್ಕತಾಂಡವದ ಒಂದೊಂದು ನಿರಾಕರಣೆಯೂ ತಾರ್ಕಿಕರ ವಾದಕ್ಕೆ ಪ್ರತಿವಾದವಾಗಿದೆ ಎಂದು ನ್ಯಾಯದೀಪದಲ್ಲಿ ತೋರಿಸಲಾಗಿದೆ.

ಉದಾಹರಣೆಗೆ—ಈಶ್ವರಸಾಧಕವಾದ ಅನುಮಾನದ ಪಕ್ಷವನ್ನು ಮಣಿಗ್ರಂಥದಲ್ಲಿ ಹೀಗೆ ಉಲ್ಲೇಖಿಸಲಾಗಿದೆ—''ಅದೃಷ್ಟಾದ್ವಾರಕೋಪಾದಾನಗೋಚರ–ಜನ್ಯಕೃತ್ಯಜನ್ಯಾನಿ'' ಎಂದು. ಆದರೆ, ತರ್ಕತಾಂಡವದಲ್ಲಿ ''ಅದೃಷ್ಟಾದ್ವಾರಕ–ಸ್ವೋಪಾದಾನಗೋಚರ–ಜನ್ಯಕೃತಿಜನ್ಯಭಿನ್ನಾನಿ'' ಎಂದು ಪರಿಷ್ಕರಿಸಿ ಅನುವಾದ ಮಾಡಲಾಗಿದೆ. ಇದನ್ನು ರಾಯರು ಹೀಗೆ ಸಂಗತಗೊಳಿಸಿದ್ದಾರೆ. ''ತದೀಯವ್ಯಾಖ್ಯಾಸು– ಉಕ್ತಪರಿಷ್ಕಾರಪೂರ್ವಕೋಽಯಂ ಸ್ವೇತ್ಯನುವಾದಃ'' ''ಮಣಿಗ್ರಂಥೋಕ್ತ ವಿಶೇಷಣದಲ್ಲಿ ಅನುಪಪತ್ತಿಯನ್ನು ಹೇಳಿ ಮಣಿವ್ಯಾಖ್ಯಾನಗಳಲ್ಲಿ ಪರಿಷ್ಕರಿಸಿರುವ ವಿಶೇಷಣವನ್ನು ಸೇರಿಸಿ ತರ್ಕತಾಂಡವದಲ್ಲಿ ಅನುವಾದಮಾಡಲಾಗಿದೆ''. ಈ ವಿವರಣೆ ಇಲ್ಲದಿದ್ದಲ್ಲಿ ಮೂಲಗ್ರಂಥ ಅಸದನುವಾದವೆನಿಸುವ ಸಂದರ್ಭವಿರುತ್ತಿತ್ತು.

ಕೆಲವೆಡೆ ರಾಯರು ನೇರವಾಗಿ ತಾವೇ ಮಣಿಗ್ರಂಥದ ವಿಮರ್ಶೆಯನ್ನೂ ಮಾಡಿದ್ದಾರೆ. ಇದಕ್ಕೆ ಉದಾಹರಣೆ— ಒಂದು ಗುಣವು ಸ್ವವ್ಯಧಿಕರಣದಲ್ಲಿ ಕಾರ್ಯಕ್ಕೆ ಜನಕವಾದರೆ ಆ ಗುಣಾಶ್ರಯವಾದ ವಸ್ತುವಿನ ಸಂಯೋಗವು ಗುಣಾಂತರಕ್ಕೆ ಕಾರಣವಾಗಿರುತ್ತದೆ. ಇದಕ್ಕೆ ನಿದರ್ಶನ–ವಾಯುವಿನಲ್ಲಿರುವ ವೇಗವು ಮರದಲ್ಲಿರುವ ಚಲನೆಗೆ ಕಾರಣ. ಇಲ್ಲಿ ವೇಗ ವಾಯುವಿನಲ್ಲಿದೆ. ಚಲನೆ ಮರದಲ್ಲಿದೆ. ಅವೆರಡು ವ್ಯಧಿಕರಣಗಳಾಗಿವೆ. ಆದ್ದರಿಂದ ವೇಗಾಶ್ರಯವಾದ ವಾಯುಸಂಯೋಗವು ಮರದ ಚಲನೆಗೆ ಅಸಮವಾಯಿಕಾರಣ. ಇದು ಮಣಿಕಾರನ ವಾದ.

ಇದು ಸರಿಯಲ್ಲ, ಎಂದಿದ್ದಾರೆ ರಾಯರು. ಮಂತ್ರಪಠನದಿಂದ ವಿಷವು ಪರಿಹಾರ ವಾಗುತ್ತದೆ. ತಾರ್ಕಿಕರ ಮತದಂತೆ ಮಂತ್ರಪಠನ ಶಬ್ದರೂಪವಾದುದರಿಂದ ಆಕಾಶದ ಗುಣ. ವಿಷಪರಿಹಾರವಾಗುವುದು ವ್ಯಕ್ತಿಯಲ್ಲಿ. ಇವೆರಡು ವ್ಯಧಿಕರಣಗಳು. ಆದರೂ ಇಲ್ಲಿ ಶಬ್ದಾಶ್ರಯವಾದ ಆಕಾಶಸಂಯೋಗವು ವಿಷಪರಿಹಾರಕ್ಕೆ ಹೇತುವಲ್ಲ.

ತಕ್ಕಡಿಯ ಒಂದು ತಟ್ಟೆಯ ಭಾರ(ಗುರುತ್ವ)ದಿಂದ ಇನ್ನೊಂದು ತಟ್ಟೆಯಲ್ಲಿ ಕ್ರಿಯೆ ಉಂಟಾಗುತ್ತದೆ. ಅಂದರೆ, ಅದು ಮೇಲೇರುತ್ತದೆ. ಇಲ್ಲಿ ಕಾರಣವಾದ ಗುರುತ್ವಕ್ಕೂ ಕಾರ್ಯವಾದ ಚಲನೆಗೂ ಸಾಮಾನಾಧಿಕರಣ್ಯವಿಲ್ಲ. ಆದರೂ ಗುರುತ್ವಾಶ್ರಯವಾದ ಆ ತಟ್ಟೆಯ ಸಂಯೋಗ ಇನ್ನೊಂದು ತಟ್ಟೆಗೆ ಇಲ್ಲ.

ಹೀಗೆ, ಇಲ್ಲಿ ಶ್ರೀವ್ಯಾಸರಾಜರೂ ರಾಯರೂ ಸೇರಿ ಮಣಿಗ್ರಂಥದ ಮೇಲೆ ಸಮರಸಾರಿದಂತಿದೆ.

ಇಲ್ಲಿ ನ್ಯಾಯದೀಪದ ಮುದ್ರಿತಪಾಠದಲ್ಲಿ ಕೆಲವೆಡೆ ಮುದ್ರಣ ದೋಷವಿದ್ದಂತೆ ಅನಿಸುತ್ತದೆ.

ಸೃಷ್ಟಿಕಾಲದಲ್ಲಿ ಆಗುವ ಪರಮಾಣುಕ್ರಿಯೆಗೆ ಈಶ್ವರಪ್ರೇರಣೆಯೇ ಕಾರಣ, ಎಂಬ ನೈಯಾಯಿಕರ ವಾದವನ್ನು ತರ್ಕತಾಂಡವದಲ್ಲಿ "ಜೀವಾತ್ಮರ ಅದೃಷ್ಟದಿಂದಾಗಿಯೇ ಪರಮಾಣುಗಳಲ್ಲಿ ಕ್ರಿಯೆ ನಡೆಯಬಹುದು, ಈಶ್ವರನ ಅಗತ್ಯವಿಲ್ಲ" ಎಂದು ನಿರಾಕರಿಸಲಾಗಿದೆ. ಈ ಸಂದರ್ಭದಲ್ಲಿ ನ್ಯಾಯದೀಪದಲ್ಲಿ 'ಆ ಅದೃಷ್ಟಪ್ರೇರಕ ಈಶ್ವರ' ಎಂಬ ಆಕ್ಷೇಪವನ್ನು ಮಾಡಲಾಗಿದೆ. ಈ ಆಕ್ಷೇಪ-ಸಮಾಧಾನಗಳು ನ್ಯಾಯಸುಧಾದಲ್ಲಿವೆ. ಅವುಗಳನ್ನು ರಾಯರು ಇಲ್ಲಿ ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಕೊನೆಯ ಆಕ್ಷೇಪ-ಸಮಾಧಾನ ಸುಧಾದಲ್ಲಿ ಹೀಗಿದೆ—

'ತರ್ಹಿ ಉತ್ಪತ್ತ್ಯನಂತರಮೇವ ಕಿಂ ನ ಕುರ್ಯಾತ್ ಇತಿ ಚೇತ್, ಪ್ರಬಲಾದೃಷ್ಟ ಪ್ರತಿಬಂಧಾತ್' 'ಜೀವಾದೃಷ್ಟವೇ ಕಾರಣವಾದರೆ ಆ ಅದೃಷ್ಟ ಹುಟ್ಟಿದ ಕೂಡಲೇ ಸೃಷ್ಟಿ ಏಕಾಗಿಲ್ಲ? ಅದೃಷ್ಟಾಂತರದ ಪ್ರತಿಬಂಧಕವಿರುವುದರಿಂದ.'' ಆದರೆ, ಇಲ್ಲಿ ಮಾಡಿರುವ ಆಕ್ಷೇಪ— 'ಏಕಕಾರ್ಯೋತ್ಪತ್ತ್ಯನಂತರಂ ಕಾರ್ಯಾಂತರಾನುತ್ಪಾದನಂ ಚ ಪ್ರಬಲಾದೃಷ್ಟಾಂತರ ಪ್ರತಿಬಂಧನೋ ಪಪತ್ತೇಃ' ಎಂದು. ಈ ಆಕ್ಷೇಪ-ಸಮಾಧಾನಗಳು ವಿಚಾರಣೀಯವಾಗಿವೆ. (ಪು.344)

ವೇದಪೌರುಷೇಯತ್ವ ಸಾಧಕಾನುಮಾನ ಒಂದು ಹೀಗಿದೆ— 'ಬುಬೋಧಯಿಷುಪಠಿತೋ ವೇದಃ, ಸ್ವಾನಪೇಕ್ಷ-ಸ್ವಸಮಾನವಿಷಯಕ-ಜ್ಞಾನಪೂರ್ವಕಃ' ಎಂದು. ನಾವು ಪಠಿಸುವ ವೇದದಿಂದ ಜನ್ಯವಲ್ಲದ ನಮ್ಮಿಂದ ಪಠಿತವಾದ-ವೇದಸಮಾನವಿಷಯಕವಾದ ಜ್ಞಾನ ಎಂದರೆ ವೇದವನ್ನು ರಚಿಸಿರುವ ಈಶ್ವರನಜ್ಞಾನ. ತತ್ಪೂರ್ವಕವಾಗಿದೆ ನಾವು ಪಠಿಸುವ ವೇದ, ಎಂದು ಈ ಅನುಮಾನದ ಅಭಿಪ್ರಾಯ. ಈ ಅನುಮಾನದ ಪಕ್ಷದಲ್ಲಿ 'ಬುಬೋಧಯಿಷು' ಎಂಬ ವಿಶೇಷಣವನ್ನು ಬಿಟ್ಟರೆ 'ಅಜ್ಞಪಠಿತವೇದೇ ಬಾಧವಾರಣಾಯ'' ಎಂದು ಕೃತ್ಯವನ್ನು ಹೇಳಲಾಗಿದೆ. ಆದರೆ ಅಜ್ಞರಿಗೂ ತಾವು ಪಠಿಸುವ ವೇದದ ಶಬ್ದಜ್ಞಾನವಿದೆ. ಅಲ್ಲಿ ಬಾಧ ಹೇಗೆ? ಎಂಬ ಅಂಶ ವಿಚಾರಣೀಯ.

■■■

ತರ್ಕತಾಂಡವ ಗ್ರಂಥದ ಅನುವಾದವನ್ನು ಮಾಡುವಂತೆ ಮಂತ್ರಾಲಯ ಮಠಾಧೀಶರಾದ ಶ್ರೀಶ್ರೀಸುಬುಧೇಂದ್ರತೀರ್ಥಶ್ರೀಪಾದರು, ಶ್ರೀರಾಯರ ಸನ್ನಿಧಿಯಲ್ಲಿ ಆದೇಶಮಾಡಿದ್ದಾರೆ. ತರ್ಕತಾಂಡವದ ಈ ಭಾಗವನ್ನು ಎರಡುಬಾರಿ ಪಾಠ ಹೇಳಿದ ಮೇಲೆ ಈ ಅನುವಾದವನ್ನು ಮಾಡಿದ್ದೇನೆ. ಆದರೂ ಎಲ್ಲ ಅಂಶಗಳನ್ನೂ ಮನವರಿಕೆ ಮಾಡಿಕೊಂಡಿದ್ದೇನೆ, ಎಂಬ ಆತ್ಮವಿಶ್ವಾಸ ನನಗಿಲ್ಲ. ಶ್ರೀಗಳವರು ಮಾಡಿದ ಆದೇಶದಿಂದಾಗಿ ಇದಕ್ಕೆ ಸಂಬಂಧಪಟ್ಟ ಮಣಿಗ್ರಂಥ, ಕುಸುಮಾಂಜಲಿ, ಅವುಗಳ ವ್ಯಾಖ್ಯಾನ, ಶ್ರೀವಿಜಯೀಂದ್ರಸ್ವಾಮಿಗಳ ವ್ಯಾಖ್ಯಾನದ ಅಮುದ್ರಿತ ಪ್ರತಿಗಳನ್ನು ಓದಿ ನನಗೆ ಶ್ರೀರಾಯರು ಅರ್ಥಮಾಡಿಸಿದ್ದನ್ನು ನಾನು ಅನುವಾದಿಸಿದ್ದೇನೆ. ಪಾಠವನ್ನೇ ಕೇಳದ ಈ ಅನುವಾದದಿಂದಲೇ ತರ್ಕತಾಂಡವದ ಕ್ಲಿಷ್ಟಭಾಗವಾದ ವೇದಾಪೌರುಷೇಯತ್ವವಾದ ಮತ್ತು ಈಶ್ವರವಾದ ಗ್ರಂಥವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗಲಿಕ್ಕಿಲ್ಲ. ಆದರೂ, ಪಾಠ ಕೇಳಿದವರಿಗೆ ಮತ್ತೆ ಓದಿ ಅರ್ಥಮಾಡಿಕೊಳ್ಳಲು ಇದು ಸಹಕಾರಿಯಾಗುತ್ತದೆ.

ವ್ಯಾಸತ್ರಯಗಳಲ್ಲಿ ತರ್ಕತಾಂಡವದ ಅಧ್ಯಯನ ಇತ್ತೀಚೆಗೆ ತುಂಬಾ ಅಪರೂಪ. ಅದಕ್ಕೆ ಅದರ ಕ್ಲಿಷ್ಟತೆಯೂ ಒಂದು ಕಾರಣ. ಆದರೆ, ಶ್ರೀವ್ಯಾಸರಾಯರ ಅದ್ಭುತ ವಿಮರ್ಶಾಚಾತುರ್ಯಕ್ಕೆ ಇದೊಂದು ಸ್ಪಷ್ಟ ನಿದರ್ಶನ. ಶ್ರೀಸುಬುಧೇಂದ್ರತೀರ್ಥರು ವ್ಯಾಸತ್ರಯಗಳನ್ನೂ ವಿದ್ವಾಂಸರಿಂದ ಕನ್ನಡಕ್ಕೆ ಅನುವಾದಿಸುವ ಸಂಕಲ್ಪವನ್ನು ಮಾಡಿದ್ದಾರೆ. ಇದರಿಂದಾಗಿ ವ್ಯಾಸತ್ರಯದ ಅಧ್ಯಯನದ ಪ್ರವೃತ್ತಿಯಾಗಲಿ ಎಂದು ಅವರ ಉದ್ದೇಶ. ಇದಕ್ಕೆ ಶ್ರೀರಾಯರ ಅನುಗ್ರಹವೂ ಸೇರಿದೆ. ಶ್ರೀಗಳವರು ಮಾಡಿರುವ ಅಭಿಮಾನಪೂರ್ವಕ ಒತ್ತಾಯದಿಂದ ಈ ಕೆಲಸ ನನ್ನಿಂದ ನಡೆದಿದೆ. ಅವರ ಸಂಕಲ್ಪದಂತೆ ಇದು ಈ ಮೊದಲೇ ಜಿಜ್ಞಾಸುಗಳ ಕೈಸೇರಬೇಕಿತ್ತು. ಆದರೂ ಅವಸರಿಸದೆ ತಾಳ್ಮೆಯಿಂದ ನನ್ನಿಂದಾದ ವಿಳಂಬವನ್ನು ಅವರು ಸಹಿಸಿಕೊಂಡಿದ್ದಾರೆ. ಅವರಿಗೆ ಪ್ರಣಾಮಪೂರ್ವಕ ಕೃತಜ್ಞತೆಗಳು.

**ವಿ|| ಎ. ಹರಿದಾಸಭಟ್**
ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು
ನಿವೃತ್ತ ಪ್ರಾಚಾರ್ಯರು ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು.